# ಕೊಡಗಿನ ತೆರೆಕಟ್ಟುವ ಆಚರಣೆಗಳ ವಿಶ್ಲೇಷಣೆ

## ಪಿ.ಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ




ಸಂಶೋಧನಾ ವಿದ್ಯಾರ್ಥಿ

**ರೇವತಿ ಸಿ.ಎಂ.**

ಜಾನಪದ ಅಧ್ಯಯನ ವಿಭಾಗ

ಮಾರ್ಗದರ್ಶಕರು

**ಡಾ. ಹೆಬ್ಬಾಲೆ. ಕೆ. ನಾಗೇಶ್**

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - 583276










ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೊಡಗಿನ ತೆರೆಕಟ್ಟುವ ಆಚರಣೆಗಳ ವಿಶ್ಲೇಷಣೆ

ಪಿ.ಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧನಾ ವಿದ್ಯಾರ್ಥಿ

ರೇವತಿ ಸಿ. ಎಂ.

ಮಾರ್ಗದರ್ಶಕರು

ಡಾ. ಹೆಬ್ಬಾಲೆ. ಕೆ. ನಾಗೇಶ್

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬






ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬



೨೦೧೯

## ಸಂಶೋಧಕರ ಪ್ರಮಾಣ ಪತ್ರ

**'ಕೊಡಗಿನ ತೆರೆಕಟ್ಟುವ ಆಚರಣೆಗಳ ವಿಶ್ಲೇಷಣೆ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಹೆಬ್ಬಾಲೆ ಕೆ. ನಾಗೇಶ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧವು ಮೂಲವಾಗಿದ್ದು; ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Revathi 2/8/19

ದಿನಾಂಕ: 2-8-19

ಸ್ಥಳ: ವಿದ್ಯಾರಣ್ಯ

**ರೇವತಿ ಸಿ. ವಿ.**
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

**'ಕೊಡಗಿನ ತೆರೆಕಟ್ಟುವ ಆಚರಣೆಗಳ ವಿಶ್ಲೇಷಣೆ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ರೇವತಿ ಸಿ. ಎಂ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧವು ಮೂಲವಾಗಿದ್ದು; ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

2/8/19

ದಿನಾಂಕ: 2-8-19

ಸ್ಥಳ: ವಿದ್ಯಾರಣ್ಯ

**ಡಾ. ಹೆಬ್ಬಾಲೆ ಕೆ. ನಾಗೇಶ್**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

## ಪರಿವಿಡಿ

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

೧.೧ ವಿಷಯ ಪ್ರವೇಶ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

೧.೪ ಅಧ್ಯಯನದ ವಿಧಾನ

೧.೫ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

### ೧.೧ ವಿಷಯ ಪ್ರವೇಶ

ಕೊಡಗು ಪ್ರಾಕೃತಿಕವಾಗಿ ವೈವಿಧ್ಯತೆಯಿಂದ ಕೂಡಿರುವ ಪ್ರದೇಶ. ಪಶ್ಚಿಮ ಘಟ್ಟ ಪ್ರದೇಶದಲ್ಲಿರುವ ಈ ಜಿಲ್ಲೆಯು ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನ ವಿಕಾಸದ ನೆಲೆಯೆಂದು ಗುರುತಿಸಿಕೊಂಡಿದೆ. ಕೊಡಗಿನ ಭೌಗೋಳಿಕತೆ ಹಾಗು ನೈಸರ್ಗಿಕ ಸಂಪತ್ತು ಈ ಪ್ರದೇಶದ ಜನಪದೀಯ ಅಭಿವ್ಯಕ್ತಿಗಳನ್ನು ನಿರ್ದೇಶಿಸುತ್ತದೆ. ಹಾಗಾಗಿ ಕೊಡಗು ವಿಶಿಷ್ಟವಾದ ಸಾಂಸ್ಕೃತಿಕ ಅನನ್ಯತೆಯನ್ನು, ಜಾನಪದ ಹಿರಿಮೆಯನ್ನೂ ಪಡೆದುಕೊಂಡಿದೆ. ಕೊಡಗಿನ ಸಂಸ್ಕೃತಿಯನ್ನು ಪರಿವೀಕ್ಷಣೆಗೆ ಒಳಪಡಿಸಿದಾಗ ಅಲ್ಲಿ ಆರಾಧನಾ ಸಂಸ್ಕೃತಿಯ ಹೆಜ್ಜೆಗುರುತುಗಳು ದಟ್ಟವಾಗಿ ವ್ಯಾಪಿಸಿಕೊಂಡಿರುವುದನ್ನು ಕಾಣುತ್ತೇವೆ. ಅಲ್ಲಿನ ಜಾನಪದ ನೆಲೆಗಳನ್ನು ಶೋಧಿಸಲು ಹೊರಟವರಿಗೆ ಕೊಡಗಿನ ಆಚರಣಾಲೋಕದ ಕೆಲವು ಮಹತ್ವದ ಒಳನೋಟಗಳು ಗೋಚರಿಸುತ್ತವೆ. ವಿದ್ಯುನ್ಮಾನ ಯುಗ ಹುಟ್ಟುಹಾಕಿದ ಹಲವು ಬಗೆಯ ಪಲ್ಲಟಗಳ ನಡುವೆಯೂ ಈ ಆಚರಣೆಗಳು ತಮ್ಮ ಮೂಲ ಬೇರುಗಳನ್ನು ಸಹಜವಾಗಿ ಉಳಿಸಿಕೊಂಡಿವೆ.

ಶತಮಾನಗಳಿಂದ ಕೊಡಗಿನಲ್ಲಿ ಅನೇಕ ಜಾತಿ, ವರ್ಗ, ಜನಾಂಗದವರು ವಾಸಿಸುತ್ತಿದ್ದಾರೆ. ಇವರಲ್ಲಿ ತಮ್ಮದೇ ಆದ ಆಚಾರ ವಿಚಾರಗಳು, ವೇಷ ಭೂಷಣಗಳು, ಭಾಷೆ, ಸಾಹಿತ್ಯ, ರೂಢಿಗಳು, ನಂಬಿಕೆಗಳು, ಪದ್ಧತಿಗಳು, ಆಚರಣೆಗಳು ಹೀಗೆ ಅನೇಕ ವೈವಿಧ್ಯಮಯವಾದ ಅಂಶಗಳಿವೆ. ಈ ಹಿನ್ನೆಲೆಯಲ್ಲಿ ಕೊಡಗಿನ ಬಹುಜನರ ಆಚರಣಾತ್ಮಕವಾಗಿ ಪ್ರಸ್ತುತ ವಿದ್ಯಮಾನದಲ್ಲಿ ಆಚರಿಸಿಕೊಂಡು; ವರ್ತಮಾನದಲ್ಲಿಯೂ ಜೀವಂತವಾಗಿರುವ ಆಚರಣೆಗಳ ಅಧ್ಯಯನ ಮಹತ್ವದ್ದಾಗಿದೆ. ಕೊಡಗಿನ ಜನಪದರು ನಿಸರ್ಗದೊಂದಿಗೆ ನಿಕಟ ಒಡನಾಟ ಹೊಂದಿರುವವರು. ಪ್ರಕೃತಿಯಾರಾಧನೆ ಹಾಗೂ ಪೂರ್ವಜರ ಆರಾಧನೆ ಇಲ್ಲಿ ಪ್ರಮುಖವಾಗಿದೆ. ಕುಟುಂಬದ ಹಿರಿಯನನ್ನು 'ಕಾರೋಣ' ಎಂದು ಕರೆದು ಪೂಜಿಸಲಾಗುತ್ತದೆ. ಕೈಮಡ ಎಂಬ ಪುಟ್ಟ ಗುಡಿ ಈತನ ನೆಲೆಯಾಗಿದೆ. ಕಾರೋಣ

ಕುಟುಂಬವನ್ನು ರಕ್ಷಿಸುತ್ತಾನೆ ಎಂಬ ನಂಬಿಕೆಯಿದೆ. ಇದರೊಂದಿಗೆ ಕುಟುಂಬ, ಕೇರಿ, ಗ್ರಾಮ ಹಾಗೂ ನಾಡುಗಳ ರಕ್ಷಣೆಯನ್ನು ಮಾಡುವ ದೈವಗಳಿವೆ. ಇವುಗಳ ಕುರಿತು ಕೊಡವ ಜನಪದ ಗೀತೆ 'ದೇಶಕೆಟ್ಟ್ ಪಾಟ್'ನಲ್ಲಿ ಉಲ್ಲೇಖಿಸಲಾಗಿದೆ. ಹೊನ್ನಿನಮಾಲೆಯಂತಿರುವ ಕೊಡಗಿನಲ್ಲಿ ದೇಶಕ್ಕೆ ಕಾವೇರಿ ಮಾತೆ, ನಾಡಿಗೊಬ್ಬ ಮಾದೇವ, ಊರಿಗೊಬ್ಬಳು ಪೊವ್ವದಿ, ಕೇರಿಗೊಬ್ಬ ಅಯ್ಯಪ್ಪ, ಒಕ್ಕ(ಕುಟುಂಬ)ಕ್ಕೊಬ್ಬ ಕಾರೋಣ, ಓಡೆಗೊಬ್ಬ ನಾಥ ಹಾಗೂ ಓಣಿಗೊಬ್ಬ ಕುಳಿಯರು ನೆಲೆನಿಂತಿದ್ದಾರೆ. ಇವುಗಳಲ್ಲದೆ ಚೌಂಡಿ, ವಿಷ್ಣುಮೂರ್ತಿ, ಭದ್ರಕಾಳಿ, ಸಾರ್ತಾವು ಮುಂತಾದ ದೈವಗಳೂ ಇವೆ. ಇವು ದೇವಕಾಡುಗಳೆಂಬ ಕಾಡಿನಲ್ಲಿ, ಬನಗಳಲ್ಲಿ, ಕುಟುಂಬದ ಕೈಮಡಗಳಲ್ಲಿ ಹಾಗೂ ಕೋಟಗಳೆಂಬ ಪುಟ್ಟ ಗುಡಿಗಳಲ್ಲಿ ನೆಲೆಸಿವೆ. ಈ ದೈವಗಳಿಗೆ ವಾರ್ಷಿಕವಾಗಿ ಅಥವಾ ನಿಗದಿತ ಅವಧಿಗಳಲ್ಲಿ ಸಾಮೂಹಿಕವಾಗಿ ಆರಾಧನೆ ನಡೆಯುತ್ತದೆ. ಈ ಸಂದರ್ಭದಲ್ಲಿ ನಡೆಯುವ ಆಚರಣೆಯನ್ನು ಸ್ಥಳೀಯ ಕೊಡವ ಭಾಷೆಯಲ್ಲಿ 'ತೆರೆಕಟ್ಟುವೊ' ಎಂದು ಕರೆದರೆ ಕನ್ನಡದಲ್ಲಿ 'ತೆರೆ ಕಟ್ಟುವುದು' ಎಂದು ಸಂಬೋಧಿಸಲಾಗುತ್ತದೆ. ಇದನ್ನು 'ಕೋಲಕೆಟ್ಟುವೋ'(ವೇಷ ಕಟ್ಟುವುದು)ಎಂದೂ ಕರೆಯುವುದಿದೆ.

ಈ ಆಚರಣೆಯು ಕುಟುಂಬಗಳಲ್ಲಿ ನಡೆದಾಗ ದೈವಗಳೊಂದಿಗೆ ಕಾರೋಣನನ್ನು ತೆರೆ ಕಟ್ಟಿ ಆರಾಧಿಸಲಾಗುತ್ತದೆ. ಹಾಗಾಗಿ ಇದು ಗ್ರಾಮದೇವತೆಗಳ ಹಾಗೂ ಪೂರ್ವಜರ ಆರಾಧನೆಯಾಗಿದೆ. ಇದು ದೈವಗಳ ನೃತ್ಯಾರಾಧನೆಯೂ ಹೌದು. ಇಲ್ಲಿ ಸಾಂಪ್ರದಾಯಿಕ ತೆರೆಯನ್ನು ಕಟ್ಟುವ ವ್ಯಕ್ತಿಯು ದೈವದ ವೇಷಭೂಷಣಗಳನ್ನು ಧರಿಸಿ ದೈವಾವೇಶವನ್ನು ಹೊಂದಿ ನರ್ತಿಸುತ್ತಾ ದೈವವೇ ಆಗುತ್ತಾನೆ. ಆ ಮೂಲಕ ಬೇಡಿಕೆ ಹಾಗೂ ಸಮಸ್ಯೆಗಳನ್ನು ಹೊತ್ತುಬರುವ ಭಕ್ತರಿಗೆ ಅಭಯ ನೀಡುತ್ತಾನೆ. ಭಕ್ತರು ಹರಕೆ ಕಾಣಿಕೆಗಳನ್ನು ಒಪ್ಪಿಸುತ್ತಾರೆ. ಕೋಳಿ, ಆಡು, ಹಂದಿ ಮೊದಲಾದ ಪ್ರಾಣಿಗಳ ರಕ್ತ ತರ್ಪಣವನ್ನು ನೀಡುತ್ತಾರೆ. ಈ ಆಚರಣೆಯನ್ನು ಮಾಡುವುದರಿಂದ ದೈವಗಳು ಸಂತೃಪ್ತಿಗೊಂಡು ಕುಟುಂಬ, ಗ್ರಾಮ ಹಾಗೂ ನಾಡನ್ನು ರಕ್ಷಿಸುತ್ತವೆ ಎಂಬ ದೃಢವಾದ ನಂಬಿಕೆ ಜನಪದರಲ್ಲಿದೆ.

ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲಿ ಆರಾಧಿಸಲ್ಪಡುವ ದೈವಗಳು ಭೂತಗಳಲ್ಲ. ದೆವ್ವಗಳಲ್ಲ, ಪ್ರೇತಗಳಲ್ಲ, ಪಿಶಾಚಿಗಳೂ ಅಲ್ಲ. 'ತೆರೆ ಕಟ್ಟುವುದು' ಅಂದರೆ 'ದುಷ್ಟ ಶಕ್ತಿಗಳ ಆರಾಧನೆ' ಅಲ್ಲ. ಆದರೆ ತೆರೆಕಟ್ಟುವ ಆಚರಣೆ ಕುರಿತು ಅನೇಕ ವಿದೇಶಿ ವಿದ್ವಾಂಸರು ತಮ್ಮ ತಮ್ಮದೇ ನೆಲೆಯಲ್ಲಿ ವ್ಯಾಖ್ಯಾನಿಸಿರುವುದನ್ನು ಕಾಣಬಹುದಾಗಿದೆ. ಈ ವಿದ್ವಾಂಸರು ಇಲ್ಲಿ ಪೂಜಿಸುವ ದೈವಗಳನ್ನು 'ಡೆವಿಲ್', ಅಂದರೆ 'ಭೂತ'ಗಳೆಂದು ಕರೆದಿದ್ದಾರೆ. ಭೂತಗಳೆಂದರೆ ದುಷ್ಟ ಶಕ್ತಿಗಳು, ಅವು ಕೆಟ್ಟದನ್ನು ಮಾಡುತ್ತವೆ ಎಂದು ಅರ್ಥೈಸಿದ್ದಾರೆ. ಅವುಗಳ ಆರಾಧನೆಯನ್ನು

'ಡೆವಿಲ್‌ವರ್ಷಿಪ್' ಎಂದಿದ್ದಾರೆ. ಈ ವ್ಯಾಖ್ಯಾನವು ಅಷ್ಟು ಪರಿಪೂರ್ಣವಾಗಿರುವುದಕ್ಕೆ ಸಾಧ್ಯವಿಲ್ಲವೇನೋ! ಕಾರಣ ನೂರಾರು ವರ್ಷಗಳಿಂದ ಕೊಡಗಿನ ಜನಪದರಲ್ಲಿ ಈ ಆಚರಣೆಯು ಹಾಸುಹೊಕ್ಕಾಗಿದ್ದು; ಈಗಲೂ ಊರ್ಜಿತವಾಗಿರುವ ಸಂಪ್ರದಾಯವಾಗಿದೆ. ಜನಪದರ ದೃಷ್ಟಿಯಲ್ಲಿ ಇದು ಎಲ್ಲರೂ ಸೇರಿ ಸಾಮೂಹಿಕವಾಗಿ ನಡೆಸುವ ಒಂದು ಧಾರ್ಮಿಕ ಆಚರಣೆಯಾಗಿದೆ. 'ತೆರೆ ಕಟ್ಟುವುದು' ಎಂದರೆ ಗ್ರಾಮ ದೇವತೆಗಳಾದ ಭಗವತಿ, ಭದ್ರಕಾಳಿ, ಅಯ್ಯಪ್ಪ, ಸಾರ್ತಾವು, ಮಾದೇರಪ್ಪ, ಚೌಂಡಿ ಮುಂತಾದ ದೈವಗಳಿಗೆ ಹಾಗೂ ಪೂರ್ವಜರಿಗೆ ಹಬ್ಬದ ವೇಳೆ ವೇಷ ತೊಟ್ಟು ಪಣಿಕ, ಬಣ್ಣ ಮತ್ತು ಮಲಿಯರು ಮೈದುಂಬಿ ಕುಣಿಯುವ ದೈವಗಳ ತೆರೆಯಾಗಿದೆ.

**೧.೨ ಅಧ್ಯಯನದ ಉದ್ದೇಶ**

ಆಚರಣೆಗಳು ಜನಪದರ ಬದುಕಿನ ಅವಿಭಾಜ್ಯ ಅಂಗಗಳು. ಜನಪದರು ಆಚರಿಸುವ ಎಲ್ಲಾ ಆಚರಣೆಗಳಿಗೆ ನಂಬಿಕೆಯೇ ಜೀವಾಳ. "ಈ ನಂಬಿಕೆಯಲ್ಲಿ ಭಾವುಕತೆಯಿರುತ್ತದೆ, ಮುಗ್ಧತೆಯಿರುತ್ತದೆ, ನಿಷ್ಠೆ ಇರುತ್ತದೆ, ತೋರಿಕೆ ಇರುವುದಿಲ್ಲ. ಆದರೆ ವೈಚಾರಿಕ ದೃಷ್ಟಿ ಇರುವುದನ್ನು ಕಾಣುವುದಿಲ್ಲ."[೧] ನಂಬಿಕೆಗಳನ್ನು ಅನಕ್ಷರಸ್ಥ ಸಮಾಜದ ಮೌಢ್ಯತೆಯೆಂದು ಅಲ್ಲಗಳೆಯುವಂತಿಲ್ಲ. ಮನುಷ್ಯನ ಆಲೋಚನಾ ಶಕ್ತಿಯೊಂದಿಗೆ ನಂಬಿಕೆಗಳು ವಿಕಾಸಗೊಂಡು, ಜೀವನವನ್ನು ನಿಯಂತ್ರಿಸುವ ಪ್ರಬಲ ಶಕ್ತಿಗಳಾಗಿವೆ. ನಂಬಿಕೆಗಳು ಮಾತಿನ ಮೂಲಕ ಮನುಷ್ಯನಿಗೆ ಪ್ರೇರಣೆ ನೀಡುತ್ತವೆ. ಆಚರಣೆಗಳು ಕ್ರಿಯೆಯ ಮುಖಾಂತರ ವಿಶೇಷತೆಯನ್ನು ಪಡೆಯುತ್ತವೆ. ನಂಬಿಕೆಗಳು ಭಾವಪ್ರಧಾನವಾದರೆ; ಆಚರಣೆಗಳು ಕ್ರಿಯಾಪ್ರಧಾನವಾದವುಗಳು.

ಹಲವು ಶತಮಾನಗಳಿಂದ ಕೊಡಗಿನ ಜನಪದರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕನ್ನು ನಿರ್ದೇಶಿಸುತ್ತಾ ಬಂದಿರುವ ಧಾರ್ಮಿಕ ಸಂಪ್ರದಾಯವೇ ತೆರೆಕಟ್ಟುವ ಆಚರಣೆಗಳಾಗಿವೆ. ಕೊಡಗಿನ ಜನರು ಈ ಆಚರಣೆಯನ್ನು ದೈವಿಕ ಶಕ್ತಿಯ ಆರಾಧನಾ ಕ್ರಮವಾಗಿ ಅತ್ಯಂತ ಶ್ರದ್ಧೆಯಿಂದ ನಡೆಸುತ್ತಾರೆ. ಇಂದಿಗೂ ಕೊಡಗಿನಲ್ಲಿ ಚೌಂಡಿ, ಭದ್ರಕಾಳಿ, ಸಾರ್ತಾವು, ಭಗವತಿ, ಪುದಿಯೋದಿ, ಅಯ್ಯಪ್ಪ, ಕುಳಿಯ, ವಿಷ್ಣುಮೂರ್ತಿ, ಮಂದಣಮೂರ್ತಿ ಇತ್ಯಾದಿ ದೈವಗಳು ತೆರೆಕಟ್ಟುವ ಆಚರಣೆಯ ಮೂಲಕ ಆರಾಧಿಸಲ್ಪಡುತ್ತವೆ. ಈ ದೈವಗಳು ಕುಟುಂಬ, ಸಮುದಾಯ, ಸ್ಥಳ, ಗ್ರಾಮ ಹಾಗೂ ನಾಡುಗಳ ರಕ್ಷಕರಾಗಿದ್ದು ತಮ್ಮ ವ್ಯಾಪ್ತಿಯ ಪ್ರದೇಶಗಳನ್ನು ಕಾಪಾಡುತ್ತವೆ ಎಂಬ ದೃಢ ನಂಬಿಕೆಯಿದೆ. ಜನಪದರು ತಮ್ಮ ನಂಬಿಕೆಗೆ ಅನುಗುಣವಾಗಿ ಕುಟುಂಬ, ಗ್ರಾಮ ಹಾಗೂ ನಾಡಿನ ಮಟ್ಟಗಳಲ್ಲಿ ಈ ದೈವಗಳನ್ನು ಆರಾಧಿಸುತ್ತಾ ಬಂದಿದ್ದಾರೆ. ಕೊಡಗಿನಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಿರುವ ಪಣಿಕ, ಬಣ್ಣ ಮತ್ತು ಮಲಿಯ ಸಮುದಾಯದ ಜನರು ತೆರೆ

ಕಟ್ಟುವ ಮೂಲಕ ಆಚರಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ಮೂಲತಃ ತೆರೆಕಟ್ಟುವ ಆಚರಣೆಯ ಸ್ವರೂಪ ತಾಂತ್ರಿಕವಾದುದು. ಆಚರಣೆಯ ಸಂದರ್ಭದಲ್ಲಿ ಮಂಡಲ ಬರೆಯುವುದು, ತಟ್ಪ್ತಡೆಯನ್ನು ಸಿದ್ಧಗೊಳಿಸುವುದು, ಕೋಟ ಮತ್ತು ನೆಲೆಗಳಿಂದ ಆಯುಧ ಹಾಗೂ ಮೊಗಗಳನ್ನು ತರುವಂತಹ ತಾಂತ್ರಿಕ ಸಿದ್ಧತೆಗಳು ಇಲ್ಲಿ ಮುಖ್ಯವಾಗಿರುತ್ತವೆ. ಆದರೆ ಆಚರಣೆಯ ಸಂದರ್ಭದಲ್ಲಿ ಬಳಸುವ ವೇಷಭೂಷಣ, ಬಣ್ಣಗಾರಿಕೆ, ಮಾತು, ಹಾಡುಗಳು, ನುಡಿಗಟ್ಟುಗಳು ಇದನ್ನು ಕಲಾತ್ಮಕ ಅಭಿವ್ಯಕ್ತಿಯನ್ನಾಗಿಯೂ ರೂಪಿಸುತ್ತದೆ. ಗ್ರಾಮದಲ್ಲಿರುವ ಎಲ್ಲಾ ಸಮುದಾಯಗಳು ಈ ಆಚರಣೆಯಲ್ಲಿ ಪಾಲ್ಗೊಳ್ಳುತ್ತವೆ.

* ತೆರೆ ಕಟ್ಟುವ ಆಚರಣೆಗಳು ನಿಸರ್ಗಾರಾಧನೆಯ ಪ್ರತೀಕವಾಗಿವೆ. ಇವು ಧಾರ್ಮಿಕ ನೆಲೆಗಟ್ಟನ್ನು ಪಡೆದುಕೊಂಡಿದ್ದು; ವ್ರಾತ್ಯ ಸಂಸ್ಕೃತಿಯ ಸ್ವರೂಪವನ್ನು, ಪರಿಪಕ್ವವಾದ ಉದ್ದೇಶವನ್ನೂ ಹೊಂದಿವೆ. ಕೊಡಗಿನ ಭೂಪ್ರದೇಶದ ಆಚರಣೆಗಳನ್ನು ಅಲ್ಲಿನ ಇತಿಹಾಸ, ಸಾಮಾಜಿಕತೆ, ಸಂಸ್ಕೃತಿ, ಧಾರ್ಮಿಕತೆ ಹಾಗೂ ರಾಜಕೀಯ ಅಂಶಗಳು ಪ್ರಭಾವಿಸುತ್ತವೆ. ಕೊಡಗಿನ ತೆರೆಕಟ್ಟುವ ಆಚರಣೆಗಳು ಆರಾಧನಾ ಪದ್ಧತಿಯಾಗಿ, ರಾಜಕೀಯ ಆಡಳಿತ ವ್ಯವಸ್ಥೆಯ ಭಾಗವಾಗಿ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಅಭಿವ್ಯಕ್ತಿಗಳಾಗಿ ಕಂಡುಬರುತ್ತವೆ. ಒಟ್ಟಿನಲ್ಲಿ ಕೊಡಗಿನ ಸಮಾಜೋ ಸಾಂಸ್ಕೃತಿಕ, ರಾಜಕೀಯ, ಭೌಗೋಳಿಕ ಹಾಗೂ ಧಾರ್ಮಿಕ ಮಹೋನ್ನತಿಯ ಅರಿವು ಅಧ್ಯಯನದ ಉದ್ದೇಶವಾಗಿದೆ.

* ತೆರೆ ಕಟ್ಟುವುದು ಕೊಡಗಿನ ಅತ್ಯಂತ ಶಕ್ತಿಯುತ ಮತ್ತು ಧಾರ್ಮಿಕ ಆಚರಣೆಯಾಗಿದೆ. ಕೊಡಗಿನ ಜಾನಪದ ಅಧ್ಯಯನದಲ್ಲಿ ವಿಶೇಷ ಮಹತ್ವವನ್ನು ಪಡೆದಿರುವ ತೆರೆಕಟ್ಟುವ ಆಚರಣೆಯ ಉಗಮ, ವಿಕಾಸ, ತೆರೆ ಪದದ ವಿವೇಚನೆ ಹಾಗೂ ತೆರೆ ಆಚರಣೆಯ ಸ್ಥಾಪಿತ ಕೇಂದ್ರಗಳ ಬಗ್ಗೆ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

* ಕೊಡಗಿನ ತೆರೆಕಟ್ಟುವ ಆಚರಣೆಯಲ್ಲಿ ತೆರೆ ಕಟ್ಟಿಸುವವರು ಹಾಗೂ ತೆರೆ ಕಟ್ಟುವವರು ಎಂಬ ಎರಡು ವರ್ಗಗಳನ್ನು ಕಾಣಬಹುದು. ಇಲ್ಲಿ ತೆರೆ ಕಟ್ಟಿಸುವವರು ಸಾಮಾಜಿಕವಾಗಿ ಪ್ರಧಾನ ಧಾರೆಯಲ್ಲಿರುವವರು. ತೆರೆ ಕಟ್ಟುವವರು ಸಾಮಾಜಿಕ ಹಾಗೂ ಆರ್ಥಿಕವಾಗಿ ಹಿಂದುಳಿದ ಪಣಿಕ, ಮಲಿಯ ಮತ್ತು ಬಣ್ಣ ಸಮುದಾಯದವರು. ಇವರನ್ನು ತೆರೆಕಾರರು ಎಂದು ಕರೆಯುತ್ತಾರೆ. ಇವರು ಬಣ್ಣ, ವೇಷ ಭೂಷಣ, ಮಾತು, ಕುಣಿತ, ಹಾಡು ಮೊದಲಾದ ರಂಗ ಪರಿಕರಗಳನ್ನು ಬಳಸಿಕೊಂಡು ಆಚರಣೆಗೆ ಮೂರ್ತ ಸ್ವರೂಪವನ್ನು ನೀಡುತ್ತಾರೆ. ದೈವಗಳನ್ನು ಆವಾಹಿಸಿಕೊಂಡು ತೆರೆ ಅಥವಾ ಗ್ರಾಮದೇವತೆಗಳ ಉತ್ಸವದ ಕೇಂದ್ರ

ಬಿಂದುಗಳಾಗಿ ಇಡೀ ಸನ್ನಿವೇಶವನ್ನು ಆಳುತ್ತಾರೆ. ಆದರೆ ವೇಷ ಕಳಚಿದ ಬಳಿಕ ಅದೇ ಸಂಕಷ್ಟದ ಬದುಕನ್ನು ಬದುಕುತ್ತಿದ್ದಾರೆ. ಈ ಸಮುದಾಯಗಳ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಚಹರೆಗಳನ್ನು ಗುರುತಿಸುವುದು ಮುಖ್ಯವಾಗಿದೆ.

* ಕೊಡಗಿನ ತೆರೆಕಟ್ಟುವ ಆಚರಣೆಗಳು ಧಾರ್ಮಿಕ ಸಂಸ್ಪರ್ಶವನ್ನು ಹೊಂದಿದ್ದು; ದೈವೀ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಬೆಳೆದುಬಂದಿವೆ. ಕೊಡಗಿನ ಬಹುಮುಖಿ ಸಂಸ್ಕೃತಿಯ ವ್ಯಕ್ತರೂಪಗಳಾದ ಇವುಗಳು ಅಲ್ಲಿನ ಜನಜೀವನದಲ್ಲಿ ಹಾಸುಹೊಕ್ಕಾಗಿದ್ದು; ವರ್ತಮಾನದಲ್ಲೂ ಊರ್ಜಿತವಾಗಿಯೇ ಇವೆ. ಆರಾಧನೆ, ಕಲಾತ್ಮಕತೆ, ಮನೋರಂಜನೆ, ನ್ಯಾಯ ವಿತರಣೆಯ ಅಂಶಗಳು ಸೇರಿಕೊಂಡಿರುವ ಸಂಕೀರ್ಣ ವ್ಯವಸ್ಥೆಯಾಗಿದೆ. ಹಲವು ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿರುವ ವಿಶಿಷ್ಟ ಬೆಸುಗೆಯಾಗಿದೆ. ಈ ಹಿನ್ನೆಲೆಯಲ್ಲಿ ತೆರೆ ಆಚರಣೆಗಳ ಸಾಂಸ್ಕೃತಿಕ ಸ್ವರೂಪವನ್ನು ಅವಲೋಕಿಸುವುದು ಅಗತ್ಯವಾಗಿದೆ. ಜಾನಪದ ಅಧ್ಯಯನದ ಇತ್ತೀಚಿನ ಪ್ರವೃತ್ತಿಗಳನ್ನು ಗಮನಿಸಿಕೊಂಡು ತೆರೆಗಳನ್ನು ವರ್ಗೀಕರಿಸಿ ಅವುಗಳ ಸಾಂಸ್ಕೃತಿಕ ಸ್ವೋಪಜ್ಞತೆಯ ಹರವುಗಳನ್ನು ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

* ತಾಂತ್ರಿಕ ವಿಧಿಗಳನ್ನು ಒಳಗೊಂಡಿದ್ದು; ತೆರೆಕಟ್ಟುವ ಆಚರಣೆಗಳಲ್ಲಿ ಬಲಿಕರ್ಮವೂ ಒಂದು ಅಂಗವಾಗಿದೆ. ಹಾಗಾಗಿ ತೆರೆಕಟ್ಟುವ ಆಚರಣೆಗಳಲ್ಲಿನ ಬಲಿಕರ್ಮದ ಸ್ವರೂಪವನ್ನು ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವನ್ನು ಹೊಂದಿದೆ.

* ವಿಶ್ವದಾದ್ಯಂತ ಪ್ರತಿಯೊಂದು ಆಚರಣೆಗಳು ತಮ್ಮ ಒಡಲಲ್ಲಿ ವಿಧಿನಿಷೇಧಗಳನ್ನು, ನಿರ್ಬಂಧಗಳನ್ನೂ ಇರಿಸಿಕೊಂಡಿರುತ್ತವೆ. ಅದರಲ್ಲೂ ಧಾರ್ಮಿಕ ವ್ಯವಸ್ಥೆಯಲ್ಲಿ ಮಹಿಳೆಯ ಮೇಲೆ ಹೇರಿರುವ ನಿರ್ಬಂಧಗಳು ಅಧಿಕವಾಗಿರುತ್ತವೆ. ಧಾರ್ಮಿಕ ನೆಲೆಗಟ್ಟನ್ನು ಹೊಂದಿರುವ ಕೊಡಗಿನ ತೆರೆ ಆಚರಣೆಗಳಲ್ಲಿ ಮಹಿಳಾ ನಿರ್ಬಂಧದ ನೆಲೆಗಳನ್ನು ಗುರುತಿಸುವ ಉದ್ದೇಶವನ್ನೂ ಪ್ರಸ್ತುತ ಅಧ್ಯಯನವು ಹೊಂದಿದೆ.

* ಜಾನಪದದ ಕ್ರಿಯಾತ್ಮಕ ಬಗೆಯಾದ ಆಚರಣೆಗಳು ಗತವನ್ನು ಅಂತರ್ಗತ ಮಾಡಿಕೊಂಡು ವರ್ತಮಾನದಲ್ಲಿ ವ್ಯಕ್ತಪಡಿಸುತ್ತವೆ. ಸಂಕೀರ್ಣ ಸ್ವರೂಪದ ಆಚರಣೆಯಾದ ತೆರೆಕಟ್ಟುವ ಆಚರಣೆಯಲ್ಲಿ ಕೊಡಗಿನ ಕಾಲಾನುಗತ ಸಾಮಾಜಿಕ ವ್ಯವಸ್ಥೆಯು ಅಂತರ್ಗತವಾಗಿದೆ. ಸಮುದಾಯಗಳ ಬದುಕಿನೊಂದಿಗೆ ನಿಕಟ ಸಂಬಂಧವನ್ನು ಹೊಂದಿರುವ ಆಚರಣೆಗಳು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಲವು ಪಲ್ಲಟಗಳಿಗೆ ಒಳಗಾಗಿರುತ್ತವೆ. ಇಂತಹ ಪಲ್ಲಟಗಳು ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲೂ ಘಟಿಸಿವೆ. ಈ ಹಿನ್ನೆಲೆಯಲ್ಲಿ ತೆರೆಕಟ್ಟುವ

ಆಚರಣೆಗಳಲ್ಲಿನ ಸ್ಥಿತ್ಯಂತರಗಳನ್ನು ಗುರುತಿಸುವುದು ಅಧ್ಯಯನದ ಪ್ರಮುಖ ಉದ್ದೇಶಗಳಲ್ಲಿ ಒಂದಾಗಿದೆ.

**೧.೩ ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ಜಾನಪದದ ಕ್ರಿಯಾತ್ಮಕ ಬಗೆಯಾದ ಕೊಡಗಿನ ತೆರೆಕಟ್ಟುವ ಆಚರಣೆಗಳ ಕುರಿತಾಗಿದೆ. ಸೈದ್ಧಾಂತಿಕವಾಗಿ ತಾತ್ವಿಕ ಚೌಕಟ್ಟಿನೊಳಗೆ ಅಧ್ಯಯನ ಮಾಡಲು ಏಳು ಅಧ್ಯಾಯಗಳನ್ನಾಗಿ ವಿಭಾಗ ಮಾಡಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಿವಿಧಾನಗಳನ್ನು ಪರಿಶೀಲಿಸುವುದರೊಂದಿಗೆ ತೆರೆಕಟ್ಟುವ ಆಚರಣೆಗಳ ಬಗ್ಗೆ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯ ವಿವರಗಳನ್ನು ಒಳಗೊಂಡಿದೆ.

ಅಧ್ಯಾಯ ಎರಡರಲ್ಲಿ ಕೊಡಗಿನ ಇತಿಹಾಸ, ಸಾಂಸ್ಕೃತಿಕ ನೆಲೆಗಳು, ಸಾಮಾಜಿಕತೆ, ಧಾರ್ಮಿಕತೆ, ರಾಜಕೀಯ ಹಾಗೂ ಭೌಗೋಳಿಕ ಅಂಶಗಳಾದ ನದಿಗಳು, ಬೆಟ್ಟ, ಗುಡ್ಡ, ಶಿಖರಗಳ ಬಗ್ಗೆ ಪರಿಚಯಾತ್ಮಕವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ತೆರೆಯ ಪರಿಕಲ್ಪನೆ, ಪದದ ಅರ್ಥ, ಪ್ರಾಚೀನ ಉಲ್ಲೇಖಗಳು, ತೆರೆ ಆಚರಣೆಗಳು ಬೆಳೆದು ಬಂದ ಬಗೆ ಹಾಗೂ ತೆರೆ ಆಚರಣೆಯ ಸ್ಥಾಪಿತ ಕೇಂದ್ರಗಳ ಬಗ್ಗೆ ವಿವೇಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲಿ ತೆರೆಯನ್ನು ಕಟ್ಟುವ ಪಣಿಕ, ಮಲಿಯ ಹಾಗೂ ಬಣ್ಣ ಸಮುದಾಯಗಳ ಸಾಮಾಜಿಕ ಬದುಕು ಹಾಗೂ ಸಂಸ್ಕಾರಗಳ ಸೂಕ್ಷ್ಮ ಚಹರೆಗಳನ್ನು ಅವಲೋಕಿಸಲಾಗಿದೆ.

ಅಧ್ಯಾಯ ಐದರಲ್ಲಿ ತೆರೆ ಆಚರಣೆಗಳನ್ನು ತೆರೆದೈವಗಳ ಲಿಂಗದ ಆಧಾರದಲ್ಲಿ ಸ್ತ್ರೀ ದೈವಗಳ ತೆರೆಗಳು, ಪುರುಷದೈವಗಳ ತೆರೆಗಳು ಹಾಗೂ ಪ್ರಾಣಿ ವರ್ಗದ ತೆರೆಗಳೆಂದು ವರ್ಗೀಕರಿಸಿ ವಿವರಣಾತ್ಮಕವಾಗಿ ವಿಶ್ಲೇಷಿಸಲಾಗಿದೆ. ತೆರೆಕಟ್ಟುವ ಆಚರಣೆಗಳ ಸಾಂಸ್ಕೃತಿಕ ಸ್ವರೂಪವನ್ನು ಆರಾಧನೆಯ ಪ್ರಮುಖ ವಿಧಿವಿಧಾನಗಳ ಮೂಲಕ ಚರ್ಚಿಸಲಾಗಿದೆ. ತಾಂತ್ರಿಕ ಸ್ವರೂಪದ ತೆರೆಕಟ್ಟುವ ಆಚರಣೆಯಲ್ಲಿನ ಬಲಿಕರ್ಮದ ವಿವರಗಳನ್ನು ಹಾಗೂ ಆರಾಧನಾ ರೀತಿಗಳನ್ನು ನಿರೂಪಿಸಲಾಗಿದೆ. ಆಚರಣೆಯ ಸಂದರ್ಭದಲ್ಲಿ ಮಹಿಳೆಯರಿಗಿರುವ ನಿರ್ಬಂಧಗಳನ್ನು ಸಮಕಾಲೀನ ದೃಷ್ಟಿಯಿಂದ ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಆರರಲ್ಲಿ ವರ್ತಮಾನದ ಪಲ್ಲಟಗಳ ಪ್ರಭಾವಕ್ಕೆ ಒಳಗಾಗಿರುವ ತೆರೆ ಆಚರಣೆಗಳಲ್ಲಿನ ಸ್ಥಿತ್ಯಂತರಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ ಏಳರಲ್ಲಿ ಪ್ರಸ್ತುತ ಅಧ್ಯಯನದ ಸಮಾರೋಪ ಹಾಗೂ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನಿರೂಪಿಸಲಾಗಿದೆ.

ಹೀಗೆ ಪ್ರಸ್ತುತ ಅಧ್ಯಯನವು ಕೊಡಗಿನ ವಿಶಿಷ್ಟ ಆಚರಣೆಗಳಲ್ಲಿ

ಪ್ರಮುಖವಾದ ತೆರೆಕಟ್ಟುವ ಆಚರಣೆಗಳನ್ನು ಕ್ಷೇತ್ರಕಾರ್ಯದ ಮೂಲಕ ದಾಖಲಿಸಿ ಅವುಗಳ ಸ್ವರೂಪವನ್ನು ವಿವಿಧ ದೃಷ್ಟಿಕೋನಗಳಿಂದ ವಿವರಣಾತ್ಮಕವಾಗಿ ವಿಶ್ಲೇಷಿಸುವ ಪ್ರಯತ್ನವಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೊಡಗು ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಕೊಡಗು ಜಿಲ್ಲೆಯು ವಿರಾಜಪೇಟೆ, ಮಡಿಕೇರಿ ಹಾಗೂ ಸೋಮವಾರಪೇಟೆ ಎಂಬ ಮೂರು ತಾಲೂಕುಗಳನ್ನು ಹೊಂದಿದ್ದು; ಪ್ರಸ್ತುತ ವರ್ಷದಲ್ಲಿ ಪೊನ್ನಂಪೇಟೆ ಮತ್ತು ಕುಶಾಲನಗರ ಎಂಬ ಇನ್ನೆರಡು ತಾಲೂಕುಗಳು ಘೋಷಣೆಯಾಗಿವೆ. ಅಧ್ಯಯನವು ಈ ತಾಲೂಕುಗಳ ಭೌಗೋಳಿಕ ವ್ಯಾಪ್ತಿಗೆ ಒಳಪಟ್ಟಿದೆ. ಇಲ್ಲಿ ಆಚರಿಸಲ್ಪಡುವ ತೆರೆಕಟ್ಟುವ ಆಚರಣೆಗಳನ್ನು ದಾಖಲಿಸಿ ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲಾಗಿದೆ.

**೧.೪ ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವು ಜಾನಪದದ ಅತ್ಯಂತ ಪ್ರಮುಖ ಭಾಗವಾದ ಆಚರಣೆಗಳನ್ನು ಕುರಿತಾಗಿದೆ. ಕೊಡಗಿನಲ್ಲಿ ಬಹುತ್ವದ ಸಂಸ್ಕೃತಿ, ಭಾಷೆ, ಸಾಹಿತ್ಯ, ವೇಷ ಭೂಷಣಗಳು, ಪದ್ಧತಿ, ಆಚರಣೆಗಳು ಅಸ್ತಿತ್ವದಲ್ಲಿವೆ. ಅವುಗಳಲ್ಲಿ ಕೊಡಗಿನ ತೆರೆಕಟ್ಟುವ ಆಚರಣೆಗಳು ಬಹುಮುಖೀಯ ಸಾಮಾಜಿಕ ವ್ಯವಸ್ಥೆಗೆ ಪೂರಕವಾಗಿದೆ. ತೆರೆಕಟ್ಟುವ ಆಚರಣೆಗಳು ಇಂದು ನೆನ್ನೆಯವಲ್ಲ. ಇವುಗಳನ್ನು ಅನೇಕ ವರ್ಷಗಳಿಂದ ಕೊಡಗಿನಲ್ಲಿ ನೆಲೆಸಿರುವ ಜನಪದರು ಅಳವಡಿಸಿಕೊಂಡು ಮುಂದುವರೆಸಿಕೊಂಡು ಮುನ್ನಡೆಯುತ್ತಿದ್ದಾರೆ. ಜೊತೆ ಜೊತೆಗೆ ಆರಾಧನೆಯ ನೆಲೆಯಲ್ಲಿ ದೈವಗಳು ಮತ್ತು ಜನಪದರ ನಡುವೆ ಅವಿನಾಭಾವ ಸಂಬಂಧವನ್ನು ಇರಿಸಿಕೊಂಡು ಇಂದಿಗೂ ಜೀವಂತ ಜ್ವಲಂತವಾಗಿವೆ. ತೆರೆಕಟ್ಟುವ ಆಚರಣೆಗಳನ್ನು ಪ್ರಯೋಗಾತ್ಮಕವಾಗಿ, ಪ್ರತ್ಯಕ್ಷವಾಗಿ ಅಲ್ಲದೆ ಸಂಪೂರ್ಣವಾಗಿ ಕ್ಷೇತ್ರಕಾರ್ಯ ಮಾಡಿ, ವಕ್ತೃಗಳನ್ನು ಸಂದರ್ಶಿಸಿ ಸೂಕ್ಷ್ಮಾತಿಸೂಕ್ಷ್ಮ ಅಂಶಗಳನ್ನು ಕೂಡ ಗಮನಿಸಿ ಈ ಮಹಾಪ್ರಬಂಧಕ್ಕೆ ಅಳವಡಿಸಲಾಗಿದೆ.

ಕೊಡಗಿನ ತೆರೆಕಟ್ಟುವ ಆಚರಣೆಗಳು ಮೂಲವಾಗಿ ಜನಪದರ ಸ್ಮೃತಿಪಟಲದೊಳಗಿಂದ ಚೆಲ್ಲಿಕೊಂಡತವುಗಳು. ಈ ಹಿನ್ನೆಲೆಯಲ್ಲಿ ದೇಸೀ ಸೊಗಡಿನ ಗೊಂಚಲುಗಳು ತೆರೆಕಟ್ಟುವ ಆಚರಣೆಗಳಲ್ಲಿವೆ. ಆದ್ದರಿಂದ ತೆರೆಕಟ್ಟುವ ಆಚರಣೆಗಳ ಅಧ್ಯಯನಕ್ಕೆ ದೇಸೀ ಸಿದ್ಧಾಂತವನ್ನು ಸೈದ್ಧಾಂತಿಕವಾಗಿ ಅಳವಡಿಸಲಾಗಿದೆ.

ಪ್ರತಿಯೊಂದು ಸಂಸ್ಕೃತಿಯು ಸಂಸ್ಕಾರಗಳು ಸಚ್ಚಾರಿತ್ರ್ಯಗಳನ್ನು ಒಳಗೊಂಡಿದ್ದು; ಆಯಾಯ ಭೌಗೋಳಿಕತೆಗೆ ಪೂರಕವಾಗಿ ಇರುತ್ತವೆ. ಒಂದು ಭೌಗೋಳಿಕತೆಗೆ ಪೂರಕವಾಗಿ ಬಂದ ಸಂಸ್ಕೃತಿಯು ಇನ್ನೊಂದು ಭೌಗೋಳಿಕತೆಯಲ್ಲಿ ಜನ್ಮ ಪಡೆಯುವ ಜನ ಸಂಸ್ಕೃತಿಗಿಂತ ಭಿನ್ನ, ವಿಶಿಷ್ಟ,

ವೈವಿಧ್ಯಮಯ ಹಾಗು ತನ್ನದೇ ಮೌಲ್ಯವನ್ನು ಹೊಂದಿರುತ್ತದೆ. ಆದ್ದರಿಂದ ಮಲೆನಾಡಿನಲ್ಲಿ ಆಚರಣೆಯಲ್ಲಿರುವ ತೆರೆಗಳು ಭೌಗೋಳಿಕವಾಗಿ ತಮ್ಮದೇ ಛಾಪನ್ನು ಮೂಡಿಸಿವೆ. ಈ ಹಿನ್ನೆಲೆಯಲ್ಲಿ ಭೌಗೋಳಿಕ ವಿಧಾನವನ್ನು ಅನುಸರಿಸಲಾಗಿದೆ.

ಚರಿತ್ರೆ ಎಂಬುದು ಭೂತಕಾಲದ ಘಟನಾವಳಿಗಳ ಮೊತ್ತವಾಗಿದ್ದು ಗತಿಸಿಹೋದ ಸಂಗತಿಗಳನ್ನು ನಿರೂಪಿಸುತ್ತದೆ. ಆಚರಣೆಗಳು ಗತವನ್ನು ವರ್ತಮಾನದಲ್ಲಿ ಪ್ರತಿನಿಧಿಸುತ್ತಿರುತ್ತವೆ. ಪ್ರತಿಯೊಂದು ಆಚರಣೆಯ ಹಿಂದೆ ಅದಕ್ಕೆ ಸಂಬಂಧಿಸಿದ ಚರಿತ್ರೆಯ ಸೂಕ್ಷ್ಮ ಎಳೆಗಳಿರುತ್ತವೆ. ಐತಿಹಾಸಿಕ ಚರಿತ್ರೆಯನ್ನು ಕಟ್ಟಲು ಆಚರಣೆಗಳನ್ನು ಪೋಷಿಸುವ ಐತಿಹ್ಯ, ಕಥೆ, ಕಾವ್ಯ, ಪುರಾಣಗಳನ್ನು ಗಮನಿಸುವುದು ಕಂಡುಬರುತ್ತದೆ. ಒಂದು ಪ್ರದೇಶದ ಚರಿತ್ರೆಯನ್ನು ಶಾಸನಗಳು, ಸ್ಮಾರಕಗಳು, ನಾಣ್ಯಗಳು ಮುಂತಾದ ಆಕರಗಳು ಕಟ್ಟಿಕೊಡುವಂತೆ ತೆರೆಯಂತಹ ಆಚರಣೆಗಳೂ ನಿರೂಪಿಸುತ್ತವೆ. ಈ ನಿಟ್ಟಿನಲ್ಲಿ ಚಾರಿತ್ರಿಕ ವಿಧಾನವನ್ನು ಬಳಸಿಕೊಳ್ಳಲಾಗಿದೆ.

ಆಚರಣೆಗಳ ಒಡಲಲ್ಲಿ ಹಲವು ಪುರಾಣಗಳು ಹುದುಗಿಕೊಂಡಿರುತ್ತವೆ. ಪ್ರಾಚೀನದಲ್ಲಿ ನಡೆದ ವಿಚಾರವನ್ನು ಪುರಾಣಗಳು ಹೇಳುತ್ತವೆ. ಸೃಷ್ಟಿಯ ಆದಿಯಿಂದ ಮನುಷ್ಯಕುಲದ ಚರಿತ್ರೆಯನ್ನು ಹೇಳುವ ಉದ್ದೇಶವನ್ನು ಹೊಂದಿರುತ್ತವೆ. ತೆರೆಕಟ್ಟುವ ಆಚರಣೆಗಳಲ್ಲಿ ಆರಾಧಿಸಲ್ಪಡುವ ದೈವಗಳಿಗೆ ಪುರಾಣದ ಹಿನ್ನೆಲೆಯಿದೆ. ಆದುದರಿಂದ ಪುರಾಣ ಮೂಲ ವಿಧಾನವನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ತೆರೆಕಟ್ಟುವ ಆಚರಣೆಯು ಕುಣಿತ ಪ್ರಧಾನವಾದ ಆರಾಧನಾ ಪದ್ಧತಿ. ಇಲ್ಲಿ ಪೂಜೆ, ಅರ್ಚನೆಗಳಿಗಿಂತ ನೃತ್ಯ, ಅಭಿನಯ, ಸಂಭಾಷಣೆಗಳು ಮಹತ್ವ ಪಡೆದುಕೊಳ್ಳುತ್ತವೆ. ಬಣ್ಣಗಾರಿಕೆ, ವೇಷಭೂಷಣಗಳು ಇದನ್ನು ಬಹು ಪ್ರಭಾವಿ ಪ್ರದರ್ಶನ ಕಲೆಯನ್ನಾಗಿ ರೂಪಿಸಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಪ್ರದರ್ಶನ ಸಿದ್ಧಾಂತವನ್ನು ಬಳಸಿಕೊಳ್ಳಲಾಗಿದೆ.

ಕೊಡಗಿನ ತೆರೆಕಟ್ಟುವ ಆಚರಣೆಗಳನ್ನು ಕುರಿತು ಸಂಪೂರ್ಣ ಕ್ಷೇತ್ರಕಾರ್ಯವನ್ನು ಮಾಡಿ ಅಧ್ಯಯನ ಮಾಡಲಾಗಿದೆ. ತೆರೆ ಆಚರಣೆಗಳು ನಡೆಯುವ ಸ್ಥಳಗಳಿಗೆ ಭೇಟಿ ನೀಡಿ ಆಚರಣೆಯನ್ನು ಅವಲೋಕಿಸಲಾಗಿದೆ. ಅಲ್ಲದೆ ಸೈದ್ಧಾಂತಿಕ ವಿಧಾನ, ಪ್ರಶ್ನಾವಳಿಯ ಸಮೀಕ್ಷೆ ವಿಧಾನವನ್ನು ಅನುಸರಿಸಿ; ಪ್ರಾಥಮಿಕ ಮತ್ತು ಆನುಷಂಗಿಕ ಮೂಲಗಳನ್ನು ಅಳವಡಿಸಿಕೊಂಡು ಸಾಹಿತ್ಯಕ, ಸಾಂಸ್ಕೃತಿಕ, ಸಾಮಾಜಿಕ ಪುನರಾವಲೋಕನವನ್ನು ಅಧ್ಯಯನದಲ್ಲಿ ಅಳವಡಿಸಲಾಗಿದೆ.

ಮುಂದುವರೆದು ತೆರೆಕಟ್ಟುವ ಆಚರಣೆಯ ಹಂತಗಳು, ಬಗೆಗಳು, ವಿವರಗಳು ಹಾಗೂ ಕಾರ್ಯಗಳಿಗೆ ಸಂಬಂಧಿಸಿದಂತೆ ಪ್ರಶ್ನಾವಳಿಗಳನ್ನು ರಚಿಸಿಕೊಂಡು ವಕ್ತೃಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ತೆರೆ ಕಟ್ಟುವವರು, ತೆರೆ ನಡೆಸುವವರು, ದೈವದ ಪಾತ್ರಧಾರಿಗಳು ಹಾಗೂ ಅವರ ಸಾಮಾಜಿಕ ಹಿನ್ನೆಲೆಯನ್ನು ಕುರಿತು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡುವ ವಿಧಾನವನ್ನು ಅನುಸರಿಸಲಾಗಿದೆ.

ತೆರೆಕಟ್ಟುವ ಆಚರಣೆಗಳಿಗೆ ಸಂಬಂಧಿಸಿದಂತೆ ಆಚರಣೆಯನ್ನು ನಡೆಸುವ ಕೊಡಗಿನ ವಿವಿಧ ಸಮುದಾಯಗಳ ವಕ್ತೃಗಳನ್ನು ಸಂದರ್ಶಿಸಲಾಗಿದೆ. ತೆರೆಯನ್ನು ಕಟ್ಟುವ ಪಣಿಕ, ಮಲಿಯ ಹಾಗೂ ಬಣ್ಣ ಸಮುದಾಯದ ತೆರೆಕಾರರನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಮಾಹಿತಿಗಳನ್ನು ವಿವಿಧ ದೃಷ್ಟಿಕೋನಗಳಿಂದ ಸೈದ್ಧಾಂತಿಕವಾಗಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

ಕೊಡಗಿನ ತೆರೆಕಟ್ಟುವ ಆಚರಣೆಯ ಸಾಂಸ್ಕೃತಿಕ ಸ್ವರೂಪವನ್ನು ವಿಶ್ಲೇಷಿಸುವ ನಿಟ್ಟಿನಲ್ಲಿ ಆಚರಣೆಯ ವಿವಿಧ ವಿಧಿವಿಧಾನಗಳ ವೀಡಿಯೋ ಚಿತ್ರೀಕರಣ ಹಾಗೂ ಛಾಯಾಚಿತ್ರಗಳನ್ನು ಉಪಯೋಗಿಸಿಕೊಂಡು ಹೆಚ್ಚು ಪೂರಕವಾಗಿ ಮಾಹಿತಿ ಸಂಗ್ರಹಿಸಲಾಗಿದೆ. ಪ್ರಕಟಿತ ಸಾಹಿತ್ಯ ಕೃತಿಗಳು, ಸಂಶೋಧನಾ ಕೃತಿಗಳು ಹಾಗೂ ಲೇಖನಗಳನ್ನು ಪೂರಕವಾಗಿ ಬಳಸಿಕೊಂಡು ಅಧ್ಯಯನ ಮಾಡಲಾಗಿದೆ.

**೧.೫ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ಕೊಡಗಿನ ವಿಶಿಷ್ಟ ಆಚರಣೆಯಾದ ತೆರೆಕಟ್ಟುವ ಆಚರಣೆಗಳ ಬಗ್ಗೆ ಮೊದಲು ಬೆಳಕು ಚೆಲ್ಲಿದವರು ವಿದೇಶಿ ವಿದ್ವಾಂಸರು. ವಸಾಹತುಶಾಹಿ ಕಾಲಘಟ್ಟದಲ್ಲಿ ಭಾರತದ ಸಮುದಾಯ ಅಧ್ಯಯನಗಳು ಆಡಳಿತದ ಭಾಗವಾಗಿ ಆರಂಭಗೊಂಡವು. ಭಾರತವನ್ನು ಆಳುವುದಕ್ಕಾಗಿ ಇಲ್ಲಿನ ಜನರ ಭಾಷೆ, ವ್ಯಾಕರಣ, ಸಾಹಿತ್ಯ, ಸಂಸ್ಕೃತಿ ಹಾಗೂ ಆಚರಣೆಗಳ ಕುರಿತ ಅಧ್ಯಯನ ಅಂದು ಅನಿವಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ೧೭೮೪ರಲ್ಲಿ ಸರ್ ವಿಲಿಯಂ ಜೋನ್ಸ್ ನೇತೃತ್ವದಲ್ಲಿ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್ ಸಂಸ್ಥೆ ಪ್ರಾರಂಭವಾಯಿತು. ಬ್ರಿಟೀಷ್ ಅಧಿಕಾರಿಗಳು, ಮಿಷನರಿಗಳು, ಪ್ರವಾಸಿಗರು, ಮಾನವ ಶಾಸ್ತ್ರಜ್ಞರು ಭಾರತಕ್ಕೆ ಬಂದು ಅಧ್ಯಯನ ನಡೆಸಲಾರಂಭಿಸಿದರು. ಕ್ರೈಸ್ತಧರ್ಮ ಪ್ರಚಾರಕ್ಕಾಗಿ ಪಾಶ್ಚಾತ್ಯ ಮಿಷನರಿಗಳು ಬಂದು ನೆಲೆಸಿದೆಡೆಗಳಲ್ಲೆಲ್ಲಾ ಜನಾಂಗಿಕ ಅಧ್ಯಯನಗಳು ನಡೆದವು. ಅದರಂತೆ ಕೊಡಗಿನಲ್ಲೂ ಅಧ್ಯಯನಗಳು ನಡೆದವು.

ಕ್ರಿ. ಶ. ೧೮೫೩-೧೮೬೦ರ ಅವಧಿಯಲ್ಲಿ ಕೊಡಗಿನಲ್ಲಿದ್ದ ಮೊದಲನೇ ಪ್ರಾಟೆಸ್ಟೆಂಟ್ ಮತಗುರು ಡಾಕ್ಟರ್ ಮೋಗ್ಲಿಂಗ್. ಬಾಸೆಲ್ ಮಿಷನ್ ಆಶ್ರಯದಲ್ಲಿ

ಮತಪ್ರಚಾರ ಕಾರ್ಯ ಮಾಡುತ್ತಿದ್ದ ಇವರು ೧೮೫೫ ರಲ್ಲಿ COORG MEMOIRS : AN ACCOUNT OF COORG, AND OF THE COORG MISSION ಕೃತಿಯನ್ನು ರಚಿಸಿದರು. ಇದು ಜರ್ಮನ್ ಮತ್ತು ಇಂಗ್ಲೀಷ್ ಭಾಷೆಯಲ್ಲಿದ್ದು; ಕೊಡಗಿನ ಚರಿತ್ರೆ, ಜನಜೀವನ, ಹವಾಮಾನ, ಬೆಳೆಗಳು ಇತ್ಯಾದಿ ಮಾಹಿತಿಗಳನ್ನು ಒಳಗೊಂಡಿದೆ. ಅಲ್ಲದೆ ಕೊಡಗಿನ ಉತ್ಸವಗಳು ಹಾಗೂ ಮೂರ್ತಿಪೂಜೆಯ ಬಗ್ಗೆ ವಿವರಗಳಿವೆ.

"The principal place in coorg-idolatry is held by the worship of the dead."[೨] ಎನ್ನುವ ಮೋಗ್ಲಿಂಗ್ ತೆರೆಕಟ್ಟುವ ಆಚರಣೆಗಳನ್ನು ಕೋಲ ಎಂದು ಕರೆಯುತ್ತಾರೆ. ಪ್ರತಿಯೊಂದು ಕುಟುಂಬವು ವಾರ್ಷಿಕವಾಗಿ ತಮ್ಮ ಹಿರಿಯರಿಗೆ ಬಲಿಯನ್ನು ನೀಡುತ್ತದೆ. ಕೆಲವೊಮ್ಮೆ ಮಳೆಗಾಲಕ್ಕೆ ಮುಂಚಿತವಾಗಿಯೂ ಬಲಿಯನ್ನು ನೀಡಲಾಗುತ್ತದೆ. ಈ ಸಂದರ್ಭದಲ್ಲಿ ಕುಟುಂಬದ ಜಾಗದಲ್ಲಿರುವ ಕಾರಣನ ಕಲ್ಲಿಗೆ ಹುಂಜವನ್ನು ಬಲಿ ನೀಡಲಾಗುತ್ತದೆ ಎಂದಿದ್ದಾರೆ. ಬಾಸೆಲ್ ಮಿಷನ್ ಸ್ಥಾಪನೆಗೊಂಡಿದ್ದ ಅರಮೇರಿ ಗ್ರಾಮದಲ್ಲಿ ಏಳು ಮನೆಗಳಿಗೆ ಚಿಕ್ಕ ಗುಡಿಗಳಿದ್ದು; ಅಲ್ಲಿ ವಾರ್ಷಿಕವಾಗಿ ಕೋಲ ಮತ್ತು ಬಾರಣೆ ಆಚರಿಸಲ್ಪಡುತ್ತದೆ. 'ಕೋಲ' ಎಂಬುದು "The name of a sacrifice connected with demonical dancing." 'ಬಾರಣೆ' ಎಂದರೆ "a sacrifice to the dead without the dances" ಎಂದಿದ್ದಾರೆ. ಸತ್ತವರ ಆರಾಧನೆಯ ಪವಿತ್ರ ಉದ್ದೇಶಕ್ಕಾಗಿ'ಕೈಮಡ' ಎಂಬ ಪತ್ಯೇಕವಾದ ಗುಡಿಗಳಿವೆ ಎಂಬುದನ್ನೂ ಪ್ರಸ್ತಾಪಿಸುತ್ತಾರೆ.

ತೆರೆಕಟ್ಟುವ ಸಮುದಾಯಗಳಾದ ಪಣಿಕ, ಮಲೆಯ, ಬಣ್ಣರನ್ನು ಕುರಿತು "The pujaries(officiating priests) employed in these ceremonies are Malayalas, long since naturalised in coorg, Panika, Maleya, Banna men, subordinate to the Kanyas, the heriditory Malayalam astrologers of Coorg."[೩] ಎಂದು ಅಭಿಪ್ರಾಯ ಪಡುತ್ತಾರೆ. ಇವರು ಚಂಡೆ ಬಾರಿಸುತ್ತಾ ಹಿರಿಯರನ್ನು ಸ್ಮರಿಸುವ ಹಾಡುಗಳನ್ನು ಹಾಡುತ್ತಾರೆ. ಆತ್ಮವನ್ನು ಆವಾಹಿಸಿಕೊಳ್ಳುವ ವ್ಯಕ್ತಿಯು ಮುಖವಾಡ ಮತ್ತು ಖಡ್ಗವನ್ನು ಧರಿಸುತ್ತಾನೆ. ಹಾಡುಗಾರರು ಮರಣ ಹೊಂದಿದ ಅಪ್ಪ, ಅಜ್ಜ, ಅಥವಾ ಇತರ ಹಿರಿಯರ ಬಗ್ಗೆ ಹಾಡುತ್ತಿರುವಂತೆಯೇ ಆತನ ಆತ್ಮ ಅವನನ್ನು ಹಿಡಿದುಕೊಳ್ಳುತ್ತದೆ. ಅವನು ಆ ಹಿರಿಯ ವ್ಯಕ್ತಿಯ ಮುಖವಾಣಿಯಂತೆ ಮಾತನಾಡುತ್ತಾನೆ. ಪ್ರತಿಯೊಂದು ಆತ್ಮಕ್ಕೂ ಒಂದು ಕೋಳಿ ಹಾಗೂ ಒಂದು ಬಾಟಲಿ ಮದ್ಯವನ್ನು ಅರ್ಪಿಸಲಾಗುತ್ತದೆ. ಅದನ್ನು ಆತನ ಪ್ರತಿನಿಧಿ ಕುಡಿಯುತ್ತಾನೆ. ಆ ಮೂಲಕ ರಾತ್ರಿ ನಡೆಯಲಿರುವ ಕಾರ್ಯಕ್ಕೆ ತನ್ನನ್ನು

ಬಲಪಡಿಸಿಕೊಳ್ಳುತ್ತಾನೆ. ಊರಿನ ಜನರ ಸಮ್ಮುಖದಲ್ಲಿ ಆರಂಭವಾಗುವ ಈ ಆಚರಣೆಯು ಮುಂಜಾನೆಯವರೆಗೆ ನಡೆಯುತ್ತದೆ. ಬೆಳಗ್ಗೆ ಸುಮಾರು ೭ ಅಥವಾ ೮ ಗಂಟೆಯ ಹೊತ್ತಿಗೆ ಎಲ್ಲಾ ಹಂದಿಗಳನ್ನು ಅರ್ಪಿಸಲಾಗುತ್ತದೆ. ಹಂದಿಯ ತಲೆ ಪ್ರದರ್ಶಕನಿಗೆ ಸೇರಿದ್ದು; ಉಳಿದುದ್ದನ್ನು ಕೈಮಡದ ಸಮೀಪವಿರುವ ಮನೆಯಲ್ಲಿ ಸಾರು ಮಾಡಲಾಗುತ್ತದೆ. ನೆರೆದಿರುವವರೆಲ್ಲಾ ಯಥೇಚ್ಛ ಮದ್ಯಪಾನದೊಂದಿಗೆ ಮಾಂಸವನ್ನು ಸೇವಿಸುತ್ತಾರೆ. ಮಧ್ಯಾಹ್ನದ ಹೊತ್ತಿಗೆ ಎಲ್ಲಾ ಕ್ರಿಯೆಗಳು ಪೂರ್ಣಗೊಳ್ಳುತ್ತವೆ. ಬಾರಣೆಯನ್ನು ಆಚರಿಸುವಾಗ ಒಬ್ಬ ಪೂಜಾರಿ ಈ ಎಲ್ಲಾ ಕೆಲಸಗಳನ್ನು ಮಾಡುತ್ತಾನೆ. ಆದರೆ ಕೋಲಗಳಲ್ಲಿ ಹಲವು ಮಂದಿ ಕಾರ್ಯನಿರತರಾಗುತ್ತಾರೆ ಎಂಬ ವಿವರಗಳನ್ನು ನೀಡಿದ್ದಾರೆ. ಅಲ್ಲದೆ ಅರಮೇರಿ ಗ್ರಾಮದಲ್ಲಿರುವ ಚಾಮುಂಡಿ/ರಕ್ತೇಶ್ವರಿ ನೆಲೆಗಳಲ್ಲಿ ವಾರ್ಷಿಕವಾಗಿ ಹಂದಿಗಳನ್ನು ಬಲಿ ನೀಡುವ ಬಗ್ಗೆ ಮಾಹಿತಿ ನೀಡಿದ್ದಾರೆ.

ತೆರೆಕಟ್ಟುವ ಸಮುದಾಯಗಳಿಗೆ ಸಹಾಯಕರಾಗಿದ್ದ ಕಣಿಯರ ಬಗ್ಗೆ ಮಾಹಿತಿ ನೀಡುವ ಮೋಗ್ಲಿಂಗ್ "The ministeres of Coorg superstition, the Kanyas, Panikas, Maleyas and Bannas make a good deal of money, in other ways also. The Kanyas find much work for the conjuring confraternity, dependent, in a great measure, upon their friendly patronage. The Kanya(astrologer) has compleat mastery over the pockets of the credulous coorgs" ಎನ್ನುತ್ತಾರೆ. ಜನರ ಭವಿಷ್ಯವನ್ನು ಬರೆಯುವವನು ಕಣಿಯ. ಮಾಟಮಂತ್ರ, ಮೋಡಿಗಳ ವಿಚಾರದಲ್ಲಿ ಕೊಡಗಿನವರಿಗೆ ಈತನ ಮಾತು ದಿವ್ಯವಾಣಿ. "They take good care to find work for their friends also, for the Bannas, the Maleyas, and the Panikas, who are employed in different kinds of ceremonies and sacrifices for the removal of curses and witchcrafts, indicated by the Kanyas."[೪] ಕಣಿಯನ ಸೂಚನೆಯಂತೆ ಮನೆ ಅಥವಾ ಸ್ಥಳದ ಮೇಲಿರುವ ಹಳೆಯ ಶಾಪಗಳ ವಿಮೋಚನೆಗಾಗಿ'ಮರನಾಡ ಬಲಿ' ಎಂಬ ಅಸಾಧಾರಣ ಆಹುತಿ ನಡೆಯುತ್ತದೆ. ಈ ಆಚರಣೆಯನ್ನು ಪಣಿಕ ಅಥವಾ ಬಣ್ಣರು ನಡೆಸುತ್ತಾರೆ ಎಂದಿದ್ದಾರೆ. ಕೊಡಗಿನಲ್ಲಿ ತೆರೆಕಟ್ಟಿ ಆರಾಧಿಸಲ್ಪಡುವ ಅಜ್ಜಪ್ಪ, ಅಯ್ಯಪ್ಪ, ಗುಳಿಕ(ಕುಳಿಯ) ದೈವಗಳ ಬಗ್ಗೆ ವಿವರಗಳನ್ನೂ ನೀಡಿದ್ದಾರೆ.

Rev. G. Richter ಸಂಗ್ರಹಿಸಿದ GAZETTEER OF COORG ಕೃತಿಯು ೧೮೭೦ರಲ್ಲಿ ಪ್ರಕಟಗೊಂಡಿತು. ಕೊಡಗಿನ ಸ್ವಾಭಾವಿಕ ಗುಣಲಕ್ಷಣಗಳು, ಅಲ್ಲಿನ ನಿವಾಸಿಗಳ ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳ ಕುರಿತು ಪ್ರಸ್ತುತ

ಕೃತಿಯುಲ್ಲಿ ವಿವರಗಳಿವೆ. ಇವರು ತೆರೆಕಟ್ಟುವ ಮಲೆಯರನ್ನು ಪ್ರತ್ಯೇಕ ಭಾಷೆಯನ್ನಾಡುವ ಬುಡಕಟ್ಟುಗಳ ವಿಭಾಗದಲ್ಲಿ ಸೇರಿಸುತ್ತಾರೆ. "The Maleyas a small wandering gipsy tribe from Malabar who speak Malayalam. They pretend to cure diseases and exact money from ignorent; they also personate demons and the departed spirits of the ancestors of their dupes."[೫] ಎಂದು ಅಭಿಪ್ರಾಯಪಡುತ್ತಾರೆ. ಕೊಡಗಿನ ಧಾರ್ಮಿಕ ಆಚರಣೆಗಳು ಮತ್ತು ಜನಪ್ರಿಯ ಮೂಢನಂಬಿಕೆಗಳನ್ನೂ ಪ್ರಸ್ತಾಪಿಸುತ್ತಾರೆ. ಹಿರಿಯರು ಮತ್ತು ಭೂತಗಳ ಆರಾಧನೆ, ಜ್ಯೋತಿಷ್ಯ ಮತ್ತು ಮಂತ್ರವಾದಗಳ ಬಗ್ಗೆ ಮೋಗ್ಲಿಂಗ್ ದಾಖಲಿಸಿದ ವಿವರಗಳನ್ನೇ ನೀಡಿದ್ದಾರೆ.

ಕೊಡಗಿನ ಗ್ರಾಮದೇವತೆಗಳನ್ನು ಕುರಿತು "As among other Dravidian mountain tribes, so also in Coorg, tredition relates, that human sacrifices were offered in former times, to secure favour of their Grama - Devatas: Mariamma, Durga and Bhadra- Kali, the tutelary goddesses of the sakti- line, who are supposed to protect the villages or nads from evil influences."[೬] ಎಂದು ಹೇಳುತ್ತಾರೆ. ಕಡಿಯತ್‌ನಾಡಿನ ಕಿರುಂದಾಡು ಮತ್ತು ಕೊಣಂಜಗೇರಿ ಗ್ರಾಮದಲ್ಲಿ ಮೂರು ವರ್ಷಗಳಿಗೊಮ್ಮೆ ನರಬಲಿ ನಡೆಯುತ್ತಿದ್ದ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಕ್‌ಗ್ಗಟ್ಟ್‌ನಾಡ್ ತಾಲೋಕಿನ ತಾವಳಗೇರಿ ಮೂಂದ್‌ನಾಡಿನ ಬೆಳ್ಳೂರು ಗ್ರಾಮದಲ್ಲಿ ವಾರ್ಷಿಕವಾಗಿ ಒಂದು ಮನೆಯಿಂದ ಒಬ್ಬ ವ್ಯಕ್ತಿಯನ್ನು ಆತನ ತಲೆಯನ್ನು ಕಡಿಯುವುದರ ಮೂಲಕ ದೇವಸ್ಥಾನದಲ್ಲಿ ಅರ್ಪಿಸಲಾಗುತಿತ್ತು. ಕುಟುಂಬವೊಂದರ ವ್ಯಕ್ತಿ ತಲೆಮರೆಸಿಕೊಂಡಾಗ ಗ್ರಾಮದವರ ಜಾಣ್ಮೆಯಿಂದ ನರಬಲಿಯ ಬದಲು ಆಡನ್ನು ಬಲಿ ನೀಡುವ ಸಂಪ್ರದಾಯ ಪ್ರಾರಂಭವಾಯಿತು ಎಂಬ ವಿವರಗಳಿವೆ. ಮಧ್ಯಾಹ್ನದ ನಂತರ ಪಣಿಕರು ಆಡನ್ನು ಬಲಿ ನೀಡಿ ಅದರ ರಕ್ತವನ್ನು ನಿಗದಿತ ಕಲ್ಲಿನ ಮೇಲೆ ಸುರಿಸುತ್ತಾರೆ. ತೆರೆಕಟ್ಟುವ ಆಚರಣೆಯನ್ನು ಕುರಿತು "at night the panikas dressed in red and white stripped cotton cloths and their faces covered with metal or bark masks perform their demonical dance."[೭] ಎಂದಿದ್ದಾರೆ. ಮೋಗ್ಲಿಂಗ್ ದಾಖಲಿಸಿರುವ 'ಮರನಾಡಬಲಿ'ಯ ವಿವರಗಳು ಈ ಕೃತಿಯಲ್ಲೂ ಉಕ್ತಗೊಂಡಿವೆ.

'ಕೂರ್ಗ್ ಮಾನ್ಯುಯಲ್'(೧೮೭೦) ಜಿ. ರಿಕ್ಟರ್ ಅವರ ಇನ್ನೊಂದು ಕೃತಿ. ಪ್ರಸ್ತುತ ಕೃತಿಯಲ್ಲಿ ಕೊಡಗಿನಲ್ಲಿರುವ ಧಾರ್ಮಿಕ ಆಚರಣೆ ಮತ್ತು ಜನಪ್ರಿಯ ಮೂಢನಂಬಿಕೆಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಹಿರಿಯರ ಮತ್ತು ಭೂತಗಳ ಆರಾಧನೆ

ಕೊಡಗಿನ ಜನರ ಸಂಪ್ರದಾಯವಾಗಿದೆ. ಇಲ್ಲಿ ನಡೆಸುವ ಆಚರಣೆಯನ್ನು ಪಣಿಕ, ಮಲೆಯ ಹಾಗೂ ಬಣ್ಣರು ವೃತ್ತಿಯಾಗಿಸಿಕೊಂಡಿದ್ದಾರೆ ಎಂದು ಅಭಿಪ್ರಾಯ ಪಡುತ್ತಾರೆ. ಇವರೊಂದಿಗೆ ನಿಕಟ ಸಂಬಂಧ ಹೊಂದಿರುವ ಸಾಂಪ್ರದಾಯಿಕ ಮಲೆಯಾಳಿ ಜ್ಯೋತಿಷಿಗಳಾದ ಕಣಿಯರ ಕುರಿತೂ ಹೇಳಿದ್ದಾರೆ. ಕೊಡಗಿನ ಮೂಢನಂಬಿಕೆಗಳ ಮಂತ್ರಿಗಳಾದ ಇವರು ಕೈ ತುಂಬಾ ಸಂಪಾದಿಸಿಕೊಳ್ಳುತ್ತಾರೆ ಎಂದು ಅಭಿಪ್ರಾಯಪಡುತ್ತಾರೆ.

೧೮೭೩ರಲ್ಲಿ ರೆವರೆಂಡ್ ಎಫ್. ಕಿಟೆಲ್ 'ಇಂಡಿಯನ್ ಆಂಟಿಕ್ವೆರಿ' ಪತ್ರಿಕೆಯ ಎರಡನೆಯ ಸಂಪುಟದಲ್ಲಿ 'ಕೂರ್ಗ್ ಸೂಪರ್‌ಸ್ಟೀಷನ್ಸ್' ಎಂಬ ಎರಡು ಲೇಖನಗಳನ್ನು ಬರೆದಿದ್ದಾರೆ. ಇವು ಕೊಡಗಿನ ವಿವಿಧ ವಿಶಿಷ್ಟ ಆಚರಣೆಗಳು ಹಾಗು ಸಂಪ್ರದಾಯಗಳನ್ನು ಪರಿಚಯಿಸುತ್ತವೆ. ಅಯ್ಯಪ್ಪ, ಸಾರ್ತಾವು, ಕುಟ್ಟಿಚಾತ, ಕಾರುವಲಾ, ಗುಳಿಗ, ಕೊರಗ, ಕಲ್ಲುಗುಟ್ಟಿ, ಪಂಜುರ್ಲಿ, ಕುರುಂದ, ತಮ್ಮಚ, ಚೌಂಡಿ/ಚಾಮುಂಡಿ/ಚಾವುಂಡಿ (ಬೋಟೆ ಚಾವುಂಡಿ, ಕರಿಚಾವುಂಡಿ, ಪುಲಿ ಚಾವುಂಡಿ), ಕರಿಂಗಾಳಿ, ಭದ್ರಕಾಳಿ, ಕುಂದಮ್ಮೆ, ಕರಿಂಗೊರತಿ(ಕಾರಿಂಗೊರತಿ), ಕಲ್ಲುರ್ಟಿ, ನುಚ್ಚುಟೆ, ನಂಜವ್ವ, ನೀಲಿಅವ್ವ, ಪನ್ನಂಗಾಲತಮ್ಮೆ(ಪೊನ್ನಂಗಾಲತಮ್ಮೆ) ದೈವಗಳ ಬಗ್ಗೆ ಸಂಕ್ಷಿಪ್ತ ವಿವರಗಳಿವೆ.

ಎತ್ನಾಗ್ರಫಿಕಲ್ ಕಂಪೆಂಡಿಯಂ ಆನ್ ದ ಕಾಸ್ಟ್ಸ್ ಅಂಡ್ ಟ್ರೈಬ್ಸ್ ಫೌಂಡ್ ಇನ್ ದ ಪ್ರಾವಿನ್ಸ್ ಆಫ್ ಕೂರ್ಗ್(೧೮೮೭) ರೆವರೆಂಡ್. ಜಿ. ರಿಕ್ಟರ್ ಅವರ ಮತ್ತೊಂದು ಕೃತಿ. ಕೊಡಗಿನಲ್ಲಿ ಕಂಡುಬರುವ ಜಾತಿಗಳು ಮತ್ತು ಬುಡಕಟ್ಟುಗಳ ವೃತ್ತಾಂತದ ವಿವರಗಳು ಈ ಕೃತಿಯಲ್ಲಿವೆ. ಪಣಿಕರು ಮತ್ತು ಕಣಿಯರನ್ನು ಕುರಿತು ಇವರು ವೃತ್ತೀಯವಾಗಿ ಮಂತ್ರವಾದಿಗಳು, ಭವಿಷ್ಯ ಹೇಳುವವರು ಹಾಗೂ ಜ್ಯೋತಿಷಿಗಳು. ಕೊಡಗಿನಲ್ಲಿ ನೆಲೆಗೊಳ್ಳದ ಇವರು ವಿಶೇಷ ಸಂದರ್ಭಗಳಲ್ಲಿ ಮಲಬಾರಿನಿಂದ ಕೊಡಗಿಗೆ ಸ್ಥಳೀಯರ ಮೂಢನಂಬಿಕೆಗಳಿಂದ ಲಾಭ ಮಾಡಿಕೊಳ್ಳಲು ಭೇಟಿ ನೀಡುವರು. ಇವರು ಕೂಲಿಗಳಾಗಿಯೂ ಕೆಲಸ ಮಾಡುತ್ತಾರೆ ಎಂಬ ಮಾಹಿತಿಗಳನ್ನು ನೀಡಿದ್ದಾರೆ. ಕೊಡವರ ಧರ್ಮವನ್ನು ಕುರಿತು ಹೀಗೆ ಅಭಿಪ್ರಾಯ ಪಡುತ್ತಾರೆ. ಸ್ಥಳೀಯ ಮತ್ತು ನೆರೆಹೊರೆಯ ಜಾತಿಗಳು ಹಾಗೂ ಬುಡಕಟ್ಟುಗಳೊಡನೆ ಅವರ ನಿಕಟ ಸಂಪರ್ಕವನ್ನು ಗಣನೆಗೆ ತೆಗೆದುಕೊಂಡಾಗ; ಸಹಜವಾಗಿಯೇ ಅವರ ಧಾರ್ಮಿಕ ವಿಧಿ ವಿಧಾನಗಳು ಮೂಲದಲ್ಲಿ ಪರಿಶಿಷ್ಟ ಜಾತಿಗಳ ಪದ್ಧತಿಗಳಾದ ಭೂತ ಹಾಗೂ ಪೂರ್ವಜರ ಆರಾಧನೆಯನ್ನು ಅನುಸರಿಸುತ್ತಾ ಒಂದೇ ನೆಲೆಯಲ್ಲಿದ್ದಿತು ಎನ್ನಬಹುದು. ಈಗ ಮಲಯಾಳ, ತುಳು, ಕನ್ನಡ, ಬ್ರಾಹ್ಮಣ ಹಾಗೂ ಲಿಂಗಾಯಿತ ಅಂಧನಂಬಿಕೆಗಳ ಪ್ರಭಾವಕ್ಕೆ ಒಳಪಟ್ಟಿವೆ. ಭೂತ ಮತ್ತು ಪೂರ್ವಜರ

ಆರಾಧನೆಯಲ್ಲಿ ತಮ್ಮ ಉಪಸ್ಥಿತಿ ಅತ್ಯಗತ್ಯ ಎಂಬ ಪರಿಸ್ಥಿತಿಯನ್ನು ಮಲಯಾಳಿಗಳು ನಿರ್ಮಿಸಿದ್ದರೆ; ತುಳುವರು ತಮ್ಮ ಭೂತಗಳನ್ನು ರಹಸ್ಯವಾಗಿ ಸೇರಿಸಿದ್ದಾರೆ ಎಂದಿದ್ದಾರೆ.

ಇ. ಮಾರ್ಸ್‌ಡೆನ್ ಅವರು 'ಕೊಡಗು ವಿವರಣೆ' ಕೃತಿಯಲ್ಲಿ ಕೊಡಗಿನ ಭೌಗೋಳಿಕತೆ, ರಾಜಕೀಯ ಚರಿತ್ರೆ, ಕೃಷಿ ವಿಭಿನ್ನತೆ ಇತ್ಯಾದಿಗಳ ವಿವರಗಳನ್ನು ನೀಡಿದ್ದಾರೆ. ತೆರೆಕಟ್ಟುವ ಪಣಿಕ, ಮಲಿಯ ಮತ್ತು ಬಣ್ಣರನ್ನು ಭೂತಗಳ ವೇಷಗಳನ್ನು ಕಟ್ಟಿಕೊಳ್ಳುವವರು ಎನ್ನುತ್ತಾರೆ. ಜ್ಯೋತಿಷ್ಯ, ಮಂತ್ರವಾದ, ಕೃಷಿ ಇವರ ಕೆಲಸವಾಗಿದೆಯೆಂಬ ವಿವರಗಳನ್ನು ದಾಖಲಿಸಿದ್ದಾರೆ.

LEWIS RICE ಅವರ MYSORE AND COORG ಗೆಜೆಟಿಯರ್ ೧೮೭೮ರಲ್ಲಿ ಪ್ರಕಟಗೊಂಡಿತು. ತೆರೆಕಟ್ಟುವ ಸಮುದಾಯಗಳಾದ ಪಣಿಕ, ಬಣ್ಣ, ಮಲಿಯರನ್ನು ರೈಸ್ ವೃತ್ತೀಯ ಯಾಚಕರ ಗುಂಪಿಗೆ ಸೇರಿಸಿದ್ದಾರೆ. ಅವರ ಬಗ್ಗೆ ಡಾ. ಮೋಗ್ಲಿಂಗ್ ವ್ಯಕ್ತಪಡಿಸುವ ಅಭಿಪ್ರಾಯವನ್ನು ಉಲ್ಲೇಖಿಸಿದ್ದಾರೆ. ಕೊಡಗಿನವರ ಧರ್ಮವನ್ನು ಕುರಿತು "The essential features of the religion of the coorgs are anti-Brahmanical and consist of Ancestral and Demon worship."[೮] ಎಂದಿದ್ದಾರೆ. ಹಿರಿಯರ ಆರಾಧನೆಯಾದ ಕಾರಣ(ವಂಶದ ಹಿರಿಯ), ಕಾರಣಚಿ(ವಂಶದ ಹಿರಿಯ ಸ್ತ್ರೀ) ಅಥವಾ ಜೊಡಲಿಚಿಯ ಆರಾಧನೆ, ಕಾರಣ ಕೋಲ, ಕೂಳಿ ಬಾರಣೆಗಳ ಬಗ್ಗೆ ಸಂಕ್ಷಿಪ್ತ ವಿವರಗಳನ್ನು ನೀಡಿದ್ದಾರೆ. ಇವುಗಳನ್ನು ಮಂತ್ರವಾದಿಗಳಾದ ಪಣಿಕ, ಬಣ್ಣ ಅಥವಾ ಮಲೆಯರು ನಡೆಸುತ್ತಾರೆ ಎಂದಿದ್ದಾರೆ.

CASTES AND TRIBES OF SOUTHERN INDIA(೧೯೦೬) ದಕ್ಷಿಣ ಭಾರತದ ಅನೇಕ ಜಾತಿ ಮತ್ತು ಬುಡಕಟ್ಟುಗಳ ಬಗ್ಗೆ ಸೂಕ್ಷ್ಮ ಚಿತ್ರಣವನ್ನು ಕೊಡುವ ಕೃತಿ. ಎಡ್ಗರ್ ಥರ್ಸ್ಟನ್ ಮತ್ತು ಕೆ. ರಂಗಾಚಾರಿ ಅವರ ಈ ಕೃತಿಮಾಲಿಕೆಯು ೭ ಸಂಪುಟಗಳಲ್ಲಿ ಪ್ರಕಟಗೊಂಡಿದೆ. ಪ್ರಸ್ತುತ ಕೃತಿಯ ೪ನೇ ಸಂಪುಟದಲ್ಲಿ ಮಲಯನ್ ಸಮುದಾಯದ ಬಗ್ಗೆ ವಿವರಗಳಿವೆ. ಇವರು ಮಕ್ಕತ್ತಾಯವಮ್ ಜಾತಿಗೆ ಸೇರಿದ್ದು; ಹನ್ನೆರಡು ದಿನಗಳ ಮಲಿನತೆಯನ್ನು ಆಚರಿಸುತ್ತಾರೆ. ಉತ್ತರ ಮಲಬಾರಿನಲ್ಲಿ ಕಂಡುಬರುತ್ತಾರೆ. ಎಂದು A.R. Loftus Tottenham ಅವರ ಅಭಿಪ್ರಾಯವನ್ನು ದಾಖಲಿಸುತ್ತಾರೆ. ಮಂತ್ರವಾದ ಅಥವಾ ಭೂತೋಚ್ಚಾಟನೆ ಇವರ ಪ್ರಮುಖ ವೃತ್ತಿಯಾಗಿದ್ದು; ವಿವಿಧ ರೀತಿಯಲ್ಲಿ ಆಚರಿಸುತ್ತಾರೆ. ಯಾವುದಾದರು ವ್ಯಕ್ತಿಗೆ ಭೂತ ಆವರಿಸಿಕೊಂಡಿದ್ದರೆ; ಜ್ಯೋತಿಷಿಗಳಿಂದ ಯಾವ 'ಮೂರ್ತಿ'(ಆಕೃತಿ ಅಂದರೆ ಭೂತ) ತೊಂದರೆಗೆ ಕಾರಣವಾಗಿದೆಯೆಂದು ತಿಳಿದುಕೊಂಡು ಮಲೆಯನ್‌ನಿಂದ 'ತೆಯ್ಯಾಟವಮ್'

ಆಚರಣೆಯನ್ನು ನಡೆಸಲಾಗುತ್ತದೆ. ಇಲ್ಲಿ ಅವರು ಮುಖವಾಡಗಳನ್ನು ಧರಿಸಿ ವೇಷಧಾರಿಗಳಾಗಿ ಹಾಡುತ್ತಾ, ಕುಣಿಯುತ್ತಾ, ಚಂಡೆ ಬಾರಿಸುತ್ತಾರೆ. 'ಉಚ್ಚವೆಲಿ' ಎಂಬ ನರಬಲಿಯ ಅಣಕು ಪ್ರದರ್ಶನವನ್ನು, 'ನೆನವೆಲಿ' ಎಂಬ ರಕ್ತಬಲಿ ಆಚರಣೆಯನ್ನು ನಡೆಸುವ ಬಗ್ಗೆ ವಿವರಗಳನ್ನು ದಾಖಲಿಸಿದ್ದಾರೆ.

ಇದೇ ಕೃತಿಯ ೭ನೇ ಸಂಪುಟದಲ್ಲಿ 'ವಣ್ಣನ್' ಸಮುದಾಯದ ಬಗೆ ವಿವರಿಸುತ್ತಾ "ತಮಿಳು ಮತ್ತು ಮಲೆಯಾಳಂ ದೇಶಗಳಲ್ಲಿ ವಣ್ಣನ್ನರು ಬಟ್ಟೆ ಒಗೆಯುವ ವೃತ್ತಿಯವರು. 'ವಣ್ಣಮ್' ಎಂದರೆ ಸೌಂದರ್ಯ. ಇವರು ಪೌರಾಣಿಕ ನಾಯಕ ವೀರಭದ್ರನ ವಂಶದವರೆಂಬ ನಂಬಿಕೆ ತಮಿಳುನಾಡಿನಲ್ಲಿ ನೆಲೆಸಿರುವವರದ್ದಾಗಿದೆ. ಮಲಬಾರಿನ ವಣ್ಣನ್‌ರನ್ನು ಮಣ್ಣನ್ ಅಥವಾ ಬಣ್ಣನ್ ಎಂದು ಕರೆಯಲಾಗುತ್ತದೆ. ಇವರು ಮಲಬಾರಿನ ಅಗಸರಲ್ಲಿ ಕೆಳವರ್ಗದವರು. ಹುಟ್ಟು ಮತ್ತು ಸಾವಿನ ಸಂದರ್ಭದಲ್ಲಿನ ಅಪವಿತ್ರತೆಯನ್ನು ಹೋಗಲಾಡಿಸಲು ಇವರು ಒಗೆದ ಬಟ್ಟೆಯನ್ನು ಮೇಲ್ವರ್ಗದವರು ಧರಿಸುತ್ತಾರೆ. ಈ ಕೆಲಸವನ್ನು ಮಹಿಳೆಯರು ನಿರ್ವಹಿಸಿದರೆ; ಪುರುಷರು ಮಂತ್ರವಾದಿಗಳು, ಭೂತ ನರ್ತಕರು ಹಾಗು ವೈದ್ಯರಾಗಿದ್ದಾರೆ ಎಂದು ಫ್ರಾನ್ಸಿಸ್ ಅವರ ಅಭಿಪ್ರಾಯವನ್ನು ದಾಖಲಿಸುತ್ತಾರೆ."[೯]

ಎಲ್. ಎ. ಕೃಷ್ಣ ಅಯ್ಯರ್ ಅವರ 'ದ ಕೂರ್ಗ್ ಟ್ರೈಬ್ಸ್ ಅಯಿಂಡ್ ಕಾಸ್ಟ್ಸ್' (೧೯೪೮) ಕೃತಿಯು ಕೊಡಗಿನಲ್ಲಿರುವ ಜಾತಿ ಮತ್ತು ಬುಡಕಟ್ಟುಗಳ ಸಮೀಕ್ಷೆಯ ವಿವರಗಳನ್ನು ಹೊಂದಿದೆ. ಕೊಡಗಿನಲ್ಲಿರುವ ಹಿರಿಯರ ಆರಾಧನೆ, ಗ್ರಾಮ ದೇವತೆಗಳು ಹಾಗೂ ಭೂತಾರಾಧನೆ, ಕಾರಣ ಕೋಲಗಳ ಬಗ್ಗೆ ಸಂಕ್ಷಿಪ್ತ ವಿವರಗಳು ಸಿಗುತ್ತವೆ. ಈ ಎಲ್ಲಾ ವಿವರಗಳು ಮೋಗ್ಲಿಂಗ್ ಅವರ ಕೃತಿಯಲ್ಲಿ ದಾಖಲಿಸಲ್ಪಟ್ಟವುಗಳಾಗಿವೆ.

ಡಾ. ಎಂ. ಎನ್. ಶ್ರೀನಿವಾಸ್ ಅವರು RELIGION AND SOCIETY AMONG THE COORGS OF SOUTH INDIA (೧೯೫೨) ಕೃತಿಯಲ್ಲಿ ಕೊಡಗಿನ ಸಮಾಜದ ಆಂತರಿಕ ವಿನ್ಯಾಸಗಳನ್ನು ಅಧ್ಯಯನ ನಡೆಸಿದ್ದಾರೆ. ಗುಡ್ಡಗಾಡು ಜನಾಂಗದವರಾದ ಕೊಡವರು ಬ್ರಾಹ್ಮಣ ಹಾಗೂ ಶೈವ ಸಂಸ್ಕೃತಿಯ ಪ್ರಭಾವದಿಂದಾಗಿ ತಮ್ಮ ರೀತಿ ನೀತಿಗಳನ್ನು, ಜೀವನಶೈಲಿಗಳನ್ನು, ಸಾಮಾಜಿಕ ಪದ್ಧತಿಗಳನ್ನು, ಧಾರ್ಮಿಕ ಆಚರಣೆಗಳನ್ನು ಬದಲಿಸಿಕೊಂಡ ಬಗೆಯನ್ನು ಚರ್ಚಿಸಿದ್ದಾರೆ. ಈ ಪ್ರಕ್ರಿಯೆಯನ್ನು 'ಸಂಸ್ಕೃತಾನುಸರಣ'(ಸ್ಯಾನ್ಸ್‌ಕ್ರಿಟೈಜೇಷನ್) ಎಂದು ಕರೆದಿದ್ದಾರೆ. ಗ್ರಾಮ ದೇವತೆಗಳಾದ ಕೇತ್ರಪ್ಪ, ಭಗವತಿ, ಚೌಂಡಿ, ಅಯ್ಯಪ್ಪ, ಭದ್ರಕಾಳಿ ದೈವಗಳ ವಾರ್ಷಿಕ ಉತ್ಸವಗಳ ಸಂಕ್ಷಿಪ್ತ ಚಿತ್ರಣವನ್ನು ನೀಡಿದ್ದಾರೆ. ಈ ಸಂದರ್ಭದಲ್ಲಿ ಬಣ್ಣ, ಮಲಿಯ ಹಾಗೂ ಪಣಿಕ ಸಮುದಾಯದವರು

ಕಟ್ಟುವ ಕಾರಣವ(ಕಾರೋಣ)ತೆರೆ, ನರಿಪೂದ, ಬೀರತೆರೆಗಳ ಬಗ್ಗೆ ವಿವರಗಳು ಈ ಕೃತಿಯುಲ್ಲಿವೆ. ಇದುವರೆಗಿನ ಎಲ್ಲಾ ಕೃತಿಗಳಲ್ಲಿ 'ಕೋಲ' ಎಂಬ ಪದ ಬಳಕೆಯಾಗಿದ್ದರೆ; ಡಾ. ಎಂ. ಎನ್. ಶ್ರೀನಿವಾಸ್ ಮೊದಲ ಬಾರಿಗೆ 'ತೆರೆ' ಪದವನ್ನು ಬಳಸಿದ್ದಾರೆ.

ಬಿ.ಎನ್. ಶ್ರೀಸತ್ಯನ್ ಸಂಪಾದಕತ್ವದ MYSORE STATE GAZETTEER, COORG DISTRICT ೧೯೬೫ರಲ್ಲಿ ಪ್ರಕಟಗೊಂಡಿತು. ಪ್ರಸ್ತುತ ಕೃತಿಯಲ್ಲಿ ಹಾಲೇರಿ ಅರಸರ ಆಳ್ವಿಕೆಯ ಸಂದರ್ಭದಲ್ಲಿ ಕೊಡಗಿಗೆ ವಲಸೆ ಬಂದ ೧೦ ಸಮುದಾಯಗಳಲ್ಲಿ ಬಣ್ಣ, ಮಲೆಯ ಮತ್ತು ಪಣಿಕರನ್ನು ಸೇರಿಸಲಾಗಿದೆ. ಇವರು ಹಾಲೇರಿ ಅರಸರಿಂದ ಜಮ್ಮಾ ಹಿಡುವಳಿಯನ್ನು ಪಡೆದುಕೊಂಡು ಕೊಡವ ಭಾಷೆ, ಸಂಪ್ರದಾಯ ಹಾಗೂ ಆಚರಣೆಗಳನ್ನು ಅಳವಡಿಸಿಕೊಂಡಿದ್ದಾರೆ. ಬಣ್ಣರು ಭೂತನರ್ತಕರು, ಮಲೆಯ ಮತ್ತು ಪಣಿಕರು ಭೂತನರ್ತನ ಮತ್ತು ಔಷಧಿ ನೀಡುವುದನ್ನು ವೃತ್ತಿಯಾಗಿಸಿಕೊಂಡಿದ್ದಾರೆ ಎಂಬ ವಿವರಗಳನ್ನು ದಾಖಲಿಸಿದ್ದಾರೆ.

ಡಿ. ಎನ್. ಕೃಷ್ಣಯ್ಯ ಅವರು ಕೊಡಗಿನ ಇತಿಹಾಸ(೧೯೭೪) ಕೃತಿಯಲ್ಲಿ ಕೊಡಗಿನ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ನಿರೂಪಿಸಿದ್ದಾರೆ. ಕೊಡಗಿನ ತೆರೆಕಟ್ಟುವ ಆಚರಣೆಗಳನ್ನು ಕುರಿತು ಮಲಬಾರಿನಲ್ಲಿ ವಾಡಿಕೆಯಾಗಿರುವ ಮಂಥರಮೂರ್ತಿ, ವಿಷ್ಣುಮೂರ್ತಿ ಮೊದಲಾದ ದೇವತೆಗಳನ್ನು ಕೊಡಗರು ವರ್ಷಕೊಮ್ಮೆ ಅಥವಾ ಎರಡು ವರ್ಷಗಳಿಗೊಮ್ಮೆ ತಮ್ಮ ಮನೆಗಳಲ್ಲಿ ಆ ದೇವತೆಗಳ ವೇಷಗಳನ್ನು ಹಾಕುವುದಕ್ಕೆಂದು ಮಲೆಯಾಳದಿಂದ ಇಲ್ಲಿ ಬಂದು ನೆಲೆಸಿರುವ ಬಣ್ಣ, ಮಲಯ ಮತ್ತು ಪಣಿಕ ಮೊದಲಾದವರಿಂದ ಕಟ್ಟಿಸಿ ಆ ದೇವತೆಗಳನ್ನು ಪೂಜಿಸುತ್ತಾರೆ. ಹಾಗೂ ಗ್ರಾಮದೇವಸ್ಥಾನಗಳ ವಾರ್ಷಿಕ ಹಬ್ಬಗಳಲ್ಲಿ ಚಾಮುಂಡಿ, ಕುಟ್ಟಿಚಾತ ಮೊದಲಾದ ದೇವತೆಗಳ ವೇಷಗಳನ್ನು ಕಟ್ಟಿಸಿ ಅವನ್ನು ಪೂಜಿಸುತ್ತಾರೆ. ಎಂಬ ವಿವರಗಳನ್ನು ನೀಡಿದ್ದಾರೆ.

ಭೂತಾರಾಧನೆ ಜಾನಪದೀಯ ಅಧ್ಯಯನ(೧೯೯೦) ಡಾ. ಕೆ. ಚಿನ್ನಪ್ಪಗೌಡ ಅವರ ಸಂಶೋಧನಾ ಕೃತಿ. ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲಿ ಆರಾಧಿಸಲ್ಪಡುವ ಚಾಮುಂಡಿ, ಭದ್ರಕಾಳಿ, ವಿಷ್ಣುಮೂರ್ತಿ ದೈವಗಳ ಪ್ರಸ್ತಾಪ ಈ ಕೃತಿಯಲ್ಲಿದೆ.

ಕೊಡವ ಭಾಷಿಕ ಮೂಲನಿವಾಸಿಯ(೨೦೧೦) ಎಂಬ ಶೀರ್ಷಿಕೆಯ ಕೊಡವ ಭಾಷಾ ಕೃತಿಯು ಕೊಡಗಿನ ೨೧ ಕೊಡವ ಭಾಷಿಕ ಮೂಲ ನಿವಾಸಿಗಳನ್ನು ಪರಿಚಯಿಸುತ್ತದೆ. ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ ಈ ಕೃತಿಯಲ್ಲಿ ಕೊಡಗಿನ ತೆರೆಕಟ್ಟುವ ಸಮುದಾಯಗಳಾದ ಪಣಿಕ, ಬಣ್ಣ ಮತ್ತು ಮಲಿಯ ಸಮುದಾಯಗಳ ಬಗ್ಗೆ ಸಂಕ್ಷಿಪ್ತ ವಿವರಗಳು ದೊರಕುತ್ತವೆ.

ನಾಗೇಶ್ ಕಾಲೂರು ಅವರ ಕೊಡವ ಭಾಷಿಕ ಜನಾಂಗಗಳ ಸಾಂಸ್ಕೃತಿಕ ಬದುಕು(೨೦೧೩) ಕೃತಿಯು ಕೊಡಗಿನ ಕೊಡವ ಭಾಷಿಕ ಸಮುದಾಯಗಳ ಸಾಂಸ್ಕೃತಿಕ ಹಿನ್ನೆಲೆ, ವಾರ್ಷಿಕಾವರ್ತನ ಆಚರಣೆಗಳ ಬಗ್ಗೆ ಅಧ್ಯಯನ ನಡೆಸಿದೆ. ಪ್ರಸ್ತುತ ಕೃತಿಯು ತೆರೆಕಟ್ಟುವ ಸಮುದಾಯಗಳಾದ ಪಣಿಕ, ಬಣ್ಣ ಮತ್ತು ಮಲಿಯರ ಸಾಂಸ್ಕೃತಿಕ ಬದುಕನ್ನು ಪರಿಚಯಿಸುತ್ತದೆ.

ಹೀಗೆ ಕೊಡಗಿನ ತೆರೆಕಟ್ಟುವ ಆಚರಣೆಗಳಿಗೆ ಸಂಬಂಧಿಸಿದಂತೆ ಅಲ್ಲಲ್ಲಿ ಕೆಲವು ಬಿಡಿ ಲೇಖನಗಳು, ಕೃತಿಗಳು ಬಂದಿವೆ. ಆದರೆ ಕೊಡಗಿನ ತೆರೆಕಟ್ಟುವ ಆಚರಣೆಯನ್ನೇ ಕುರಿತು ಪ್ರತ್ಯೇಕವಾದ, ವಿಸ್ತೃತವಾದ, ವಿಶ್ಲೇಷಣಾತ್ಮಕ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕು. ಜನಪದ ಸಂಸ್ಕೃತಿಯ ಬಹು ಮುಖ್ಯ ಅಂಗವಾದ ಪಾರಂಪರಿಕ ತೆರೆಕಟ್ಟುವ ಆಚರಣೆಯನ್ನು ವಿಶ್ಲೇಷಣಾತ್ಮಕವಾಗಿ ಒಂದೆಡೆ ದಾಖಲಿಸುವ ಪ್ರಮುಖ ಉದ್ದೇಶದಿಂದ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಕೊನೆ ಟಿಪ್ಪಣಿ**

೧. ಹೆಬ್ಬಾಲೆ. ಕೆ. ನಾಗೇಶ್, ಮುಕ್ತ ಸಂಸ್ಕೃತಿ ಮತ್ತು ಹಂಪಿ ಪರಿಸರ, ೨೦೧೨, ಪು. ೪೯-೫೦

೨. Rev. H. Moegling, Coorg Memoirs : An Account of Coorg, and of The Coorg Mission, 1855, P. 62

೩. ಅದೇ ಪು. ೬೩

೪. ಅದೇ ಪು. ೬೫

೫. Rev. G. Richter, Gazetteer of Coorg, 1870, P. 113

೬. ಅದೇ ಪು.೧೬೮

೭. ಅದೇ ಪು. ೧೬೯

೮. Lewis Rice, Mysore and Coorg, 1878, P. 257

೯. Edger Thurston & K. Rangachari, Castes and Tribes of Southern India, volume 4, P. 318

## ಅಧ್ಯಾಯ ಎರಡು

## ಕೊಡಗಿನ ಚಾರಿತ್ರಿಕ ಮಹೋನ್ನತಿ

## ಅಧ್ಯಾಯ ೨

## ಕೊಡಗಿನ ಚಾರಿತ್ರಿಕ ಮಹೋನ್ನತಿ

### ೨.೧ ಕೊಡಗಿನ ಇತಿಹಾಸದ ಚಹರೆ

ಕರ್ನಾಟಕದ ನೈರುತ್ಯ ಭಾಗದಲ್ಲಿರುವ ಕೊಡಗು ಭೌಗೋಳಿಕವಾಗಿ ಬಹಳ ಕಿರಿದಾಗಿದ್ದರೂ ತನ್ನದೇ ಆದ ವಿಶಿಷ್ಟತೆಗಳನ್ನು ಹೊಂದಿದೆ. ಪ್ರಾಕೃತಿಕ ಸೌಂದರ್ಯ, ಆಹ್ಲಾದಕರ ವಾತಾವರಣ, ಇಲ್ಲಿನ ನಿವಾಸಿಗಳ ವೈವಿಧ್ಯಮಯ ಸಂಸ್ಕೃತಿಯಿಂದಾಗಿ ಕೊಡಗನ್ನು 'ದಕ್ಷಿಣ ಕಾಶಿ', ಭಾರತದ 'ಸ್ವಿಝರ್‌ಲ್ಯಾಂಡ್', 'ಲ್ಯಾಂಡ್ ಆಫ್ ಮಿಲಿಯನ್ ಹಿಲ್ಸ್' 'ಅಸ್ಟಾನಿಷಿಂಗ್ ಲ್ಯಾಂಡ್' ಎಂದು ಕರೆಯಲಾಗುತ್ತದೆ. ಪಶ್ಚಿಮ ಘಟ್ಟಗಳ ಮೇಲೆ ನೆಲೆಸಿರುವ ಕೊಡಗು ಜಿಲ್ಲೆಯ ಉದ್ದ ದಕ್ಷಿಣೋತ್ತರವಾಗಿ ೯೬ ಕಿ.ಮೀ. ಇದ್ದು ಪೂರ್ವ ಪಶ್ಚಿಮವಾಗಿ ಗರಿಷ್ಟ ೬೪ ಕಿ. ಮೀ. ಅಗಲವಿದೆ. ೪.೧೦೨ ಚದರ ಕಿ. ಮೀ.(೧೫೮೬ ಚ. ಮೈಲು)ವಿಸ್ತೀರ್ಣವನ್ನು ಹೊಂದಿದೆ. ೨೦೧೧ರ ಜನಗಣತಿಯ ಪ್ರಕಾರ ಕೊಡಗಿನ ಜನಸಂಖ್ಯೆ ೫೫೪,೫೧೯ ಆಗಿದೆ.

"ಕ್ರಿಸ್ತಶಕದ ಆದಿ ಶತಮಾನಗಳಲ್ಲಿ ಉಚ್ಚಸ್ಥಿತಿಯಲ್ಲಿದ್ದ ತಮಿಳಿನ ಸಂಗಂ ಸಾಹಿತ್ಯದಲ್ಲಿ ಕೊಡಗನ್ನು 'ಕುಡಕಂ' ಎಂದು ಕರೆಯಲಾಗಿದೆ. ಪಾಂಡ್ಯರಾಜರ ರಾಜ್ಯದ ವಿಸ್ತಾರವನ್ನು ವರ್ಣಿಸುವ ಸಂದರ್ಭದಲ್ಲಿ ಈ ಪದ ಬಂದಿದೆ. ಅದು ಹೀಗೆ ವರ್ಣಿಸಲ್ಪಟ್ಟಿದೆ.

"ಕುಡಕಂ ಕುನಗ ಕಡಲ್
ಕೂಮಾರಿ ತಿರುವಂಗಡಂ
ಇನ್ನಾಂಗು ತಮಿಳ
ನೆಟ್ಟನ್ ಎಲ್ಲಾಯಿ"

ಅಂದರೆ"ತಮಿಳು ರಾಜ್ಯವು ಒಂದು ಕಡೆ ಕೊಡಗಿನಿಂದ ಬಂಗಾಳಕೊಲ್ಲಿಯವರೆಗೂ ಇನ್ನೊಂದೆಡೆ ಕನ್ಯಾಕುಮಾರಿಯಿಂದ ತಿರುಪತಿಯವರೆಗೂ ಇದೆ. ಆ ಕಾಲದಲ್ಲಿ ಕೊಡಗನ್ನು ಕುಡಕಂ, ಕುಡುಮಲೆನಾಡು ಎಂದು ತಮಿಳರು ಕರೆಯುತಿದ್ದರು."[೧] ಎಂಬುದು ಇತಿಹಾಸ ತಜ್ಞರ ಅಭಿಪ್ರಾಯವಾಗಿದೆ. "ಕೊಡಗು ಎಂಬ ಶಬ್ಧವು 'ಕುಡು' ಅಂದರೆ ಕಡಿದಾದ ಬೆಟ್ಟಗಳುಳ್ಳದ್ದು ಎಂಬ ಶಬ್ಧದಿಂದ ಬಂತೆಂದೂ

‘ಕ್ರೋಢ’ ಅಂದರೆ ಉಗುರುಗಳಿಂದ ಹಂದಿಗಳಂತೆ ಗುಡ್ಡಬೆಟ್ಟಗಳನ್ನು ಬಯಲು ಮಾಡಿದ್ದರಿಂದ ಬಂತೆಂದೂ ‘ಕೊಡುಮಲೆ’ ಅಂದರೆ ತುದಿಯಲ್ಲಿರುವ ಮಲೆ ಎಂಬುದರಿಂದ ಬಂತೆಂದೂ ಕೆಲವು ಚರಿತ್ರಕಾರರ ಅಭಿಪ್ರಾಯವಾಗಿದೆ.”[೨] ‘ಕುಡು’ ಎಂಬ ಶಬ್ಧದಿಂದ ‘ಕುಡುಮಲೆನಾಡು’ ಎಂಬ ಹೆಸರು ಬಂದಿರಬಹುದು. “ಐತಿಹ್ಯದಂತೆ ಉಗುರುಗಳಿಂದ ಬೆಟ್ಟಗಳನ್ನು ಬಯಲು ಮಾಡಿಕೊಂಡ ಕಾರಣ ‘ಕ್ರೋಢದೇಶ’, ಪೌರಾಣಿಕವಾಗಿ ‘ಬ್ರಹ್ಮದೇಶ’, ‘ಮತ್ಸ್ಯದೇಶ’ ಎಂದೂ ಕರೆಯಲಾಗಿದೆ.”[೩]

“ಕೊಡಗು’ ಪದದ ವ್ಯುತ್ಪತ್ತಿಯ ಬಗ್ಗೆ ನಿಶ್ಚಿತವಾಗಿ ಹೇಳಲು ಬಾರದು. ‘ಕೊಂಕು’ ಕುಡುವಾಗುತ್ತದೆಂದು ಕೇಶಿರಾಜನು ಹೇಳಿದ್ದಾನೆ. ಕೊಂಕಾದ ಕೋಲು ಕುಡುಗೋಲು. ಆದರೆ, ಇಲ್ಲಿ ಕುಡು ಈ ಅರ್ಥವನ್ನು ಕೊಡುವಂತಿಲ್ಲ. ‘ಕುಡ’ ಎಂದರೆ ಪಶ್ಚಿಮ. ಆದರೆ ಯಾವುದರ ಪಶ್ಚಿಮ? ಅರ್ಥವಾಗುವಂತಿಲ್ಲ. ಇನ್ನೂ ಕೆಲವರು ಕನ್ನಡದ ‘ಕುಡು’ ಎಂದರೆ ಮಲೆಯ – ಬೆಟ್ಟದ – ಪ್ರದೇಶ ಎಂದು ಹೇಳುತ್ತಾರೆ. ಮತ್ತೆ ಕೆಲವರು ಕೊಡಿಮಲೆನಾಡು ಎಂಬುದು ‘ಕೊಡಗು’ ಆಯಿತು.”[೪] ಎಂದು ಹೇಳುತ್ತಾರೆ. “ಕುಡ ಎಂದರೆ ಪಶ್ಚಿಮ ಎಂದು ಅರ್ಥ. ಪಶ್ಚಿಮಕ್ಕೆ ಇರುವುದು ಕೊಡಗು. ಕುಡ(= ಪಶ್ಚಿಮ) > ಕೊಡಗು >(ಇಂ) ಕೂರ್ಗ್–ಇದು ಈ ಪದದ ವಿಕಾಸ ಕ್ರಮ. ಆದರೆ ಯಾವುದರ ಪಶ್ಚಿಮಕ್ಕೆ ಎಂಬುದು ಸ್ಪಷ್ಟವಾಗಿಲ್ಲ. ವಿಕಾಸ ಕ್ರಮದಿಂದಾಗಿ ಪಶ್ಚಿಮಕ್ಕೆ ಇರುವುದು ಕೊಡಗು ಎನ್ನುವ ಅರ್ಥವಾಗುತ್ತದೆ; ಇದು ಯಾವುದರ ಪಶ್ಚಿಮಕ್ಕೆ ಎಂಬುದು ಸ್ಪಷ್ಟವಾಗಿಲ್ಲ”[೫] ಎನ್ನುವ ಅಭಿಪ್ರಾಯವಿದೆ.

ಆದರೆ ತಮಿಳು ಶಿಲಪ್ಪದಿಕಾರಂ ಕೃತಿ ಸೂಚಿಸಿರುವ ‘ಕುಡುಮಲೈ ಕುಡಕಂ’ ಕೊಡಗಿಗೆ ಅನ್ವಯವಾದ ಪದವಾಗಿದೆ. “ತಮಿಳಿನ ರೀತ್ಯ ‘ಕೊಡಗು’ ಎಂಬ ಶಬ್ಧದ ನಿಷ್ಪತ್ತಿಯು ಹೀಗಿದೆ. ಕುಡ(ಮ್) : ಪಶ್ಚಿಮ+ಅಕಂ : ಒಳಗೆ> ಕುಡಕಂ>ಕೊಡಕು> ಕೊಡಗಂ >ಕೊಡಗ > ಕೊಡಗಿ ಅಂದರೆ ಪಶ್ಚಿಮದೊಳಗೆ ಅಥವಾ ಒಳ ಪಶ್ಚಿಮದಲ್ಲಿ ಎಂಬ ಅರ್ಥ ಒದಗುತ್ತದೆ.”[೬] ಹೀಗೆ ಭೌಗೋಳಿಕ ಹಿನ್ನೆಲೆಯಲ್ಲಿ ಕೊಡಗು ಸ್ಥಳನಾಮವನ್ನು ‘ಒಳ ಪಶ್ಚಿಮದ ನಾಡು’ ಎಂಬ ಅರ್ಥದಲ್ಲಿ ವಿಧಿತಗೊಳಿಸಬಹುದು. ಆದರೆ ತೀರ ಈಚೆಗಿನ ಚಿಂತನೆ, ಶೋಧಗಳು ‘ಕೊಡಗು’ ಹೆಸರನ್ನು ಕಾವೇರಿ ನದಿ ದಿಶಾ ಹರಿವಿನ ಮೂಲಕ್ಕೆ ಆರೋಪಿಸಿ, ‘ಕಾವೇರಿ’ಯ ಕಾರಣ ಆ ಹೆಸರು ಬಂದಿದೆ ಎಂದಿರುವುದುಂಟು. ಎಂ. ಜಿ. ನಾಗರಾಜ್ ಅವರು “ಕಾವೇರಿಗೆ ೭.೫ ಮಿಲಿಯನ್ ವರ್ಷಗಳ ಹಿಂದೆ ಪಶ್ಚಿಮ ಘಟ್ಟಗಳು ಏರೆತ್ತರವಾಗುವ ಮುನ್ನ ಪಶ್ಚಿಮ ದಿಸೆಯಲ್ಲಿ ಪ್ರಮುಖವಾಗಿ ಎರಡು ಕವಲುಗಳಿದ್ದು, ಒಂದು ಕವಲು ಪೂರ್ವಕ್ಕಿದ್ದು ಒಟ್ಟು ಮೂರು ಕವಲುಗಳನ್ನು ಹೊಂದಿತ್ತು. ಆದರೆ ಪೌರಾಣಿಕವಾಗಿ ಅಗಸ್ತ್ಯನ ಪ್ರಸ್ತಾಪ ಬಂದಾಗ ಕಾವೇರಿ,

ಕವೇರ ಪುತ್ರಿ ಎಂಬೆಲ್ಲ ಹೆಸರುಗಳು ಕಾಣಬರುತ್ತವೆ. ಆ ಮುನ್ನ ಕಾವೇರಿಗೆ ಇದ್ದ ಹೆಸರೇನು? ಎಂಬುದು ನನ್ನಲ್ಲಿ ಹುಟ್ಟಿದ ಪ್ರಶ್ನೆ. 'ಕುಡ' ಎಂದರೆ ಪಶ್ಚಿಮ. ಪ್ರಮುಖ ಕವಲುಗಳು ಪಶ್ಚಿಮದಲ್ಲಿ ಹರಿಯುತಿದ್ದ ಕಾರಣ ಕಾವೇರಿಗೆ 'ಕುಡಹೊಳೆ' ಎಂಬ ಹೆಸರಿದ್ದಿರಬೇಕು. ಪಶ್ಚಿಮ ಘಟ್ಟಗಳ ಏರು ಹೆಚ್ಚಿದಾಗ, ಪಶ್ಚಿಮದ ಕವಲುಗಳ ಪಥವನ್ನು ಬರಹೊಳೆ ಆಕ್ರಮಿಸಿತು. ಅಂತಾಗಿ 'ಕುಡ'ಹೊಳೆ, ಕೊಡಗು ಎಂಬ ಸ್ಥಳನಾಮಕ್ಕೆ ನಿಸರ್ಗವಾಚಿಯಾಗಿ ಹೆಸರು ಕೊಡಲು ಕಾರಣವಾಯಿತು."[೭] ಎಂದು ಅಭಿಪ್ರಾಯ ಪಡುತ್ತಾರೆ.

### ೨.೧.೧ ಪೌರಾಣಿಕ ಉಲ್ಲೇಖ

ಕಾವೇರಿ ಪುರಾಣದ ಪ್ರಕಾರ ಚಂದ್ರವರ್ಮ ಕೊಡಗಿನಲ್ಲಿ ಅರಸನಾಗಿದ್ದವನು. ಈತನು ಕೊಡವರ ಮೂಲಪುರುಷ. ರಾಜಕುಮಾರನಾದ ಈತನು ಬ್ರಹ್ಮಗಿರಿ ಬೆಟ್ಟಕ್ಕೆ ಬಂದು ಪಾರ್ವತಿಯನ್ನು ಕುರಿತು ತಪಸ್ಸು ಮಾಡಿದನು. ಕಠಿಣ ತಪಸ್ಸಿಗೆ ಮೆಚ್ಚಿದ ಪಾರ್ವತಿ ಒಬ್ಬಳು ಸುಂದರ ಸ್ತ್ರೀಯನ್ನು, ಶತ್ರು ನಿಗ್ರಹ ಖಡ್ಗವನ್ನು ಅನುಗ್ರಹಿಸಿದಳು. ಇವನಿಗೆ ದೇವಕಾಂತನನ್ನೊಳಗೊಂಡಂತೆ ಹನ್ನೊಂದು ಮಕ್ಕಳು ಜನಿಸಿದವು. ವೀರರಾದ ಇವರಿಗೆ ವಿದರ್ಭ ದೇಶದ ನೂರು ಮಂದಿ ರಾಜಕುಮಾರಿಯರನ್ನು ವಿವಾಹ ಮಾಡಲಾಯಿತು. ಹಿರಿಯನಾದ ದೇವಕಾಂತನಿಗೆ ಪಟ್ಟಕಟ್ಟಿದ ಚಂದ್ರವರ್ಮ ತಪಸ್ಸಿಗೆ ಹೊರಟುಹೋದನು. ಇವರಿಗೆ ಜನಿಸಿದ ನೂರು ಮಕ್ಕಳಿಗೆ ವಾಸಿಸಲು ಹಾಗು ಕೃಷಿ ಮಾಡಲು ಸ್ಥಳವಿಲ್ಲದಾದುದರಿಂದ ತಮ್ಮ ಉಗುರುಗಳನ್ನೇ ಆಯುಧಗಳನ್ನಾಗಿ ಮಾಡಿಕೊಂಡು ಬೆಟ್ಟಗುಡ್ಡಗಳನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಿದರು. ಈ ಪ್ರದೇಶ ಮುಂದೆ 'ಕ್ರೋಢ' ದೇಶವೆಂದು ಹೆಸರು ಪಡೆದು ಕ್ರಮೇಣ 'ಕೊಡಗು' ಎನಿಸಿಕೊಂಡಿತು.

### ೨.೧.೨ ಇತಿಹಾಸ ಪೂರ್ವಕಾಲ

ಇತಿಹಾಸಪೂರ್ವ ಕಾಲವನ್ನು ಗಮನಿಸಿದಾಗ ಕೊಡಗಿನಲ್ಲಿ ಬೃಹತ್ ಶಿಲಾಯುಗದ ಜನರ ವಸತಿಗಳಿದ್ದುದು ಕಂಡುಬರುತ್ತದೆ. ಪಾಂಡವರ ಪಾರೆ, ಪಾಂಡವರ ಮನೆಗಳೆಂದು ಕರೆಯಲ್ಪಡುವ ಕಲ್ಲು ಚಪ್ಪಡಿಗಳಿಂದ ನಿರ್ಮಿಸಲಾದ 'ಡಾಲ್‌ಮೆನ್' ಸ್ಮಾರಕಗಳು ಕೊಡಗಿನ ಹಲವೆಡೆ ಕಂಡುಬರುತ್ತವೆ. ೧೮೫೬ರಲ್ಲಿ ಡಾ. ಮೋಗ್ಲಿಂಗ್ ಈ ಕಲ್ಲುಗೋರಿಗಳನ್ನು ವಿರಾಜಪೇಟೆ ತಾಲೂಕಿನ ಅರಮೇರಿ ಗ್ರಾಮದ ಅಳಮಂಡ ಮನೆಯ ಬಳಿ ಮೊದಲು ಪತ್ತೆ ಹಚ್ಚಿದರು. ಅನಂತರ ೧೮೬೬ರಲ್ಲಿ ಕರ್ನಲ್ ಮೆಕೆಂಜಿ ವಿರಾಜಪೇಟೆಯ ಪಶ್ಚಿಮ ಭಾಗದಲ್ಲಿ ಕೆಲವು ಗೋರಿಗಳನ್ನು ಪತ್ತೆ ಮಾಡಿದರು. ಕ್ಯಾಪ್ಟನ್ ಕೋಲ್ ೧೮೬೯ರಲ್ಲಿ ಇದೇ ಭಾಗದಲ್ಲಿ ನಾಲ್ಕು ಭೂಗತ ಕಲ್ಲುಗೋರಿಗಳನ್ನು ಉತ್ಖನನ ಮಾಡಿದರು. ಇವು ಕುಶಾಲನಗರದ ಸಮೀಪದಲ್ಲಿವೆ. ಡಾ. ಕೆ. ಕೆ. ಸುಬ್ಬಯ್ಯ ಕೊಡಗಿನ ಬೃಹತ್

ಶಿಲಾಯುಗದ ಬಗ್ಗೆ ವಿಶೇಷ ಅಧ್ಯಯನ ನಡೆಸಿದ್ದಾರೆ. ಅವರ ಪ್ರಕಾರ ಕೊಡಗಿನ ಬೃಹತ್ ಶಿಲಾಯುಗದ ಜನ ಕೃಷಿಕರಾಗಿದ್ದು ನೀರಾವರಿ ಅವರಿಗೆ ತಿಳಿದಿತ್ತು. ಮೋರಿ ಬೆಟ್ಟದ ಕೆಳಗಿನ ಬಯಲಲ್ಲಿ ಅವರು ಕೃಷಿ ಮಾಡುತಿದ್ದರು. ಅಲ್ಲಿ ಈಗಲೂ ಒಂದು ಜಲಾಶಯವಿದೆ. ಇಲ್ಲಿ(ಹೊನ್ನಮ್ಮನಕೆರೆ) ಅವರು ರಾಗಿ, ಭತ್ತ ಬೆಳೆಯುತ್ತಿದ್ದರು. ಮಣ್ಣಿನ ಮಡಕೆಗಳಲ್ಲಿ ಧಾನ್ಯ ಸಂಗ್ರಹಿಸುತ್ತಿದ್ದರು. ಹುಲ್ಲು ಅಥವಾ ಎಲೆ ಹಾಸಿದ ಮಾಡಿನ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಕಬ್ಬಿಣದ ವಸ್ತುಗಳನ್ನು ಬಳಸುತ್ತಿದ್ದರು. "ಸುಮಾರು ಕ್ರಿ. ಪೂ. ೧೦೦೦ ದಿಂದ ಕ್ರಿ.ಶ. ಎರಡು ಮತ್ತು ಮೂರನೆಯ ಶತಮಾನದವರೆಗಿನ ಕಾಲಖಂಡದಲ್ಲಿ ಮೆರೆದ ಈ ಸಂಸ್ಕೃತಿಯ ಜನ ಕುರುಬ ವರ್ಗದವರಿರಬೇಕು. ದುರ್ಗಮವಾದ ಈ ಪ್ರದೇಶಕ್ಕೆ ಅವರು ವೈನಾಡು(ಕೇರಳ) ಕಡೆಯಿಂದ ಹೆಗ್ಗಳ ಕಣಿವೆ(ವಿರಾಜಪೇಟೆಯ ಸಮೀಪ) ಮೂಲಕ ಬಂದಿರಬೇಕೆಂದು ಅಭಿಪ್ರಾಯಪಡುತ್ತಾರೆ."[೮]

### ೨.೧.೩ ಇತಿಹಾಸ ಕಾಲ

ಕೊಡಗು ಇತಿಹಾಸದ ಕಾಲದಲ್ಲಿ ಕರ್ನಾಟಕವನ್ನು ಆಳಿದ ವಿವಿಧ ರಾಜಸಂತತಿಗಳ ರಾಜ್ಯಾಡಳಿತಕ್ಕೆ ಒಳಪಟ್ಟಿತ್ತು. ಪ್ರಾಚೀನ ಕಾಲದಿಂದ ೧೬ನೆಯ ಶತಮಾನದವರೆಗಿನ ಕೊಡಗಿನ ಇತಿಹಾಸವನ್ನು ಮುಖ್ಯವಾಗಿ ಶಾಸನಗಳ ಆಧಾರದಲ್ಲಿ ಹೇಳಲಾಗುತ್ತದೆ. ೧೭ನೆಯ ಶತಮಾನದವರೆಗೆ ಕೊಡಗು ಯಾವ ರಾಜವಂಶದ ಸಂಪೂರ್ಣ ಆಳ್ವಿಕೆಗೆ ಒಳಗಾಗಲಿಲ್ಲ. ಕೆಲವು ರಾಜಮನೆತನಗಳು ಕೊಡಗಿನ ಉತ್ತರ ಭಾಗದ ಗಡಿ ಪ್ರದೇಶಗಳನ್ನು ವಿವಿಧ ಕಾಲಘಟ್ಟದಲ್ಲಿ ಆಳಿದರು. ಉಳಿದಂತೆ ತುಂಡರಸರು ಕೊಡಗನ್ನು ಆಳುತ್ತಿದ್ದರು.

### ೧. ಕದಂಬರು

ಕದಂಬರು ಕ್ರಿಸ್ತಶಕದ ಪ್ರಾರಂಭದ ಕಾಲಘಟ್ಟದಲ್ಲಿ ಕೊಡಗನ್ನು ಆಳುತಿದ್ದರೆಂದು ಕೆಲವು ಚರಿತ್ರಕಾರರು ಪ್ರತಿಪಾದಿಸುತ್ತಾರೆ. ಕಾವೇರಿ ಪುರಾಣದಲ್ಲಿ ಉಲ್ಲೇಖಿಸಲ್ಪಟ್ಟ ಕೊಡಗಿನ ಮೊದಲನೆ ರಾಜ ಚಂದ್ರವರ್ಮನ ಕಥೆಯಲ್ಲಿ ಕೊಡಗಿನ ಚರಿತ್ರೆಯ ಮೂಲವೂ, ಕೊಡವರ ಹುಟ್ಟಿನ ಮೂಲವೂ ಅಡಗಿದೆಯೆಂದು ಇತಿಹಾಸಕಾರ ಕರ್ನಲ್ ವಿಲ್ಕ್ಸ್ ಅಭಿಪ್ರಾಯಪಡುತ್ತಾರೆ. "ಈ ಚಂದ್ರವರ್ಮನು ಕದಂಬ ರಾಜವಂಶದ ಒಬ್ಬ ರಾಜನೆಂತಲೂ ಕದಂಬರು ಕ್ರಿಸ್ತಶಕದ ಆದಿ ಶತಮಾನದಲ್ಲಿ ಕೊಡಗನ್ನು ಆಳುತ್ತಿದ್ದರೆಂತಲೂ ಕೆಲವು ಚರಿತ್ರಕಾರರು ಪ್ರತಿಪಾದಿಸುತ್ತಾರೆ. ಚಂದ್ರವರ್ಮನೆಂಬ ಹೆಸರು ಕ್ರಿಸ್ತ ಪೂರ್ವ ಎರಡನೆಯ ಶತಮಾನದಿಂದ ಕ್ರಿಸ್ತಶಕ ಆರನೆಯ ಶತಮಾನದವರೆಗೆ ಆಳಿದ ಕದಂಬ ವಂಶದ ರಾಜರಲ್ಲಿ ಅನೇಕರಿಗಿದೆ. ಈ ಶತಮಾನಗಳಲ್ಲಿ ಕದಂಬ ರಾಜ್ಯವು ಮೈಸೂರು ರಾಜ್ಯದ ಪಶ್ಚಿಮ ಭಾಗವನ್ನೂ, ಉತ್ತರಕನ್ನಡ, ದಕ್ಷಿಣ

ಕನ್ನಡ ಜಿಲ್ಲೆಗಳನ್ನೂ ಒಳಗೊಂಡಿತ್ತೆಂದೂ ಬನವಾಸಿಯು ಅದರ ರಾಜಧಾನಿಯಾಗಿತ್ತೆಂದೂ ಚರಿತ್ರೆಯಿಂದ ತಿಳಿದುಬರುತ್ತದೆ."[೯] ಕೊಡಗಿನ ಯಡವನಾಡಿನ ಯಡೂರು ಸುಗ್ಗಿದೇವರ ಗುಡಿಯಲ್ಲಿರುವ ಶಾಸನವು ಕೊಡಗಿನಲ್ಲಿ ಕದಂಬರ ಆಳ್ವಿಕೆಯನ್ನು ದೃಢಪಡಿಸುತ್ತದೆ. ಕ್ರಿ.ಶ. ೧೧೯೫ರ ಈ ಶಾಸನವು ಕದಂಬ ದುದ್ದರಸನ ನೆನಪಿಗಾಗಿ ಆತನ ತಮ್ಮ ಜೂಜರಸನಿಂದ ಇಡಲ್ಪಟ್ಟ ವೀರಶಾಸನವಾಗಿದೆ.

೨. ಗಂಗರು

ಗಂಗರು ಕೊಡಗನ್ನು ಆಳಿದರು ಎಂಬುದಕ್ಕೆ ಶಾಸನಗಳು ಪುರಾವೆ ಒದಗಿಸುತ್ತವೆ. ಈ ಜಿಲ್ಲೆಯಲ್ಲಿ ಅವರ ಕಾಲದ ಆರು ಶಾಸನಗಳು ದೊರೆತಿವೆ. ಅದರಲ್ಲಿ ಮೊದಲ ಶಾಸನ ಕ್ರಿ.ಶ. ೪೬೬ರ ಮಡಿಕೇರಿ ತಾಮ್ರಪಟ. ತಲಕಾಡಿನ (ಗಂಗರ ರಾಜಧಾನಿ) ಒಂದು ಜಿನಾಲಯಕ್ಕೆ ಕೊಡಗಿನ ಗಡಿಭಾಗದ ಈಗಿನ ಮೈಸೂರು ಜಿಲ್ಲೆಯ ಕೆಲವು ಗ್ರಾಮಗಳನ್ನು ಗಂಗ ಅವಿನೀತನ ಕಾಲದಲ್ಲಿ ದಾನ ಮಾಡಿದ ಉಲ್ಲೇಖ ಇದರಲ್ಲಿದೆ. ಕ್ರಿ.ಶ. ೮೮೮ರ ಕಾಲಘಟ್ಟದ ಶಾಸನವು ಕೊಡಗಿನ ಕಿಗ್ಗಟ್ಟುನಾಡಿನ ಬಿಳೂರು ಗ್ರಾಮದ ಕಡಂಗದಲ್ಲಿ ಲಭಿಸಿದೆ. ಇದರಲ್ಲಿ ಗಂಗರಸನಾದ ಸತ್ಯವಾಕ್ಯ ಕೊಂಗುಣಿವರ್ಮನು ಪೆನ್ನಕಡಂಗದ ಸತ್ಯವಾಕ್ಯ ಜಿನಬಸದಿಯಲ್ಲಿ ಪೂಜೆ ನಡೆಸಲೆಂದು ಕಿಗ್ಗಟ್ಟುನಾಡು ಪೆದ್ದೊರೆಗರೆಯ (ದೊಡ್ಡ ಹೊಳೆಯ ಕರೆಯ) ಬಿಳೂರು ಗ್ರಾಮದ ಹನ್ನೆರಡು ಅಗ್ರಹಾರಗಳನ್ನು ಜೈನ ಗುರುವಿಗೆ ದಾನ ಮಾಡಿದ ಉಲ್ಲೇಖವಿದೆ. ಪೆದ್ದೊರೆಯೆಂದರೆ ಕಿಗ್ಗಟ್ಟುನಾಡಿನ ದೊಡ್ಡಹೊಳೆ ಅಥವಾ ಲಕ್ಷ್ಮಣತೀರ್ಥ ನದಿ. ದಾನಕ್ಕೆ ಸಾಕ್ಷಿಯಾಗಿ ಗಂಗವಾಡಿಯ ಅಧಿಕಾರಿಗಳು, ಪೆದ್ದೊರೆಗೆರೆಯ ಎಂಬತ್ತು ಜನರೂ ಎಂಟು ಒಕ್ಕಲಿನವರೂ ಹೆಸರಿಸಲ್ಪಟ್ಟಿದ್ದಾರೆ. ಊರಿನ ಆಡಳಿತದಲ್ಲಿ ಜನಪ್ರತಿನಿಧಿಗಳ ಪಾತ್ರವನ್ನು ಇಲ್ಲಿ ಕಾಣಬಹುದು. ಇದೇ ಅರಸನಿಗೆ ಸೇರಿದ ಮತ್ತೊಂದು ಶಾಸನವು ಕಿಗ್ಗಟ್ಟುನಾಡಿನ ಕೋತೂರು ಗ್ರಾಮದ ಲಕ್ಕುಂದ ಕಾಡಿನಲ್ಲಿ ದೊರೆತಿದೆ.

ಗಂಗ ವಂಶದ ರಾಜರ ಮೂರನೆಯ ಶಿಲಾಶಾಸನವನ್ನು ಕಿಗ್ಗಟ್ಟುನಾಡಿನ ಪೆಗ್ಗೂರು ಗ್ರಾಮದಲ್ಲಿ ಪತ್ತೆಹಚ್ಚಲಾಯಿತು. ಕ್ರಿ.ಶ. ೯೭೮ರ ಈ ಶಾಸನದ ಪ್ರಕಾರ ನಾಲ್ಕನೆಯ ಸತ್ಯವಾಕ್ಯ ಕೊಂಗುಣಿವರ್ಮನು ತಲಕಾಡಿನಲ್ಲಿ ಆಳುತಿದ್ದಾಗ ಅವನ ತಮ್ಮ ರಕ್ಕಸಗಂಗನು ಪೆದ್ದೊರೆಗರೆಯುನ್ನು ಆಳುತಿದ್ದನು. ಆಗ ಅವನು ಪೆಗ್ಗಡೂರು(ಪೆಗ್ಗೂರು) ಮತ್ತು ಪೊಸವಾಡಗ ಎಂಬ ಗ್ರಾಮಗಳನ್ನು ಶ್ರವಣಬೆಳಗೊಳದ ಜೈನ ಮುನಿಯೊಬ್ಬರಿಗೆ ದಾನವಾಗಿ ನೀಡಿದನು. ಈ ದಾನಕ್ಕೆ ತೊಂಬತ್ತಾರು ಸಾವಿರ ಸೀಮೆಯುವರೂ ಐದು ಸಾಮಂತ ಅರಸರೂ ಪೆದ್ದೊರೆಗರೆಯ ಎಪ್ಪತ್ತು ಜನರೂ ಎಂಟು ಒಕ್ಕಲಿನವರೂ ಸಾಕ್ಷಿಗಳಾಗಿದ್ದಾರೆ.

"ವಿರಾಜಪೇಟೆ ತಾಲೂಕಿನ ಹೈಸೊಡ್ಲೂರು ಗ್ರಾಮದ ದೇವರಕೆರೆಯ ಬಳಿ ಅಪ್ರಕಟಿತ ತುಂಡು ಶಾಸನವನ್ನು ಎಂ. ಜಿ. ನಾಗರಾಜ್ ಅವರು ಪತ್ತೆಹಚ್ಚಿದ್ದಾರೆ."[೧೦] ಸುಮಾರು ಒಂದೂವರೆ ಅಡಿ ಎತ್ತರ ಹಾಗೂ ಎರಡು ಅಡಿ ಅಗಲದ ತುಂಡು ಭಾಗದಲ್ಲಿ ಏಳು ಸಾಲುಗಳಿವೆ. ಅರ್ಧಭಾಗ ಮಾತ್ರ ಕಾಣಿಸುತ್ತದೆ ಬಸದಿಯೊಂದಕ್ಕೆ ದಾನ ನೀಡಿದ ವಿಚಾರ ಇಲ್ಲಿದೆ. ಅಕ್ಷರಗಳು ಬಹಳ ಸುಂದರವಾಗಿದ್ದು, ಪೆಗ್ಗೂರಿನ ರಕ್ಕಸ ಗಂಗನ ಶಾಸನಕ್ಕೆ ಹೋಲಿಸಿದರೆ ಈ ಶಾಸನ ಅದಕ್ಕೂ ಹಿಂದಿನ ಶಾಸನಗಳ ಲಿಪಿಯನ್ನು ಹೋಲುತ್ತದೆ. ವಿರಾಜಪೇಟೆ ತಾಲೂಕಿನ ಈ ಭೂಭಾಗವು ಗಂಗ ಶ್ರೀಪುರುಷನ ಆಳ್ವಿಕೆಗೆ ಒಳಪಟ್ಟಿತೆಂಬ ಸೂಚನೆ ಕಾಣುತ್ತದೆ. ಈ ಶಾಸನದಲ್ಲಿ ಪುರ್ದುಕೇರಿ ಎಂಬ ಹೆಸರು ಬಂದಿದೆ. ಅದು ವಿರಾಜಪೇಟೆ ತಾಲೂಕಿನಲ್ಲಿರುವ ಇಂದಿನ ಹುದಿಕೇರಿ ಗ್ರಾಮವಾಗಿದೆ. ಇದಕ್ಕೆ ಗ್ರಾಮಗಳನ್ನು ಕೂಡಿಸುವ ನೆಲೆ ಎಂಬ ಅರ್ಥವಿದೆ. ಇದು ಈ ಭಾಗದ ಮೊಟ್ಟಮೊದಲ ಕನ್ನಡ ಶಾಸನವಾಗಿದೆ. ಈ ಮೇಲಿನ ಶಾಸನಗಳಿಂದ ಸುಮಾರು ನಾಲ್ಕನೆಯ ಶತಮಾನದಿಂದ ಹನ್ನೊಂದನೆಯ ಶತಮಾನದವರೆಗೆ ಕೊಡಗು ಗಂಗ ವಂಶದ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಸ್ಪಷ್ಟವಾಗುತ್ತದೆ.

**೩. ಚೋಳರು ಮತ್ತು ಕೊಂಗಾಳ್ವರು**

ಗಂಗರಾಜರನ್ನು ಪರಾಭವಗೊಳಿಸಿದ ಚೋಳರು ಅವರ ಆಡಳಿತಕ್ಕೆ ಒಳಪಟ್ಟಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡರು. ಕೊಂಗಾಳ್ವರು ಮತ್ತು ಚೆಂಗಾಳ್ವರು ಚೋಳರಿಗೆ ಮಾಂಡಲಿಕರಾದರು. ಕೊಂಗಾಳ್ವರ ಆಡಳಿತವು ಚೋಳ ರಾಜರಾಜನ ಕಾಲದಲ್ಲಿ ಆರಂಭವಾಯಿತು. ಮಾಲಂಬಿ ಶಾಸನ( ಸೋಮವಾರಪೇಟೆ ತಾಲೂಕು, ಕ್ರಮಾಂಕ ೬೫) ಪ್ರಕಾರ ಪನಸೋಗೆ ಎಂಬಲ್ಲಿ ಚೋಳರು ಮತ್ತು ಗಂಗರ ನಡುವೆ ನಡೆದ ಯುದ್ಧದಲ್ಲಿ ಕೊಂಗಾಳ್ವರ ಮನಿಜ ಎಂಬವನು ವಿಶೇಷ ಪರಾಕ್ರಮವನ್ನು ಮೆರೆದು ಚೋಳರಿಗೆ ಜಯವನ್ನು ತಂದುಕೊಟ್ಟನು. ಆತನಿಗೆ ಚೋಳರಾಜನು 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವ'ನೆಂಬ ಬಿರುದನ್ನು ಕೊಟ್ಟು ಕೊಡಗಿನ ಮಾಲವ್ವಿ(ಮಾಲಂಬಿ)ಯನ್ನು ಆಳಲು ಕೊಡುಗೆಯಾಗಿ ನೀಡಿದನು.

ಈ ಯುದ್ಧವು ಕ್ರಿ.ಶ. ೧೦೦೪ರಲ್ಲಿ ನಡೆದುದರಿಂದ ಅದೇ ಆ ವಂಶದ ಆರಂಭಕಾಲವೆಂದು ಡಾ. ಬಾ. ರಾ. ಗೋಪಾಲ್ ಅಭಿಪ್ರಾಯಪಡುತ್ತಾರೆ. ಕೊಡಗಿನಲ್ಲಿ ದೊರೆತ ಶಾಸನಗಳ ನೆರವಿನಿಂದ ಅವರು ಕೊಂಗಾಳ್ವ ಅರಸರನ್ನು ಹೀಗೆ ಗುರುತಿಸಿದ್ದಾರೆ. ರಾಜೇಂದ್ರ ಚೋಳ(ತಿಳಿದಿರುವ ತೇದಿ ೧೦೨೬), ರಾಜಾಧಿರಾಜ, ರಾಜೇಂದ್ರ ಚೋಳ ೨ (ಪತ್ನಿ ಪೋಚಬ್ಬರಸಿ ತೇದಿ೧೦೫೮), ರಾಜಾಧಿರಾಜ ೨ (ಪತ್ನಿ ರುಕ್ಮಿಣಿದೇವಿ), ರಾಜೇಂದ್ರ ಪೃಥ್ವೀ ಕೊಂಗಾಳ್ವ (ಪತ್ನಿ

ಪದ್ಮಲದೇವಿ ತೇದಿ ೧೦೭೦, ೧೦೭೭), ವೀರ ಚೋಳ ಕೊಂಗಾಳ್ವ ೧೧೭೫. ರಾಜೇಂದ್ರ ಚೋಳ ಕೊಂಗಾಳ್ವನು ಚೋಳರ ಪರವಾಗಿ ಹೊಯ್ಸಳ ನೃಪಕಾಮನ ವಿರುದ್ಧ ಹೋರಾಡಿ ಜಯಗಳಿಸಿದನು. ಸೋಮವಾರಪೇಟೆ ತಾಲೂಕು ಮುಳ್ಳೂರು ಶಾಸನದ(ಕ್ರಮಾಂಕ ೬೮) ಪ್ರಕಾರ ರಾಜಾಧಿರಾಜ ಕೊಂಗಾಳ್ವನ ತಾಯಿ ಪೋಚಬ್ಬೆಯು ಮುಳ್ಳೂರಿನ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದಳು. ಈ ಬಸದಿಯ ತಳಹದಿಯ ಮೇಲಿರುವ ಶಾಸನದಲ್ಲಿ (ಕ್ರಮಾಂಕ ೬೯) ರಾಜೇಂದ್ರ ಚೋಳ ಕೊಂಗಾಳ್ವನ ಪುತ್ರ ರಾಜಾಧಿರಾಜ ಕೊಂಗಾಳ್ವನು ಈ ಬಸದಿಯನ್ನು ನಂದಿ ಸಂಘದ ಗುಣಸೇನ ಪಂಡಿತನಿಗೆ ಧಾರಾಪೂರ್ವಕವಾಗಿ ನೀಡಿದ ಬಗ್ಗೆ ವಿವರವಿದೆ. ಪಾರ್ಶ್ವನಾಥ ಬಸದಿಯ ಪಕ್ಕದಲ್ಲಿರುವ ಎರಡನೆಯ ಶಾಸನವು (ಕ್ರಿ. ಶ. ೧೦೫೯, ಕ್ರ.೭೨) ರಾಜೇಂದ್ರ ಕೊಂಗಾಳ್ವನು ತನ್ನ ತಂದೆ ಮುಳ್ಳೂರಿನಲ್ಲಿ ಕಟ್ಟಿಸಿದ ಬಸದಿಗೆ ಹಾರುವನ ಹಳ್ಳಿ, ಅರಕನ ಹಳ್ಳಿ ಮತ್ತು ನಿಡುತ ಗ್ರಾಮಗಳಲ್ಲಿ ಬೆಳೆ ಬೆಳೆಯುವ ಭೂಮಿ ಹಾಗೂ ಗಾಣದೆಣ್ಣೆಯನ್ನು ದಾನ ಮಾಡಿದ ಬಗ್ಗೆ ವಿವರಗಳನ್ನು ನೀಡುತ್ತದೆ. ಈ ಶಾಸನಗಳ ಪ್ರಕಾರ ಕೊಂಗಾಳ್ವರು ಜೈನರಾಗಿರಬಹುದು ಎನ್ನಲು ಅವಕಾಶವಿದೆ. ಮುಳ್ಳೂರಿನಲ್ಲಿ ಇವರ ಕಾಲದ ರಚನೆಗಳು ಹೆಚ್ಚು ಇರುವುದರಿಂದ ಅದೇ ಅವರ ರಾಜಧಾನಿಯಾಗಿರಬಹುದು.

ಕ್ರಿ.ಶ. ೧೦೭೦ರ ಹೊಸಹಳ್ಳಿ ಶಾಸನದ ಪ್ರಕಾರ(ಕ್ರ.೪೮) ರಾಜೇಂದ್ರ ಪೃಥ್ವಿ ಕೊಂಗಾಳ್ವನು ಸೋಮವಾರಪೇಟೆ ತಾಲೂಕಿನ ಹೊಸಹಳ್ಳಿಯಲ್ಲಿದ್ದ ವೀರಸಿದ್ಧೇಶ್ವರ ದೇವಾಲಯಕ್ಕೆ ಸುಳ್ಳಿಗೋಡಿನ ಗೌರತಿ ಕೆರೆಯ ಕೆಳಭಾಗದ ೫೦ ಖಂಡುಗ ನೀರಾವರಿ ಜಮೀನನ್ನು ದಾನ ಮಾಡಿದನು. ಸುಳ್ಳಿಗೋಡು ಅರಕಲಗೋಡು ತಾಲೂಕಿನಲ್ಲಿದ್ದು ಆಭಾಗವೂ ಕೊಂಗಾಳ್ವರ ವಶದಲ್ಲಿತ್ತು. ರಾಜೇಂದ್ರ ಕೊಂಗಾಳ್ವನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನಿಗೆ ಮಾಂಡಲಿಕನಾಗಿ ತ್ರಿಭುವನಮಲ್ಲ ಎಂಬ ಬಿರುದು ಪಡೆದನು. ಇವನಿಗೂ ಚೆಂಗಾಳ್ವರಿಗೂ ಮೈಸೂರು ಜಿಲ್ಲೆಯ ಸಾಲಿಗ್ರಾಮದಲ್ಲಿ ಎರಡು ಬಾರಿ ಯುದ್ಧ ನಡೆಯಿತು. ಹನ್ನೊಂದನೆಯ ಶತಮಾನದೆಂದು ಗುರುತಿಸಲಾಗುವ ಗಣಗೂರಿನಲ್ಲಿ ದೊರೆತ ತ್ರುಟಿತ ಶಾಸನದಲ್ಲಿ (ಕ್ರ. ೫೩) ತ್ರಿಭುವನಮಲ್ಲ ವೀರಚೋಳ ಕೊಂಗಾಳ್ವನ ಉಲ್ಲೇಖವಿದೆ. ಈ ಅವಧಿಯಲ್ಲಿ ಹೊಯ್ಸಳ ವಿಷ್ಣುವರ್ಧನನು ಪ್ರಬಲನಾಗಿದ್ದನು. ಈತನ ಸೇನಾನಿ ಪುಣಿಸನು ಕೊಂಗಾಳ್ವರನ್ನು ಸೋಲಿಸಿದನು.

ಮಹಾಮಂಡಲೇಶ್ವರ ವೀರ ಚೋಳ ಕೊಂಗಾಳ್ವನ ಕಾಲದ ನಂದಿಗುಂದ ಶಾಸನದಲ್ಲಿ(ಕ್ರ. ೮೭) ಮುಳ್ಳನಾಡು ಎಪ್ಪತ್ತರಲ್ಲಿ ಕೆಲವೊಂದು ತೆರಿಗೆ ವಿನಾಯಿತಿ ಘೋಷಿಸಿದ ಬಗ್ಗೆ ಮಾಹಿತಿ ಇದೆ. ಹೊಯ್ಸಳ ರಾಜ ಎರಡನೆಯ ವೀರ ಬಲ್ಲಾಳನ ರಾಣಿ ಪದುಮಲದೇವಿ ಹಾಗೂ ಮಗಳು ಸೋಮಲದೇವಿಯ

ಸಮ್ಮುಖದಲ್ಲಿ ಈ ಕೊಡುಗೆಯನ್ನು ನೀಡಲಾಯಿತು ಎಂದಿದೆ. ಈ ಹಿನ್ನೆಲೆಯಲ್ಲಿ ಕೊಂಗಾಳ್ವರು ಹೊಯ್ಸಳರ ಮಾಂಡಲಿಕರಾದರೆಂಬುದು ಸ್ಪಷ್ಟವಾಗುತ್ತದೆ. ನಂದಿಗುಂದ ಶಾಸನದ ನಂತರ ಕೊಂಗಾಳ್ವರ ಉಲ್ಲೇಖ ಶಾಸನಗಳಲ್ಲಿ ಕಂಡುಬರುವುದಿಲ್ಲ. ಇವರ ರಾಜ್ಯ ಚೆಂಗಾಳ್ವ ರಾಜ್ಯದಲ್ಲಿ ಐಕ್ಯವಾಗಿರಬಹುದು. ಕೊಡಗು ಜಿಲ್ಲೆಯಲ್ಲಿ ಚೋಳರ ಯಾವುದೇ ಶಾಸನ ಕಂಡುಬಂದಿಲ್ಲ. ಆದರೆ ರಾಜರಾಜ(೯೮೫-೧೦೧೬), ಒಂದನೆಯ ರಾಜೇಂದ್ರ(೧೪೧೬-೪೪), ಒಂದನೆಯ ರಾಜಾಧಿರಾಜ(೧೦೪೪-೫೪) ಈ ಅರಸರ ಕಾಲದಲ್ಲಿ ಕೊಂಗಾಳ್ವ ಮತ್ತು ಚೆಂಗಾಳ್ವರ ಮೂಲಕ ಅವರು ಅಧಿಕಾರ ಹೊಂದಿದ್ದರು.

**೪. ಚೆಂಗಾಳ್ವರು ಮತ್ತು ಚೋಳರು**

ಕ್ರಿ.ಶ. ಹತ್ತನೆಯ ಶತಮಾನದಲ್ಲಿ ಕೊಡಗಿನ ಪೂರ್ವಭಾಗ ಹಾಗು ಹುಣಸೂರು ತಾಲೂಕುಗಳಲ್ಲಿ ಚೆಂಗಾಳ್ವರು ಎಂಬ ಪುಟ್ಟ ಅರಸು ಮನೆತನವು ಆಳ್ವಿಕೆ ನಡೆಸುತಿತ್ತು. ಹತ್ತು ಹನ್ನೊಂದನೆಯ ಶತಮಾನದಲ್ಲಿ ಗಂಗ ಅರಸರ ಮಾಂಡಲಿಕರಾಗಿದ್ದ ಇವರು ಹನ್ನೆರಡನೆಯ ಶತಮಾನದಲ್ಲಿ ಚೋಳರ ಮಾಂಡಲಿಕರಾದರು. ನಂತರ ಹೊಯ್ಸಳ ಹಾಗೂ ವಿಜಯನಗರ ಅರಸರ ಮಾಂಡಲಿಕರಾಗಿ ಹದಿನೇಳನೆಯ ಶತಮಾನದ ಪ್ರಾರಂಭದವರೆಗೆ ಆಳಿದರು. ಚೋಳರು ಗಂಗರನ್ನು ಪರಾಭವಗೊಳಿಸಿ ರಾಜ್ಯವನ್ನು ವಶ ಪಡಿಸಿಕೊಳ್ಳುವ ಸಂದರ್ಭದಲ್ಲಿ ಚೆಂಗಾಳ್ವರು ಚೋಳರನ್ನು ಎದುರಿಸಿದರು. ಆದರೆ ಕಾವೇರಿ ನದಿ ದಡದಲ್ಲಿನ ಹನಸೋಗೆ ಎಂಬಲ್ಲಿ ನಡೆದ ಯುದ್ಧದಲ್ಲಿ ಚೋಳರಿಂದ ಪರಾಭವಗೊಂಡು ಅವರ ಮಾಂಡಲಿಕರಾದರು. ಅಂದಿನಿಂದ ಚೋಳರ ಅಧೀನ ರಾಜ್ಯಗಳ ಪಟ್ಟಿಯಲ್ಲಿ ಕುಡುಮಲೈನಾಡು ಅಂದರೆ ಮಲೆಗಳ ನಾಡಾದ ಕೊಡಗು ಸೇರಿದ್ದಿತು.

ಕೊಡಗನ್ನು ಹೆಚ್ಚುಕಾಲ ಆಳಿದವರು ಚೆಂಗಾಳ್ವರು. ಹತ್ತನೆಯ ಶತಮಾನದಿಂದ ಹದಿನೇಳನೆಯ ಶತಮಾನದವರೆಗೆ ಇವರು ಪಿರಿಯಾಪಟ್ಟಣ, ಹುಣಸೂರು, ಕೃಷ್ಣರಾಜಪುರ ತಾಲೂಕು ಹಾಗೂ ಕೊಡಗಿನ ಸೋಮವಾರಪೇಟೆ ತಾಲೂಕಿನ ಕೆಲವು ಭಾಗಗಳನ್ನು ಆಳಿದರು. ಆಗ ಈ ಪ್ರದೇಶಕ್ಕೆ ಚಂಗನಾಡು ಎಂಬ ಹೆಸರಿತ್ತು. ಕೊಡಗಿನಲ್ಲಿ ಚೆಂಗಾಳ್ವರ ಏಳು ಶಿಲಾ ಶಾಸನಗಳು(ಕ್ರ. ૩೫, ૩೬, ೫೦, ೫೧, ೬೦, ೮೦, ೯೧) ದೊರೆತಿವೆ. ಇವುಗಳಲ್ಲಿ ૩೫ನೆಯ ಶಾಸನವು ಹದಿನಾರನೆಯ ಶತಮಾನದಾಗಿದ್ದು; ಉಳಿದೆಲ್ಲಾ ಶಾಸನಗಳು ಪ್ರಾಚೀನ ಚೆಂಗಾಳ್ವರಿಗೆ ಸಂಬಂಧಿಸಿದ್ದಾಗಿದೆ. ಇವರು ಕ್ರಿ.ಶ. ೧૩೦೦ ರವರೆಗೆ ಕೊಡಗಿನ ಕೆಲವು ಭಾಗಗಳ ಮೇಲೆ ಅಧಿಕಾರ ಹೊಂದಿದ್ದರು. ಕ್ರಿ.ಶ. ೧૩೦೦ ರಿಂದ ೧೫೦೦ ರವರೆಗೆ ಅವರು ಇತಿಹಾಸದಲ್ಲಿ ಕಣ್ಮರೆಯಾಗಿದ್ದು; ಅವರ ಬಗ್ಗೆ

ಶಾಸನಗಳೇ ಇಲ್ಲ. ನಂತರ ೧೫೦೩-೪ರ ಅವಧಿಯಲ್ಲಿ ಮೈಸೂರು ಜಿಲ್ಲೆಯಲ್ಲಿ ಮತ್ತೆ ಕಾಣಿಸಿಕೊಂಡರು. ಅವರಿಗೆ ಸಂಬಂಧಿಸಿದಂತೆ ಸೋಮವಾರಪೇಟೆ ತಾಲೂಕಿನ ಚೇರಲ ಸಿರಿಮಂಗಲ(ಕ್ರ. ೩೫) ಶಾಸನವು ಲಭಿಸಿದೆ. ಇದರಲ್ಲಿ ಚಂಗಾಳ್ವ ಶ್ರೀಕಂಠರಸನು ಭೂಮಿಯನ್ನು ಕೊಡುಗೆ ನೀಡಿದುದರ ಬಗ್ಗೆ ಉಲ್ಲೇಖಿಸಲಾಗಿದೆ. ಕೊಡಗಿನಲ್ಲಿ ಹಾಲೇರಿ ಅರಸರ ಪ್ರಭಾವ ಹೆಚ್ಚಿದಾಗ ಇವರ ಅಧಿಕಾರ ಕುಂದುತ್ತಾ ಬಂದಿತು. ಮೈಸೂರಿನ ಕಂಠೀರವ ನರಸರಾಜ ಒಡೆಯರು ಇವರ ರಾಜಧಾನಿ ಪಿರಿಯಾಪಟ್ಟಣವನ್ನು ವಶಪಡಿಸಿಕೊಂಡುದ್ದರಿಂದ ಇವರ ಆಡಳಿತ ಕೊನೆಗೊಂಡಿತು. ಕೊಡಗಿನ ಗಡಿಭಾಗದಲ್ಲಿದ್ದ ನಂಜರಾಜ ಪಟ್ಟಣ ಪರಿಸರದ ಇವರ ಪ್ರದೇಶಗಳು ಕೊಡಗಿನ ಹಾಲೇರಿ ವಂಶದ ಕೈ ಸೇರಿತು.

ಹನ್ನೊಂದನೆಯ ಶತಮಾನದ ಆರಂಭದಲ್ಲಿ ಚಂಗಾಳ್ವರು ಚೋಳರ ಮಾಂಡಲಿಕರಾಗಿ ಹನಸೋಗೆ(ಹುಣಸೂರು ತಾಲೂಕು) ಪ್ರದೇಶದಿಂದ ಆಳ್ವಿಕೆ ಪ್ರಾರಂಭಿಸಿದರು. ಹನ್ನೆರಡನೆಯ ಶತಮಾನದ ಕೊನೆಗೆ ಕೊಂಗಾಳ್ವರ ರಾಜ್ಯದ ಭಾಗಗಳು ಇವರ ರಾಜ್ಯದಲ್ಲಿ ಸೇರಿದವು. ಹದಿಮೂರನೆಯ ಶತಮಾನದ ಕೊನೆಗೆ ಇವರ ರಾಜ್ಯವು ಹೊಯ್ಸಳ ರಾಜ್ಯದಲ್ಲಿ ಲೀನವಾಯಿತು. ಇಲ್ಲಿಯವರೆಗಿನ ಚಂಗಾಳ್ವ ಅರಸರನ್ನು ಪ್ರಾಚೀನ ಚಂಗಾಳ್ವರೆಂದು ಕರೆಯಲಾಗುತ್ತದೆ. ಮುಂದೆ ಕ್ರಿ. ಶ. ೧೫೦೪ ರಿಂದ ೧೬೪೫ ರವರೆಗೆ ಆಳಿದ ಚಂಗಾಳ್ವರನ್ನು 'ತರುವಾಯುದ ಚಂಗಾಳ್ವರು' ಎಂದು ಕರೆಯುತ್ತಾರೆ. ಚಿಕ್ಕ ಹನಸೋಗೆಯ ಬಸ್ತಿ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ರಾಜೇಂದ್ರ ಚೋಳ ಚಂಗಾಳ್ವ (೧೧ನೆಯ ಶತಮಾನ) ಈ ವಂಶದ ಮೊದಲ ಅರಸ. ಈ ಶಾಸನದ ಕೆಳಭಾಗದಲ್ಲಿ ವೀರ ರಾಜೇಂದ್ರ ನನ್ನಿ ಚಂಗಾಳ್ವನ ಶಾಸನವಿದೆ. ತನ್ನ ತಂದೆ ಪ್ರಾರಂಭಿಸಿದ ಹನಸೋಗೆ ಬಸದಿಯನ್ನು ಈತನು ಪೂರ್ಣಗೊಳಿಸಿರಬಹುದು ಎನ್ನಲಾಗುತ್ತದೆ. ಕ್ರಿ.ಶ. ೧೦೯೧ರ ಚಂಗಾಳ್ವದೇವನ ಶಾಸನವು(ಕಿರಗನೂರು, ಹುಣಸೂರು ತಾಲೂಕು.) ಈ ವಂಶದ ದಿನಾಂಕವನ್ನು ಹೊಂದಿರುವ ಮೊದಲ ಶಾಸನ. ಪಿರಿಯಾಪಟ್ಟಣ ತಾಲೂಕಿನ ಹಲವು ಶಾಸನಗಳಲ್ಲಿ ಕುಲೋತ್ತುಂಗ ಉದಯಾದಿತ್ಯ ಅಥವಾ ಒಡೆಯಾದಿತ್ಯ ಚಂಗಾಳ್ವನ ಉಲ್ಲೇಖವಿದೆ. ಪಿರಿಯಾಪಟ್ಟಣ ತಾಲೂಕಿನ ಜೋಗನಹಳ್ಳಿ ಶಾಸನದಲ್ಲಿ ವಿಷ್ಣುವರ್ಧನ ಮತ್ತು ಚಂಗಾಳ್ವರಿಗೆ ನಡೆದ ಯುದ್ಧದ ಉಲ್ಲೇಖವಿದೆ. ಕ್ರಿ.ಶ. ೧೧೫೫ರ ಮುದುಗೆರೆ(ಹಾಸನ ತಾಲೂಕು) ಶಾಸನದಲ್ಲಿ ಹೊಯ್ಸಳ ಸೇನಾನಿ ಚೋಕಿಮಯ್ಯನು ಚಂಗಾಳ್ವರನ್ನು ಸೋಲಿಸಿದ ಪ್ರಸ್ತಾಪವಿದೆ.

ಕ್ರಿ.ಶ. ೧೧೭೪ರ ಕಂಪಲಾಪುರದ ಕರ್ಕಂಠೇಶ್ವರ ದೇಗುಲ ಶಾಸನವು ಕೊಡಗಿನ ಪಾಲ್ಪರೆಯಲ್ಲಿ ಹೊಯ್ಸಳ ಬೆಟ್ಟರಸ ಹಾಗೂ ಕೊಡಗಿನ ಚಂಗಾಳ್ವ ಪೆಂಮ್ಮವೀರಪ್ಪನ ನಡುವೆ ನಡೆದ ಯುದ್ಧ ಸಂದರ್ಭದ ವಿವರಗಳನ್ನು ಒದಗಿಸುತ್ತದೆ.

ಈ ಶಾಸನದ ಸಾರಾಂಶವನ್ನು ಡಿ. ಎಸ್ ಕೃಷ್ಣಯ್ಯನವರು ಹೀಗೆ ವಿವರಿಸಿದ್ದಾರೆ. "ಮಾದೆಯ ನಾಯಕನೆಂಬುವನಿಗೆ ಕುಪ್ಪನಾಡೊಳಗೆ ಭೂಮಿಯನ್ನೂ ಅದಕ್ಕೆ ಸಲ್ಲಬೇಕಾದ ಕಂದಾಯದ ವಿನಾಯಿತಿಯನ್ನೂ ಹೊಯ್ಸಳ ರಾಜನು ಕರುಣಿಸಿ ಬೆಟ್ಟರಸ ದಂಡನಾಯಕನ ಸಂಗಡ ಪಾಲ್ಪರೆಗೆ ಕಳುಹಿಸಿಕೊಟ್ಟ ಸಂದರ್ಭದಲ್ಲಿ ಬೆಟ್ಟರಸ ದಂಡನಾಯಕನು ಪಾಲ್ಪರೆಗೆ ಹೋಗಿ ಚೆಂಗಾಳ್ವ ಮಹಾದೇವನನ್ನು ಕೊಂದು ಪಾಲ್ಪರೆ ಪಟ್ಟಣವನ್ನು ಕಟ್ಟಿ ಅಲ್ಲಿ ಮನೆಯನ್ನು ಸ್ಥಾಪಿಸಿ ಇರುತಿದ್ದಾಗ.......ಮುಂತಾದ ಎಲ್ಲಾ ನಾಡ ಕೊಡಗರು ಬೆಟ್ಟರಸನೊಡನೆ ಯುದ್ಧ ಮಾಡಿದುದರ ಪರಿಣಾಮವಾಗಿ ಆ ದೊಡ್ಡ ಪಾಲ್ಪರೆಯ ಯುದ್ಧದಲ್ಲಿ ಮಡಿದ ಮಾದೆಯ ನಾಯಕ ಮತ್ತು ಅವನ ಮಕ್ಕಳು ಮಾದಪ್ಪ ಮತ್ತು ಮಲ್ಲಪ್ಪ ಇವರ ಮಕ್ಕಳಿಗೆ ಹೊಂಗೆಯನ ಹಳ್ಳಿಯನ್ನೂ ಪಾಲ್ಪರೆಯ ಒಂದು ಹಳ್ಳಿಯನ್ನೂ ಬೆಟ್ಟರಸನು ಸೂರ್ಯ ಚಂದ್ರರು ಇರುವವರೆಗೆ ನೆತ್ತರು ಕೊಡಗಿಯಾಗಿ ಎಂದರೆ ಯುದ್ದದಲ್ಲಿ ರಕ್ತ ಸುರಿಸಿದವರಿಗೆ ಬಹುಮಾನವಾಗಿ ಕೊಡುವ ಭೂಮಿಯಾಗಿ ಕೊಟ್ಟನು."[೧೧] ಇಲ್ಲಿ ಉಕ್ತವಾಗಿರುವ 'ಎಲ್ಲಾ ನಾಡ ಕೊಡಗರು' ಎಂಬ ಪದವು ಶಾಸನವೊಂದರಲ್ಲಿ ಕೊಡಗಿನವರ ಬಗ್ಗೆ ಐತಿಹಾಸಿಕವಾಗಿ ಬಂದಿರುವ ಮೊದಲ ಉಲ್ಲೇಖವಾಗಿದೆ.

ಹೊಯ್ಸಳ ಎರಡನೆಯ ಬಲ್ಲಾಳನು ಕೊಡಗಿನಲ್ಲಿ ತಾನು ಆಳುತಿದ್ದ ಪ್ರದೇಶಗಳಲ್ಲಿ ಹೆಚ್ಚಿನ ಭಾಗವನ್ನು ಚಂಗಾಳ್ವರಿಗೆ ಆಡಳಿತ ನಡೆಸಲು ಬಿಟ್ಟುಕೊಟ್ಟನು. ಚಂಗಾಳ್ವರು ಹೊಯ್ಸಳರ ಮಾಂಡಲಿಕರಾಗಿದ್ದ ವಿಚಾರ ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಅರಕಲಗೋಡಿನ ೫೩ನೆಯ ಶಾಸನವು "ಹೊಯ್ಸಳ ರಾಜ ಸೋಮೇಶ್ವರನು ತನ್ನ ರಾಜಧಾನಿ ದ್ವಾರಸಮುದ್ರಕ್ಕೆ ಹೋಗುವಾಗ ಅರಕಲಗೋಡು ತಾಲೂಕಿನ ರಾಮನಾಥಪುರ ಮಾರ್ಗವಾಗಿ ಹೋದನು. ಆಗ ಚಂಗಾಳ್ವ ಅರಸರಾದ ಸೋಮದೇವ ಮತ್ತು ಬೊಪ್ಪದೇವನು ಆತನನ್ನು ರಾಮನಾಥಪುರದಲ್ಲಿ ಎದುರುಗೊಂಡು ಗೌರವಾತಿಥ್ಯ ಸಲ್ಲಿಸಿದರು."[೧೨] ಎಂಬ ವಿಚಾರವನ್ನು ತಿಳಿಸುತ್ತದೆ.

ಕ್ರಿ.ಶ. ೧೨೪೫ ರಿಂದ ಚೆಂಗಾಳ್ವರ ರಾಜಧಾನಿಯು ಈಗಿನ ಸಿದ್ದಾಪುರದ ಸಮೀಪ ಕಾವೇರಿ ನದಿಯ ದಕ್ಷಿಣ ಭಾಗದಲ್ಲಿರುವ ಕೊಡಗು ಶ್ರೀರಂಗಪಟ್ಟಣವಾಗಿತ್ತು ಎಂಬ ವಿಚಾರವೂ ಮೇಲಿನ ಶಾಸನದಿಂದ ತಿಳಿಯುತ್ತದೆ. ಚೆಂಗಾಳ್ವ ವಂಶದ ಇನ್ನಿಬ್ಬರ ಹೆಸರು ಕ್ರಿ.ಶ. ೧೨೮೦, ೧೨೯೬ ಮತ್ತು ೧೩೦೦ ನೆಯ ಇಸವಿಯ ಮೂರು ಶಾಸನಗಳಲ್ಲಿ ಕಂಡುಬರುತ್ತದೆ. ಈ ಶಾಸನಗಳಲ್ಲಿ ಮಲ್ಲಿದೇವ ಮತ್ತು ಅವನ ಮಗ ಹರಿಹರದೇವನ ಹೆಸರುಗಳು ಕಾಣಬರುತ್ತವೆ. ಕ್ರಿ. ಶ. ೧೩೦೦ರ ಸುಮಾರಿಗೆ ಎಂದರೆ ಹೊಯ್ಸಳ ಮೂರನೇ ಬಲ್ಲಾಳ(೧೨೯೨-೧೩೪೩)ನ ಕಾಲಕ್ಕೆ ಚಂಗಾಳ್ವರ ಆಳ್ವಿಕೆ ಕೊನೆಗೊಂಡು ಇಡೀ ಕೊಡಗು

ಹೊಯ್ಸಳರ ವಶವಾಯಿತೆಂದು ಭಾವಿಸಬಹುದು. ಮುಂದಿನ ಚಂಗ್ವಾರು ೧೫೦೦ ರ ನಂತರ ಅಧಿಕಾರಕ್ಕೆ ಬಂದಾಗ ಅವರ ವಂಶ ವಿವರಗಳಲ್ಲಿ ಈ ವಂಶದ ಯಾವುದೇ ಹಿಂದಿನ ಅರಸರು ಉತ್ತರಾಧಿಕಾರಗಳಾಗಿದ್ದ ಸುಳಿವು ಕಾಣಿಸುವುದಿಲ್ಲ.

**೫. ನಂತರ(ತರುವಾಯ)ದ ಚಂಗಾಳ್ವರು**

ಕೊಡಗಿನಲ್ಲಿ ನಂತರದ ಚಂಗಾಳ್ವರ ಆಳ್ವಿಕೆ ಹದಿನೈದನೆಯ ಶತಮಾನದಲ್ಲಿ ಪ್ರಾರಂಭವಾಯಿತು. ಕ್ರಿ. ಶ. ೧೫೦೩ರ ಹಿರೇಮಳಲಿ(ಪಿರಿಯಾಪಟ್ಟಣ ತಾಲೂಕು) ಶಾಸನವು ನಂಜರಾಜನ ಸೋದರ ಮಹಾದೇವ ಚಂಗಾಳ್ವನ ವಿಚಾರವನ್ನು ತಿಳಿಸುತ್ತದೆ. ಆಗ ಆಳ್ವಿಕೆ ನಡೆಸುತ್ತಿದ್ದವನು ಮಹಾದೇವನ ಅಣ್ಣ ನಂಜರಾಜ. ಇವರಿಬ್ಬರೂ ಪಿರಿಯ ಎಂಬ ದೊರೆಯ ಮಕ್ಕಳು ಎಂಬ ವಿಚಾರವನ್ನು ಈ ಶಾಸನವು ತಿಳಿಸುತ್ತದೆ. ಶಾಸನಗಳಲ್ಲಿ ನಾಗರಾಜ, ರಂಗರಾಜ, ಪೆರಿಯಣ್ಣರಾಜ, ನಂಜರಾಜ(೧೫೦೨-೩೩) ಮುಂತಾದ ಹನ್ನೆರಡು ರಾಜರ ಹೆಸರುಗಳು ಉಕ್ತವಾಗಿವೆ. ಇವರಲ್ಲಿ ಮೊದಲ ಮೂರು ಅರಸರು ಕೊಡಗು ಶ್ರೀರಂಗಪಟ್ಟಣದಲ್ಲಿಯೇ ಆಳಿದರು. ನಾಲ್ಕನೆಯ ಅರಸ ನಂಜರಾಜನು ತನ್ನ ಹೆಸರಿನಲ್ಲಿ ನಂಜರಾಜಪಟ್ಟಣವನ್ನು ಕಟ್ಟಿಸಿ ಅದನ್ನು ತನ್ನ ಹೊಸ ರಾಜಧಾನಿಯಾಗಿ ಮಾಡಿಕೊಂಡನು.

"ಚಂಗಾಳ್ವರ ಇತಿವೃತ್ತವನ್ನು ಗಮನಿಸುವಲ್ಲಿ ಚಂಗಾಳ್ವ ನಂಜರಾಜನು 'ಕೊಡಗು ಶ್ರೀರಂಗಪಟ್ಟಣ'ದ ಬದಲು 'ನಂಜರಾಯಪಟ್ಟಣ'ವೆಂಬ ಹೊಸ ರಾಜಧಾನಿ ಮಾಡಿಕೊಂಡ ಕಾರಣ ಕ್ರಿ.ಶ. ೧೫೦೨ರ ಈ ನಂಜರಾಜನಿಂದ 'ನಂತರದ ಚಂಗಾಳ್ವ ವಂಶ' ಚಾಲ್ತಿಗೆ ಬಂತೆನ್ನಬೇಕು."[೧೩] ನಂಜರಾಜನ ನಂತರ ಆಳಿದ ಶ್ರೀಕಂಠರಾಜನು ಪ್ರಮುಖ ಅರಸನಾಗಿದ್ದನು. ಹುಣಸೂರಿನ ೨೧ನೆಯ ಶಾಸನದಲ್ಲಿ ಈತನ ಅನೇಕ ಬಿರುದಾವಳಿಗಳ ಉಲ್ಲೇಖವಿದೆ. ಈತನ ನಂತರ ವೀರರಾಜ ಒಡೆಯರು, ಪೆರಿಯರಾಜದೇವ ರುದ್ರಗಣ, ನಂಜುಂಡದೇವ, ನಂಜರಾಜದೇವ, ಕೃಷ್ಣರಾಜದೇವ ಹಾಗೂ ವೀರರಾಜರು ವಿಜಯನಗರದ ಅರಸರ ಮಾಂಡಲಿಕರಾಗಿ ಆಳ್ವಿಕೆ ನಡೆಸಿದರು. ಕ್ರಿ.ಶ. ೧೬೪೪ರಲ್ಲಿ ಮೈಸೂರಿನ ಕಂಠೀರವ ನರಸರಾಜ ಒಡೆಯರು ವೀರರಾಜನನ್ನು ಸೋಲಿಸಿ ಪೆರಿಯಾಪಟ್ಟಣವನ್ನು ವಶಪಡಿಸಿಕೊಂಡಿತು. ಆ ಮೂಲಕ ಕೊಡಗಿನಲ್ಲಿ ನಂತರದ ಚಂಗಾಳ್ವರ ಆಳ್ವಿಕೆ ಕೊನೆಗೊಂಡಿತು. ಚಂಗಾಳ್ವರ ರಾಜ್ಯ ಕೊಡಗಿನ ಸೋಮವಾರಪೇಟೆ ತಾಲೂಕಿನ ಭಾಗಗಳ ಜೊತೆಗೆ ಪಿರಿಯಾಪಟ್ಟನ ತಾಲೂಕಿನಲ್ಲಿ ಹೆಚ್ಚು ವ್ಯಾಪಕವಾಗಿತ್ತು. ಕನ್ನಡದ ಕವಿಗಳಾದ ನಂಜುಂಡ, ಮಂಗರಸ ಹಾಗೂ ದೇವಪ್ಪ ಕವಿ ಇವರಿಂದ ಆಶ್ರಯ ಪಡೆದವರು. ಚಾಲುಕ್ಯರು ಕೊಡಗಿನಲ್ಲಿ ನೇರವಾಗಿ ಆಳ್ವಿಕೆ ನಡೆಸಲಿಲ್ಲ. ಆದರೆ ಅವರು ಚೋಳರು ಹಾಗೂ ಅವರ

ಮಾಂಡಲಿಕರಾದ ಚಂಗಾಳ್ವ ಮತ್ತು ಕೊಂಗಾಳ್ವರಿಂದ ಕಪ್ಪಕಾಣಿಕೆ ಪಡೆದುಕೊಳ್ಳುತ್ತಿದ್ದರು.

**೬. ನಾಯಕರ ಆಳ್ವಿಕೆಯಲ್ಲಿ ಕೊಡಗು**

ಹದಿನಾಲ್ಕನೆಯ ಶತಮಾನದಲ್ಲಿ ನಾಯಕರೆಂದು ಕರೆಯಲ್ಪಡುವ ಕೆಲವು ಸಣ್ಣ ಪುಟ್ಟ ಸೇನಾನಾಯಕರು ಕೊಡಗಿನ ವಿವಿಧ ಭಾಗಗಳಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಹೊಯ್ಸಳರ ಪತನದ ನಂತರ ದಣ್ಣಾಯಕ ಅಥವಾ ದಂಡನಾಯಕರು ದಕ್ಷಿಣ ಕೊಡಗಿನ ಶ್ರೀಮಂಗಲನಾಡನ್ನು ಆಳುತ್ತಿದ್ದರು. ಮೈಸೂರಿನ ದಕ್ಷಿಣ ಭಾಗದಲ್ಲಿರುವ ಗುಂಡ್ಲುಪೇಟೆಯ ತೆರಕಣಾಂಬಿ ಅವರ ರಾಜಧಾನಿಯಾಗಿತ್ತು. ಹದಿನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿ ಮೇಲ್ಪುಂಡಿ ಕುನ್ನಿ ಅರಸನು ಕೊಡಗಿನ ಪಶ್ಚಿಮ ಭಾಗದಲ್ಲಿರುವ ತಾವುನಾಡು ಹಾಗು ಪಾಲೂರು ಕುಯ್ಯಂಗೇರಿನಾಡನ್ನು ಆಳುತ್ತಿದ್ದನು.

**೭. ವಿಜಯನಗರ ಅರಸರು**

ಹದಿನಾಲ್ಕನೆಯ ಶತಮಾನದಲ್ಲಿ ಕೊಡಗನ್ನು ಆಳುತ್ತಿದ್ದ ನಾಯಕರು ವಿಜಯನಗರ ಅರಸರ ಪ್ರಭಾವಕ್ಕೆ ಒಳಗಾಗಿದ್ದರು. ಕ್ರಿ.ಶ. ೧೩೯೦ರ ಮುಳ್ಳೂರು(ಶನಿವಾರಸಂತೆ) ಶಾಸನವು ವಿಜಯನಗರ ಅರಸ ಎರಡನೆಯ ಹರಿಹರನು ನೀಡಿದ ಕೊಡುಗೆಯನ್ನು ಉಲ್ಲೇಖಿಸುತ್ತದೆ. ಕೊಡಗಿನ ಉತ್ತರ ಭಾಗ ಹಾಗೂ ಹಾಸನ ಜಿಲ್ಲೆಯ ದಕ್ಷಿಣ ಭಾಗವನ್ನು ಆಳುತ್ತಿದ್ದ ಬೇಲೂರು ನಾಯಕರು ವಿಜಯನಗರದ ಕೃಷ್ಣದೇವರಾಯನ ಮಾಂಡಲಿಕರಾಗಿದ್ದರು. ನಂತರದ ಚಂಗಾಳ್ವರೂ ವಿಜಯನಗರ ಅರಸರ ಮಾಂಡಲಿಕರಾಗಿದ್ದರು.

**೮. ಕೊಡಗಿನ ನಾಯಕರು**

ನಂಜರಾಯ ಪಟ್ಟಣದ ಚಂಗಾಳ್ವರು ಕೊಡಗಿನ ಪೂರ್ವದ ಗಡಿಸೀಮೆಯನ್ನು, ಪೆರಿಯಾಪಟ್ಟಣ ಸೀಮೆಯನ್ನು ಆಳುತ್ತಿದ್ದಾಗ ಕೊಡಗಿನ ಉತ್ತರ ಭಾಗವನ್ನು ಹೊರತುಪಡಿಸಿ ಇತರ ಎಲ್ಲಾ ನಾಡುಗಳನ್ನು ನಾಯಕರು ಆಳುತ್ತಿದ್ದರು. "ದಖನ್ನಿನ ಚರಿತ್ರಕಾರನಾದ ಫೆರಿಸ್ತನು ಹದಿನಾರನೆಯ ಶತಮಾನದ ಕೊನೆಯಲ್ಲಿ ಕೊಡಗನ್ನು ನಾಯಕರು ಆಳುತ್ತಿದ್ದರೆಂದೂ ಈ ನಾಯಕರು ವಿಜಯನಗರದ ಅಧಿರಾಜತ್ವವನ್ನು ಒಪ್ಪಿಕೊಂಡಿದ್ದರೆಂದೂ ಬರೆಯುತ್ತಾನೆ."[೧೪] ಇವರ ಆಳ್ವಿಕೆಯ ಅವಧಿಯಲ್ಲಿ ಕೊಡಗನ್ನು ಹನ್ನೆರಡು ಕೊಂಬು ಹಾಗೂ ಮೂವತ್ತೈದು ನಾಡುಗಳಾಗಿ ವಿಭಾಗಿಸಲಾಗಿತ್ತು. ಕಹಳೆ ಕೊಂಬನ್ನು ಊದಿದಾಗ ಅದು ಸುಮಾರು ಐದು ಮೈಲುಗಳವರೆಗೆ ಕೇಳುತಿತ್ತು. ಅಲ್ಲಿಯವರೆಗೆ ಒಂದು ಕೊಂಬು ಎಂದು ವಿಭಾಗಿಸಲಾಗುತ್ತಿತ್ತು. ಕೊಂಬು ಎಂಬುದು ಆ ಕಾಲದ ಆಡಳಿತಾತ್ಮಕ ವಿಭಾಗವಾಗಿದ್ದು; ಇವುಗಳ ಮೇರೆಗಳಾಗಿ ಆಳವಾದ

ಮತ್ತು ಅಗಲವಾದ ಕಡಂಗ್‌ಗಳೆಂಬ ಕಂದಕಗಳು ಇದ್ದವು. ಇವರ ನಂತರ ಆಳಿದ ಹಾಲೇರಿ ಅರಸರೂ ಈ ಕಡಂಗ್‌ಗಳನ್ನು ಅಚ್ಚುಕಟ್ಟಾಗಿ ಇಟ್ಟುಕೊಂಡಿದ್ದರು. ಈ ಕಡಂಗ್‌ಗಳು ಇಂದಿಗೂ ಕೊಡಗಿನ ಎಲ್ಲಾ ಭಾಗಗಳಲ್ಲಿ ಕಂಡುಬರುತ್ತವೆ. ಕೆಲವೆಡೆಗಳಲ್ಲಿ ಈ ಕೊಂಬುಗಳ ಮಧ್ಯೆ ದೊಡ್ಡ ಕಾಡುಗಳಿದ್ದು ಅವು ಕೊಂಬುಗಳ ಮೇರೆಯಾಗಿರುತಿದ್ದವು. "ಗಂಗರ ಕ್ರಿ.ಶ. ೮೮೮ ಬಿಳಿಯೂರು ಶಾಸನದಲ್ಲಿಯೆ 'ಬನಗದ್ದೆ'ಯಾದ ರಾಜರ ಸ್ವಂತ ಕೃಷಿಭೂಮಿಯಾದ 'ಪೆಣ್ಣೆ'(=ಪನ್ಯ) ಹಾಗೂ 'ಕಡಂಗ'ದ ಪ್ರಸ್ತಾಪವಿದೆ. ಅಂದರೆ ನಾಡು, ಕಡಂಗ, ಗರೆಕಾಡುಗಳ ವ್ಯವಸ್ಥೆ ಗಂಗರ ನಂತರ ಚಂಗಾಳ್ವರಲ್ಲಿಯೂ ಮುಂದುವರಿದು ಹಾಲೇರಿ ಅರಸರಿಗೆ ಪರಂಪರೆಯ ನಿರ್ದೇಶನ ನೀಡಿದಂತಿದೆ. ಆದರೂ ಹಾಲೇರಿ ಅರಸರು ನಾಡವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಪುನರ್ ರೂಪಿಸಿದರು."[೧೫]

"ಕೊಡಗಿನಲ್ಲಿ ಆಳಿದ ನಾಯಕರಲ್ಲಿ ಕೆಲವರ ಹೆಸರುಗಳು ಮಾತ್ರ ಜನರ ನೆನಪಿನಲ್ಲಿ ಉಳಿದು ಅನಂತರ ಬರೆಯಲ್ಪಟ್ಟ ಚರಿತ್ರೆಯಲ್ಲಿ ಉಲ್ಲೇಖವಾಗಿವೆ. ಹೀಗೆ ಜನರ ನೆನಪಿನಲ್ಲಿ ಉಳಿದವರಲ್ಲಿ ಕಿಗ್ಗಟ್ಟುನಾಡಿನ ಅಂಜಿಗೇರಿ ನಾಡಿನ ಅಚ್ಚುನಾಯಕನೂ ತಾವುನಾಡಿನ ಕರ್ಣಂಬಾಹುವೂ ಪ್ರಸಿದ್ಧರಾಗಿದ್ದರು. ಬೆಪ್ಪುನಾಡಿನಲ್ಲಿಯೂ ಆಗ ನಾಯಕರಿದ್ದರು. ಅವರ ಹೆಸರು ಗೊತ್ತಿಲ್ಲ. ಈ ನಾಯಕರ ಸಂತತಿಯವನು ಹಾಲೇರಿ ದೊಡ್ಡವೀರಪ್ಪನ ಕಾಲದಲ್ಲಿ ಎಂದರೆ ಹದಿನೇಳನೆಯ ಶತಮಾನದ ಅಂತ್ಯದಲ್ಲಿ ದೊಡ್ಡವೀರಪ್ಪನ ವಿರೋಧವಾಗಿ ಮಲೆಯಾಳದ ಕೋಟಂಗಡಿ ವೀರವರ್ಮರಾಜನು ಕೊಡಗಿಗೆ ದಂಡೆತ್ತಿ ಬರುವಂತೆ ಪ್ರೋತ್ಸಾಹಿಸಿದ ಉತ್ತನಾಯಕನು. ಈ ನಾಯಕನ ಸಂತತಿಯವರೇ, ಈಗಿನ ನಾಯಕಂಡ ಮನೆಯವರು ಅನ್ನುತ್ತಾರೆ. ಕಡಿಯತ್ತುನಾಡಿನ ಬಾವಲಿಯಲ್ಲಿ ಕೊಳ್ಳಕೊಂಗಿ ನಾಯಕನೆಂಬುವನು ಇದ್ದನೆಂದು ಹೇಳಿಕೆಯಿದೆ. ಕಿಗ್ಗಟ್ಟುನಾಡಿನಲ್ಲಿ ಅಚ್ಚುನಾಯಕನಿಗೆ ಹಿಂದೆ ತಾವಳಗೇರಿಯಲ್ಲಿ ಕೈಬಿಲಿ ಮನೆಯವರೂ ಹತ್ತುಗಟ್ಟುನಾಡಿನಲ್ಲಿ ಮಾಚಂಗಳ ಮನೆಯವರೂ, ಮತ್ತೂರಿನಲ್ಲಿ ಮುಕ್ಕಾಟಿರ ಮನೆಯವರೂ ಒಡೆಯರಾಗಿದ್ದರೆಂದು ದಂತಕಥೆಯಿದೆ."[೧೬]

ಇವರಲ್ಲದೆ "ಹಾಲೇರಿ ನಾಡಿನಲ್ಲಿ ಸೋಮಶೇಖರನಾಯಕ, ಸಿದ್ದಾಪುರ ನಾಡಿನಲ್ಲಿ ಚೆನ್ನಯ್ಯನಾಯಕ, ಎಡೆನಾಲ್ಕು ನಾಡಿನಲ್ಲಿ ಮುಕ್ಕಾಟಿನಾಯಕರು ಇದ್ದರು."[೧೭] ಎಂದು ಐ. ಮಾ. ಮುತ್ತಣ್ಣನವರ ಅಭಿಪ್ರಾಯವಾಗಿದೆ. "ಇವರ ಜೊತೆಗೆ ತಾವಳಗೇರಿಯಲ್ಲಿ ಕೈಬಿಲಿರ ಬಿದ್ದಯ್ಯನಾಯಕ ಎಂಬುವವರಿದ್ದರು. ಹಾಲೇರಿ ಅರಸ ಮುದ್ದುರಾಜನ ಕಾಲಕ್ಕೆ ಬೆಪ್ಪುನಾಡಿನಲ್ಲಿ ಉತ್ತುನಾಯಕನಿದ್ದ. ಹಾಲೇರಿನಾಡಿನ ಸೋಮಶೇಖರ ನಾಯಕ ಬಹುಶಃ ಚಂಗಾಳ್ವರ ವಂಶದ ಪ್ರತಿನಿಧಿಯಾಗಿದ್ದು, ವೀರಶೈವನಿರಬೇಕೆನಿಸುತ್ತದೆ. ಹಾಲೇರಿ ವಂಶದ ಮೊದಲರಸ

ಬಂದಾಗ ಆಸರೆ ನೀಡಿದ ನಾಯಕನಿವನು. ಕಿಗ್ಗಟ್ಟುನಾಡಿನಲ್ಲಿ ಆಗ ಇದ್ದವನು ಕಟ್ಟೆಮನೆ ಚಿಟ್ಟಪ್ಪನಾಯಕನೇ ವಿನಾ ಅವನ ಮಗ ಅಚ್ಚುನಾಯಕನಲ್ಲ. ಈ ಅಚ್ಚುನಾಯಕನು ಪಿರಿಯಾಪಟ್ಟಣದ ನಂಜುಂಡ ಅರಸುವಿನಿಂದ ಸಾಕಲ್ಪಟ್ಟು ಕೊಡಗಿಗೆ ಬಂದದ್ದು ಮುದ್ದುರಾಜನ ಕಾಲದಲ್ಲಿ."[೧೮] ಎಂಬ ಅಭಿಪ್ರಾಯವಿದೆ. "ಮನೆಪೆದದ ದೃಷ್ಟಿಯಿಂದ 'ಕಟ್ಟೆಮನೆ' ಗೌಡ ಜನಾಂಗದ್ದೆನಿಸುತ್ತದೆ. ಚಿಟ್ಟಪ್ಪನಾಯಕನ ಮಗಳು, ಅಚ್ಚುನಾಯಕನ ಸೋದರಿಯನ್ನು ನಂಜುಂಡ ಅರಸು ಮದುವೆ ಆಗಿದ್ದನೆನ್ನಲಾಗಿದೆ."[೧೯] ಆದರೆ ಕಿಗ್ಗಟ್ಟುನಾಡಿನಲ್ಲಿ ಕಟ್ಟೇರ ಮನೆಪೆದ(ಕುಟುಂಬದ ಹೆಸರು) ಹೊಂದಿರುವ ಕೊಡವ ಸಮುದಾಯದವರು ಇದ್ದಾರೆ ಎಂಬುದು ಇಲ್ಲಿ ಗಮನಿಸಬೇಕಾದುದು. ಚಿಟ್ಟಪ್ಪನಾಯಕನ ನೆರೆಯಲ್ಲಿ ಮಾಚಂಗಳ ನಾಯಕ ಹಾಗು ಗುರುಕಾರೋಣನೆನಿಸಿದ ದೇವಯ್ಯ ನಾಯಕರಿದ್ದರು. ಇವರೊಡನೆ ಕುಟುಂಬ ಸಂಬಂಧ ಇತ್ತು ಎನ್ನಲಾಗುತ್ತದೆ. ಮುಕ್ಕಾಟಿ ನಾಯಕನ ಹೆಸರು ಶಂಭೈಯನಾಯಕ. ಈತ ಕೇರಳದ ಬಯನಾಡು(ವೈನಾಡು) ಕಡೆಯಿಂದ ಬಂದವನು ಎನ್ನುತ್ತಾರೆ. ತಾವುನಾಡಿನ ಕರ್ಣಂಬಾಹು ಮೇಲ್ಪುಂಡಿ ಕುನ್ನಿ ಅರಸನ ವಂಶಿಕನಿರಬಹುದು. ಹಾಲೇರಿ ಅರಸರ ಕಾಲದಲ್ಲಿ ಅವರ ಪರವಾಗಿ ಇವನನ್ನು ಮಣಿಸಿದ ಕಲ್ಯಾಟಜ್ಜಪ್ಪ ನಾಪೋಕ್ಲು ನಾಡಿನ ಕುಂಜಿಲದವನು. ತಾವಳಗೇರಿಯ ಕೈಬಿಲಿರ ಬಿದ್ದಯ್ಯ ನಾಯಕನ ಆಳ್ವಿಕೆಯ ಸರಹದ್ದು ಕೋಣಗೇರಿ ಗ್ರಾಮದಿಂದ ವೈನಾಡಿನವರೆಗೆ ವ್ಯಾಪಿಸಿತ್ತು.

ಹಾಲೇರಿ ಅರಸರಿಗಿಂತ ಮುನ್ನ ಅಮ್ಮತ್ತಿನಾಡಿನಲ್ಲಿ ಕುಲ್ಲಚ್ಚ ಚೋಂದು ಎಂಬ ನಾಯಕನಿದ್ದನು. ಇವನು ಕಿಗ್ಗಟ್ಟುನಾಡಿಗೆ ಅಡಕವಾಗಿದ್ದ ಹತ್ತುಗಟ್ಟುನಾಡಿನ ಮೇಲೆ ವಿಜಯಯಾತ್ರೆ ಹೋಗಿ ಚೋದಿಪಣ(ಗೆದ್ದವನಿಗೆ ಸೋತವನು ಕೊಡುವ ಹಣ) ಪಡೆದನು. ಮುಂದೆ ರುದ್ರುಗುಪ್ಪೆ, ಮಲೆತಿರಿಕೆ, ಪೆಮ್ಮತ್ತ್‌ಮಾನಿ, ಪಾಲೂರು, ಪಾಡಿ ಇತ್ಯಾದಿ ದೇವಾಲಯಗಳಿಂದಲೂ ಚೋದಿಪಣ ಪಡೆದನು. ಆದರೆ ಕಡಿಯತ್ತ್‌ನಾಡಿನ ಅರಪಟ್ಟ್ ಭಗವತಿ ದೇವಾಲಯಕ್ಕೆ ಹೋದಾಗ ಅಲ್ಲಿ ಕೆಯ್ಯಂದಿರ ಅಪ್ಪಯ್ಯ ಎಂಬ ವೀರನು ಈತನನ್ನು ಯುಕ್ತಿಯಿಂದ ಸೋಲಿಸಿದನು ಎಂಬ ವಿಚಾರಗಳು ಕೊಡವ ಜನಪದ ಗೀತೆಗಳಲ್ಲಿ ಉಲ್ಲೇಖಗೊಂಡಿವೆ. ಆದರೆ ಈ ನಾಯಕರ ನಡುವಿನ ಅಂತಃಕಲಹ ಹಾಗೂ ಮೇಲಾಟಗಳಿಂದ ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಒಂದು ರೀತಿಯ ಅನಾಯಕತ್ವ ಉಂಟಾಗಿತ್ತು.

**೯. ಬೇಲೂರು ನಾಯಕರು**

ಕೊಡಗಿನ ನಾಯಕರು ಕೊಡಗಿನ ಪಶ್ಚಿಮ ಹಾಗೂ ದಕ್ಷಿಣದ ನಾಡುಗಳನ್ನು ಆಳುತ್ತಿದ್ದ ಸಂದರ್ಭದಲ್ಲಿ ಕೊಡಗಿನ ಉತ್ತರ ಭಾಗದ ಬಲಹ, ನಿಡತ ಮತ್ತು ಕೊಡಲಿ ಹೋಬಳಿಗಳು ಹಾಸನ ಜಿಲ್ಲೆಯ ಐಗೂರಿನಲ್ಲಿ ಆಳುತ್ತಿದ್ದ 'ಬಲಂ'

ಪ್ರಾಂತ್ಯದ ನಾಯಕರ ಹಿಡಿತದಲ್ಲಿದ್ದವು. ಬೇಲೂರು ನಾಯಕರೆಂದೂ ಕರೆಯಲ್ಪಡುವ ಇವರಿಗೆ ಸಂಬಂಧಪಟ್ಟ ಮೂರು ಶಾಸನಗಳು ಕೊಡಗಿನ ಉತ್ತರ ಭಾಗದ ಹೋಬಳಿಗಳಲ್ಲಿ ದೊರೆತಿವೆ. ಅಂದಿನ ದಿನಗಳಲ್ಲಿ ನಿಡತ, ಬಿಲಹ ಮತ್ತು ಕೊಡಲಿ ಹೋಬಳಿಗಳ ಪ್ರದೇಶವನ್ನು ಏಳುಸಾವಿರ ಸೀಮೆ ಎಂದು ಕರೆಯಲಾಗುತ್ತಿತ್ತು. ಇದು ವಾರ್ಷಿಕವಾಗಿ ಏಳು ಸಾವಿರ ವರಹಗಳ ವಾರ್ಷಿಕ ಆದಾಯ ಗಳಿಸುತ್ತಿತ್ತು. ಎಂಬ ವಿಚಾರಗಳು ಈ ಶಾಸನಗಳಿಂದ ತಿಳಿಯುತ್ತವೆ.

**೧೦. ಹಾಲೇರಿ ಅರಸರು**

ಕ್ರಿ. ಶ. ೧೬೦೦ ರಿಂದ ೧೮೩೪ ರವರೆಗೆ ಕೊಡಗು ಹಾಲೇರಿ ಅರಸರ ಆಳ್ವಿಕೆಗೆ ಒಳಪಟ್ಟಿತು. ಈ ನಡುವೆ ೧೭೮೦ ರಿಂದ ೧೭೮೯ ರವರೆಗೆ ಮೈಸೂರಿನ ಹೈದರಾಲಿ ಹಾಗೂ ಟಿಪ್ಪುಸುಲ್ತಾನನ ವಶದಲ್ಲಿತ್ತು. ಹಾಲೇರಿ ಅರಸರ ಆಳ್ವಿಕೆಯಲ್ಲಿ ಕೊಡಗು ಮೊಟ್ಟಮೊದಲ ಬಾರಿಗೆ ಏಕಚಕ್ರಾಧಿಪತ್ಯಕ್ಕೆ ಒಳಪಟ್ಟಿತ್ತು. ಕೊಡಗನ್ನು ಎರಡು ಶತಮಾನಗಳವರೆಗೆ ಆಳಿದ ಹಾಲೇರಿ ಅರಸರ ಚರಿತ್ರೆಯಲ್ಲಿ ಬಹು ಭಾಗವು 'ರಾಜೇಂದ್ರನಾಮೆ' ಎಂಬ ಕೃತಿಯಲ್ಲಿ ಬರೆಯಲ್ಪಟ್ಟಿದೆ. ಕ್ರಿ. ಶ. ೧೭೮೯ ರಿಂದ ೧೮೦೯ ರವರೆಗೆ ಆಳ್ವಿಕೆ ನಡೆಸಿದ ದೊಡ್ಡ ವೀರರಾಜೇಂದ್ರ ಒಡೆಯನು ಬರೆಸಿದ ಈ ಕೃತಿಯಲ್ಲಿ ೧೬೦೦ ರಿಂದ ೧೮೦೭ ರವರೆಗಿನ ಕೊಡಗಿನ ಚರಿತ್ರೆಯಿದೆ. ಈ ಕೃತಿಯಲ್ಲಿ ಹಲವು ಒಳಸಂಗತಿಗಳು ದಾಖಲಾಗಿಲ್ಲವೆಂಬ ಆರೋಪವಿದೆ. ಆದರೂ ಕೊಡಗಿನ ಅರಸರ ಕಾಲದ ರಾಜಕೀಯ ಸ್ಥಿಗತಿಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ.

ವಿಜಯನಗರ ಸಾಮ್ರಾಜ್ಯದ ಪತನವಾದಾಗ ಆಶ್ರಿತ ರಾಜರೆಲ್ಲಾ ಸ್ವತಂತ್ರರಾದರು. ಆಗ ಕೊಡಗಿನ ನಾಯಕರು ಸ್ವಾತಂತ್ರ್ಯವನ್ನು ಘೋಷಿಸಿದರು. ಪ್ರಬಲರಾದವರು ದುರ್ಬಲರನ್ನು ಸೋಲಿಸಿ ಅವರ ಪ್ರಾಂತ್ಯಗಳನ್ನು ವಶಪಡಿಸಿಕೊಂಡರು. ಇವರ ಪೈಕಿ ಕಿಗ್ಗಟ್ಟುನಾಡಿನ ಅಚ್ಚುನಾಯಕ, ಬೆಪ್ಪುನಾಡಿನ ಉತ್ತನಾಯಕ, ಪಾಡಿ ನಾಲ್ಕುನಾಡಿನ ಕರ್ಣಂಬಾಹು ಪ್ರಬಲರಾಗಿದ್ದರು. ನಾಯಕರ ಒಳಜಗಳಗಳಿಂದ ಕ್ಷೋಭೆಗೊಂಡ ಕೊಡಗನ್ನು ಸುಲಭವಾಗಿ ವಶಪಡಿಸಿಕೊಳ್ಳಬಹುದೆಂಬ ಉದ್ದೇಶದಿಂದ ಬಿದನೂರು ಅಥವಾ ಇಕ್ಕೇರಿ ಪ್ರಾಂತ್ಯದ ವೀರರಾಜ(ವೀರಪ್ಪ ನಾಯಕ) ಎಂಬ ರಾಜಕುಮಾರನು ಜಂಗಮ ವೇಷ ಧರಿಸಿ ಮಡಿಕೇರಿಯ ಸಮೀಪದ ಹಾಲೇರಿ ಎಂಬಲ್ಲಿಗೆ ಬಂದು ನೆಲೆಸಿದನು. ಪಾಠ ಹೇಳುತ್ತಾ, ನ್ಯಾಯ ತೀರ್ಮಾನ ಕಟ್ಟೆಯಲ್ಲಿ ಪ್ರಮುಖನಾಗಿದ್ದುಕೊಂಡು ಆ ಪ್ರದೇಶದ ಜನರನ್ನು ಹಿಂಬಾಲಕರನ್ನಾಗಿಸಿಕೊಂಡನು. ಹಿಂಬಾಲಕರ ಸಂಖ್ಯೆ ಹೆಚ್ಚಾಯಿತು. ಅವನ ಚಾವಡಿಯು ದೊಡ್ಡದಾಗಿ ಚಾವಡಿ ಕಾಯುವವರು ಚಾವಡಿಕಾರರಾದರು. ತನ್ನ ಸೈನ್ಯವನ್ನು ಪ್ರಬಲಗೊಳಿಸಿಕೊಂಡ ವೀರರಾಜ

ಕೊಡಗಿನ ನಾಯಕರ ಮೇಲೆ ತನ್ನ ಅಧಿಪತ್ಯವನ್ನು ಹೇರಿದನು. ಕೊನೆಗೆ ತಾನೇ ಕೊಡಗಿನ ಅರಸನಾದನು. ಈ ರೀತಿ ಕೊಡಗಿನಲ್ಲಿ ಲಿಂಗಾಯಿತ ಒಡೆಯರ ಆಡಳಿತ ಪ್ರಾರಂಭವಾಯಿತು. ಅವರು ಹಾಲೇರಿ ಪ್ರದೇಶದಿಂದ ರಾಜ್ಯಭಾರ ಮಾಡಿದುದರಿಂದ ಹಾಲೇರಿ ವಂಶದವರೆಂದು ಜನಪ್ರಿಯರಾದರು. ಕೊಡಗಿನ ಹಾಲೇರಿ ವಂಶದ ರಾಜರಲ್ಲಿ ಮೊದಲನೆಯವನು ವೀರರಾಜ. ಅಪ್ಪಾಜಿರಾಜ ಹಾಗೂ ನಂಜುಂಡರಸು ಈತನ ಮಕ್ಕಳು.

**ಅ. ಮುದ್ದುರಾಜ**

ಅಪ್ಪಾಜಿರಾಜನ ಪುತ್ರ ಮುದ್ದುರಾಜ. ೧೬೩೩ರಲ್ಲಿ ಅಧಿಕಾರಕ್ಕೆ ಬಂದ ಇವನು ಮೈಸೂರಿನ ಕಂಠೀರವ ನರಸರಾಜ ಒಡೆಯರ ಸಮಕಾಲೀನ. ಕ್ರಿ. ಶ. ೧೬೮೧ರಲ್ಲಿ ಮಡಿಕೇರಿಯಲ್ಲಿ ಅರಮನೆ, ವೀರಭದ್ರನ ಗುಡಿ ಹಾಗೂ ಮಣ್ಣಿನ ಕೋಟೆಯನ್ನು ಕಟ್ಟಿಸಿದನು. ಹಾಲೇರಿಯಿಂದ ಮಡಿಕೇರಿಗೆ ರಾಜಧಾನಿಯನ್ನು ಬದಲಾಯಿಸಿದನು. ದೊಡ್ಡವೀರಪ್ಪನಿಗೆ ಯುವರಾಜ ಪಟ್ಟ ಕಟ್ಟಿ ಮಡಿಕೇರಿಯಲ್ಲಿ ಇರಿಸಿದನು. ಎರಡನೆಯವನಾದ ಅಪ್ಪಾಜಿರಾಜನನ್ನು ಹಾಲೇರಿ ಆಡಳಿತಕ್ಕೆ ನಿಯುಕ್ತಿಗೊಳಿಸಿದನು. ಮೂರನೆಯವನಾದ ನಂದರಾಜನನ್ನು ಹೊರಮಲೆನಾಡು(ಗಾಳಿಬೀಡು)ವಿನಲ್ಲಿ ಅರಮನೆ ಕಟ್ಟಿ ಇರಿಸಿದನು. ಕ್ರಿ.ಶ. ೧೬೮೭ರಲ್ಲಿ ಮುದ್ದುರಾಜನು ಮರಣ ಹೊಂದಿದನು.

**ಆ. ಸಿರಿಬಾಯಿ ದೊಡ್ಡವೀರಪ್ಪ**

ಮುದ್ದುರಾಜನ ಮರಣಾನಂತರ ಸಿರಿಬಾಯಿ ದೊಡ್ಡವೀರಪ್ಪನು ಪಟ್ಟಕ್ಕೆ ಬಂದನು. ಈತನ ಮಗ ಅಪ್ಪಾಜಿರಾಜ. ಅಪ್ಪಾಜಿರಾಜನ ಪುತ್ರ ಚಿಕ್ಕವೀರಪ್ಪ. ದೊಡ್ಡ ವೀರಪ್ಪನ ತಮ್ಮನಾದ ಅಪ್ಪಾಜಿರಾಜನಿಗೆ ಮುದ್ದುರಾಜ ಮತ್ತು ಲಿಂಗರಾಜ ಎಂಬ ಇಬ್ಬರು ಮಕ್ಕಳಿದ್ದರು. ದೊಡ್ಡ ವೀರಪ್ಪನು ಕೊಡಗಿನಲ್ಲಿ ರಾಜ್ಯಭಾರ ಮಾಡುತಿದ್ದಾಗ ಮೈಸೂರಿನಲ್ಲಿ ಚಿಕ್ಕದೇವರಾಜ ಒಡೆಯನು. ಇಕ್ಕೇರಿ ಸಂಸ್ಥಾನದಲ್ಲಿ ಸೋಮಶೇಖರನು, ಸೋದೆ ಸಂಸ್ಥಾನದಲ್ಲಿ ದೊಡ್ಡ ಸದಾಶಿವರಾಜನು, ಬೇಲೂರು ಸಂಸ್ಥಾನದಲ್ಲಿ ರವಿವರ್ಮನು ಆಳ್ವಿಕೆ ನಡೆಸುತ್ತಿದ್ದರು.

**ಇ. ಎರಡನೆಯ ಲಿಂಗರಾಜ**

ಕ್ರಿ.ಶ. ೧೮೧೧ರಿಂದ ೧೮೨೦ ರವರೆಗೆ ಎರಡನೆಯ ಲಿಂಗರಾಜನು ಆಳ್ವಿಕೆ ನಡೆಸಿದನು. ದಕ್ಷ ಆಡಳಿತಗಾರನಾಗಿದ್ದ ಈತನು ರಾಜ್ಯವನ್ನು ತಾಲ್ಲೂಕುಗಳಾಗಿ ವಿಭಾಗಿಸಿ ಸುಭೇದಾರರನ್ನು ನೇಮಿಸಿದನು. ತನ್ನ ಆಡಳಿತದ ವಿವರಗಳನ್ನು ೫೪ 'ಹುಕುಂ'ಗಳನ್ನು ಹೊಂದಿರುವ 'ಹುಕುಂನಾಮೆ' ಎಂಬ ಪುಸ್ತಕದಲ್ಲಿ ಪ್ರಚುರಪಡಿಸಿದನು. ಕ್ರಿ.ಶ. ೧೮೨೦ರಲ್ಲಿ ಶ್ರೀ ಓಂಕಾರೇಶ್ವರ ದೇವಾಲಯವನ್ನು ಕಟ್ಟಿಸಿದನು. ಮಡಿಕೇರಿ ಅರಮನೆಯನ್ನು ಕಟ್ಟಿ

ಪೂರ್ಣಗೊಳಿಸಿದನು. ಮಡಿಕೇರಿಯಲ್ಲಿರುವ ಗದ್ದಿಗೆಯಲ್ಲಿ ಈತನ ಸಮಾಧಿಯಿದೆ.

**ಈ. ಚಿಕ್ಕ ವೀರರಾಜೇಂದ್ರ**

ಲಿಂಗರಾಜನ ಮರಣಾನಂತರ ಆತನ ಪುತ್ರ ಚಿಕ್ಕವೀರರಾಜೇಂದ್ರನು ಕ್ರಿ.ಶ. ೧೮೨೦ರಲ್ಲಿ ಪಟ್ಟವೇರಿದನು. ತನ್ನ ಹದಿನೆಂಟರ ಪ್ರಾಯದಲ್ಲಿ ರಾಜನಾದ ಇವನು ದುರಾಚಾರಿ ಕ್ರೂರಿಯೆಂಬ ಕುಖ್ಯಾತಿಯನ್ನು ಪಡೆದವನು. ಕುಂಟ ಬಸವ ಎಂಬವನು ಈತನ ಎಲ್ಲಾ ಕುಕೃತ್ಯಗಳಿಗೆ ಸಹಾಯಕನಾಗಿದ್ದನು. ಈತನ ಆಳ್ವಿಕೆಯ ಸಂದರ್ಭದಲ್ಲಿ ಬ್ರಿಟೀಷರಿಗೂ ಹಾಲೇರಿ ಅರಸರಿಗೂ ವಿರಸ ಉಂಟಾಗಿ ಬ್ರಿಟಿಷ್ ಸೈನ್ಯ ಕೊಡಗನ್ನು ಮುತ್ತಿ ಚಿಕ್ಕ ವೀರರಾಜನನ್ನು ಬೆನ್ನಟ್ಟಿದರು. ತಲೆಮರೆಸಿಕೊಂಡ ಅರಸನು ನಾಲ್ಕುನಾಡು ಅರಮನೆಯಲ್ಲಿ ವಾಸವಿದ್ದನು. ಅಂದಿನ ದಿವಾನರುಗಳ ಸಹಾಯವನ್ನು ಪಡೆದ ಕಂಪೆನಿ ಸರಕಾರ ರಾಜಧಾನಿಯನ್ನು ವಶಪಡಿಸಿಕೊಂಡಿತು. ಬ್ರಿಟಿಷ್ ಸೈನ್ಯಾಧಿಕಾರಿಯಾದ ಕರ್ನಲ್ ಫ್ರೇಝರನಿಗೆ ಚಿಕ್ಕ ವೀರರಾಜ ಶರಣಾದನು. ಕ್ರಿ.ಶ. ೧೮೩೪ರ ಏಪ್ರಿಲ್ ೧೦ ರಂದು ಮಡಿಕೇರಿ ಕೋಟೆಯ ಮೇಲೆ ಇಂಗ್ಲಿಷರ ಧ್ವಜವು ಹಾರಿಸಲ್ಪಟ್ಟಿತು. ಕೊಡಗು ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತಕ್ಕೆ ಒಳಪಟ್ಟಿತು. ಕರ್ನಲ್ ಫ್ರೇಝರ್ ಮೊದಲ ಕಮಿಷನರ್ ಆದನು. ಆತನ ಜ್ಞಾಪಕಾರ್ಥವಾಗಿ ಕುಶಾಲನಗರವನ್ನು ಫ್ರೇಝರ್‌ಪೇಟೆ ಎಂದು ಕರೆಯಲಾಯಿತು. ಕೊಡಗಿನ ಜನರ ಉದಾರ ಮನಸ್ಥಿತಿಯನ್ನು ಅರಿತ ಫ್ರೇಝರನು ಕ್ರೈಸ್ತ ಮತದ ಪ್ರಚಾರಕ್ಕೆ ಕೊಡಗು ಯೋಗ್ಯ ಸ್ಥಳವೆಂದು ನಿರ್ಧರಿಸಿದನು. ಇಲ್ಲಿನ ಜನರು ಈ ಧರ್ಮವನ್ನು ಸ್ವೀಕರಿಸುತ್ತಾರೆಂಬ ದೃಢ ಅಭಿಪ್ರಾಯ ಅವನದಾಗಿತ್ತು.

**೨.೧.೪ ಬ್ರಿಟೀಷ್ ಆಡಳಿತದಲ್ಲಿ ಕೊಡಗು**

ಬ್ರಿಟಿಷರ ಆಕ್ರಮಣ ಕೊಡಗಿನ ಇತಿಹಾಸದಲ್ಲಿ ಮುಖ್ಯ ತಿರುವು ಎನ್ನಬಹುದು. ಕೊಡಗು ಜಿಲ್ಲೆಯ ಇಂದಿನ ಗಡಿಗಳು ಅಂದು ನಿರ್ಧರಿಸಲ್ಪಟ್ಟವು. ಕ್ರಿ.ಶ. ೧೮೩೪ರಲ್ಲಿ ಕೊಡಗಿನ ಆಡಳಿತವನ್ನು ವಶಪಡಿಸಿದ ಬ್ರಿಟೀಷರು ಕ್ರಿ.ಶ. ೧೮೬೫ ರಿಂದ ೧೯೦೦ ರವರೆಗೆ ಆಡಳಿತಾತ್ಮಕವಾಗಿ ಮಹತ್ತರವಾದ ಸಂಘಟನೆಯನ್ನು ಮಾಡಿದರು. ಶಿಕ್ಷಣ, ನ್ಯಾಯಾಂಗ, ಪೊಲೀಸ್, ಕಂದಾಯ, ಅರಣ್ಯ ಹಾಗೂ ಆಡಳಿತದ ಇತರ ವಿಭಾಗಗಳು ಬ್ರಿಟಿಷ್ ಆಡಳಿತ ಪದ್ಧತಿಗೆ ಅನುಗುಣವಾಗಿ ಪುನರ್‌ಸಂಘಟನೆಗೊಂಡವು. ಆರ್ಥಿಕ ಸ್ಥಿತಿಗತಿ ಬದಲಾಯಿತು. ವ್ಯಾಪಾರ- ವ್ಯವಹಾರಗಳು ಅಭಿವೃದ್ಧಿ ಹೊಂದಿದವು. ಪ್ರಮುಖ ಪಟ್ಟಣಗಳಲ್ಲಿ ವ್ಯಾಪಾರಸಂಘಗಳು ಅಸ್ತಿತ್ವಕ್ಕೆ ಬಂದವು. ಕೊಡಗು ಹೊರ ಪ್ರಪಂಚಕ್ಕೆ ತನ್ನನ್ನು ತೆರೆದುಕೊಂಡಿತು. ಆಡಳಿತದ ಎಲ್ಲಾ ಕ್ಷೇತ್ರಗಳಲ್ಲಿ ಹಲವು ಸುಧಾರಣೆಗಳು ಜಾರಿಗೆ ಬಂದವು. ಈ ಸಂದರ್ಭದಲ್ಲಿನ ಅವರ ಕೆಲವು ನೀತಿಗಳು ಕೊಡಗಿನ ಜನರಿಗೆ

ಸಹ್ಯವೆನಿಸಲಿಲ್ಲ. ಇದು ಅವರಲ್ಲಿ ಬ್ರಿಟಿಷ್ ವಿರೋಧಿ ಭಾವನೆಯನ್ನು ಬೆಳೆಸಿತು. ಇದರ ಪರಿಣಾಮವಾಗಿ ಕೊಡಗಿನಲ್ಲಿ ಬ್ರಿಟಿಷ್ ವಿರೋಧಿ ಬಂಡಾಯಗಳು ನಡೆದವು. ಕ್ರಿ.ಶ. ೧೮೩೭ರಲ್ಲಿ ಸ್ಥಳೀಯ ರೈತರು ಬಂಡಾಯವೆದ್ದು ಕೊಡಗು–ಕೆನರಾ ದಂಗೆ ಸ್ಫೋಟಗೊಂಡಿತು. ಸುಳ್ಯ ಮತ್ತು ಪುತ್ತೂರುಗಳನ್ನು ಬ್ರಿಟೀಷರು ದಕ್ಷಿಣ ಕನ್ನಡದ ಬ್ರಿಟಿಷ್ ಆಡಳಿತಕ್ಕೆ ವರ್ಗಾಯಿಸಿದರು. ಇದರಿಂದ ರೈತರು ಹಲವು ಆಡಳಿತಾತ್ಮಕ ತೊಂದರೆಗಳನ್ನು ಅನುಭವಿಸಬೇಕಾಯಿತು. ಇದರಿಂದ ರೋಷಗೊಂಡ ರೈತರು ಸುಳ್ಯದಲ್ಲಿ ದಂಗೆಯೆದ್ದರು. ಮಂಗಳೂರನ್ನು ವಶಪಡಿಸಿಕೊಂಡು ಸ್ಥಳೀಯ ಧ್ವಜವನ್ನು ಹಾರಿಸಿದರು. ದಂಗೆಕೋರರ ನಾಯಕನಾದ ಕಲ್ಯಾಣಸ್ವಾಮಿ ಎಂಬ ಕೊಡಗಿನ ರೈತನನ್ನು ರಾಜನೆಂದು ಘೋಷಿಸಿದರು.

ಕೆಲವೇ ಸಮಯದಲ್ಲಿ ಬ್ರಿಟೀಷರು ಮಂಗಳೂರನ್ನು ಮರುವಶಪಡಿಸಿಕೊಂಡರು. ದಂಗೆಯ ನಾಯಕರನ್ನು ಮಂಗಳೂರಿನ ಬಳಿ ನೇಣಿಗೇರಿಸಲಾಯಿತು. ಕೊಡಗು ದಂಗೆಯು ಕೊಡವ ಜನಾಂಗದ ಅನನ್ಯತೆಯ ಸೃಷ್ಟಿಯಲ್ಲಿ ಮಹತ್ವದ ಪಾತ್ರ ವಹಿಸಿತು. ಸಾಮ್ರಾಜ್ಯವಾದಿ ಬ್ರಿಟೀಷರು ಕೊಡವ ಜನಾಂಗದ ವಿಧೇಯತೆಯನ್ನು ಮೆಚ್ಚಿ ಕೆಲವು ಜನರಿಗೆ 'ಕೂರ್ಗ್ ಮೆಡಲ್' ಅನ್ನು ನೀಡಿತು. ಇದಲ್ಲದೆ ಕಂದಾಯವನ್ನು ಪೂರ್ಣವಾಗಿ ಮನ್ನಾ ಮಾಡಲಾದ 'ಜಮ್ಮ' ಎಂಬ ಸವಲತ್ತಿನ ಭೂ ಹಿಡುವಳಿ ವ್ಯವಸ್ಥೆಯಡಿಯಲ್ಲಿ ಭೂಮಿಯನ್ನು ಕೊಡಮಾಡಿತು. ೧೮೩೭ ರಿಂದ ಬ್ರಿಟೀಷರು ಒಡೆದು ಆಳುವ ನೀತಿಯನ್ನು ಅನುಸರಿಸಲಾರಂಭಿಸಿದರು. ೧೯೧೯ರ ಭಾರತ ಕಾಯ್ದೆಯ ಪ್ರಕಾರ ಕೊಡಗು ಚೀಫ್ ಕಮಿಶನರ್‌ನ ಪ್ರಾಂತ್ಯವಾಗಿ ಪರಿವರ್ತನೆಗೊಂಡು ೧೯೨೪ರಲ್ಲಿ ಶಾಸನಸಭೆಯೊಂದು ಕೊಡಗಿಗೆ ದೊರಕಿತು. ದೇಶದ ಇತರೆಡೆಗಳಂತೆ ಕೊಡಗಿನಲ್ಲೂ ದೇಶಪ್ರೇಮಿಗಳು ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಂಡರು. ಗಾಂಧೀಜಿಯವರು ಕೊಡಗಿಗೆ ಭೇಟಿ ನೀಡಿದರು. ಪಂದ್ಯಂಡ ಬೆಳ್ಯಪ್ಪ, ಚೆಪ್ಪುಡಿರ ಪೂಣಚ್ಚ, ಕೊಳ್ಳಿಮಾಡ ಕರುಂಬಯ್ಯ, ಅಬ್ದುಲ್ ಗಫಾರ್‌ಖಾನ್, ಚಕ್ಕೇರ ಮೊಣ್ಣಯ್ಯ, ವಿ. ಆರ್. ತಮ್ಮಯ್ಯ, ಮಲ್ಲೇಂಗಡ ಚಂಗಪ್ಪ ಮುಂತಾದ ಹೋರಾಟಗಾರರು ಸ್ವಾತಂತ್ರ್ಯ ಚಳವಳಿಯ ನಾಯಕತ್ವ ವಹಿಸಿದ್ದರು. ಕೆಲವರು ಸೆರೆಮನೆ ವಾಸವನ್ನು ಅನುಭವಿಸಿದರು. ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಕೊಡಗಿನಲ್ಲೂ ಬ್ರಿಟಿಷರ ಆಡಳಿತ ಕೊನೆಗೊಂಡಿತು.

ಸ್ವಾತಂತ್ರ್ಯಾನಂತರ ಭಾರತದ ಇತರ ಕೆಲವು ಪ್ರದೇಶಗಳಂತೆ ಕೊಡಗು 'ಸಿ' ವರ್ಗದ ರಾಜ್ಯವಾಗಿ ಪರಿಗಣಿಸಲ್ಪಟ್ಟಿತು. ಆದರೆ ಕೊಡಗಿನಲ್ಲಿ ಕಾಂಗ್ರೆಸ್ ಪಕ್ಷದ ಚಟುವಟಿಕೆಗಳಿಂದಾಗಿ ಮೈಸೂರು ಪ್ರಾಂತ್ಯದೊಡನೆ ವಿಲೀನಗೊಳ್ಳುವ

ವಿಚಾರವು ಪ್ರಾಮುಖ್ಯತೆ ಪಡೆದುಕೊಂಡಿತು. ಭಾಷಾವಾರು ಪ್ರಾಂತ್ಯಗಳ ಸಮಿತಿ ಎಸ್.ಕೆ ಧರ್ ಅವರ ನೇತೃತ್ವದಲ್ಲಿ ೧೯೪೮ರಲ್ಲಿ ಮಂಗಳೂರಿಗೆ ಬಂದಾಗ ಕೊಡಗಿನ ಪ್ರತಿನಿಧಿಗಳು ಅವರನ್ನು ಭೇಟಿಯಾಗಿದ್ದರು. ಕರ್ನಾಟಕದ ಪ್ರತಿನಿಧಿಗಳು ಕೊಡಗನ್ನು ಕರ್ನಾಟಕದೊಂದಿಗೆ ವಿಲೀನಗೊಳಿಸಲು ಒತ್ತಾಯಿಸಿದರು. ಮಲಬಾರಿನ ಪ್ರತಿನಿಧಿಯು ಕೊಡಗನ್ನು ಕೇರಳದೊಂದಿಗೆ ಸೇರಿಸಲು ಪ್ರಾರ್ಥಿಸಿದರು. ೧೯೪೯ರಲ್ಲಿ ಕೇಂದ್ರ ಸರಕಾರವು ದೆಹಲಿಯಲ್ಲಿ ಕರೆದ ಸಭೆಯಲ್ಲಿ ಕೊಡಗಿನ ವಿಲೀನ ವಿರೋಧಿ ನಾಯಕರಾದ ಪಂದ್ಯಂಡ ಬೆಳ್ಯಪ್ಪನವರು ಭಾಗವಹಿಸಿದರು. ಕೊಡಗನ್ನು ಪ್ರತ್ಯೇಕ ರಾಜಕೀಯ ಘಟಕವಾಗಿ ಉಳಿಸಿಕೊಳ್ಳುವಂತೆ ಕೇಳಿಕೊಂಡರು. ಇದರಂತೆ ಕೊಡಗು 'ಸಿ' ರಾಜ್ಯವಾಗಿ ಮುಂದುವರೆಯಿತು. ೧೯೫೨ರಲ್ಲಿ ಸ್ವತಂತ್ರ ಭಾರತದ ಮೊದಲ ಮಹಾ ಚುನಾವಣೆ ನಡೆಯಿತು. ಚೆಪ್ಪುಡಿರ ಎಂ. ಪೂಣಚ್ಚ ಮುಖ್ಯಮಂತ್ರಿಯಾದರು. ಕೆ. ಮಲ್ಲಪ್ಪ ಕಾನೂನು ಮತ್ತು ವ್ಯವಸ್ಥೆಯ ಮಂತ್ರಿಯಾಗಿ ನೇಮಕಗೊಂಡರು. ಕೊಡಗಿನ ಚೀಫ್ ಕಮಿಷನರ್ ಸರಕಾರದ ಮುಖ್ಯಸ್ಥರಾಗಿದ್ದು; ರಾಷ್ಟ್ರಪತಿಗಳಿಗೆ ಜವಾಬ್ದಾರರಾಗಿದ್ದರು. ೧೯೫೨ ರಿಂದ ೧೯೫೬ ರವರೆಗೆ ಕೊಡಗಿನಲ್ಲಿ ಹಲವು ಸುಧಾರಣೆಗಳು ಜಾರಿಗೆ ಬಂದವು. "ಈ ಅವಧಿಯು ಕೊಡಗಿನ ಇತಿಹಾಸದಲ್ಲಿ 'ಒಂದು ಸುವರ್ಣಯುಗ' ವೆಂದು ಹಲವು ಬರಹಗಾರರು ಅಭಿಪ್ರಾಯಪಡುತ್ತಾರೆ."[೨೦]

೧೯೫೪ರಲ್ಲಿ ರಾಜ್ಯ ಪುನರ್‌ರಚನಾ ಸಮಿತಿಯು ಕೊಡಗಿಗೆ ಬಂದಾಗ ಕೊಡಗಿನ ವಿಧಾನಸಭೆಯ ೨೪ ಸದಸ್ಯರು ಒಟ್ಟಾಗಿ ಕೊಡಗನ್ನು ಪ್ರತ್ಯೇಕ ರಾಜ್ಯವಾಗಿ ಉಳಿಸಿಕೊಳ್ಳಲು ಮನವಿ ಒಪ್ಪಿಸಿದರು. ಆದರೆ ಕೆಲ ಸಮಯದ ನಂತರ ಮನವಿಯನ್ನು ಒಪ್ಪಿಸಿದವರೇ ವಿಲೀನದ ಪರವಾಗಿ ಮತ ನೀಡಿದರು. ೨೪ ಮಂದಿ ಸದಸ್ಯರಲ್ಲಿ ೨೨ ಮಂದಿ ವಿಲೀನದ ಪರ ಮತ ಚಲಾಯಿಸಿದರು. ಹೀಗೆ ಪ್ರತ್ಯೇಕ ರಾಜ್ಯವಾಗಿದ್ದ ಕೊಡಗು ೧೯೫೬ನೆಯ ನವೆಂಬರ್ ೧ ರಂದು ಕರ್ನಾಟಕ ರಾಜ್ಯದೊಡನೆ ವಿಲೀನವಾಯಿತು.

**೨.೨ ಸಾಂಸ್ಕೃತಿಕ ನೆಲೆಗಳು**

ಕರ್ನಾಟಕದಲ್ಲಿ ತನ್ನದೇ ಆದ ಸಾಂಸ್ಕೃತಿಕ ವಿಶಿಷ್ಟತೆಗೆ ಹೆಸರಾದುದು ಕೊಡಗು. ಬಹು ಸಂಸ್ಕೃತಿಗಳ ಆಗರವಾಗಿರುವ ಈ ಜಿಲ್ಲೆಯು ಜನಾಂಗಿಕ, ಭಾಷಿಕ ಹಾಗೂ ಸಾಂಸ್ಕೃತಿಕ ವೈವಿಧ್ಯತೆಯನ್ನು ಪಡೆದಿದೆ. ಕೊಡವರು ಇಲ್ಲಿನ ಪ್ರಮುಖ ಸಮುದಾಯ. ಇವರೊಂದಿಗೆ ಕೊಡವ ಭಾಷೆಯನ್ನಾಡುವ ೨೩ ಕೊಡವ ಭಾಷಿಕ ಸಮುದಾಯಗಳು, ಅರೆಭಾಷೆ ಗೌಡರು, ಲಿಂಗಾಯತರು, ತುಳುವರು, ಮಲೆಯಾಳಿಗಳು, ತಮಿಳರು, ಯರವರು, ಕುರುಬರು, ಕುಡಿಯರು

ಹೀಗೆ ಅನೇಕ ಜನವರ್ಗದ ಜನಪದರು ನೆಲೆಸಿದ್ದಾರೆ. ಜಾನಪದ ನೆಲೆಯಿಂದ ಕೊಡಗಿನ ಸಂಸ್ಕೃತಿಯನ್ನು ನೋಡಿದಾಗ ಇಲ್ಲಿ ಪ್ರಚಲಿತವಿರುವ ಧರ್ಮ, ಆಚರಣೆ, ಸಂಗೀತ, ನೃತ್ಯ ಇತ್ಯಾದಿಗಳು ಇಲ್ಲಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಇಲ್ಲಿನ ಜನರ ಸಂಸ್ಕೃತಿಯು ಇಂದಿಗೂ ತನ್ನ ಮೂಲ ಸ್ವರೂಪ ಹಾಗೂ ಸೊಗಡನ್ನು ಉಳಿಸಿಕೊಂಡು ಬಂದಿದೆ. ಕೊಡವ ಭಾಷಿಕರಿಗೆ ಸಂಬಂಧಿಸಿದ ಜಾನಪದವು ಕಾವ್ಯ, ಐತಿಹ್ಯ, ಕಥೆ, ಗಾದೆ, ಒಗಟು, ಭಾಷೆ, ಪುರಾಣ, ಹಬ್ಬ, ಸಂಪ್ರದಾಯ, ನೃತ್ಯ, ಸಂಗೀತ, ಕಲೆ, ಕರಕುಶಲತೆ, ಜಾತ್ರೆ, ಇತ್ಯಾದಿಗಳ ಬಗ್ಗೆ ನಿಖರವಾಗಿ ತಿಳಿಸಿಕೊಡುವ ಬಹುಮುಖ್ಯ ಆಕರವಾಗಿದೆ.

ಕೊಡವ ಜನಪದ ಸಾಹಿತ್ಯವು ಕೊಡಗಿನ ಸಾಂಸ್ಕೃತಿಕ ಒಳನೋಟಗಳನ್ನು ಪರಿಚಯಿಸುತ್ತದೆ. ಇದರಲ್ಲಿ ದುಡಿಯೆಂಬ ಸಣ್ಣ ಡೋಲನ್ನು ಬಾರಿಸುತ್ತಾ ಹಾಡುವ ದುಡಿಕೊಟ್ಪ್ ಪಾಟ್ ಪ್ರಮುಖವಾದುದು. ಇದರಲ್ಲಿ ಹಬ್ಬದ ಹಾಡುಗಳು, ದೇವರ ಹಾಡುಗಳು, ಕುಣಿತದ ಹಾಡುಗಳು, ಬದುಕಿನ ವಿವಿಧ ಘಟ್ಟಗಳ ಹಾಡುಗಳು, ಮಕ್ಕಳ ಹಾಡುಗಳು, ಜನಪದ ವೀರರ ಹಾಡುಗಳು, ಕೃಷಿಗೆ ಸಂಬಂಧಿಸಿದ ಹಾಡುಗಳು ಹಾಗೂ ಇತರ ಹಾಡುಗಳೆಂದು ವಿಭಾಗಿಸಬಹುದು. ಕೃಷಿ, ಹಬ್ಬಗಳು, ಆಚರಣೆಗಳು, ವಿವಾಹ, ಜನನ-ಮರಣ ಸಂದರ್ಭಗಳು. ತಿಥಿ ಕರ್ಮಾಂತರ ಮುಂತಾದ ಸನ್ನಿವೇಶಗಳಲ್ಲಿ ಹಾಡುವ ಈ ಹಾಡುಗಳು ಕೊಡವರ ವಿಶಿಷ್ಟ ಸಂಸ್ಕೃತಿಯನ್ನು ವ್ಯಕ್ತಪಡಿಸುತ್ತವೆ.

ಕೈಲ್‌ಪೊಳ್ದ್(ಕೈಲ್‌ಮುಹೂರ್ತ), ಕಾವೇರಿ ಚಂಗ್ರಾಂದಿ(ಕಾವೇರಿ ಸಂಕ್ರಮಣ) ಹಾಗು ಪುತ್ತರಿ(ಹುತ್ತರಿ) ಕೊಡಗಿನಲ್ಲಿ ಆಚರಿಸಲ್ಪಡುವ ಪ್ರಮುಖ ಹಬ್ಬಗಳು. ಪುತ್ತರಿ ಹಬ್ಬದಲ್ಲಿ ಹಾಡುವ ಪುತ್ತರಿ ಪಾಟ್ ಕೃಷಿ ಕೆಲಸದ ವಿವರ, ಹಬ್ಬದ ಹಿನ್ನೆಲೆ, ಹಬ್ಬದ ಆಚರಣೆಯ ವಿಧಿವಿಧಾನಗಳ ಬಗ್ಗೆ ವಿವರಗಳನ್ನು ಒಳಗೊಂಡಿದೆ. ಇದೇ ಸಂದರ್ಭದಲ್ಲಿ ಮನೆಮನೆಗಳಿಗೆ ಹೋಗಿ ಮನೆಪಾಟ್ ಹಾಡಲಾಗುತ್ತದೆ. ಮನೆಯ ಅಂದಚಂದ, ಅತಿಥಿ ಸತ್ಕಾರ, ಕಾರೋಣ(ಕುಟುಂಬದ ಮೂಲ ಪುರುಷ)ರ ಸಾಧನೆಯನ್ನು ವರ್ಣಿಸುತ್ತಾ ಹಾಡುತ್ತಾರೆ. ಪುತ್ತರಿ ಹಾಗು ಆಯಾ ಗ್ರಾಮಗಳಲ್ಲಿ ನಡೆಯುವ ಬೋಡ್‌ಹಬ್ಬದಲ್ಲಿ ಹಾಡುವ ಜೋಯಿಪಾಟ್ ಹಿಂದಿನ ಮತ್ತು ಮುಂದಿನ ಸಂಗತಿಗಳನ್ನು ಕುರಿತು ಹೇಳುತ್ತದೆ. ಬೋಡ್‌ಹಬ್ಬದಲ್ಲಿ ಗ್ರಾಮ ದೇವತೆಗಳಾದ ಭಗವತಿ, ಭದ್ರಕಾಳಿ, ಅಯ್ಯಪ್ಪ, ಕಮ್ಮರಾಟಪ್ಪ ದೇವರನ್ನು ಅಣಕಿಸುತ್ತಾ ವಿನೋದಾತ್ಮಕವಾಗಿ ಹಾಡುವ ಬೋಡ್‌ನಮ್ಮೆರ ಪಾಟ್ ಹಾಡಲಾಗುತ್ತದೆ. ದೇವರ ಹಾಡುಗಳು ಕೊಡಗಿನ ದೇವತೆಗಳು ಹಾಗು ದೈವಸ್ವರೂಪ ಪಡೆದ ಇತರ ವೀರರನ್ನು ಕುರಿತುದಾಗಿದೆ. ಶ್ರೀಮೂಲ ಕಾವೇರಿ ಪಾಟ್ ಕೊಡಗಿನ ಕುಲದೇವಿ ಕಾವೇರಿಯ ಜನ್ಮ ವೃತ್ತಾಂತವನ್ನು, ಕಾವೇರಿ

ಸಂಕ್ರಮಣದ ಮಹತ್ವವನ್ನು ವಿವರಿಸುತ್ತದೆ. ಎವ್ವಮಕ್ಕ ದೇಬುವರೆಂದು ಕರೆಯಲ್ಪಡುವ ಏಳುಮಂದಿ ದೇವರುಗಳಾದ ಕಾಞಾರಾಟಪ್ಪ, ತಿರ್‌ಚಂಬರಪ್ಪ, ಬೇಂದ್ರುಕೋಲಪ್ಪ, ಇಗ್ಗುತಪ್ಪ, ಪಾಲೂರಪ್ಪ, ತಿರ್‌ನೆಲ್ಲಿ ಪೆಮ್ಮಯ್ಯ, ಪನ್ನಂಗಾಲತಮ್ಮೆ ಕುರಿತ ಹಾಡು ಎವ್ವಮಕ್ಕ ದೇಬುವಡ ಪಾಟ್. ಇವರೊಂದಿಗೆ ಜನಿಸಿದ ಅಯ್ಯಪ್ಪ, ಏಳು ತಲೆಯ ನಾಗಣ್ಣ (ನಾಥ), ಮತ್ತು ಕಲ್ಲಕೆರೆ ಮಾದೇವಿಯ ವಿವರಗಳನ್ನೂ ಈ ಹಾಡು ಒಳಗೊಂಡಿದೆ. ಮತ್ತ್‌ಲಪ್ಪ, ಪುತ್ತ್‌ಲಮ್ಮೆ, ಒಗರೆಲಪ್ಪ ಹಾಗು ರುದ್ರುಗುಪ್ಪೆಯಲ್ಲಿ ನೆಲೆಗೊಂಡ ಜೋಡ್ ಭಗವತಿ ಸಹೋದರಿಯರಿಗೆ ಸಂಬಂಧಿಸಿದ ಕಥೆ ಐವಮಕ್ಕ ದೇಬುವಡ ಪಾಟ್‌ನಲ್ಲಿ ನಿರೂಪಿತವಾಗಿದೆ.

ಮೂವಮಕ್ಕ ದೇಬುವಡ ಪಾಟ್ ಮದೇರಪ್ಪ, ಅಪ್ಪಂಗಿರಿಯಪ್ಪ ಮತ್ತು ಕೊಡಗಿನ ಎಂಟು ಗ್ರಾಮಗಳಲ್ಲಿ ನೆಲೆಸಿರುವ ಪೊರಮಲೆ ಭಗವತಿಯ ಜನ್ಮ ವೃತ್ತಾಂತವನ್ನು ನಿರೂಪಿಸುತ್ತದೆ. ಪಾಕತಮ್ಮೆ, ಪೊವ್ವದಿಯಮ್ಮೆ, ಬಾಡಾತಮ್ಮೆ ಎಂಬ ಮೂರು ದೇವತೆಗಳ ಕುರಿತ ಹಾಡು ಮೂವಮಕ್ಕ ದೇವಿಯಡ ಪಾಟ್. ಕಾಕೋಟ್ ಅಚ್ಚಯ್ಯ ಮತ್ತು ಅಕ್ಕವ್ವನೆಂಬ ಇಬ್ಬರು ದೇವಮಕ್ಕಳ ಕುರಿತ ಹಾಡು ಇಬ್ಬಮಕ್ಕ ದೇಬುವಡ ಪಾಟ್. ಸಾರ್ತಾವುಡ ಪಾಟ್ ಎಂಬುದು ಕೊಡಗಿನ ವಿವಿಧ ಊರುಗಳಲ್ಲಿ ಮಕ್ಕಿ ಸಾರ್ತಾವು, ಮಲೆ ಸಾರ್ತಾವು, ಪೆರುವಾಳ್ ಸಾರ್ತಾವು, ನೀಲಿಯಾಟ್ ಸಾರ್ತಾವು ಎಂದು ಪೂಜಿಸಲ್ಪಡುವ ಸಾರ್ತಾವು ದೈವದ ಕಥೆಯನ್ನು ಒಳಗೊಂಡಿದೆ. ಇದರೊಂದಿಗೆ ಚೋಲಿ ಪೊವ್ವದಿಯಮ್ಮೆರ ಪಾಟ್, ಬಲ್ಲತ್‌ನಾಡ್ ಪೊವ್ವದಿಯಮ್ಮೆರ ಪಾಟ್, ಓಮಾಲೆ ಮದಿಯೋದಿರ ಪಾಟ್ ಈ ಹಾಡುಗಳೆಲ್ಲವು ಆಯಾ ದೇವತೆಗಳ ಬಗ್ಗೆ ತಿಳಿಸುತ್ತವೆ.

ಕುಣಿತದ ಹಾಡುಗಳಲ್ಲಿ ಪುತ್ತರಿ ಹಬ್ಬದಲ್ಲಿ ಹಾಡುವ ಕೋಲಾಟದ ಹಾಡು, ಬೊಳಕಾಟ್ ಹಾಗು ಉಮ್ಮತ್ತಾಟ್ ಗೀತೆಗಳು ಪ್ರಮುಖವಾದುದು. ತೊಟ್ಟಿಲು ತೂಗುತ್ತಾ, ಮಕ್ಕಳನ್ನು ಆಡಿಸುತ್ತಾ ಹಾಡುವ ಶಿಶುಗೀತೆಗಳಿವೆ. ವಿವಾಹ ಕಾರ್ಯದ ಸಂದರ್ಭದಲ್ಲಿ ಹಾಡುವ ಮಂಗಲ ಪಾಟ್, ಬಟ್ಟೆಪಾಟ್ ಮದುಮಕ್ಕಳ ಸಮಸ್ತ ಜೀವನ ಮತ್ತು ಮದುವೆಯ ಸರ್ವ ವಿವರಗಳನ್ನು ವರ್ಣಿಸುತ್ತದೆ. ಊರಿಗೆ ಬಂದು ಉಪಟಳ ನೀಡುತ್ತಿದ್ದ ಹುಲಿಯನ್ನು ಕೊಂದ ವೀರನ ಗೌರವಾರ್ಥ ನಡೆಸುವ ಹುಲಿ ಮದುವೆಯ ವಿವರಗಳು ನರಿಮಂಗಲ ಪಾಟ್‌ನಲ್ಲಿದೆ. ಮರಣ ಮತ್ತು ತಿಥಿಕರ್ಮಾಂತರಗಳನ್ನು ಮಾಡುವ ದಿನದಂದು ಹಾಡುವ ಚಾವುಪಾಟ್ ಮತ್ತು ಪೊಲ್‌ಚಿಪಾಟ್ ಪ್ರಮುಖವಾದುದು. ಮನುಷ್ಯನ ಬದುಕಿನ ನಶ್ವರತೆಯನ್ನು ವಿವರಿಸುತ್ತಾ ಮೃತರ ಬಂಧುಗಳನ್ನು ಸಂತೈಸುವ ಅಪೂರ್ವ ಸನ್ನಿವೇಶಗಳು ಈ ಗೀತೆಗಳಲ್ಲಿ ಸಮರ್ಥವಾಗಿ ಮೂಡಿಬಂದಿವೆ. ಕೊಡಗಿನ ಜನಪದ ವೀರರ ಸಾಹಸವನ್ನು ನಿರೂಪಿಸುವ ಕೇಳಿಪೋನಯಿಂಡ ಪಾಟ್‌ಗಳಿವೆ. ಕಲಿಯಾಟಜ್ಜಪ್ಪ,

ಅಜ್ಜಪ್ಪನೆಂದು ಪ್ರಸಿದ್ಧನಾಗಿ ದೇವತಾಸ್ವರೂಪವನ್ನು ಪಡೆದ ಕಲಿಯಾಟಂಡ ಪೊನ್ನಪ್ಪಂಡ ಪಾಟ್, ನಡಿಕೇರಿಯಂಡ ದೇವಯ್ಯಂಡ ಪಾಟ್, ವೀರನಾದ ಕೈಯ್ಯಂದಿರ ಅಪ್ಪಯ್ಯನ ಸಾಹಸವನ್ನು ನಿರೂಪಿಸುವ ಕೈಯ್ಯಂದಿರ ಅಪ್ಪಯ್ಯಂಡ ಪಾಟ್, ಹುಲಿ ಮದುವೆಗೆ ಪಾತ್ರನಾದ ಪೊಳ್ಳೆದೇವಿರ ಅಪ್ಪಯ್ಯಂಡ ಪಾಟ್- ಇವು ಪ್ರಮುಖವಾದವುಗಳಾಗಿವೆ. ಕೃಷಿಗೆ ಸಂಬಂಧಿಸಿದ ಹಾಡುಗಳು ಕೃಷಿಕಾರ್ಯದ ಪ್ರತಿಯೊಂದು ಘಟ್ಟಗಳನ್ನು ಪರಿಚಯಿಸುತ್ತಾ ಕೃಷಿ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಇದರಲ್ಲಿ ಗದ್ದೆಯಲ್ಲಿ ನಾಟಿ ನೆಡುವಾಗ ಹಾಡುವ ಒಯ್ಯಪಾಟ್, ಪುತ್ತರಿ ಪಾಟ್, ಕಣದಲ್ಲಿ ಒಕ್ಕಲು ಮಾಡುತ್ತ ಹಾಡುವ ಎತ್ತ್‌ಪಾಟ್ ಪ್ರಮುಖವಾದುದು. ಇದಲ್ಲದೆ ಕೊಡವ ಪಾರಂಪರಿಕ ನಾಡುಗಳ ವಿಂಗಡಣೆಯನ್ನು ಕುರಿತ ದೇಶಕೆಟ್ಟ್ ಪಾಟ್‌ಗಳಿವೆ.

ಕೊಡಗಿನಲ್ಲಿ ನೆಲೆಸಿರುವ ಪಂಜಿರಿ ಮತ್ತು ಪಣಿಯ ಎರವರು ಅಪಾರ ಜಾನಪದ ಸಂಪತ್ತನ್ನು ಹೊಂದಿದ್ದಾರೆ. ಇವರು ಹಾಡುವ ಜನಪದ ಹಾಡುಗಳು ಪುರಾಣದ ರೂಪವನ್ನು ಪಡೆದುಕೊಂಡಿವೆ. ಇವನ್ನು 'ಬಾಯಿಪತ್ರೆ' ಎಂದೂ ಕರೆಯುತ್ತಾರೆ. ಇವರು ಹೇಳುವ ಹಾಡುಗಳನ್ನು ಓಲೆಪಾಟು, ಸೋಬಾನೆಪಾಟು ಮತ್ತು ಪೇಯಿಪಾಟು ಎಂದು ವಿಭಾಗಿಸಬಹುದು. "ಮದುವೆ ಮಾಡುವಾಗ ದೇವರ ಸಮಾರಾಧನೆಯ ಸಂದರ್ಭಗಳಲ್ಲಿ ಓಲೆಪಾಟನ್ನು ಹಾಡುವರು, ಹೆಣ್ಣು ಮೈನೆರೆದಾಗ ಅವಳಿಗೆ ಒಸಗೆ ಮಾಡುವ ಸಂದರ್ಭದಲ್ಲಿ ಸೋಬಾನೆಪಾಟು ಹಾಡಿ ಹರಸುವರು. ಪೇಯಿಪಾಟನ್ನು ಉತ್ತರಕ್ರಿಯೆ ಮತ್ತು ದೆವ್ವಪೀಡೆಗಳಿಗೆ ಸಂಬಧಿಸಿದ ಆಚರಣೆಗಳನ್ನು ಮಾಡುವಾಗ ಹಾಡುವರು."[೨೧] ಇದರೊಂದಿಗೆ ಚತ್ತವಂಡಪಾಟನ್ನು ಹಾಡುತ್ತಾರೆ. ಇದು ಭೂಮಿಯ ಹುಟ್ಟಿನ ಬಗ್ಗೆ ವಿವರವನ್ನೊಳಗೊಂಡಿದೆ. ಕೊಡಗಿನಲ್ಲಿ ನೆಲೆಸಿರುವ ಅರೆಭಾಷೆ ಗೌಡರ ಸಂಸ್ಕೃತಿಯ ಮೇಲೆ ಸ್ಥಳೀಯ ಕೊಡವ ಸಂಸ್ಕೃತಿಯ ಪ್ರಭಾವವಿದೆ. ಮದುವೆ ಹಾಗೂ ಇತರ ಸಂದರ್ಭಗಳಲ್ಲಿ ಹಾಡುವ ಸೋಬಾನೆ ಹಾಡು, ಕೋಲಾಟದ ಹಾಡುಗಳು ಅವರ ಮೂಲ ಸಂಸ್ಕೃತಿಯನ್ನು ವ್ಯಕ್ತಪಡಿಸುತ್ತವೆ.

ಜನಪದ ನೃತ್ಯಗಳು ಕೊಡಗಿನ ವಿವಿಧ ಸಮುದಾಯಗಳ ವಿಶಿಷ್ಟ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಕೊಡವರ ವೀರಕುಣಿತಗಳಲ್ಲಿ ಪ್ರಮುಖವಾದುದು ಬೊಳಕಾಟ್. ಇದು ದೈವೀ ಆರಾಧನೆಯ ಹಿನ್ನೆಲೆಯಲ್ಲಿ ಹುಟ್ಟಿದುದು. ದೇವಸ್ಥಾನಗಳಲ್ಲಿ ಬೆಳಕಿನ ಸುತ್ತ ಕುಣಿಯುವದರಿಂದ ಈ ಹೆಸರು ಬಂದಿದೆ. ಒಡಿಕತ್ತಿಯನ್ನು ಕೈಯಲ್ಲಿ ಹಿಡಿದು ಕುಣಿಯುವ ನೃತ್ಯ ಕತ್ತಿಯಾಟ್. ಚಮರೀಮೃಗದ ಕೂದಲಿನ ಗುಚ್ಛವನ್ನು ಹಿಡಿದು ನರ್ತಿಸುವ ಚೌರಿಯಾಟ್ ದೇವರ ಸೇವಾ ನೃತ್ಯ. ಮರದ ಅಥವಾ ಜಿಂಕೆಯ ಕೊಂಬುಗಳನ್ನು ಹಿಡಿದು ಕುಣಿಯುವ

ಕೊಂಬಾಟ್ ಕೊಡಗಿನ ಕೆಲವು ಊರುಗಳ ದೇವಸ್ಥಾನಗಳಲ್ಲಿ ನಡೆಯುತ್ತದೆ. ಇದರೊಂದಿಗೆ ನವಿಲುಗರಿಗಳನ್ನು ಹಿಡಿದು ಪೀಲಿಯಾಟ್ ಹಾಗೂ ಮರದ ಬಿಲ್ಲುಗಳನ್ನು ಹಿಡಿದು ಬಿಲ್ಲಾಟ್ ನರ್ತಿಸಲಾಗುತ್ತದೆ. ಭಗವತಿ ಹಾಗೂ ಭದ್ರಕಾಳಿಯ ಆರಾಧನೆಯ ಅಂಗವಾಗಿ ಕುಣಿಯುವ ಕೊಡಿಯಾಟ್ ಮತ್ತು ಕೈತಲೆಯಾಟ್ ವಿಶಿಷ್ಟವಾದುದು.

ದಕ್ಷಿಣ ಕೊಡಗಿನಲ್ಲಿ ಆಚರಿಸಲ್ಪಡುವ ಬೋಡ್‌ಹಬ್ಬದಲ್ಲಿ ವಿಭಿನ್ನ ವೇಷಗಳನ್ನು ಧರಿಸಿ ಕುಣಿಯುವುದನ್ನು ಬೋಡ್‌ನಮ್ಮೆರ ಆಟ್ ಎನ್ನುತ್ತಾರೆ. 'ದೋಳ್' ಎಂಬ ಚರ್ಮವಾದ್ಯವನ್ನು ಬಳಸಿ ಹಾಡುತ್ತಾ ವಿನೋದಾತ್ಮಕವಾಗಿ ಕುಣಿಯುವ ನೃತ್ಯ ಕಲೆ ಇದಾಗಿದೆ. ಇದನ್ನು 'ಬೋಡ್ ಆಟ್' ಎಂದೂ ಕರೆಯುತ್ತಾರೆ. ಕಂಚಿನ ತಾಳಗಳನ್ನು ತಟ್ಟುತ್ತಾ ದೀಪದ ಸುತ್ತ ಕೊಡವ ಮಹಿಳೆಯರು ನರ್ತಿಸುವ ನೃತ್ಯ ಉಮ್ಮತ್ತಾಟ್. ಕುಲದೇವಿ ಕಾವೇರಿಯ ಸ್ತುತಿ, ಕೊಡಗಿನ ಪ್ರಕೃತಿ ವರ್ಣನೆ, ಜೇನಿನ ಸವಿ, ಕಾಯಕದ ಮಹತ್ವವನ್ನು ವರ್ಣಿಸುವ ಗೀತೆಗಳನ್ನು ಹಾಡುತ್ತಾ ಕುಣಿಯಲಾಗುತ್ತದೆ. "ಇದು ಭಸ್ಮಾಸುರ ಮೋಹಿನಿಯ ನೃತ್ಯ, ಉಮಾದೇವಿಯ ನೃತ್ಯ ಎನ್ನುವ ನಂಬಿಕೆ ಕೊಡವ ಜನಪದರಲ್ಲಿದೆ."[೨೨] ಮನರಂಜನೆಯೇ ಪ್ರಧಾನವಾಗಿದ್ದು; ಮದುವೆ ಮುಂತಾದ ಸಂತೋಷದ ಸಮಯದಲ್ಲಿ 'ಕೊಂಬುಕೊಟ್ಟ್ ವಾಲಗ' ಹಿಮ್ಮೇಳದೊಂದಿಗೆ ಕುಣಿಯುವುದನ್ನು ವಾಲಗತ್ತಾಟ್ ಎನ್ನುತ್ತಾರೆ. ಕೊಡಗಿನ ಕುಡಿಯರ ಉರ್‌ಟಿಕೊಟ್ಟ್ ಆಟ್ ವಿಶೇಷವಾದುದು. ದುಡಿಯನ್ನು ಬಾರಿಸುತ್ತಾ ಹಾಡುವ ಹಾಡಿಗನುಗುಣವಾಗಿ ಕುಡಿಯತಿ ಮಹಿಳೆಯರು ಕುಣಿಯುತ್ತಾರೆ. ಎರವ ಸಮುದಾಯದ ಗಂಡಸರು ಮತ್ತು ಹೆಂಗಸರು ಚೀನಿ ಹಾಗು ದುಡಿಯನ್ನು ಬಾರಿಸುತ್ತಾ ಕುಣಿಯುವ ಕುಣಿತವನ್ನು ಎರವಾಟ್ ಎನ್ನುತ್ತಾರೆ. ಜೇನು ಕುರುಬರ ಕೋಲಾಟವು ವೈವಿಧ್ಯಮಯವಾದುದು. ಕೊಡಗಿನಲ್ಲಿ ಆಚರಣೆಯಲ್ಲಿರುವ ವೀರಭದ್ರನ ಕುಣಿತವು ಇತರ ಜಿಲ್ಲೆಗಳಲ್ಲಿ ಪ್ರದರ್ಶಿಸಲ್ಪಡುವ ವೀರಗಾಸೆಗಿಂತ ವಿಭಿನ್ನವಾದುದಾದು. ಕೊಡಗಿನ ಕೊಡವ ಮಾಪಿಳ್ಳೆ ಸಮುದಾಯದವರಲ್ಲಿ ರೂಢಿಯಲ್ಲಿರುವ ನೃತ್ಯ ದಪ್ಪು ಆಟ್. ದಪ್ಪು ಎಂಬ ವಾದ್ಯ ವಿಶೇಷ ಈ ಕುಣಿತಕ್ಕೆ ಪ್ರಧಾನವಾದುದು.

**೨.೩ ಸಾಮಾಜಿಕತೆ**

ಕೊಡಗು ಬಹುರೂಪೀ ಸಮಾಜವನ್ನು ಹೊಂದಿರುವ ಪ್ರದೇಶ. ಕೊಡವರು, ಕೊಡವ ಭಾಷೆಯನ್ನಾಡುವ ಕೊಡವ ಭಾಷಿಕ ಸಮುದಾಯಗಳು, ಅರೆಭಾಷೆ ಗೌಡರು, ಒಕ್ಕಲಿಗರು, ಲಿಂಗಾಯತರು, ಮಲೆಯಾಳಿಗಳು, ತಮಿಳರು, ತೆಲುಗರು, ಕನ್ನಡಿಗರು, ಮುಸಲ್ಮಾನರು, ಕ್ರಿಶ್ಚಿಯನ್ನರು, ತುಳು ಭಾಷಿಕರು, ಪರಿಶಿಷ್ಟ ವರ್ಗದವರು, ಬುಡಕಟ್ಟು ಜನರು ಇಲ್ಲಿ ನೆಲೆಸಿದ್ದಾರೆ. ಆದುದರಿಂದ

ವೈವಿಧ್ಯಮಯವಾದ ಆಚರಣೆಗಳು, ಪದ್ಧತಿಗಳು, ಸಂಪ್ರದಾಯಗಳು, ವೇಷಭೂಷಣಗಳು, ಸಾಹಿತ್ಯ, ಸಂಗೀತ, ಕಲೆ, ಭಾಷೆಗಳು ಅಸ್ತಿತ್ವದಲ್ಲಿವೆ.

೧೮೧೨ರಲ್ಲಿ ರಚಿತವಾದ ಲಿಂಗರಾಜನ 'ಹುಕುಂನಾಮೆ'ಯಲ್ಲಿ ೨೩ ಸಮುದಾಯಗಳನ್ನು ಕೊಡಗಿನ ಮೂಲ ನಿವಾಸಿಗಳೆಂದು ಗುರುತಿಸಲಾಗಿದೆ. ಅವರೆಂದರೆ ಕೊಡವ, ಅಮ್ಮಕೊಡವ, ಮುಕ್ಕಾಟಿ, ಪೆಗ್ಗಡೆ, ಕುರುಬ, ಕುಂಬಾರ, ಉಪ್ಪಾರ, ಅಗಸ, ಅಯಿರಿ, ಅಕ್ಕಸಾಲೆ, ದೇವಾಂಗ, ಕೊತ್ತೇರ, ಕಟ್ಟಿಗ, ವಡ್ಡ, ಕಣಿಯ, ದಾಸ, ಕ್ಷೌರಿಕ, ಮೇದ, ಬಡಗ ಹೊಲೆಯ, ಕೆಂಬಟ್ಟಿ, ಮಾದಿಗ, ಮಲೆಯ, ಮಾರಿ ಹೊಲೆಯ. ಕೊಡಗಿನಲ್ಲಿ ಇಪ್ಪತ್ತೈದಕ್ಕಿಂತ ಹೆಚ್ಚು ಬಗೆಯ ಸಮುದಾಯಗಳಿದ್ದವೆಂಬ ವಿಷಯ ನಮಗೆ ರಾಜೇಂದ್ರನಾಮೆ ಕೃತಿಯಿಂದ ತಿಳಿದು ಬರುತ್ತದೆ. "ಕೊಡಗಿನಲ್ಲಿ ನಲ್ವತಕ್ಕೂ ಅಧಿಕ ಜಾತಿ ಮತ್ತು ಬುಡಕಟ್ಟುಗಳಿದ್ದವು"[೨೩] ಎಂದು ಎಂ.ಎನ್. ಶ್ರೀನಿವಾಸ್ ಅಭಿಪ್ರಾಯ ಪಡುತ್ತಾರೆ. ಆದರೆ ವರ್ತಮಾನದಲ್ಲಿ ಹಲವು ಸಮುದಾಯಗಳು ನಾಶವಾಗಿದ್ದು ಕೆಲವೇ ಕೆಲವು ಅಸ್ತಿತ್ವದಲ್ಲಿವೆ. ಉಳಿದಿರುವ ಸಮುದಾಯಗಳಾದ ಕೊಡವ, ಅಮ್ಮ ಕೊಡವ, ಪೆಗ್ಗಡೆ, ಐರಿ, ಕೊಯವ, ಕೋಲೆಯ, ಬಾಣಿಯ, ಬೂಣೆ ಪಟ್ಟಮ, ಕೆಂಬಟ್ಟಿ, ಬಣ್ಣ, ಅಲಕ್ ಬಣ್ಣ, ಮಲಿಯ, ಪಣಿಕ, ಕಣಿಯ, ಮೇದ, ಕಾಪಳ, ಪಾಲೆ, ಎರವ, ಕುರುಬ, ಕೊಡವ ಮಾಪಿಳ್ಳೆ ಇತ್ಯಾದಿ. ಈ ಸಮುದಾಯಗಳು ಇಂದು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಟದ ಬದುಕನ್ನು ನಡೆಸುತ್ತಿವೆ.

ಕೊಡಗಿನಲ್ಲಿ ಕೊಡವರು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ. ವಿಶಿಷ್ಟ ಸಂಸ್ಕೃತಿ, ಸಂಪ್ರದಾಯ, ಆಚರಣೆಗಳನ್ನು ಹೊಂದಿದ್ದಾರೆ."ಕೊಡಗಿನ ಸ್ಥಳೀಯ ಜನರಲ್ಲಿ ಕೊಡವರು ಬಹು ಸಂಖ್ಯಾತರಾಗಿರುವುದರಿಂದ ಅವರ ಆಚಾರ, ವಿಚಾರ ಸಂಪ್ರದಾಯಗಳನ್ನು ಗಿರಿಜನರನ್ನೂ ಒಳಗೊಂಡಂತೆ ಬಹುತೇಕ ಮಂದಿ ಅನುಕರಿಸಿ ತಮ್ಮದನ್ನಾಗಿಸಿಕೊಂಡಿದ್ದಾರೆ. ಹೊರಗಿನಿಂದ ಬಂದವರೂ ಕೂಡ ಅನೇಕ ಸಾಮಾಜಿಕ ನಡಾವಳಿಗಳನ್ನು ತಮ್ಮಲ್ಲಿ ಅಳವಡಿಸಿಕೊಂಡಿದ್ದಾರೆ."[೨೪] ಕೊಡಗಿನ ಸಾಮಾಜಿಕ ವ್ಯವಸ್ಥೆಯ ಮೂಲ ಬುನಾದಿ 'ಒಕ್ಕ'. ಇದು ನೇರ ಸಂತತಿಯುಳ್ಳ ಸ್ಥಳೀಯ ಅವಿಭಕ್ತ ಕುಟುಂಬವಾಗಿದೆ. ಒಕ್ಕದ ಸದಸ್ಯತ್ವವು ಹುಟ್ಟಿನಿಂದ ಬರುವಂತದ್ದು. ಒಬ್ಬ ವ್ಯಕ್ತಿಯನ್ನು ಅವನ ಒಕ್ಕದಿಂದ ಹಾಗು ಅವನು ಯಾವ ಒಕ್ಕದವನು ಎಂದು ಗುರುತಿಸಲಾಗುತ್ತದೆ. ಒಕ್ಕದ ಹಿರಿಯ ಪುರುಷ ಕೊರವುಕಾರನಾದರೆ; ಸ್ತ್ರೀ ಕೊರವುಕಾರ್ತಿ. ಇಡೀ ಕುಟುಂಬದ ಜವಾಬ್ದಾರಿ ಇವರದಾಗಿರುತ್ತದೆ. ಕುಟುಂಬದ ಸದಸ್ಯರು ಅನ್ಯೋನ್ಯವಾಗಿರುವಂತೆ, ಕುಟುಂಬದ ಭೂಮಿ ಸರಿಯಾಗಿ ವ್ಯವಸಾಯವಾಗುವಂತೆ ನೋಡಿಕೊಳ್ಳುವ ಜವಾಬ್ದಾರಿ

ಇವರದು. ಒಕ್ಕದ ಮೂಲ ಪುರುಷನನ್ನು 'ಕಾರೋಣ' ಎನ್ನುತ್ತಾರೆ. ಇವರಿಗೆ 'ಕೈಮಡ' ಎಂಬ ಗುಡಿಯನ್ನು ಕಟ್ಟಿ ಆರಾಧಿಸಲಾಗುತ್ತದೆ.

ಒಂದು ಒಕ್ಕದ ಸದಸ್ಯರೆಲ್ಲರೂ ಒಂದೆಡೆ ಒಂದೇ ಮೂಲಮನೆಯಲ್ಲಿ ಜೀವಿಸುತ್ತಿದ್ದರು. ಈ ಮನೆಗಳನ್ನು 'ಐನ್‌ಮನೆ' ಎನ್ನುತ್ತಾರೆ. ಸಾಮಾನ್ಯವಾಗಿ ಐನ್‌ಮನೆಗಳು ಎತ್ತರದ ಸ್ಥಳಗಳಲ್ಲಿ ಕಟ್ಟಲ್ಪಟ್ಟಿರುತ್ತವೆ. ಅವುಗಳನ್ನು ತಲುಪಲು ಕಿರಿದಾದ ಓಣಿಗಳಿರುತ್ತವೆ. ಈ ಮನೆಗಳ ಸುತ್ತಲೂ ಆ ಕುಟುಂಬಕ್ಕೆ ಸೇರಿದ ಗದ್ದೆ, ತೋಟಗಳು ಇರುತ್ತವೆ. ಈ ಎಲ್ಲಾ ಆಸ್ತಿಗಳನ್ನು ಬೇರೆಯವರ ಆಸ್ತಿಯಿಂದ ಬೇರ್ಪಡಿಸಲು ವಿಶಿಷ್ಟವಾದ ಕಂದಕಗಳಿರುತ್ತವೆ. ಇವುಗಳನ್ನು 'ಕಡಂಗ್' ಎನ್ನುತ್ತಾರೆ. ಒಕ್ಕಗಳಿಗೆ ವಿಶಿಷ್ಟವಾದ 'ಮನೆಪೆದ'(ಮನೆಹೆಸರು)ಗಳಿವೆ. ಇದನ್ನು 'ಒಕ್ಕಪೆದ' ಎಂದೂ ಕರೆಯುತ್ತಾರೆ. ಪ್ರತಿಯೊಂದು ಒಕ್ಕಕ್ಕೂ ಶುಭಾಶುಭ ಕಾರ್ಯಗಳಿಗೆ ನೆರವಾಗುವ ಮತ್ತೊಂದು ಮಿತ್ರ ಕುಟುಂಬವಿರುತ್ತದೆ. ಇವರನ್ನು 'ಅರುವ' ಎನ್ನುತ್ತಾರೆ. ಹಲವು ಒಕ್ಕಗಳು ಸೇರಿ ಒಂದು ಊರಾಗುತ್ತದೆ. ಊರಿನ ಜನರೆಲ್ಲರೂ ಒಂದೇ ಕಡೆ ಗುಂಪಾಗಿ ಮನೆಮಾರು ಕಟ್ಟಿಕೊಂಡು ಬದುಕುವ ರೀತಿ ಕೊಡಗಿನಲ್ಲಿಲ್ಲ. ಕುಟುಂಬಕ್ಕೆ 'ಕೊರವುಕಾರ' ಹಾಗೂ ಊರಿಗೆ 'ತಕ್ಕ' ಎಂಬ ಮುಖ್ಯಸ್ಥರು ಇರುತ್ತಾರೆ. ಈ ಹಿನ್ನೆಲೆಯಲ್ಲಿ "ಒಕ್ಕಾಮೆ ಇಂಜಕ ತಕ್ಕಾಮೆ"(ಒಕ್ಕಗಳೆಲ್ಲವು ಸರಿಯಿದ್ದಾಗ ಮಾತ್ರ ತಕ್ಕನ ಸ್ಥಾನಕ್ಕೆ ಬೆಲೆ) ಎಂಬ ಗಾದೆ ಮಾತನ್ನು ಗಮನಿಸಬಹುದು. ಗ್ರಾಮದಲ್ಲಿ ಕುಟುಂಬವೊಂದಕ್ಕೆ ತೊಂದರೆಯಾಗಿ ವ್ಯವಸಾಯ ಮಾಡಲಾಗದ ಸಂದರ್ಭಗಳು ಎದುರಾದಾಗ ತಕ್ಕನು ತನ್ನ ಮುಂದಾಳತ್ವದಲ್ಲಿ ಊರಿನ ಜನರೆಲ್ಲರನ್ನು ಸೇರಿಸಿಕೊಂಡು ಆ ಕುಟುಂಬಕ್ಕೆ ನೆರವಾಗುವ ವ್ಯವಸ್ಥೆಯಿದೆ.

ಪ್ರತೀ ಊರುಗಳಿಗೆ ಊರ್‌ತಕ್ಕ ಎಂಬ ಮುಖ್ಯಸ್ಥರಿರುತ್ತಾರೆ. ಊರಿನ ನ್ಯಾಯ ತೀರ್ಮಾನಗಳನ್ನು ಮಾಡಲು ಪ್ರತ್ಯೇಕ ಸ್ಥಳವಿರುತ್ತದೆ. ಇದನ್ನು 'ಊರ್‌ಮಂದ್' ಎನ್ನುತ್ತಾರೆ. ಊರಿನ ನಿಯಮಗಳನ್ನು ಮೀರಿದವರಿಗೆ ಶಿಕ್ಷೆ ವಿಧಿಸುವ ಕ್ರಮವೂ ಇದೆ. ನೈತಿಕ ತಪ್ಪು ಎಸಗಿದವರನ್ನು ಊರಿನಿಂದ, ಒಕ್ಕದಿಂದ 'ಪೊರಂಬಡಿ'(ಬಹಿಷ್ಕಾರ) ಇಡುವ ವ್ಯವಸ್ಥೆ ಹಿಂದೆ ಇತ್ತು. ಹಲವು ಊರುಗಳು ಸೇರಿ ಒಂದು ನಾಡು ಆಗುತ್ತದೆ. ಕೊಡವ ಜನಪದ ಗೀತೆಗಳಲ್ಲಿ ೩೫ ನಾಡುಗಳ ಉಲ್ಲೇಖವಿದೆ. ಹಾಲೇರಿ ರಾಜರ ಆರಂಭದ ಕಾಲದಲ್ಲಿ ೨೭ ನಾಡುಗಳಿದ್ದವು. ೧೮ನೇ ಶತಮಾನದ ಮಧ್ಯಭಾಗದಲ್ಲಿ ಅದಕ್ಕೆ ೮ ಹೊಸ ನಾಡುಗಳನ್ನು ಸೇರಿಸಲಾಯಿತು. ಹೀಗಾಗಿ ೩೫ ನಾಡುಗಳ ಪ್ರಸ್ತಾಪ ಅಲ್ಲಲ್ಲಿ ಸಿಗುತ್ತವೆ. ಊರಿಗೆ ಊರುತಕ್ಕರು ಇರುವಂತೆ ಈ ನಾಡುಗಳಿಗೆ ನಾಡುತಕ್ಕರು ಇರುತ್ತಿದ್ದರು. ನಿಗದಿತ ಕುಟುಂಬಗಳ ಹಿರಿಯರು ಈ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಿದ್ದರು. 'ದೇವತಕ್ಕ'

ಹಾಗೂ 'ಭಂಡಾರ ತಕ್ಕ' ಆಯಾ ಊರಿನ ದೇವಸ್ಥಾನ ಹಾಗು ಭಂಡಾರಗಳ ಜವಾಬ್ದಾರಿಯನ್ನು ಹೊಂದಿರುತ್ತಿದ್ದರು.

'ತಕ್ಕಾಮೆ'(ತಕ್ಕನ ಸ್ಥಾನ) ಎಂಬುದು ವಂಶಪಾರಂಪರ್ಯವಾಗಿ ಬರುವ ಅಧಿಕಾರವಾಗಿತ್ತು. ಆದರೆ ಎಲ್ಲರಿಗೂ ಅಯೋಗ್ಯನೆಂದು ಕಂಡುಬರುವ ತಕ್ಕನನ್ನು ಬದಲಿಸಿ ಬೇರೊಬ್ಬನನ್ನು ಆರಿಸುವ ಅಧಿಕಾರ ಊರುಸಭೆ ಮತ್ತು ನಾಡುಸಭೆಗೆ ಇತ್ತು. ಗ್ರಾಮ ದೈವಗಳ ಪೂಜೆ, ಊರಿನ ಕೆಲಸ, ಊರಹಬ್ಬ ಇತ್ಯಾದಿ ಸಂದರ್ಭಗಳಲ್ಲಿ ತಕ್ಕನು ವಹಿಸುವ ಜವಾಬ್ದಾರಿಯನ್ನು ಪ್ರತಿಯೊಬ್ಬರೂ ನಿರ್ವಹಿಸಲೇಬೇಕಿತ್ತು. ಇದಕ್ಕೆ ತಪ್ಪಿದವರಿಗೆ 'ಪೊಳೆವಾಡ್'(ದಂಡ) ವಿಧಿಸಲಾಗುತಿತ್ತು. ಈ ಹಣವನ್ನು ಊರಿನ ಹಿತಕ್ಕಾಗಿ ಬಳಸುತಿದ್ದರು. ಊರಿನ ತೀರ್ಪನ್ನು ವಿರೋಧಿಸಿ ದಂಡ ಕಟ್ಟುವುದಕ್ಕೆ ಪ್ರತಿಭಟಿಸಿದರೆ ಅಂತಹ ಕುಟುಂಬವನ್ನು ಊರಿನಿಂದ, ಕುಟುಂಬದಿಂದ 'ಪೊರಂಬಡಿ'(ಬಹಿಷ್ಕಾರ) ಇಡಲಾಗುತ್ತಿತ್ತು. ಒಕ್ಕ, ಊರು ಹಾಗು ನಾಡುಗಳಲ್ಲಿನ ಕುಟುಂಬಗಳಲ್ಲಿ ಉಂಟಾಗಬಹುದಾದ ಜಗಳಗಳನ್ನು ಎಲ್ಲರೂ ಒಪ್ಪುವ ರೀತಿಯಲ್ಲಿ ಪರಿಹರಿಸಿ ಮುಂದೆ ನೆಮ್ಮದಿಯಾಗಿ ಬಾಳುವಂತೆ ಮಾಡುವ ಜವಾಬ್ದಾರಿ ತಕ್ಕರದಾಗಿತ್ತು.

ಭಾರತದಾದ್ಯಂತ ಚಾಲ್ತಿಯಲ್ಲಿದ್ದ ಶ್ರೇಣೀಕೃತ ಸಮಾಜದ ಕುರುಹುಗಳು ಕೊಡಗಿನಲ್ಲಿ ಕಂಡುಬಂದರೂ; ಅಷ್ಟೊಂದು ತೀವ್ರತರವಾಗಿರಲಿಲ್ಲ. ಆಯಾ ಸಮುದಾಯ ಊರಿನಲ್ಲಿ ತನ್ನ ಪಾಲಿನ ಕೆಲಸಗಳನ್ನು ಮಾಡುತಿತ್ತು. "ಕೊಡಗಿನ ಸಮಾಜ ಜೀವನದಲ್ಲಿ ಕೊಡವರು ಅವರನ್ನು ಅನುಸರಿಸುವ ಬಣ್ಣರು, ಪಣಿಕರು, ಹೊಲೆಯರು ಮೊದಲಾದ ಇತರ ಜಾತಿಗಳ ಜನರು ಒಂದು ಸುಸ್ಥಿತಿಯಿಂದ ವ್ಯವಸ್ಥೆಗೊಂಡಿರುವ ಸಮುದಾಯವಾಗಿದ್ದಾರೆ"[೨೫] ಎಂಬ ಅಭಿಪ್ರಾಯವಿದೆ. 'ಪಟ್ಟೋಲೆ ಪಳಮೆ' ಕೃತಿಯು ಕೊಡಗಿನ ಮೂಲ ಜಾತಿಗಳಲ್ಲಿ ಕಂಡುಬರುತಿದ್ದ ಹಲವು ಅಂತಸ್ತುಗಳನ್ನು ತಿಳಿಸುತ್ತದೆ. "ನಾಯರು, ಭಂಟರು, ಒಕ್ಕಲಿಗರು, ಗೌಡುಗಳು, ವೆಳ್ಳಾರರು ಮತ್ತು ಈ ತರಗತಿಯ ಶೂದ್ರರು ಕೊಡಗರ ಮನೆಯ ಎಲ್ಲಾ ಭಾಗಗಳಿಗೂ ಬರಬಹುದು. ತೀಯರು, ಬಿಲ್ಲವರು, ಹೆಗ್ಗಡೆಗಳು, ಅಯಿರಿಗಳು, ಬಣ್ಣರು, ಅಗಸರು ಮತ್ತು ಈ ತರಗತಿಯ ಶೂದ್ರರು ನೆಲ್ಲಕ್ಕಿ ನಡುಬಾಡೆಗೂ ಕನ್ನಿಕೋಂಬರೆಗೂ ಮತ್ತು ಅಡಿಗೆ ಮನೆಗೂ ಸೇರಕೂಡದು. ಆದರೆ ಮದುವೆಗೆ ಮೇಲ್ಕಟ್ಟು ಕಟ್ಟಿದ ಮೇಲೆಯೂ, ಕಾರಣ ತೆರೆಕಟ್ಟುವ ದಿವಸವೂ, ಈ ತರದ ಶೂದ್ರರು ನೆಲ್ಲಕ್ಕಿ ನಡುಬಾಡೆಗೆ ಬರಬಹುದು. ಈ ಮೇಲೆ ಶುದ್ಧ ಮಾಡುವರು"[೨೬] ಎಂದು ದಾಖಲಿಸುತ್ತದೆ. ಆದರೆ 'ಪೊಲೆ ಮೋವನೇ ತಲೆ ಮೋವನ್'(ಹೊಲೆಯರ ಮಗನೇ ಕುಟುಂಬದ ಹಿರಿಯ ಮಗ), 'ಆಳುಂಡೇಂಗಿ ಆದ'(ಆಳಿದ್ದರೆ ರಾಜವಾನ), 'ಆದಂಗ್ ಆರ್ ಕಾರ್ಯ ಪೊಲೆಯಂಗ್ ನೂರ್

ಕಾರ್ಯ'(ಯಜಮಾನನಿಗೆ ಆರು ಕಾರ್ಯವಾದರೆ ಪೊಲೆಯನಿಗೆ ನೂರು ಕಾರ್ಯ), 'ಕೊಡವಡ ನಲ್ಲಾಂಗ್ ತೀಯಾಂಗ್ ಅಡಿಯ ಕುಡಿಯನೇ ಮಿಂಞ' (ಕೊಡವರ ಒಳಿತು ಕೆಡುಕುಗಳಿಗೆ ಅಡಿಯ ಕುಡಿಯರೇ ಮೊದಲು) ಈ ಗಾದೆಗಳು ಕೊಡಗಿನ ಪ್ರಮುಖ ಸಮುದಾಯವೆಂದು ಪರಿಗಣಿಸಲ್ಪಟ್ಟಿರುವ ಕೊಡವರು ತಮ್ಮ ಪ್ರತಿಯೊಂದು ಕಾರ್ಯಗಳಿಗೆ ಅಡಿಯ, ಕುಡಿಯ, ಕೆಂಬಟ್ಟಿ ಮೊದಲಾದ ತಳ ಸಮುದಾಯಗಳನ್ನು ಅವಲಂಭಿಸಿದ್ದು ಅವರೊಂದಿಗೆ ಅನ್ಯೋನ್ಯವಾಗಿದ್ದರು ಎಂಬುದನ್ನು ಬಿಂಬಿಸುತ್ತವೆ.

ಹುಟ್ಟಿನಿಂದ ಯಾರೂ ಭೂಮಾಲಿಕರಾಗಿ ಅಥವಾ ಸೇವಕರಾಗಿ ಹುಟ್ಟುವುದಿಲ್ಲ. ಆದರೆ ಭೂಮಿ ಹಂಚಿಕೆಯ ವ್ಯವಸ್ಥೆಯು ಈ ರೀತಿಯ ವೈರುಧ್ಯಗಳನ್ನು ಹುಟ್ಟುಹಾಕುತ್ತವೆ. ಕೊಡಗಿನ ಬೇರೆ ಬೇರೆ ಬುಡಕಟ್ಟು ಸಮುದಾಯಗಳಿಗೆ ಮಧ್ಯಕಾಲೀನೋತ್ತರ ಕಾಲದವರೆಗೂ ಖಾಸಗಿ ಆಸ್ತಿಯ ಕಲ್ಪನೆ ಇರಲಿಲ್ಲ. ಖಾಸಗಿ ಆಸ್ತಿಯ ಕಲ್ಪನೆ ಜಾಗ್ರತವಾದ ಹಾಗೆ ಶೋಷಣೆ ಅನಿವಾರ್ಯವಾಯಿತು ಎನ್ನಬಹುದು. ಆದರೆ "ಇಂಥ ಶೋಷಣೆಯ ಅಭಿವ್ಯಕ್ತತೆಯೇ ಗುಲಾಮಿ ಪದ್ಧತಿ"[೨೭] ಎಂದು ತಂಬಂಡ ವಿಜಯ್ ಪೂಣಚ್ಚ ಅಭಿಪ್ರಾಯ ಪಡುತ್ತಾರೆ. ಆದರೆ ಚರಿತ್ರೆಯ ಪುಟಗಳಲ್ಲಿ ದಾಖಲಾಗಿರುವ ಗುಲಾಮಿ ಪದ್ಧತಿ, ಊಳಿಗಮಾನ್ಯ ಪದ್ಧತಿಯ ಶೋಷಣೆಗಳು, ದೌರ್ಜನ್ಯಗಳ ಕರಾಳ ಸ್ವರೂಪವನ್ನು ಕೊಡಗಿನ ಸಂಸ್ಕೃತಿಯಲ್ಲಿ ಕಾಣುವುದಿಲ್ಲ. ಇಲ್ಲಿ ಜನಾಂಗ, ಜಾತಿ, ವರ್ಗಗಳ ನಡುವೆ, ಭಾಷೆ, ಸಂಸ್ಕೃತಿಗಳ ತಳಹದಿಯಲ್ಲಿ ಕಲಹ, ದಂಗೆ, ದೌರ್ಜನ್ಯಗಳು ನಡೆದಿರುವುದು ವಿರಳ. ತಳ ಸಮುದಾಯದವರನ್ನು ಊರಾಚೆ ಇಟ್ಟು ಅವರನ್ನು ಅಸ್ಪೃಶ್ಯರೆಂಬಂತೆ ಪರಿಗಣಿಸಿ ಸಮಾಜದಿಂದ ಹೊರಗುಳಿಯುವಂತೆ ಮಾಡಿದ ಸನ್ನಿವೇಶಗಳಿಲ್ಲವೆಂದೇ ಹೇಳಬಹುದು.

**೨.೪ ಧಾರ್ಮಿಕತೆ**

ಕೊಡಗಿನವರು ಪ್ರಕೃತಿ ಆರಾಧಕರು. ನಿಸರ್ಗದ ಪ್ರತಿಯೊಂದು ಅಂಶಗಳಲ್ಲಿ ದೈವತ್ವವನ್ನು ಕಾಣುವವರು. ಕುಲದೇವಿ ಕಾವೇರಿಯನ್ನು ಜಲರೂಪದಲ್ಲಿ ಪೂಜಿಸುವವರು. ಜಗತ್ತನ್ನು ಬೆಳಗುವ ಸೂರ್ಯ ಹಾಗೂ ಮನೆಯೊಳಗಿನ ದೀಪಕ್ಕೆ ವಿಶೇಷ ಮಹತ್ವ ನೀಡುವರು. ವಿಶೇಷ ಸಂದರ್ಭಗಳಲ್ಲಿ ಸೂರ್ಯನಿಗೆ ಹಾಗೂ ನೆಲ್ಲಕ್ಕಿ ನಡುಬಾಡೆಯಲ್ಲಿನ ದೀಪಕ್ಕೆ ಅಕ್ಕಿ ಹಾಕಿ ಪ್ರಾರ್ಥಿಸುವರು. ದೈವಗಳಲ್ಲಿ ಅಪಾರ ಭಕ್ತಿ ಹಾಗೂ ನಂಬಿಕೆಯುಳ್ಳ ಕೊಡವರ ಧಾರ್ಮಿಕತೆಯ ಬಗ್ಗೆ ಕೊಡವ ಜನಪದ ಗೀತೆಗಳು ವಿಶೇಷ ಬೆಳಕು ಚೆಲ್ಲುತ್ತವೆ.

"ಪೊಮ್ಮಾಲೆ ಕೊಡವುಲ್ ಎನ್ನತ್ತ ನೆಲೆಯಾಪ
ದೇಶಕೋರ್ ಮಾದೇವಿ, ಕಾವೇರಮ್ಮೆ ಮಾತಾಯಿ

ನಾಡ್‌ಕೋರ್ ಮಾದೇವ, ಊರ್‌ಕೋರ್ ಪೊವ್ವದಿ
ಕೇರಿಕೋರ್ ಅಯ್ಯಪ್ಪ, ಒಕ್ಕಕೋರ್ ಕಾರೋಣ
ಓಡೆಕೋರ್ ನಾಥನೂ, ಓಣಿಕೋರ್ ಪೂದನೂ
ಇನ್ನತ್ತ ನೆಲೆಯಾಪ"

ಚಿನ್ನದ ಭೂಮಿ ಕೊಡಗಿನಲ್ಲಿ, ಇಡೀ ದೇಶಕ್ಕೆ ಒಬ್ಬಳೇ ದೇವಿ ಕಾವೇರಿಯೂ, ನಾಡಿಗೆ ಒಬ್ಬ ಮಾದೇವನು, ಊರಿಗೊಬ್ಬ ಪೊವ್ವದಿ(ಭಗವತಿ)ಯೂ, ಕೇರಿಗೊಬ್ಬ ಅಯ್ಯಪ್ಪನೂ, ಪ್ರತೀ ಕುಟುಂಬಕೊಬ್ಬ ಕಾರೋಣ(ವಂಶದ ಹಿರಿಯ)ನೂ, ಓಡೆಗೊಬ್ಬ ನಾಥ(ನಾಗ)ನೂ, ಓಣಿಗೊಬ್ಬ ಪೂದನೂ ನೆಲೆನಿಂತಿದ್ದಾರೆಂದು ವರ್ಣಿಸುತ್ತಾರೆ. ಈ ಹಾಡಿನಲ್ಲಿ ಉಕ್ತವಾಗಿರುವ ಊರಿಗೊಬ್ಬ ಪೊವ್ವದಿ, ಕೇರಿಗೊಬ್ಬ ಅಯ್ಯಪ್ಪ ಹಾಗೂ ಓಣಿಗೊಬ್ಬ ಪೂದ ಈ ದೈವಗಳನ್ನು ತೆರೆಕಟ್ಟುವ ಆಚರಣೆಯ ಮೂಲಕ ಆರಾಧಿಸಲಾಗುತ್ತದೆ. ಇದರೊಂದಿಗೆ ಚೌಂಡಿ, ಭದ್ರಕಾಳಿ, ವಿಷ್ಣುಮೂರ್ತಿ, ಮಂದಣಮೂರ್ತಿ, ಮಾದೇರಪ್ಪ ಇತ್ಯಾದಿ ದೈವಗಳೂ ತೆರೆಕಟ್ಟಿ ಆರಾಧಿಸಲ್ಪಡುತ್ತವೆ. ಭಗವತಿ ದೈವವನ್ನು ಹೊರತುಪಡಿಸಿ ಉಳಿದೆಲ್ಲಾ ದೈವಗಳು ಹಾಲು ಒಸರುವ ಮರದಡಿಯಲ್ಲಿ ನೆಲೆನಿಂತವುಗಳು. ಕೆಲವು ದೈವಗಳಿಗೆ ಕೋಟಗಳೆಂಬ ಪುಟ್ಟ ಗುಡಿಗಳಿವೆ.

ಕೊಡವ ಜನಪದರು ತಮ್ಮ ಕುಟುಂಬದ ಮೂಲ ಕಾರಣನಾದ ವ್ಯಕ್ತಿಯನ್ನು ಕಾರಣ/ಕಾರೋಣ/ಗುರು ಕಾರೋಣ ಎಂದು ಆರಾಧಿಸುತ್ತಾರೆ. ಮೂಲಪುರುಷನ ಪರಂಪರೆಯಲ್ಲಿ ಸಾಗಿ ಬಂದು ದೇಹತ್ಯಾಗ ಮಾಡಿ ಕಣ್ಮರೆಯಾದ ತಮ್ಮ ಹಿರಿಯರನ್ನೆಲ್ಲಾ ಕಾರೋಣರೆಂದು ಭಕ್ತಿ, ಗೌರವದಿಂದ ಪೂಜಿಸುತ್ತಾರೆ. ಕೊಡವರ ಮೂಲಮನೆಯನ್ನು 'ಐನ್‌ಮನೆ' ಅಥವಾ 'ಬಲ್ಯಮನೆ' ಎಂದು ಕರೆಯುತ್ತಾರೆ. ಇಲ್ಲಿ ಕಾರೋಣನನ್ನು ಆರಾಧಿಸಲು ಪ್ರತ್ಯೇಕವಾದ ಪ್ರಾರ್ಥನಾ ಕೊಠಡಿ ಇರುತ್ತದೆ. ಅದನ್ನು 'ಕನ್ನಿಕೋಂಬರೆ' ಎಂದು ಕರೆಯುತ್ತಾರೆ. ಪ್ರತೀದಿನವು ಆ ಕೊಠಡಿಯಲ್ಲಿ ಕಾರೋಣರಿಗೆ ನೈವೇದ್ಯವನ್ನು ಅರ್ಪಿಸುತ್ತಾರೆ. ಆ ನೈವೇದ್ಯವನ್ನು ಕೊಡವ ಭಾಷೆಯಲ್ಲಿ 'ಮೀದಿ' ಎನ್ನುತ್ತಾರೆ. ಗ್ರಾಮದಲ್ಲಿ ಸಾಮಾನ್ಯವಾಗಿ ಪ್ರತೀ ಕುಟುಂಬದವರಿಗೂ ತಮ್ಮದೇ ಆದ ಕಾರೋಣರ ಆರಾಧನಾ ಸ್ಥಾನವಿರುತ್ತದೆ. ಇದನ್ನು 'ಕೈಮಡ' ಎನ್ನುತ್ತಾರೆ. ವಾರ್ಷಿಕವಾಗಿ ಅಲ್ಲಿ 'ಕಾರೋಣಂಗ್ ಕೊಡ್‌ಪೊ' ಎಂಬ ವಿಶೇಷವಾದ ಪಿತೃ ಆರಾಧನಾ ಸಮಾರಂಭವು ನಡೆಯುತ್ತದೆ. ಆ ಸಂದರ್ಭದಲ್ಲಿ ವಿವಿಧ ಭಕ್ಷ್ಯಗಳನ್ನು ತಯಾರಿಸಿ ಎಡೆ ಇಡಲಾಗುತ್ತದೆ. ಯಾವುದೇ ವಿಶೇಷವಾದ ಕೌಟುಂಬಿಕ, ಸಾಮಾಜಿಕ, ವೈಯಕ್ತಿಕ ಕಾರ್ಯಕ್ರಮಗಳನ್ನು ಪ್ರಾರಂಭಿಸುವ ಮುನ್ನ ಕೊಡವರು ಗುರುಕಾರೋಣನನ್ನು ಪ್ರಾರ್ಥಿಸುತ್ತಾರೆ. ನೆಲ್ಲಕ್ಕಿ ನಡುಬಾಡೆಯಲ್ಲಿ ನೆರೆದವರೆಲ್ಲರಿಗೂ ಅಕ್ಕಿಯನ್ನು ನೀಡಿ ಹಿರಿಯನಾದ

ವ್ಯಕ್ತಿ ನಾಲ್ಕು ಮಾತನಾಡಿ ಅಲ್ಲಿ ಉರಿಯುತ್ತಿರುವ ದೀಪಕ್ಕೆ ಅಕ್ಕಿ ಹಾಕುತ್ತಾನೆ. ಉಳಿದವರೂ ಅಕ್ಕಿ ಹಾಕಿ ಪ್ರಾರ್ಥಿಸುತ್ತಾರೆ.

ಕೃಷಿ ಪ್ರಧಾನವಾದ ಕೊಡಗಿನಲ್ಲಿ ಜನಪದರು ಕೈಲ್‌ಪೊಳ್ದ್ ಹಬ್ಬವನ್ನು ಆಚರಿಸುತ್ತಾರೆ. ಕೈಲ್ ಮುಹೂರ್ತ ಎಂದೂ ಕರೆಯಲ್ಪಡುವ ಈ ಹಬ್ಬದಲ್ಲಿ ಬೇಸಾಯಕ್ಕೆ ಬಳಸಿದ ಆಯುಧಗಳನ್ನು ಶುಚಿಗೊಳಿಸಿ ಪೂಜಿಸಲಾಗುತ್ತದೆ. ಎತ್ತುಗಳಿಗೆ ಅರಶಿನ ಮಿಶ್ರಿತ ಎಣ್ಣೆ ಲೇಪಿಸಿ ಮೈತೊಳೆದು ಸಿಂಗರಿಸುತ್ತಾರೆ. ಹಬ್ಬದ ಅಡುಗೆಯನ್ನು ಎಡೆ ಇಟ್ಟ ನಂತರ ಎಲ್ಲರೂ ಒಟ್ಟಾಗಿ ಭೋಜನ ಮಾಡುತ್ತಾರೆ. ಕಾವೇರಿ ಚಂಗ್ರಾಂದಿ ಕೊಡಗಿನ ಮತ್ತೊಂದು ಹಬ್ಬವಾಗಿದೆ. ಇದು ಕೊಡಗಿನ ಕುಲದೇವಿ ಕಾವೇರಿಯ ಆರಾಧನೆಯಾಗಿದೆ. ಸೂರ್ಯನು ತುಲಾರಾಶಿಗೆ ಪ್ರವೇಶಿಸುವಾಗ ಕಾವೇರಿಯ ಉಗಮ ಸ್ಥಾನ ತಲಕಾವೇರಿಯ ಕುಂಡಿಕೆಯಲ್ಲಿ ತೀರ್ಥೋದ್ಭವವಾಗುತ್ತದೆ ಎಂಬುದು ಪ್ರತೀತಿ. ಈ ಸಂದರ್ಭದಲ್ಲಿ ಸೌತೆ ಅಥವಾ ತೆಂಗಿನಕಾಯಿಯಲ್ಲಿ ಕಾವೇರಿಯ ಪ್ರತಿರೂಪ ಮಾಡಿ ಪೂಜಿಸಲಾಗುತ್ತದೆ. ಇದನ್ನು 'ಕಣಿ ಪೂಜುವೊ' ಎನ್ನುತ್ತಾರೆ. ಕೊಡಗಿನಲ್ಲಿ ಆಚರಿಸಲ್ಪಡುವ ಮತ್ತೊಂದು ಪ್ರಮುಖ ಹಬ್ಬ ಪುತ್ತರಿ. ನವೆಂಬರ್ ಅಥವಾ ಡಿಸೆಂಬರ್ ತಿಂಗಳಿನಲ್ಲಿ ರೋಹಿಣಿ ನಕ್ಷತ್ರದ ಹುಣ್ಣಿಮೆಯಂದು ಈ ಹಬ್ಬವನ್ನು ಆಚರಿಸುತ್ತಾರೆ. ಪುತ್ತರಿ ಎಂದರೆ ಹೊಸ ಅಕ್ಕಿ ಎಂದು ಅರ್ಥ. ಹೊಸ ಭತ್ತವನ್ನು ಮನೆಗೆ ತರುವ ಸಂಭ್ರಮವೇ ಇದರ ಮೂಲ ಸಂಕೇತವಾಗಿದೆ. ಕುಟುಂಬದ ಹಿರಿಯನು ಮನೆಯವರೊಂದಿಗೆ ಗದ್ದೆಗೆ ಹೋಗಿ ಕದಿರು ಕುಯ್ಯುವ ಆಚರಣೆ ನಡೆಯುತ್ತದೆ. ಈ ಸಂದರ್ಭದಲ್ಲಿ ಕೋಲಾಟ್, ಪರಿಯಕಳಿಯಂತಹ ಜನಪದ ನೃತ್ಯಗಳ ಪ್ರದರ್ಶನ ನಡೆಯುತ್ತವೆ.

ಇವುಗಳಲ್ಲದೆ ಆಯಾಯ ಗ್ರಾಮಗಳ ಗ್ರಾಮದೇವತೆಗಳ ವಾರ್ಷಿಕ ಉತ್ಸವಗಳು ಆಚರಿಸಲ್ಪಡುತ್ತವೆ. ಗ್ರಾಮಗಳಲ್ಲಿ ನೆಲೆಸಿರುವ ಭದ್ರಕಾಳಿ ಮತ್ತು ಅಯ್ಯಪ್ಪ ದೇವರ ಪ್ರೀತ್ಯರ್ಥ ಬೋಡ್ ಹಬ್ಬವು ನಡೆಯುತ್ತದೆ. ಊರಿನ ಗಂಡಸರು ವಿವಿಧ ವೇಷಗಳನ್ನು ತೊಟ್ಟು ಗ್ರಾಮದ ಮನೆಮನೆಗಳಿಗೆ ಹೋಗುತ್ತಾರೆ. ದೋಳ್ ಎಂಬ ವಾದ್ಯವನ್ನು ಬಾರಿಸುತ್ತಾ ಹಾಡುವ ದೋಳ್‌ಪಾಟ್‌ಗೆ ತಕ್ಕಂತೆ ನರ್ತಿಸುತ್ತಾರೆ. ಕುದುರೆಯ ಪ್ರತಿಕೃತಿಯನ್ನು ಮಾಡಿ ಹೊತ್ತುಕೊಂಡು ನರ್ತಿಸುವ ಕುದ್‌ರೆ ಎಡ್‌ಪೊ ಆಚರಣೆಯು ನಡೆಯುತ್ತದೆ. ಕೆಲವು ಗ್ರಾಮಗಳಲ್ಲಿ ನಡೆಯುವ ಬೋಡ್‌ಹಬ್ಬಗಳಲ್ಲಿ ತೆರೆಕಟ್ಟುವ ಹಾಗೂ ಮೊಗ ಹೊತ್ತುಕೊಳ್ಳುವ ಆಚರಣೆಗಳನ್ನು ಮಾಡುತ್ತಾರೆ. ಪನ್ನಂಗಾಲತಮ್ಮೆ ಕೊಡಗಿನ ಕೆಂಬಟ್ಟಿ ಸಮುದಾಯದ ಆರಾಧ್ಯ ದೇವತೆ. ಈಕೆಯ ವಾರ್ಷಿಕ ಹಬ್ಬವನ್ನು ಕೆಂಬಟ್ಟಿಗಳು ಸ್ಥಳೀಯ ಕೊಡವರ ಸಹಕಾರದೊಂದಿಗೆ ವಿಜೃಂಭಣೆಯಿಂದ ಆಚರಿಸುತ್ತಾರೆ.

ಮಡಿಕೇರಿ ತಾಲೂಕಿನ ನಾಪೋಕ್ಲು ಸಮೀಪ ಬೇತ್ ಗ್ರಾಮದಲ್ಲಿ ಮಕ್ಕಿ ಸಾರ್ತಾವು ದೇವಾಲಯವಿದೆ. ಇಲ್ಲಿ ವರ್ಷಕ್ಕೆ ಎರಡು ಬಾರಿ ವಿಶೇಷ ಉತ್ಸವ ನಡೆಯುತ್ತದೆ. ಮೊದಲ ಹಬ್ಬವು ಡಿಸೆಂಬರ್ ತಿಂಗಳ ಕೊನೆಯ ವಾರದಲ್ಲಿ ಜರುಗುತ್ತದೆ. ಎರಡನೇ ಹಬ್ಬವು ಮೇ ತಿಂಗಳ ಮೊದಲ ವಾರದಲ್ಲಿ ನಡೆಯುತ್ತದೆ. ತಕ್ಕ ಮುಖ್ಯಸ್ಥರಾದ ಕುಟ್ಟಂಜೆಟ್ಟಿರ ಒಕ್ಕದ ಐನ್‌ಮನೆಯಿಂದ ಎತ್ತ್‌ಪೋರಾಟ(ದೇವರಿಗೆ ಅಕ್ಕಿ, ತೆಂಗಿನಕಾಯಿ ಹಾಗು ಬೆಲ್ಲವನ್ನು ಎತ್ತಿನ ಹೇರಿನ ಮೂಲಕ ಅರ್ಪಿಸುವುದು) ನಡೆಯುತ್ತದೆ. ಹಬ್ಬದಂದು ರಾತ್ರಿ ಹತ್ತು ಗಂಟೆಗೆ ಅಂದಿಬೊಳಕ್ ದೀಪಾರಾಧನೆ ನಡೆಯುತ್ತದೆ. ಅನಂತರ ಕರಿಬಾಳ, ಕುಟ್ಟಿಚಾತ ಹಾಗೂ ನುಚ್ಚುಟೆ ದೈವಗಳಿಗೆ ತೆರೆಕಟ್ಟುವ ಆಚರಣೆ ಮಾಡುತ್ತಾರೆ. ಮರುದಿನ ಬೆಳಿಗ್ಗೆ ಅಜ್ಜಪ್ಪ ಹಾಗು ವಿಷ್ಣುಮೂರ್ತಿ ತೆರೆಗಳು ಜರುಗುತ್ತವೆ. ಹೀಗೆ ಕೊಡಗಿನಲ್ಲಿ ವಿವಿಧ ದೈವಗಳ ಆರಾಧನೆ  ಶ್ರದ್ಧಾಭಕ್ತಿಯಿಂದ ನಡೆಯುತ್ತದೆ.

**೨.೫ ರಾಜಕೀಯ ಪ್ರಜ್ಞೆ**

ಕ್ರಿಸ್ತಶಕ ಎರಡನೇ ಶತಮಾನದ ಸಂಗಂ ಸಾಹಿತ್ಯದಲ್ಲಿ ಕೊಡಗು 'ಕುಡಕಂ' ಎಂದು ಕರೆಯಲ್ಪಟ್ಟಿದೆ. ತಮಿಳಿನ ಶಿಲಪ್ಪದಿಕಾರಂ ಗ್ರಂಥವು ಕೊಡಗನ್ನು 'ಕುಡುಮಲೆ' ಎಂದಿದೆ. ಆಂಗ್ಲರ ಆಳ್ವಿಕೆಗೆ ಒಳಪಡುವವರೆಗೂ ಕೊಡಗು ಒಂದೇ ರೀತಿಯ ಭೂ ಪ್ರದೇಶವನ್ನು ಹೊಂದಿರಲಿಲ್ಲ. ವಿವಿಧ ಕಾಲಘಟ್ಟದಲ್ಲಿ ಹಲವು ರೀತಿಯ ಭೌಗೋಳಿಕ ಅಸ್ತಿತ್ವವನ್ನು ಹಾಗು ರಾಜಕೀಯ ಹಿನ್ನೆಲೆಯನ್ನೂ ಹೊಂದಿತ್ತು. ಕೊಡಗು ನಿರ್ದಿಷ್ಟ ರಾಜಕೀಯ ಗಡಿಗಳನ್ನು ಹೊಂದಿ ಕೇಂದ್ರೀಕೃತ ಸರ್ಕಾರ ವ್ಯವಸ್ಥೆಯೊಂದಿಗೆ ಒಂದು ರಾಜ್ಯವಾಗಿ ರೂಪುಗೊಳ್ಳಲು ಆರಂಭಿಸಿದ್ದು ಹಾಲೇರಿ ರಾಜವಂಶದ ಆಳ್ವಿಕೆಯಲ್ಲಿ. ಈ ಪ್ರಕ್ರಿಯೆಯು ತನ್ನ ಅಂತಿಮ ಹಂತವನ್ನು ತಲುಪಿದ್ದು ಹದಿನೆಂಟನೆಯ ಶತಮಾನದ ಕೊನೆಯ ದಶಕದಲ್ಲಿ. ಮೈಸೂರಿನ ಸುಲ್ತಾನರಿಂದ ವಿಮೋಚನೆಗೊಂಡು ಪರೋಕ್ಷ ಆಳ್ವಿಕೆಗೆ ಒಳಪಟ್ಟಾಗ ಕೊಡಗು ಒಂದು ನಿರ್ದಿಷ್ಟ ರಾಜಕೀಯ ಘಟಕವಾಗಿ ಹೊರಹೊಮ್ಮಿತು. ಈ ಹಂತದವರೆಗೆ ಕೊಡಗಿನ ಬೇರೆ ಬೇರೆ ಭಾಗಗಳು ವಿವಿಧ ರಾಜಮನೆತನಗಳ ಭಾಗವಾಗಿದ್ದವು. ೧೮೩೪ರಲ್ಲಿ ಬ್ರಿಟೀಷರು ತಮ್ಮ ನೇರ ಆಳ್ವಿಕೆಗೆ ವಶಪಡಿಸಿಕೊಂಡ ಭೂಭಾಗವೇ ಈಗ ನಾವು ಕಾಣುತ್ತಿರುವ ಕೊಡಗು.

ಕ್ರಿ.ಶ.೧೬೦೦ ರಿಂದ ೧೮೩೪ ರವರೆಗಿನ ಕಾಲಾವಧಿಯಲ್ಲಿ ಕೊಡಗಿನ ರಾಜಕೀಯ ಇತಿಹಾಸದಲ್ಲಿ ಗಮನಾರ್ಹ ಬೆಳವಣಿಗೆಗಳಾದವು. ಆಡಳಿತ ನೀತಿಗಳ ವಿಕಾಸ ಹಾಗೂ ಭೂಹಿಡುವಳಿ ವ್ಯವಸ್ಥೆಗಳ ಸರಿಪಡಿಸುವಿಕೆ ಹಾಗೂ ದಾಖಲಾತಿ ಪ್ರಕ್ರಿಯೆಗಳು ಆರಂಭವಾದವು. ಮುಂದೆ ಇವು ಬ್ರಿಟೀಷ್ ಆಡಳಿತ ನೀತಿಗಳ ಮೇಲೂ ಪ್ರಭಾವ ಬೀರಿದವು. ಇದೇ ಸಂದರ್ಭದಲ್ಲಿ ರಾಜೇಂದ್ರನಾಮೆಯು

ಬರೆಯಲ್ಪಟ್ಟಿತು. ಟಿಪ್ಪುವಿನ ನಿರಂತರ ಧಾಳಿಯಿಂದಾಗಿ ಮಡಿಕೇರಿಯ ಅರಮನೆಯಲ್ಲಿ ಸಂಗ್ರಹವಾಗಿದ್ದ ಕೊಡಗು ದೇಶದ ಕುರಿತ ದಾಖಲೆಗಳು ನಾಶವಾಯಿತು. ಈ ಸಂದರ್ಭದಲ್ಲಿ ದೊಡ್ಡ ವೀರರಾಜೇಂದ್ರನು ತನ್ನ ಕುಟುಂಬದ ಇತಿಹಾಸವನ್ನು ಮೌಖಿಕ ಪರಂಪರೆಯ ಮೂಲಕ ದೊರೆತ ಹಾಗೂ ತನ್ನ ಕಾಲದ ದಾಖಲೆಗಳ ಆಧಾರದ ಮೇಲೆ ರಾಜೇಂದ್ರನಾಮೆಯನ್ನು ಬರೆಸಿದನೆಂದು ಹೇಳಲಾಗಿದೆ. ಬ್ರಿಟೀಷರ ಹೇಳಿಕೆಗಳು ಇದನ್ನು ಪುಷ್ಟೀಕರಿಸುತ್ತವೆ. ನಂತರದ ದಿನಗಳಲ್ಲಿ ಲಿಂಗರಾಜನ 'ಹುಕುಂ'(ಅಪ್ಪಣೆ)ಗಳು ರಾಜ್ಯಾಡಳಿತವನ್ನು ಸುಧಾರಿಸುವಲ್ಲಿ ಪ್ರಮುಖ ಹೆಜ್ಜೆಯಾಯಿತು. 'ಹುಕುಂ'ನಾಮಗಳನ್ನು ನೀಡಿದ ನಂತರ ಲಿಂಗರಾಜನು ಮಾಡಿದ ಮಹತ್ತರ ಕೆಲಸವೆಂದರೆ ಭೂಮಿಯನ್ನು 'ಲಿಂಗರಾಜ ಕೋಲು' ಎಂಬ ಅಳತೆಗೋಲಿನಿಂದ ಅಳತೆ ಮಾಡಿಸಿ ವಿವಿಧ ಭೂಹಿಡುವಳಿ ವ್ಯವಸ್ಥೆಗಳ ಅಡಿಯಲ್ಲಿ ಕೊಡಗಿನವರು ಕೊಡಬೇಕಾದ ಕಂದಾಯದ ದರಗಳನ್ನು ನಿಗದಿಪಡಿಸಿ 'ಸಿಸ್ತು'ಗಳನ್ನು ಹೊರತಂದದ್ದು. ಕನ್ನಡ ಭಾಷೆಯಲ್ಲಿರುವ ಈ ದಾಖಲೆಗಳು ಕೊಡಗಿನ ಹಲವು ಒಕ್ಕಗಳ ಅಸ್ತಿತ್ವದ ಅಡಿಪಾಯವಾಗಿದ್ದು; ಇಂದಿಗೂ ಕೂಡ ಕಂದಾಯ ಇಲಾಖೆಯವರು ಅವಶ್ಯವಿದ್ದಾಗ ಈ ದಾಖಲೆಗಳನ್ನು ಪರಿಶೀಲಿಸುವುದನ್ನು ಕಾಣಬಹುದು. ಬ್ರಿಟೀಷ್ ವಸಾಹತುಶಾಹಿ ಯುಗದಲ್ಲಿ ಕೊಡಗಿನ ಇತಿಹಾಸ, ಸಂಸ್ಕೃತಿ, ಅರ್ಥವ್ಯವಸ್ಥೆಯೊಂದಿಗೆ ರಾಜಕೀಯ ಸ್ವರೂಪವು ಸ್ಥಿತ್ಯಂತರಕ್ಕೆ ಒಳಗಾಯಿತು.

**೨.೬ ನದಿಗಳು**

ಕೊಡಗಿನ ಪ್ರಮುಖ ನದಿ ಕಾವೇರಿ. ಲಕ್ಷಣತೀರ್ಥ, ಹೇಮಾವತಿ, ಬರಪೊಳೆ, ಹಾರಂಗಿ, ಚಿಕ್ಲಿಹೊಳೆ, ಕದನೂರುಹೊಳೆ, ಪಟ್ಟಿಹೊಳೆ, ಇವು ಜಿಲ್ಲೆಯ ಇತರ ಮುಖ್ಯ ನದಿಗಳಾಗಿವೆ.

**೧. ಕಾವೇರಿ**

ಕೊಡಗಿನ ಜೀವನದಿ ಕಾವೇರಿ. ಕೊಡಗಿನ ಜನಪದರ ಅವಿಭಾಜ್ಯ ಅಂಗವಾಗಿರುವ ಕಾವೇರಿ ನದಿಯು ಪಶ್ಚಿಮಘಟ್ಟ ಸಾಲಿನ ಬ್ರಹ್ಮಗಿರಿ ಬೆಟ್ಟದಲ್ಲಿ ಉಗಮಿಸುತ್ತದೆ. ಈ ಸ್ಥಳಕ್ಕೆ ತಲಕಾವೇರಿ ಎಂದು ಹೆಸರು. ಉಗಮಸ್ಥಾನದಿಂದ ಸಿದ್ದಾಪುರದವರೆಗೆ ಆಗ್ನೇಯ ದಿಕ್ಕಿನಲ್ಲಿ ಹರಿಯುವ ಕಾವೇರಿ ಅಲ್ಲಿಂದ ಈಶಾನ್ಯ ದಿಕ್ಕಿನಲ್ಲಿ ಹರಿಯುತ್ತಾ ಅನೇಕ ಉಪನದಿಗಳನ್ನು ತನ್ನಲ್ಲಿ ಸೇರಿಸಿಕೊಳ್ಳುತ್ತದೆ. ಹುಟ್ಟುವೆಡೆಯಿಂದ ಐದು ಕಿ.ಮೀ. ಕೆಳಕ್ಕೆ ಭಾಗಮಂಡಲದಲ್ಲಿ ಕಾವೇರಿ ನದಿಯನ್ನು ಸೇರಿಕೊಳ್ಳುವ ನದಿ ಕನಿಕೆ. ಇದು ಬ್ರಹ್ಮಗಿರಿಯ ಉತ್ತರ ಭಾಗದಿಂದ ಹರಿದು ಬಂದು ಕಾವೇರಿಯನ್ನು ಸೇರುತ್ತದೆ. ಭಾಗಮಂಡಲದಲ್ಲಿ ಸುಜ್ಯೋತಿ ಎಂಬ ನದಿಯು ಅಂತರ್ವಾಹಿನಿಯಾಗಿ ಹರಿದು ಕನಿಕೆ-ಕಾವೇರಿ ಸಂಗಮದಲ್ಲಿ

ಕಾವೇರಿಯನ್ನು ಸೇರುತ್ತದೆ ಎಂಬ ಪ್ರತೀತಿಯಿದೆ. ಆದುದರಿಂದ ಭಾಗಮಂಡಲವು ತ್ರಿವೇಣಿ ಸಂಗಮ ಕ್ಷೇತ್ರ ಎಂದು ಕರೆಯಲ್ಪಡುತ್ತದೆ. ಮುಂದೆ ಎಡಕಲ್ಲು ಬಳಿ ನಿಡುಹೊಳೆ, ಚರಂಡೇಟಿ ಬಳಿ ಚೆರುವುಹೊಳೆ, ಪುಲಿಕೋಟು ಸಮೀಪ ತಂತ್ರಿಹೊಳೆ, ನಾಪೋಕ್ಲುವಿನ ಬಳಿ ಕಕ್ಕಬ್ಬೆಹೊಳೆಗಳು ದಕ್ಷಿಣದ ಕಡೆಯಿಂದ ಹರಿದುಬಂದು ಕಾವೇರಿ ನದಿಯನ್ನು ಸೇರುವವು. ವಿರಾಜಪೇಟೆಯ ಕದನೂರು ಹೊಳೆ, ಎಡೆನಾಲ್ಕುನಾಡಿನ ಕುಮ್ಮೆಹೊಳೆಗಳು ಕಾವೇರಿಯನ್ನು ಕೂಡಿಕೊಳ್ಳುತ್ತವೆ. ಮಡಿಕೇರಿ ಶ್ರೇಣಿಯ ದಕ್ಷಿಣದ ಜಲಾನಯನ ಪ್ರದೇಶದಿಂದ ಹರಿದುಬರುವ ಮುತ್ತಾರ್‌ಮುಡಿ ಹೊಳೆ ಕಾವೇರಿಯು ಉತ್ತರ ಪಾರ್ಶ್ವದಲ್ಲಿ ಅದನ್ನು ಸೇರಿಕೊಳ್ಳುತ್ತದೆ. ಈ ಭಾಗದಲ್ಲಿ ಕಾವೇರಿಯನ್ನು ಸೇರಿಕೊಳ್ಳುವ ಇನ್ನೊಂದು ನದಿ ಚಿಕ್ಲಿಹೊಳೆ. ಕುಶಾಲನಗರಕ್ಕೆ ಉತ್ತರದಲ್ಲಿ ಕಾವೇರಿಯನ್ನು ಸಂಗಮಿಸುವ ಮುಖ್ಯನದಿ ಹಾರಂಗಿ. ಹಾರಂಗಿ ನದಿಯೊಡಗೂಡಿ ಮೈಸೂರು-ಕೊಡಗು ಜಿಲ್ಲೆಗಳ ಗಡಿಯುವರೆಗೆ ಸಾಗಿ ಕೊಡಗಿನ ಪೂರ್ವ ಅಂಚಿನಲ್ಲಿ ಸೋಮವಾರಪೇಟೆ ತಾಲೂಕಿನ ಶಿರಂಗಾಲದವರೆಗೆ ಹರಿಯುತ್ತದೆ. ಮುಂದೆ ಹಾಸನ ಜಿಲ್ಲೆಯನ್ನು ಅರಕಲಗೂಡು ತಾಲೂಕಿನ ಕಡವಿನ ಹೊಸಹಳ್ಳಿಯ ಬಳಿ ಪ್ರವೇಶಿಸುತ್ತದೆ.

ಕನ್ನಂಬಾಡಿಯ ಬಳಿಯಲ್ಲಿ ಕಾವೇರಿ ನದಿಯು ಮಂಡ್ಯ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಇಲ್ಲಿ ಉಪನದಿಗಳಾದ ಹೇಮಾವತಿ ಮತ್ತು ಲಕ್ಷಣತೀರ್ಥಗಳನ್ನು ಸೇರಿಕೊಂಡು ಹರಿಯುತ್ತದೆ. ಶ್ರೀರಂಗಪಟ್ಟಣದಲ್ಲಿ ಕಬಿನಿ ನದಿಯೊಂದಿಗೆ ಕೂಡಿಕೊಳ್ಳುತ್ತದೆ. ಮಂಡ್ಯ-ಮೈಸೂರು ಜಿಲ್ಲೆಗಳ ಗಡಿ ಮುಟ್ಟಿ ದಕ್ಷಿಣಕ್ಕೆ ತಿರುಗಿ ತಲಕಾಡನ್ನು ಎಡಕ್ಕೆ ಬಿಟ್ಟು ಮತ್ತೆ ಪೂರ್ವದತ್ತ ಹರಿಯುತ್ತದೆ. ಕಾವೇರಿಯ ಈ ತಿರುವಿನಿಂದಾಗಿ ತಲಕಾಡಿನ ಸುತ್ತಲೂ ಮರುಳು ಹಾಯ್ದಿದೆ. ಬಲಗಡೆಯಿಂದ ಹರಿದು ಬರುವ ಸುವರ್ಣಾವತಿ ನದಿ ಕಾವೇರಿ ನದಿಯನ್ನು ತಲಕಾಡಿನ ಬಳಿ ಸೇರಿಕೊಳ್ಳುತ್ತದೆ. ತಲಕಾಡಿನಿಂದ ಉತ್ತರಾಭಿಮುಖವಾಗಿ ಹರಿದು ಮಂಡ್ಯಜಿಲ್ಲೆಯ ಗಡಿಗೆ ಅಂಟಿಕೊಂಡಂತೆ ಹರಿದು ಶಿವನಸಮುದ್ರದ ಬಳಿಯಲ್ಲಿ ಕವಲೊಡೆದು ಗಗನಚುಕ್ಕಿ, ಭರಚುಕ್ಕಿಗಳಾಗಿ ಧುಮುಕಿ ಮತ್ತೆ ಒಂದಾಗಿ ಮುಂದೆ ಸಾಗುತ್ತದೆ. ಮೈಸೂರಿನ ಆಗ್ನೇಯ ಅಂಚಿನ ಉದ್ದಕ್ಕೂ ಹರಿದು ಹೊಗೇನಕಲ್ಲಿನ ಬಳಿ ಮತ್ತೆ ಧುಮುಕಿ ಕೊನೆಗೆ ಮೈಸೂರನ್ನು ದಾಟಿ ತಮಿಳುನಾಡನ್ನು ಸೇರುತ್ತದೆ. ಅಲ್ಲಿನ ಪೂಂಪುಹಾರ್ ಎಂಬಲ್ಲಿ ಬಂಗಾಳ ಕೊಲ್ಲಿಯನ್ನು ಸೇರುತ್ತದೆ.

**೨. ಹಾರಂಗಿ**

ಮಡಿಕೇರಿಯಿಂದ ಹರಿದುಬರುವ ಹಟ್ಟಿಹೊಳೆ ಹಾಗೂ ಕೋಟೆಬೆಟ್ಟದಿಂದ ಹರಿದುಬರುವ ಮಾದಾಪುರ ಹೊಳೆಗಳು ಗರಗಂದೂರು ಎಂಬಲ್ಲಿ ಸಂಗಮಿಸಿ ಹಾರಂಗಿ ಎಂಬ ದೊಡ್ಡ ಹೊಳೆಯಾಗುತ್ತದೆ. ಈ ಹೊಳೆಗೆ ಶಾಂತಳ್ಳಿಯ

ಕಳಕಂದೂರು ಗುಡ್ಡದ ಬದಿಯಿಂದ ಹರಿದು ಬರುವ ಚೋರನ ಹೊಳೆ ಹಾಗೂ ಸೋಮವಾರಪೇಟೆ ಬೆಟ್ಟಗಳಿಂದ ಹರಿದು ಬರುವ ಕಕ್ಕೆಹೊಳೆಗಳು ಸೇರುತ್ತವೆ. ಪುಷ್ಪಗಿರಿ ಬೆಟ್ಟದಲ್ಲಿ ಉಗಮ ಹೊಂದುವ ಹಾರಂಗಿ ನದಿಯು ಆಗ್ನೇಯಾಭಿಮುಖವಾಗಿ ಹರಿಯುತ್ತದೆ. ಮುಂದೆ ಮೇಘತ್ತೂರು ಎಂಬಲ್ಲಿ ದಕ್ಷಿಣಕ್ಕೆ ತಿರುಗಿ ಸ್ವಲ್ಪ ದೂರ ಪ್ರವಹಿಸಿ ಪೂರ್ವಕ್ಕೆ ತಿರುಗಿ ಮತ್ತೆ ಉತ್ತರಾಭಿಮುಖವಾಗಿ ಹರಿಯುತ್ತದೆ. ಪುನಃ ಪೂರ್ವಾಭಿಮುಖವಾಗಿ ಸಾಗಿ ಕುಶಾಲನಗರದ ಉತ್ತರದಲ್ಲಿ ಕಾವೇರಿ ನದಿಯನ್ನು ಕೂಡಿಕೊಳ್ಳುತ್ತದೆ. ಕಾವೇರಿ ಮತ್ತು ಹಾರಂಗಿ ನದಿಗಳು ಕೂಡುವುದರಿಂದ ಈ ಸ್ಥಳವನ್ನು ಕೂಡಿಗೆ ಎಂದು ಕರೆಯುತ್ತಾರೆ. ಹಾರಂಗಿ ಎಂಬಲ್ಲಿಯವರೆಗಿನ ಈ ನದಿಯ ಮೊದಲ ಹರಿವನ್ನು ಪಟ್ಟಿ(ಹಟ್ಟಿ)ಹೊಳೆ ಎಂದು ಅನಂತರ ಹಾರಂಗಿ ಎಂದೂ ಕರೆಯಲಾಗುತ್ತದೆ. ಹಾರಂಗಿ ನದಿಯನ್ನು ಕಕ್ಕೆಹೊಳೆಯು ಸೇರುವ ಮುನ್ನ ಹುದುಗೂರು ಎಂಬಲ್ಲಿ ಹಾರಂಗಿ ಜಲಾಶಯವನ್ನು ನಿರ್ಮಿಸಲಾಗಿದೆ.



**೩. ಲಕ್ಷ್ಮಣ ತೀರ್ಥ**

ಕಾವೇರಿ ನದಿಗೆ ಅದರ ಬಲದಂಡೆಯಲ್ಲಿ ಬಂದು ಸೇರುವ ಉಪನದಿಗಳಲ್ಲಿ ಲಕ್ಷ್ಮಣತೀರ್ಥವು ಪ್ರಮುಖವಾದುದು. ಇದು ಕೊಡಗಿನ ದಕ್ಷಿಣ ಭಾಗದಲ್ಲಿರುವ ದೇವಾಸಿ ಬೆಟ್ಟದ ಮುನಿಕಾಡು ಅರಣ್ಯ ಪ್ರದೇಶದಲ್ಲಿ ಹುಟ್ಟುತ್ತದೆ. ಇದರೊಡನೆ ಸಂಗಮಿಸುವ ರಾಮತೀರ್ಥ ಹಾಗೂ ಕೀರೆ ಹೊಳೆಗಳು ವಿರಾಜಪೇಟೆ ತಾಲೂಕಿನ ಆಗ್ನೇಯ ಭಾಗಕ್ಕೆ ನೀರಾವರಿ ಸೌಲಭ್ಯವನ್ನು ಒದಗಿಸುತ್ತದೆ. ಲಕ್ಷ್ಮಣತೀರ್ಥ ನದಿಗೆ ಇರ್ಪು ಎಂಬಲ್ಲಿ ಜಲಪಾತವಿದೆ. ಇದರ ಇಕ್ಕೆಲಗಳಲ್ಲಿ ದಟ್ಟವಾದ ಅರಣ್ಯ ಕಂಡುಬರುತ್ತದೆ. ಮುಂದೆ ಹರಿಯುವ ಲಕ್ಷ್ಮಣತೀರ್ಥ ನದಿಯು ಮೈಸೂರು ಜಿಲ್ಲೆಯ ಹುಣಸೂರು ತಾಲೂಕಿನಲ್ಲಿ ಹರಿದು ಕೃಷ್ಣರಾಜಸಾಗರವನ್ನು ಪ್ರವೇಶಿಸುತ್ತದೆ. ಸಾಗರಕಟ್ಟೆಯ ಸಮೀಪ ಕಾವೇರಿ ನದಿಯೊಡನೆ ಸಂಗಮಿಸುತ್ತದೆ.

**೪. ಬರಪೊಳೆ**

ಕೊಡಗಿನ ಪಶ್ಚಿಮಕ್ಕೆ ಹರಿಯುವ ಪ್ರಮುಖ ನದಿ ಬರಪೊಳೆ. ಬ್ರಹ್ಮಗಿರಿ ಬೆಟ್ಟಗಳ ತಪ್ಪಲಲ್ಲಿ ಹುಟ್ಟುವ ಈ ನದಿಯು ಕುರುಡಪೊಳೆ, ಕೊಂಗಣಪೊಳೆ ಹಾಗೂ ಕಕ್ಕಟ್ಪೊಳೆ ಎಂಬ ನದಿಗಳನ್ನು ಕೂಡಿಕೊಂಡು ಹರಿಯುತ್ತದೆ. ಬೆಟ್ಟಗಳ ಕಣಿವೆಯ ನಡುವೆ ಪಶ್ಚಿಮಾಭಿಮುಖವಾಗಿ ಹರಿದು ಬರಪೊಳೆ ಎಂಬ ಹೆಸರಿನಲ್ಲಿ ಪ್ರವಹಿಸುತ್ತದೆ. ಮುಂದೆ ಸಾರತ್‌ಪೊಳೆಯನ್ನು ಸೇರಿಕೊಂಡು ದೊಡ್ಡ ಬಂಡೆಯೊಂದರ ಮೇಲೆ ಧುಮುಕಿ ೧೩೪ ಮೀಟರ್ ಆಳದ ಸುಂದರ ಜಲಪಾತವನ್ನು ನಿರ್ಮಿಸಿದೆ. ಇದನ್ನು ಸಾರತ್‌ಅಬ್ಬಿ ಎಂದು ಕರೆಯುತ್ತಾರೆ.

ಮುಂದೆ ಕೇರಳ ರಾಜ್ಯದತ್ತ ಸಾಗುವ ನದಿಯು ಗಡಿಯ ಸಮೀಪದಲ್ಲಿ ಮತ್ತೊಂದು ಸುಂದರ ಜಲಪಾತವನ್ನು ನಿರ್ಮಿಸಿದೆ. ಕೇರಳ-ಕೊಡಗು ಗಡಿಯಲ್ಲಿ ಪ್ರವಹಿಸುತ್ತಾ ಉತ್ತರದ ಹೆಗ್ಗಳ ಕಣಿವೆಯಿಂದ ಹರಿದುಬರುವ ಕಲ್ಲುಹೊಳೆಯನ್ನು ಸೇರಿಕೊಂಡು ಕೇರಳದಲ್ಲಿ ಹರಿಯುತ್ತದೆ. ಚರಕಲ್ ಎಂಬಲ್ಲಿ ಅರಬ್ಬೀ ಸಮುದ್ರವನ್ನು ಸೇರುತ್ತದೆ. ಬರಪೊಳೆಗೆ ಅಡ್ಡಲಾಗಿ ವಿರಾಜಪೇಟೆಯಿಂದ ಆಗ್ನೇಯಕ್ಕೆ ಕುಟ್ಟಂದಿ ಗ್ರಾಮದಲ್ಲಿ ಅಣೆಕಟ್ಟನ್ನು ಕಟ್ಟಲು ಯೋಜನೆಯನ್ನು ರೂಪಿಸಲಾಗಿತ್ತು. ಅಣೆಕಟ್ಟಿನ ಜಲಾನಯನ ಪ್ರದೇಶದ ವಿಸ್ತೀರ್ಣವು ಸುಮಾರು ೬೦೮ ಚದರ ಕಿ.ಮೀ. ಆಗಿದ್ದು; ಇದರಿಂದ ೧,೮೦,೦೦೦ ಕಿಲೋ ವ್ಯಾಟ್ ವಿದ್ಯುಚ್ಛಕ್ತಿ ಉತ್ಪಾದಿಸುವ ನೀರೀಕ್ಷೆಯಿದೆ. ಈ ಭಾಗದ ಜನರ ವ್ಯಾಪಕ ವಿರೋಧದ ಹಿನ್ನೆಲೆಯಲ್ಲಿ ಈ ಯೋಜನೆಯನ್ನು ಕಾರ್ಯಗತಗೊಳಿಸಲಾಗಿಲ್ಲ.

**೫. ಹೇಮಾವತಿ**

ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕಿನ ಬಲ್ಲಾಳರಾಯನ ದುರ್ಗದ ಸಮೀಪವಿರುವ ಜಾವಳಿಯ ಬಳಿ ಹೇಮಾವತಿ ನದಿಯು ಉಗಮಿಸುತ್ತದೆ. ಇದನ್ನು ಎಣ್ಣೆಹೊಳೆ ಎಂದೂ ಕರೆಯುತ್ತಾರೆ. ಮುಂದೆ ಹಾಸನ ಜಿಲ್ಲೆಯಲ್ಲಿ ಹರಿದು ಸ್ವಲ್ಪ ದೂರ ಉತ್ತರ ಕೊಡಗಿನ ಗಡಿಯಾಗಿ ಹರಿಯುತ್ತದೆ. ಮಂಡ್ಯ ಜಿಲ್ಲೆಯ ಕೃಷ್ಣರಾಜಸಾಗರದ ನೈರುತ್ಯದಲ್ಲಿ ಕಾವೇರಿ ನದಿಯನ್ನು ಸೇರಿಕೊಳ್ಳುತ್ತದೆ. ಕೊಡಗು ಜಿಲ್ಲೆಯ ಗಡಿಯಾಗಿ ಹರಿಯುವಾಗ ಐಗೂರು ನದಿ ಮತ್ತು ಕಟ್ಟೆಹಳ್ಳ ಗಳು ಸೇರಿಕೊಳ್ಳುತ್ತದೆ. ಹೇಮಾವತಿಯು ಸೋಮವಾರಪೇಟೆ ತಾಲೂಕಿನ ಉತ್ತರ ಗಡಿಯ ಅಂಚಿನಲ್ಲಿ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ಹರಿಯುತ್ತದೆ.

**೬. ಕುಮಾರಧಾರಾ**

ಈ ನದಿಯು ಸುಬ್ರಮಣ್ಯ ಬೆಟ್ಟಸಾಲಿನಲ್ಲಿ ಹುಟ್ಟುತ್ತದೆ. ಸ್ವಲ್ಪ ದೂರ ಹಾಸನ ಜಿಲ್ಲೆಯ ಮಂಜರಾಬಾದ್(ಸಕಲೇಶಪುರ) ತಾಲೂಕು ಹಾಗೂ ಕೊಡಗಿನ ನಡುವೆ ಉತ್ತರ ಮೇರೆಯಾಗಿ ಹರಿಯುತ್ತದೆ. ಬಿಸಿಲೆಘಾಟಿನ ಮೂಲಕ ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಹರಿದು ದಕ್ಷಿಣ ಕನ್ನಡ ಜಿಲ್ಲೆಯ ಉಪ್ಪಿನಂಗಡಿ ಎಂಬ ಊರಿನಲ್ಲಿ ನೇತ್ರಾವತಿ ನದಿಯನ್ನು ಸೇರುತ್ತದೆ.

**೭. ನೊಜೆಕಲ್ಲು ಹೊಳೆ**

ಕೊಡಗಿನ ಸಂಪಾಜೆ ಕಣಿವೆಯಲ್ಲಿ ಉಗಮಿಸುವ ನೊಜೆಕಲ್ಲು ಹೊಳೆಯು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹರಿಯುತ್ತದೆ. ಮುಂದೆ ಕೇರಳ ರಾಜ್ಯದ ಕಾಸರಗೋಡು ಪಟ್ಟಣದ ಸಮೀಪದಲ್ಲಿ ಸಮುದ್ರವನ್ನು ಸೇರುತ್ತದೆ. ನೊಜೆಕಲ್ಲು ಹೊಳೆಗೆ ಸಂಪಾಜೆ ಕಣಿವೆಯ ಬಳಿ ಉಪನದಿಯೊಂದು ಸೇರುತ್ತದೆ. ಈ ಹೊಳೆಯನ್ನು

ಕಾಸರಗೋಡಿನಲ್ಲಿ ಬಸವಾನಿ ಅಥವಾ ಪಯಸ್ವಿನಿ ಎಂದು ಕರೆಯುತ್ತಾರೆ. ಬರಪೊಳೆ, ಕುಮಾರಧಾರ ಮತ್ತು ನೊಜೆಕಲ್ಲು ಹೊಳೆಗಳು ಕೊಡಗಿನಲ್ಲಿ ಉಗಮಿಸಿ ಪಶ್ಚಿಮಕ್ಕೆ ಹರಿದು ಅರಬ್ಬೀ ಸಮುದ್ರವನ್ನು ಸೇರುತ್ತವೆ.

**೨.೭ ಬೆಟ್ಟ ಗುಡ್ಡ ಶಿಖರಗಳು**

ಕೊಡಗು ಸಂಪೂರ್ಣವಾಗಿ ನೆಲ ಸುತ್ತುವರಿದ, ಬೆಟ್ಟ ಗುಡ್ಡ ಶಿಖರಗಳಿಂದ ಕೂಡಿದ ಪ್ರದೇಶ. ಇಡೀ ಕೊಡಗು ಪರ್ವತಮಯವಾಗಿದ್ದು; ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿದೆ. ಕೊಡಗಿನ ಬೆನ್ನುಮೂಳೆಯಂತೆ ಇರುವುದು ಪಶ್ಚಿಮ ಘಟ್ಟಗಳ ಮುಖ್ಯ ಶ್ರೇಣಿ. ವಾಯವ್ಯದಿಂದ ದಕ್ಷಿಣಕ್ಕೆ ಸುಬ್ರಹ್ಮಣ್ಯದಿಂದ ಬ್ರಹ್ಮಗಿರಿಯ ಪಶ್ಚಿಮಾಗ್ರದವರೆಗೆ ಹಬ್ಬಿದ್ದು; ೯೬ ಕಿ.ಮೀ. ಗಳಿಗಿಂತಲೂ ಹೆಚ್ಚು ಉದ್ದವಿದೆ. ಇದರಿಂದ ಪೂರ್ವದ ಕಡೆಗೆ ಕೈಬೆರಳುಗಳಂತೆ ಸಾಗಿರುವ ಉನ್ನತ ಶ್ರೇಣಿಗಳು ಜಿಲ್ಲೆಯಲ್ಲೆಲ್ಲಾ ವ್ಯಾಪಿಸಿವೆ. ಅನೇಕ ಪರ್ವತ ಶ್ರೇಣಿಗಳನ್ನು ಒಳಗೊಂಡಿರುವ ಈ ಪಶ್ಚಿಮಘಟ್ಟ ಸಾಲು ದಕ್ಷಿಣಕ್ಕೆ ತನ್ನ ಉಪಭಾಗಗಳನ್ನು ಚಾಚಿದೆ. ಈ ಉಪಭಾಗಗಳಲ್ಲಿ ಬ್ರಹ್ಮಗಿರಿಯ ಸಾಲು ಅತ್ಯಂತ ಪ್ರಮುಖವಾದುದು. ಈ ಗಿರಿಯು ಕೇರಳ ಮತ್ತು ಕೊಡಗಿನ ಗಡಿಯನ್ನು ನಿರ್ಧರಿಸುತ್ತದೆ. ಕೊಡಗಿನ ಆಗ್ನೇಯ ತುದಿಯಲ್ಲಿರುವ ಶ್ರೇಣಿಯನ್ನು ಮರೆನಾಡು ಅಥವಾ ಬ್ರಹ್ಮಗಿರಿ ಶ್ರೇಣಿ ಎಂದೂ ಕರೆಯುತ್ತಾರೆ. ಇವು ವೈನಾಡಿನಿಂದ(ಕೇರಳದಿಂದ)ಕೊಡಗನ್ನು ಪ್ರತ್ಯೇಕಿಸುತ್ತವೆ. ಭಾಗಮಂಡಲದ ಹತ್ತಿರವಿರುವ ಬೆಟ್ಟಗಳ ಶ್ರೇಣಿಯನ್ನೂ ಬ್ರಹ್ಮಗಿರಿ ಎಂದು ಕರೆಯುತ್ತಾರೆ. ಕಾವೇರಿ ನದಿ ಉಗಮಿಸುವುದು ಇಲ್ಲಿಯೆ.

ಮರೆನಾಡು ಶ್ರೇಣಿಯಲ್ಲಿರುವ ಅತ್ಯುನ್ನತ ಶಿಖರ ದೇವಾಸಿಬೆಟ್ಟ, ೪,೫೦೦ ಅಡಿ ಎತ್ತರವಿರುವ ಇದರ ಸುತ್ತಣ ಪ್ರದೇಶವನ್ನು ಹುಯಲೆಮಲೆ ಎಂದು ಕರೆಯುತಾರೆ. ಬ್ರಹ್ಮಗಿರಿ ಶ್ರೇಣಿಯ ಪಶ್ಚಿಮದ ಎಲ್ಲೆಯ ಬಳಿ ಇರುವ ಶಿಖರಗಳಲ್ಲಿ ಮುಖ್ಯವಾದುವುಗಳು. ಹನುಮನಬೆಟ್ಟ, ಕೋಡಂಗಿಮಲೆ ಮತ್ತು ಪೆರುಮಾಳ್‌ಮಲೆ ಇವು ಕಡಿದಾಗಿರುವ ಶಿಖರಗಳು. ಬ್ರಹ್ಮಗಿರಿಯಿಂದ ಕಿಗ್ಗಟ್ಟುನಾಡಿನ ಕಡೆಗೆ ಅನೇಕ ಕವಲುಗಳು ಹಬ್ಬಿವೆ. ವಿರಾಜಪೇಟೆಯ ಸಮೀಪದ ಅಂಬಟ್ಟಿ ಬೆಟ್ಟ, ಬಿಟ್ಟಂಗಾಲ ಬೆಟ್ಟ, ಕುಂದ ಬೆಟ್ಟ, ಸಿದ್ದೇಶ್ವರ ಬೆಟ್ಟ, ಮಣಕಾಲು ಬೆಟ್ಟ ಇವು ಮುಖ್ಯವಾದವುಗಳು. ಪಶ್ಚಿಮಘಟ್ಟಗಳ ಬೆಟ್ಟಸಾಲುಗಳಲ್ಲೆಲ್ಲಾ ಅತೀ ಮುಖ್ಯವಾದ ಪೆರಂಬಾಡಿ ನಾಲ್ಕುನಾಡು ಬೆಟ್ಟಸಾಲು ಕಾವೇರಿ ಮೂಲಸ್ಥಳಕ್ಕೆ ಸಮೀಪದ ತೋಡಿಕಾನ ಕಣಿವೆಯಿಂದ ಆಗ್ನೇಯದಲ್ಲಿರುವ ಪೆರಂಬಾಡಿ ಕಣಿವೆಯವರೆಗೆ(ಸುಮಾರು ೪೮ ಕಿ.ಮೀ.) ಚಾಚಿಕೊಂಡಿದೆ. ಮಡಿಕೇರಿ ತಾಲೂಕಿನ ನಾಲ್ಕುನಾಡಿನ ಅತ್ಯುನ್ನತ ಶಿಖರವಾದ ತಡಿಯಂಡಮೋಳ್ ಶಿಖರವು ಈ ಬೆಟ್ಟಸಾಲಿನಲ್ಲಿದೆ. ಇದು ೫,೭೨೯ ಅಡಿ ಎತ್ತರವಿದ್ದು ಜಿಲ್ಲೆಯಲ್ಲೇ ಅತೀ ಎತ್ತರದ ಶಿಖರವಾಗಿದೆ.

ಈ ಶಿಖರದಿಂದ ೧೦ ಕಿಮೀ. ದೂರದಲ್ಲಿರುವ ಕಡಿಯತ್ನಾಡಿನ ಚೋವುಕುಂದ್ ಶಿಖರದಲ್ಲಿ ಮಲೆತಂಬ್ರಾನ್ ದೇವರ ದೇಗುಲವಿದೆ. ತಡಿಯಂಡಮೋಳಿನ ಈಶಾನ್ಯಕ್ಕೆ ಮೂರು ಕಿ. ಮೀ. ದೂರದಲ್ಲಿರುವ ಇಗ್ಗುತಪ್ಪ ಶಿಖರದ ಘಟ್ಟಗಳ ಸಾಲಿನಲ್ಲಿ ತುಂಬೆಮಲೆ, ಪೇರೂರು ಬೆಟ್ಟ, ಶ್ರೀಮಂಗಲ ಬೆಟ್ಟ ಹಾಗೂ ಕಾವೇರಿ ಉಗಮಿಸುವ ತಾವುನಾಡಿನ ಬ್ರಹ್ಮಗಿರಿ ಶಿಖರಗಳೂ ಮೈಚಾಚಿ ನಿಂತಿವೆ. ಇಲ್ಲಿಂದ ಕೊಡಂತೊರ ಕಣಿವೆಯ ಸೌಂದರ್ಯವನ್ನು ವೀಕ್ಷಿಸಬಹುದು. ಪೂರ್ವದಲ್ಲಿ ಬೇಂಗುನಾಡು ಪರ್ವತಗಳ ಸಾಲು ಹಬ್ಬಿದೆ. ಇದು ಮಡಿಕೇರಿಯ ಸಮೀಪದಲ್ಲೇ ವಾಯವ್ಯದ ಕಡೆ ತಿರುಗಿ ಸಂಪಾಜೆ ಕಣಿವೆಯನ್ನು ನಿರ್ಮಿಸಿದೆ. ಮಡಿಕೇರಿಯಿಂದ ಸಂಪಾಜೆ ಕಣಿವೆಯ ಉತ್ತರಕ್ಕೆ ೧೫ ಕಿ.ಮೀಟರ್‌ಗಳವರೆಗೆ ಸುಬ್ರಹ್ಮಣ್ಯ ಬೆಟ್ಟ ಸಾಲಿದೆ. ಅದರಿಂದ ಕವಲೊಡೆಯುವ ಬೆಟ್ಟಗಳಲ್ಲಿ ಮಡಿಕೇರಿಯಿಂದ ೧೪ ಕಿ. ಮೀ. ಉತ್ತರದಲ್ಲಿ ಕೋಟೆಬೆಟ್ಟದ ಸಾಲು ಹಬ್ಬಿದೆ. ಮಡಿಕೇರಿ ಪ್ರಸ್ಥಭೂಮಿಯ ದಕ್ಷಿಣದಿಂದ ಪೂರ್ವದ ಕಡೆಗೆ ಹೊಸೂರು ಬೆಟ್ಟ ಸಾಲು ಹಾಗೂ ನೂರೊಕ್ಕಲು ಬೆಟ್ಟಸಾಲುಗಳಿವೆ.

ಮಡಿಕೇರಿ ಪ್ರಸ್ಥಭೂಮಿಯು ಪಶ್ಚಿಮದಲ್ಲಿ ಪಶ್ಚಿಮಘಟ್ಟಗಳ ಮುಂದುವರೆದ ಭಾಗದಿಂದ ಸುತ್ತುವರೆದಿದೆ. ಪಶ್ಚಿಮಕ್ಕೆ ಬಿಸಿಲೆ ಕಣಿವೆಯು ಬಳಿ ಇರುವ ಪುಷ್ಪಗಿರಿ(ಸುಬ್ರಹ್ಮಣ್ಯ) ಬೆಟ್ಟದ ಸಮೀಪ ೧,೭೧೪ ಮೀಟರ್‌ಗಳಷ್ಟು ಅತ್ಯುನ್ನತ ಎತ್ತರವನ್ನು ಹೊಂದಿದೆ. ಇದು ಸೋಮವಾರಪೇಟೆಯ ಕುಮಾರಳ್ಳಿಯ ಬಳಿಯಿದೆ. ಎರಡು ಶಿಖರಗಳನ್ನು ಹೊಂದಿರುವ ಪುಷ್ಪಗಿರಿ ಬೆಟ್ಟ ಮಡಿಕೇರಿಯಿಂದ ನೋಡಿದರೆ ಬೃಹದಾಕಾರದ ಎತ್ತಿನ ಡುಬ್ಬದಂತೆ ಕಾಣಿಸುತ್ತದೆ. ಪುಷ್ಪಗಿರಿ ಬೆಟ್ಟದ ಮೇಲೆ ಈಶ್ವರ ದೇವಾಲಯವಿದೆ. ಬೇಂಗುನಾಡು ಶ್ರೇಣಿ ಮಡಿಕೇರಿಯ ದಕ್ಷಿಣದಲ್ಲಿ ಎರಡು ಕವಲುಗಳಾಗಿ ಮುಂದುವರಿಯುತ್ತದೆ. ಒಂದು ಕವಲು ನೂರೊಕ್ಕಲು ಬೆಟ್ಟದಲ್ಲಿ ಕೊನೆಗೊಳ್ಳುತ್ತದೆ. ಇನ್ನೊಂದು ಕವಲು ಅಂಕುಡೊಂಕಾಗಿ ಕುಶಾಲನಗರದ ಕಡೆಗೆ ಸಾಗುತ್ತದೆ. ಕಲ್ಲೂರುಬೆಟ್ಟ ಇದರಲ್ಲಿ ಉನ್ನತ ಶಿಖರವಾಗಿದೆ.

ಪುಷ್ಪಗಿರಿಯ ಕಡೆಯಿಂದ ಕವಲೊಡೆಯುವ ಹಲವು ಶ್ರೇಣಿಗಳ ಪೈಕಿ ಅತ್ಯಂತ ಪ್ರಮುಖವಾದುದು ಕೋಟೆಬೆಟ್ಟ. ಸುಮಾರು ೧,೬೩೯ ಮೀಟರ್ ಎತ್ತರವಿರುವ ಈ ಬೆಟ್ಟದ ಮೇಲ್ಭಾಗದಲ್ಲಿ ಅತೀ ಕಡಿದಾದ ಶಿಖರವಿದೆ. ಇದನ್ನು ಹಾರಂಗಾಲ್ ಬೆಟ್ಟ ಎಂದು ಕರೆಯುತ್ತಾರೆ. ಕೋಟೆಬೆಟ್ಟಕ್ಕೆ ಸಮಾನಾಂತರವಾಗಿ ಹಬ್ಬಿರುವ ಸಾಲು ಶಾಂತಳ್ಳಿ ಬೆಟ್ಟ. ಇಲ್ಲಿನದೇ ಮತ್ತೊಂದು ಏರು ಮುಕ್ರಿಬೆಟ್ಟ. ಕೊಡಗಿನ ಉತ್ತರ ಗಡಿಯಿಂದ ಕಾವೇರಿಯ ಕಡೆಗೆ ಹಬ್ಬಿರುವ ಪರ್ವತ ಶ್ರೇಣಿಯಲ್ಲಿ ಮಾಲಂಬಿ ಮತ್ತು ಕಣಗಾಲು ಬೆಟ್ಟ ಮುಖ್ಯ ಶಿಖರಗಳಾಗಿವೆ. ಮಾಲಂಬಿಬೆಟ್ಟದ ಮೇಲೆ ಮಳೆಮಲ್ಲೇಶ್ವರ ದೇವಸ್ಥಾನವಿದೆ. ಸೋಮವಾರಪೇಟೆ ತಾಲೂಕಿನಲ್ಲಿ

ಇರುವ ಇನ್ನಿತರ ಬೆಟ್ಟಗಳಲ್ಲಿ ಸೂರ್ಲಬ್ಬಿ ಬೆಟ್ಟ, ಚೌಡ್ಲು ಬೆಟ್ಟ, ಕಲ್ಕಂದೂರು ಬೆಟ್ಟ, ಮುಕುರಿ ಬೆಟ್ಟ, ತಾಕೇರಿ ಬೆಟ್ಟ ಪ್ರಮುಖವಾದವುಗಳು. ಹೀಗೆ ಕೊಡಗಿನಲ್ಲಿ ಅತೀ ಎತ್ತರವಾದ ಗಂಭೀರ ಭಾವಾವೇಶವನ್ನು ಮೂಡಿಸುವ ಗಿರಿಶಿಖರಗಳ ಮೊನೆಯನ್ನು, ಭೀಕರ ಕಮರಿಗಳನ್ನು, ಬೆಟ್ಟದಲ್ಲಿಯ ಕೊರಕಲುಗಳನ್ನು, ಹಸಿರಾಗಿರುವ ಕಣಿವೆಗಳನ್ನೂ ಕಾಣಬಹುದು.

**ಕೊನೆ ಟಿಪ್ಪಣಿ**

೧. ಡಿ. ಎನ್. ಕೃಷ್ಣಯ್ಯ, ಕೊಡಗಿನ ಇತಿಹಾಸ, ೧೯೯೫(ಎರಡನೆಯ ಮುದ್ರಣ), ಪು. ೩೩.

೨. ನಡಿಕೇರಿಯಂಡ ಚಿಣ್ಣಪ್ಪ, ಪಟ್ಟೋಲೆ ಪಳಮೆ, ೨೦೦೨(ನಾಲ್ಕನೆಯ ಮುದ್ರಣ), ಪು. ೧

೩. ಎಂ. ಜಿ. ನಾಗರಾಜ್, ಕೆಂಬಟ್ಟಿ ಹೊಲೆಯರ ಸಂಸ್ಕೃತಿ, ೧೯೯೩, ಪು. ೨೭

೪. ರಾ. ಯ. ಧಾರವಾಡಕರ, ಕನ್ನಡ ಭಾಷಾಶಾಸ್ತ್ರ, ೨೦೦೯(ಹನ್ನೊಂದನೆಯ ಮುದ್ರಣ), ಪು. ೪೫-೪೬

೫. ಹಂಪ. ನಾಗರಾಜಯ್ಯ, ದ್ರಾವಿಡ ಭಾಷಾವಿಜ್ಞಾನ, ೨೦೦೮(ಆರನೆಯ ಮುದ್ರಣ), ಪು. ೬೩

೬. ಆರ್. ಬಾಲಕೃಷ್ಣನ್, ಫೊನೋಲಜಿ ಆಫ್ ಕೊಡಗು ವಿತ್ ವೊಕ್ಯಾಬುಲರಿ, ೧೯೭೬, ಪು. ೯

೭. ಕಾವೇರಿ ಪ್ರಕಾಶ್, ಕೊಡವರ ಸಂಸ್ಕಾರಗಳು, ೨೦೧೬, ಮುನ್ನುಡಿ, ಪು. ೮

೮. ಸೂರ್ಯನಾಥ ಯು. ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಕೊಡಗು ಜಿಲ್ಲೆ(ಪರಿಷ್ಕೃತ ಆವೃತ್ತಿ), ೧೯೯೨, ಪು. ೭೦

೯. ಡಿ. ಎನ್. ಕೃಷ್ಣಯ್ಯ, ಕೊಡಗಿನ ಇತಿಹಾಸ, ೧೯೯೫(ಎರಡನೆಯ ಮುದ್ರಣ), ಪು. ೨೪-೨೫

೧೦. ಎಂ. ಜಿ. ನಾಗರಾಜ್, ಪಿ. ಪಿ. ಕೃಷ್ಣಮೂರ್ತಿ(ಸಂ.), ಇತಿಹಾಸ ದರ್ಶನ, ಸಂಪುಟ ೧೪, ೧೯೯೯, ಪು. ೩೮

೧೧. ಡಿ. ಎನ್. ಕೃಷ್ಣಯ್ಯ, ಕೊಡಗಿನ ಇತಿಹಾಸ, ೧೯೯೫(ಎರಡನೆಯ ಮುದ್ರಣ), ಪು. ೪೯

೧೨. ಅದೇ, ಪು. ೫೦

೧೩. ಎಂ. ಜಿ. ನಾಗರಾಜ್, ಕೊಡಗಿನ ಹಾಲೇರಿ ರಾಜವಂಶವು, ಭಾಗ ೧, ೨೦೦೪, ಪು. ೧೮

೧೪. ಅದೇ, ಪು. ೬೭
೧೫. ಅದೇ, ಪು. ೨೦
೧೬. ಡಿ. ಎನ್. ಕೃಷ್ಣಯ್ಯ, ಕೊಡಗಿನ ಇತಿಹಾಸ, ೧೯೯೫(ಎರಡನೆಯ ಮುದ್ರಣ), ಪು. ೬೮
೧೭. ಎ ಟೈನಿ ಮೋಡೆಲ್ ಸ್ಟೇಟ್ ಆಫ್ ಸೌತ್ ಇಂಡಿಯಾ, ೧೯೫೩, ಪು. ೨೬
೧೮. ಎಂ. ಜಿ. ನಾಗರಾಜ್, ಕೊಡಗಿನ ಹಾಲೇರಿ ರಾಜವಂಶವು, ಭಾಗ ೧, ೨೦೦೪, ಪು. ೨೧
೧೯. B. D. Ganapathi, Kodavas, 1980, P. 65
೨೦. ಕೆ. ಎಂ. ಕಾವೇರಿಯಪ್ಪ, ಸ್ವತಂತ್ರ 'ಸಿ' ಪ್ರಾಂತ್ಯವಾಗಿದ್ದ ಕೊಡಗು, ಅಂದು-ಇಂದು, ಸುವರ್ಣ ಕರ್ನಾಟಕ ದರ್ಶನ(೫೦ ಸಂವತ್ಸರಗಳು), (ಪ್ರಸಂ.) ಕೆ. ಅನಂತರಾಮ ರಾವ್, ೨೦೦೬, ಪು. ೨೬೬
೨೧. ಡಾ. ಪಿ. ಎನ್. ಹರೀಶ್, ಎರವರ ಸಂಸ್ಕೃತಿ, ೨೦೧೧, ಪು. ೨೧೦
೨೨. ಬಾಚರಣಿಯಂಡ. ಪಿ. ಅಪ್ಪಣ್ಣ, ವಯಸ್ಸು ೮೦, ಕುಶಾಲನಗರ
೨೩. Religion & Society Among The Coorgs of South India, 1979, P. 37
೨೪. ಸೂರ್ಯನಾಥ. ಯು. ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಕೊಡಗು ಜಿಲ್ಲೆ(ಪರಿಷ್ಕೃತ ಆವೃತ್ತಿ), ಪು. ೧೯೪
೨೫. ಅದೇ, ಪು. ೧೯೬
೨೬. ನಡಿಕೇರಿಯಂಡ ಚಿಣ್ಣಪ್ಪ, ೨೦೦೨(ನಾಲ್ಕನೆಯ ಮುದ್ರಣ), ಪು. ೩೮೯
೨೭. ತಂಬಂಡ ವಿಜಯ್ ಪೂಣಚ್ಚ, ಆಧುನಿಕ ಕೊಡಗು, ೨೦೦೦, ಪು.೪೯

## ಅಧ್ಯಾಯ ಮೂರು

## ಕೊಡಗಿನ ತೆರೆಕಟ್ಟುವ ಆಚರಣೆಗಳ ತಾತ್ವಿಕತೆಯ ನಿರೂಪಣೆ

## ಅಧ್ಯಾಯ ೩

## ಕೊಡಗಿನ ತೆರೆ ಕಟ್ಟುವ ಆಚರಣೆಗಳ ತಾತ್ವಿಕತೆಯ ನಿರೂಪಣೆ

### ೩.೧ ತೆರೆ ಪದ ನಿಷ್ಪತ್ತಿ, ಅರ್ಥ ಮತ್ತು ವ್ಯಾಖ್ಯಾನ

ಕನ್ನಡದಲ್ಲಿ 'ತೆರೆ' ಎಂದರೆ ಅಲೆ, ಪರದೆ'[೧] 'ತೆಗೆ, ಬಿಚ್ಚು, ಆರಂಭಮಾಡು,[೨] ಒಳಗಿರುವುದನ್ನು ತೋರಿಸು,[೩]ಎಂದರ್ಥ. ಇಂಗ್ಲಿಷ್‌ನಲ್ಲಿ curtain, screen, a wave, a billow, disclose, reveal, uncover'[೪] ಎಂದು ಅರ್ಥ. ಕೊಡವ ಭಾಷೆಯಲ್ಲಿ 'ದೇವಡ ತೆರೆ'[೫] ಎಂಬ ಅರ್ಥವಿದೆ. ಈ ವಿಷಯವನ್ನು ಕನ್ನಡ–ಕನ್ನಡ, ಕನ್ನಡ–ಇಂಗ್ಲಿಷ್, ಕೊಡವ– ಕನ್ನಡ ನಿಘಂಟುಗಳಲ್ಲಿ ಉಲ್ಲೇಖಿಸಲಾಗಿದೆ. ಮುಂದುವರೆದು ಹೇಳುವುದಾದರೆ ತೆರೆಕಟ್ಟುವ ಆಚರಣೆಗಳನ್ನು ಸಾಂಸ್ಕೃತಿಕ ನೆಲೆಯಲ್ಲಿ ತಾತ್ವಿಕವಾಗಿ ವಿಶ್ಲೇಷಣೆ ಮಾಡಿದಾಗ ಕನ್ನಡ–ಕನ್ನಡ ಮತ್ತು ಕನ್ನಡ–ಇಂಗ್ಲಿಷ್ ನಿಘಂಟುಗಳಲ್ಲಿ ಬರುವ ಪದಗಳು ಒಂದಕ್ಕೊಂದು ತಾಳೆಯಾಗುವುದಿಲ್ಲ. ಕೊಡವ ಭಾಷೆಯಲ್ಲಿ ತೆರೆಕಟ್ಟುವ ಆಚರಣೆಗೆ 'ತೆರೆಕೆಟ್ಟುವೊ' ಎನ್ನುತ್ತಾರೆ. ಅಂದರೆ ಕನ್ನಡದಲ್ಲಿ ತೆರೆಕಟ್ಟುವುದು ಎಂದರ್ಥ. ಕೊಡವ ಕನ್ನಡ ನಿಘಂಟಿನಲ್ಲಿ 'ತೆರೆ' ಎಂಬ ಪದಕ್ಕೆ ಗ್ರಾಮ ದೇವತೆಗಳ ಹಬ್ಬದ ವೇಳೆ ವೇಷ ಹಾಕಿಕೊಂಡಾಗ ಆ ದೇವರು ಮೈದುಂಬಿ ಆವರಿಸಿಕೊಂಡು ಕುಣಿಯುವುದಕ್ಕೆ 'ದೇವಡ ತೆರೆ' ಎನ್ನಲಾಗಿದೆ. ಕನ್ನಡದಲ್ಲಿ 'ದೇವರ ತೆರೆ' ಎಂದು ಕರೆಯುತ್ತಾರೆ. ಕೊಡಗಿನ ಬಹುತೇಕ ತೆರೆಗಳು ಆಯಾಯ ಗ್ರಾಮದೇವತೆಗಳ ಹಬ್ಬದ ಸಮಯದಲ್ಲಿ ನಡೆಯುತ್ತವೆ. ಈ ಸಂದರ್ಭದಲ್ಲಿ ಪಣಿಕ, ಬಣ್ಣ, ಮಲಿಯ ಸಮುದಾಯಗಳ ವ್ಯಕ್ತಿಯ ಮೈಮೇಲೆ ಬರುವ ಧಾರ್ಮಿಕ ಸ್ವರೂಪದ ದೈವಾವೇಶದ ಕುಣಿತವೇ ತೆರೆ.

ಮಲಯಾಳಂ ಭಾಷೆಯಲ್ಲಿ 'ತಿರ' ಪದದ ಬಳಕೆಯಿದೆ. ಇದನ್ನು "Thira is a ritual dance performed in 'Kaavu'(grove) & temples of the Malabar region in Kerala state, South India. This art form is performed by the artists of Malaya community."[೬] ಎಂದಿದ್ದಾರೆ. ಗ್ರಾಮದ ದೇವಸ್ಥಾನಗಳ ವಾರ್ಷಿಕ ಉತ್ಸವಗಳಲ್ಲಿ ಈ ಕಲೆಯು ಪ್ರದರ್ಶಿಸಲ್ಪಡುತ್ತದೆ.

ಇಲ್ಲಿ ಬುಡಕಟ್ಟು ದೇವತೆಗಳಾದ ಭಗವತಿ, ಶಿವ ಮುಂತಾದವುಗಳು ಆರಾಧಿಸಲ್ಪಡುತ್ತವೆ. ಇಲ್ಲಿ ತಿರ ಕಲಾವಿದನನ್ನು ದೈವಾವೇಶ ಆದವನು ಎಂದು ಪರಿಗಣಿಸುತ್ತಾರೆ. 'ತಿರ' ದೇವರನ್ನು ಲೌಕಿಕ ಬದುಕಿಗೆ ತರುತ್ತದೆ ಎಂಬ ಅಭಿಪ್ರಾಯವಿದೆ. ಮಲಬಾರ್ ಪ್ರಾಂತ್ಯದ ಆಚರಣಾತ್ಮಕ ನೃತ್ಯ 'ತಿರ'ವನ್ನು ನಿರ್ವಹಿಸುವವರು ಮಲೆಯ ಸಮುದಾಯದವರು. ಈ ಮಲೆಯ ಸಮುದಾಯದವರೇ ಕೊಡಗಿನಲ್ಲೂ ತೆರೆಕಟ್ಟುವ ಆಚರಣೆಯನ್ನು ನಿರ್ವಹಿಸುತ್ತಾರೆ. ಕೊಡಗಿನ ಮಲೆಯರು ಮತ್ತು ಪಣಿಕರು ತಮ್ಮ ಮೂಲವಾದ ಮಲಬಾರಿನ ಮಲೆಯರೊಂದಿಗೆ ವೈವಾಹಿಕ ಸಂಬಂಧಗಳನ್ನು ಇಂದಿಗೂ ಬೆಳೆಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಕೊಡವ ಕನ್ನಡ ನಿಘಂಟಿನ ಅರ್ಥವು ತೆರೆ ಪರಿಕಲ್ಪನೆಗೆ ಸರಿಹೊಂದುತ್ತದೆ. ದ್ರಾವಿಡ ಭಾಷಾ ವರ್ಗಕ್ಕೆ ಸೇರುವ ಕೊಡವ ಭಾಷೆಯಲ್ಲಿ ಮಲೆಯಾಳಂ ಭಾಷೆಯ ಪದಗಳೂ ಇವೆ. ಹಾಗಾಗಿ ಮಲಬಾರ್ ಪ್ರಾಂತ್ಯದ 'ತಿರ' ಕೊಡಗಿನಲ್ಲಿ 'ತೆರೆ' ಎಂಬ ರೂಪಾಂತರದೊಂದಿಗೆ ಆಚರಿಸಲ್ಪಡುತ್ತಿದೆ ಎಂಬ ಅಭಿಪ್ರಾಯಕ್ಕೆ ಬರಬಹುದು.

ಕೊಡಗಿನ ಜನಪದರ ಧಾರ್ಮಿಕ ನಂಬಿಕೆಗಳ ಮೇಲೆ ಸುತ್ತಮುತ್ತಲ ಪ್ರಾಂತ್ಯಗಳ ಪ್ರಭಾವವನ್ನು ಕಾಣಬಹುದು. ಅದರಲ್ಲೂ ನೆರೆಯ ಮಲಬಾರ್ ಪ್ರಾಂತ್ಯದ ಪ್ರಭಾವ ಅತ್ಯಂತ ದಟ್ಟವಾಗಿದೆ. "ನೆರೆ ರಾಜ್ಯಗಳಲ್ಲಿ ಪ್ರಚಲಿತವಿದ್ದ ಧಾರ್ಮಿಕ ಸಂಪ್ರದಾಯ ಮತ್ತು ಪದ್ಧತಿಗಳು ಕೊಡಗಿನಲ್ಲಿ ಬೇರೂರಿದ್ದು ಅವು ಇಂದಿಗೂ ತಮ್ಮ ಪ್ರಭಾವವನ್ನು ಸಾಕಷ್ಟು ಮಟ್ಟಿಗೆ ಹೊಂದಿವೆ. ಗ್ರಾಮಾಂತರಗಳಲ್ಲಿ ಅವುಗಳ ಹಿಡಿತ ಬಲವಾಗಿದೆ."[೭] ಕೊಡಗಿನ ಕಾವೇರಿಯನ್ನು ಹೊರತುಪಡಿಸಿದರೆ ಸಾಮಾನ್ಯವಾಗಿ ಉಳಿದೆಲ್ಲ ದೇವಾಲಯಗಳ ವಿನ್ಯಾಸದಲ್ಲಿ ಮಲೆಯಾಳ ಶೈಲಿಯ ಪ್ರಭಾವ ಎದ್ದು ಕಾಣಿಸುತ್ತದೆ. ಏಕೆಂದರೆ ಕೊಡಗಿನ ಬಹು ದೈವಗಳು ಮಲಬಾರ್‌ನಿಂದ ಬಂದಂತವುಗಳಾಗಿವೆ. ಅಂತಹ ದೈವಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಇಗ್ಗುತಪ್ಪನನ್ನು ಕೊಡಗಿನ ಕುಲದೈವವೆಂದು ಪೂಜಿಸುತ್ತಾರೆ. ಈತ ತನ್ನ ಸಹೋದರ ಪಾಲೂರಪ್ಪ ಹಾಗೂ ಸಹೋದರಿ ಪನ್ನಂಗಾಲತಮ್ಮೆಯೊಂದಿಗೆ 'ಮಾಣಿಕ ಮಲೆನಾಡ್' ಅಂದರೆ ಮಲಬಾರ್ ಪ್ರಾಂತ್ಯದಿಂದ ನೆಲೆ ಅರಸಿ ಹೊರಡುತ್ತಾನೆ. ಅಲ್ಲಿ ನೆಲೆಸಿರುವ ಬೈತೂರಪ್ಪನ ಸಲಹೆಯಂತೆ ಕೊಡಗಿಗೆ ಬಂದು ನೆಲೆಸುತ್ತಾನೆ. ಸಹೋದರರಾದ ಬೆಂದ್ರುಕೋಲಪ್ಪ, ತಿರ್‌ಚಂಬರಪ್ಪ, ತಿರ್‌ನೆಲ್ಲಿ ಪೆಮ್ಮಯ್ಯ ದೇವರುಗಳು ಕೇರಳದಲ್ಲಿ ನೆಲೆಸುತ್ತವೆ. ಈ ವಿಚಾರವು ಕೊಡವ ಜನಪದ ಗೀತೆ ಎವ್ವಮಕ್ಕ ದೇಬುವಡ ಪಾಟ್‌ನಲ್ಲಿ ಉಲ್ಲೇಖಗೊಂಡಿದೆ. ತೆರೆಕಟ್ಟುವ ಆಚರಣೆಯ ಮೂಲಕ ಆರಾಧಿಸಲ್ಪಡುವ ಚೌಂಡಿ, ಭಗವತಿ, ಭದ್ರಕಾಳಿ, ಸಾರ್ತಾವು,

ಪೊವ್ವದಿ, ಅಯ್ಯಪ್ಪ, ಕುಳಿಯ, ವಿಷ್ಣುಮೂರ್ತಿ ದೈವಗಳು ಮಾಣಿಕ ಮಲೆನಾಡ್‌ನಿಂದ ಬಂದವುಗಳು ಎಂಬ ವಿಚಾರವನ್ನು ಕೊಡವ ಜನಪದ ಗೀತೆಗಳು, ತೆರೆಹಾಡುಗಳು ಹಾಗೂ ಐತಿಹ್ಯಗಳು ಸ್ಪಷ್ಟಪಡಿಸುತ್ತವೆ.

ತೆರೆಕಟ್ಟುವ ಆಚರಣೆಯನ್ನು ಕೊಡವ ಭಾಷೆಯಲ್ಲಿ 'ಕೋಲಕೆಟ್ಟುವೊ' ಅಂದರೆ ವೇಷ ಕಟ್ಟುವುದು ಎಂದೂ ಕರೆಯಲಾಗುತ್ತದೆ. ತೆರೆ ಮತ್ತು ಕೋಲವನ್ನು ಒಂದೇ ಎಂದು ಕೊಡಗಿನಲ್ಲಿ ಭಾವಿಸಲಾಗುತ್ತದೆ. ಕಾರಣವೇನೆಂದರೆ ಕೃಷಿಯನ್ನು ಅನುಸರಿಸಿ ತುಳುನಾಡಿನ ಜನರು ಕೊಡಗಿಗೆ ಆಗಮಿಸಿದರು. ಅವರೊಂದಿಗೆ ಅಲ್ಲಿನ ಆಚರಣೆಯಾದ ಕೋಲಗಳು ಇಲ್ಲಿ ಸೇರ್ಪಡೆಗೊಂಡವು. ಸೂಕ್ಷ್ಮವಾಗಿ ಗಮನಿಸಿದಾಗ 'ತೆರೆ' ಹಾಗೂ 'ಕೋಲ'ಗಳ ನಡುವೆ ಹಲವು ವ್ಯತ್ಯಾಸಗಳು ಕಂಡುಬರುತ್ತವೆ. 'ತೆರೆ' ಎಂಬುದು ಮಲೆಯಾಳ ಶೈಲಿಯ ದೈವಾರಾಧನೆ. ಇದು ಕೊಡಗಿನ ಆದಿಮ ಆರಾಧನಾ ಪದ್ಧತಿಯ ಸಂಯೋಗದಿಂದ ರೂಪುಗೊಂಡ ಆಚರಣೆಯಾಗಿದೆ. ಆದರೆ ಕೋಲ ಎಂಬುದು ತುಳುನಾಡಿನ ದೈವಾರಾಧನ ಪದ್ಧತಿಯಾಗಿದೆ. ಉಗ್ರ ಸ್ವರೂಪದ ಪಾಷಾಣಮೂರ್ತಿ, ಕಲ್ಲುರ್ಟಿ, ಪಂಜುರ್ಲಿ ದೈವಗಳಿಗೆ ಕೋಲ ಕಟ್ಟುವ ಆಚರಣೆ ರೂಢಿಯಲ್ಲಿದೆ. ಕೊಡಗಿನಲ್ಲಿ ಇದನ್ನು ತುಳು ಮೂಲದವರಾದ ಪಾಲೆ ಸಮುದಾಯದವರು ಕಟ್ಟುತ್ತಾರೆ. ತೆರೆಗಳನ್ನು ಕಟ್ಟುವ ಮಲಿಯ, ಬಣ್ಣ, ಪಣಿಕರು ಮಲೆಯಾಳದಿಂದ ಬಂದು ಕೊಡಗಿನಲ್ಲಿ ನೆಲೆಸಿ ಸ್ಥಳಿಯರೇ ಆಗಿದ್ದಾರೆ. ಅಲ್ಲದೆ ತೆರೆ ಮತ್ತು ಕೋಲಗಳ ಆಚರಣೆಯ ವಿಧಿವಿಧಾನಗಳು, ಬಣ್ಣಗಾರಿಕೆ ಹಾಗೂ ವೇಷಭೂಷಣಗಳಲ್ಲೂ ಹಲವು ಗಮನಾರ್ಹ ವ್ಯತ್ಯಾಸಗಳಿವೆ. ಈ ಎಲ್ಲಾ ಅಂಶಗಳು ತೆರೆ ಮತ್ತು ಕೋಲ ಆಚರಣೆಗಳು ಒಂದೇ ಅಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತವೆ.

ದೈವ ಎಂಬುದು ಅತಿಮಾನವ ಶಕ್ತಿಯ ಸಂಕೇತ. ತೆರೆ ಎಂಬುದು ಆ ದೈವಕ್ಕಾಗಿ ಕೈಗೊಳ್ಳುವ ಆರಾಧನಾ ವಿಧಿಯ ಕ್ರಿಯಾರೂಪವಾಗಿದೆ. ಈ ನಿಟ್ಟಿನಲ್ಲಿ ತೆರೆಕಟ್ಟುವ ಆಚರಣೆಯನ್ನು ದೈವೀ ಶಕ್ತಿಗಳನ್ನು ಪ್ರಸನ್ನಗೊಳಿಸಿ ಅವುಗಳ ಕೃಪೆಯನ್ನು ಬೇಡಿಕೊಳ್ಳುವುದರ ಸಂಕೇತವಾಗಿ ಆಚರಿಸಲಾಗುತ್ತದೆ. ಜನಪದರು ಆಚರಿಸುವ ಎಲ್ಲಾ ಆಚರಣೆಗಳ ಹಿಂದೆ ನಂಬಿಕೆ ಪ್ರಧಾನವಾಗಿರುತ್ತದೆ. ನಂಬಿಕೆ ಇಲ್ಲದೆ ಆಚರಣೆಗಳಿಲ್ಲ. ಭಾವಪ್ರಧಾನವಾದ ನಂಬಿಕೆಗಳು ಮನುಷ್ಯನ ಬದುಕನ್ನು ನಿಯಂತ್ರಿಸುವ ಶಕ್ತಿಗಳಾಗಿವೆ. ವ್ಯಕ್ತಿಯ ಭಾವನೆ ಮತ್ತು ಕ್ರಿಯೆಗಳು ಏಕೀಭವಿಸುವ ಮೂಲಕ ಅಗೋಚರ ಶಕ್ತಿಗಳನ್ನು ಸಂತೃಪ್ತಗೊಳಿಸಲು ಆಚರಣೆ, ಆರಾಧನೆಗಳು ಸೃಷ್ಟಿಗೊಂಡಿವೆ. "ಒಂದು ಆಚರಣೆಯ ಆಂತರ್ಯದಲ್ಲಿ ಆರಾಧನೆ ಸ್ಥಾಯಿಯಾಗಿ ಉಳಿದಿರುತ್ತದೆ. ಈ ಆಚರಣೆಯೇ ಮತ್ತೊಂದು ಅರ್ಥದಲ್ಲಿ ಆರಾಧನೆಯ ರೂಪವಾಗಿರುತ್ತದೆ. ಆಚರಣೆಗೆ ಬೆನ್ನೆಲುಬಾಗಿ ನಿರ್ದಿಷ್ಟವಾದ ಸಾಂಸ್ಕೃತಿಕ ನಂಬಿಕೆ

ವಿಧಿವಿಧಾನಗಳು ಕೂಡ ಇರುತ್ತವೆ.[೭೮] ಕೊಡಗಿನ ಜನಪದರು ತಾವು ನಂಬಿರುವ ದೈವಗಳನ್ನು ತೆರೆಕಟ್ಟುವ ಆಚರಣೆಯ ಮೂಲಕ ಆರಾಧಿಸುತ್ತಾರೆ. ಚೌಂಡಿ, ಭದ್ರಕಾಳಿ, ಸಾರ್ತಾವು, ಭಗವತಿ, ಅಯ್ಯಪ್ಪ, ಕುಳಿಯ, ವಿಷ್ಣುಮೂರ್ತಿ, ಮಂದಣಮೂರ್ತಿ, ಮಾದೇರಪ್ಪ, ಕಾಕೋಟಚ್ಚ ಇತ್ಯಾದಿ ದೈವಗಳು ಈ ಆಚರಣೆಯ ಮೂಲಕ ಆರಾಧಿಸಲ್ಪಡುತ್ತವೆ. ಇದರೊಂದಿಗೆ ಕುಟುಂಬದ ಪೂರ್ವಿಕರು, ಜನಪದ ವೀರರು, ಎತ್ತು ಮತ್ತು ಹುಲಿಯಂತಹ ಪ್ರಾಣಿಗಳು ತೆರೆ ಕಟ್ಟುವ ಆಚರಣೆಯ ಮೂಲಕ ಆರಾಧಿಸಲ್ಪಡುತ್ತವೆ. ನಿಗದಿತ ದಿನದಂದು, ನಿರ್ದಿಷ್ಟ ಅವಧಿಯಲ್ಲಿ ಕುಟುಂಬ ಹಾಗು ಗ್ರಾಮ ಮಟ್ಟದಲ್ಲಿ ಈ ಆಚರಣೆಗಳು ನಡೆಯುತ್ತವೆ.

ಕೊಡಗಿನಲ್ಲಿ ಸಾಮಾಜಿಕವಾಗಿ ಪ್ರಧಾನಧಾರೆಯಲ್ಲಿರುವ ಸಮುದಾಯದವರು ತೆರೆ ಆಚರಣೆಗಳನ್ನು ನಡೆಸುತ್ತಾರೆ. ಆದರೆ ಇದನ್ನು ಕಟ್ಟುವವರು ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಿರುವ ಪಣಿಕ, ಬಣ್ಣ ಮತ್ತು ಮಲಿಯ ಸಮುದಾಯದ ಜನರು. ತೆರೆ ಕಟ್ಟುವವರು(ತೆರೆಕಾರರು) ಎಂದು ಕರೆಯಲ್ಪಡುವ ಇವರು ಆಚರಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ಆಯಾ ದೈವಗಳ ವೇಷವನ್ನು ಧರಿಸಿ ನಿರ್ದಿಷ್ಟ ತಾಂತ್ರಿಕ ವಿಧಿಗಳ ಮೂಲಕ ದೈವಗಳನ್ನು ಆವಾಹಿಸಿಕೊಳ್ಳುತ್ತಾರೆ. ಈ ಮೂಲಕ ಅಲೌಕಿಕ ದೈವಗಳನ್ನು ಲೌಕಿಕ ಸ್ಥಿತಿಗೆ ತಂದು ಸ್ವತಃ ದೈವಗಳೇ ಆಗುತ್ತಾರೆ. ಈ ದೈವಗಳಿಗೆ ಭಕ್ತರು ತಮ್ಮ ಹರಕೆ ಕಾಣಿಕೆಗಳನ್ನು ಒಪ್ಪಿಸುತ್ತಾರೆ. ಸಂತುಷ್ಟಗೊಂಡ ದೈವಗಳು ಸಂತೃಪ್ತಿಯನ್ನು ವ್ಯಕ್ತಪಡಿಸಿ ಹರಸುತ್ತವೆ. ವೇಷಭೂಷಣಗಳು, ಬಣ್ಣಗಾರಿಕೆ, ಮಾತು, ಹಾಡುಗಳ ಮೂಲಕ ತೆರೆಕಾರರು ತೆರೆಯನ್ನು ಕಲಾತ್ಮವಾಗಿ ಅಭಿವ್ಯಕ್ತಗೊಳಿಸುತ್ತಾರೆ. ಸಮಾಜದ ಎಲ್ಲಾ ವರ್ಗಗಳ ಜನರು ಈ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಬ್ರಾಹ್ಮಣರು ದೈವಗಳ ಗುಡಿಯಲ್ಲಿ ತಮ್ಮ ಪಾಲಿನ ಪೂಜಾ ಕಾರ್ಯವನ್ನು ನಿರ್ವಹಿಸುವ ಮೂಲಕ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಸಾಂಪ್ರದಾಯಿಕ ವಾದ್ಯಗಾರರು ತಮ್ಮ ವಾದ್ಯಗಳನ್ನು ನುಡಿಸುತ್ತಾರೆ.

ತೆರೆಕಟ್ಟಿ ಆರಾಧಿಸಲ್ಪಡುವ ದೈವಗಳು ಹಾಗೂ ಅವುಗಳಿಗೆ ಸಂಬಂಧಿಸಿದ ಪರಿಕರಗಳು ಮತ್ತು ಸ್ಥಳಗಳನ್ನು ಅತ್ಯಂತ ಪವಿತ್ರ ಭಾವನೆಯಿಂದ ಕಾಣಲಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ಕೊಡವ ಭಾಷೆಯಲ್ಲಿ ಈ ಕೆಳಗಿನ ಪದಗಳನ್ನು ಗಮನಿಸಬಹುದು.

ತಿರಿಕೆ: ದೇವಸ್ಥಾನ.

ತಿರುವಳ ಬಪ್ಪೊ: ದೇವರು ಮೈಮೇಲೆ ಬರುವುದು.

ತಿರುವಳಕಾರ: ದೇವರನ್ನು ಮೈಮೇಲೆ ಆವಾಹಿಸಿಕೊಳ್ಳುವ ವ್ಯಕ್ತಿ.

ತಿರುವಾಯುಧ: ದೇವರ ಆಯುಧ.

ತಿರುಮುಡಿ: ದೇವರ ಮುಡಿ. ಈ ಪದಗಳು 'ತಿರು' ಎಂಬ ಧಾತುವಿನಿಂದ ನಿಷ್ಪನ್ನಗೊಂಡಿವೆ. ತಿರು ಪದಕ್ಕೆ ಶ್ರೀ, ಪೂಜ್ಯವಾದ, ಶ್ರೇಷ್ಠವಾದ ಎಂಬ ಅರ್ಥವಿದೆ. ತಿರುಪಾಟು ಎಂಬುದಕ್ಕೆ ದೇವತಾಸ್ತುತಿ ಎಂಬ ಅರ್ಥವಿದೆ. ನಂಬಿದವರಿಗೆ ಇಂಬು ನೀಡುವ ಈ ದೈವಗಳು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುತ್ತವೆ. ತಮ್ಮ ಭಕ್ತರನ್ನು ಹಡೆದವ್ವನಂತೆ ಮಮತೆಯಿಂದ ಸಲಹುತ್ತವೆ. ಕಾಲಕಾಲಕ್ಕೆ ಮಳೆ ಬೆಳೆ, ದನಕರುಗಳಿಗೆ ಮೇವನ್ನು ಒದಗಿಸಿ ಸುಖ ಸಂತೋಷವನ್ನು ನೀಡಿ ಕಾಪಾಡುತ್ತವೆ. ಒಕ್ಕ, ಕೇರಿ, ಊರು ಹಾಗೂ ನಾಡನ್ನು ಬೆಳಗುತ್ತವೆ ಎಂಬ ನಂಬಿಕೆ ಕೊಡಗಿನ ಜನಪದರಲ್ಲಿ ಸಾರ್ವತ್ರಿಕವಾಗಿದೆ.

ಆಚರಣೆಯೆಂಬುದು ನಿರ್ದಿಷ್ಟ ಸಮಯದಲ್ಲಿ, ನಿರ್ದಿಷ್ಟ ಸ್ಥಳದಲ್ಲಿ, ಕ್ರಮಬದ್ಧವಾಗಿ ನಡೆಸುವ ವಿಧಿ. ಅದು ಪರಂಪರೆಯ ಮೇಲಿನ ಶ್ರದ್ಧೆ, ಧಾರ್ಮಿಕ ಪ್ರಜ್ಞೆ ಹಾಗೂ ದೈವ ಭಯದಿಂದ ನಡೆಯುತ್ತದೆ. ತೆರೆಕಟ್ಟುವ ಆಚರಣೆಯ ಬಗ್ಗೆ ಜನರ ನಂಬಿಕೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಅದರ ಹಿಂದೆ ಭಯವಿರುವುದು ಕಾಣುತ್ತದೆ. ಭಯವೇ ಆಚರಣೆಯು ನಿರಂತರವಾಗಿ ಸಾಗಿಬರಲು ಕಾರಣವಾಗಿರುತ್ತದೆ. ದೈವಗಳನ್ನು ನಂಬದಿದ್ದರೆ, ಕಾಲಕಾಲಕ್ಕೆ ತೆರೆಕಟ್ಟಿ ಆರಾಧಿಸದಿದ್ದರೆ ಅವುಗಳು ಕೋಪಗೊಂಡು ಕೇಡನ್ನು ಉಂಟುಮಾಡುತ್ತವೆ. ಈ ತೊಂದರೆಗಳನ್ನು ನಿವಾರಿಸಲು 'ತಪ್ಪುಪಣ'(ತಪ್ಪು ಕಾಣಿಕೆ)ಯನ್ನು ಸಲ್ಲಿಸಿ ಆಚರಣೆಯನ್ನು ಮುಂದುವರಿಸಬಹುದೆಂದು ಭಾವಿಸುತ್ತಾರೆ. ಒಟ್ಟಿನಲ್ಲಿ ಜನಪದರ ಬದುಕು ಮತ್ತು ಅವರ ಮನೋಧರ್ಮದಲ್ಲಿ ತೆರೆಯ ಪರಿಕಲ್ಪನೆಯನ್ನು ಪರಿಭಾವಿಸಬಹುದು.

**೩.೨ ತೆರೆ ಆಚರಣೆಗಳು ಬೆಳೆದು ಬಂದ ದಾರಿ**

ಪ್ರಕೃತಿಯಲ್ಲಿನ ಚರಾಚರ ವಸ್ತುಗಳನ್ನು ಆರಾಧಿಸುವುದರ ಮೂಲಕ ಆದಿಮ ಮಾನವನು ತನ್ನ ಆರಾಧನೆಯ ಕಾರ್ಯವನ್ನು ಆರಂಭಿಸಿದನು. ಮುಂದೆ ಹಲವು ದೈವಗಳ ಸೃಷ್ಟಿಗೆ ಕಾರಣವಾಯಿತು. ಆರಾಧನೆಯ ಜೊತೆಗೆ ಆಚರಣೆಗಳು ಬೆಳೆದು ಬಂದವು. ಆಚರಣೆಗಳು ಯಾವುದೋ ಒಂದು ನಂಬಿಕೆಯನ್ನು ಆಧರಿಸಿರುತ್ತದೆ. ಬದುಕು ಎಷ್ಟು ಪ್ರಾಚೀನವೋ ನಂಬಿಕೆಗಳೂ ಅಷ್ಟೇ ಪ್ರಾಚೀನವಾದವುಗಳು. ಆದಿಮಾನವನ ಅತಾರ್ಕಿಕ ಮನಸ್ಸು, ಅವ್ಯಕ್ತ ಶಕ್ತಿಯೊಂದರ ಬಗೆಗಿನ ಭಯ ಇವುಗಳ ಹುಟ್ಟಿಗೆ ಕಾರಣವಾಯಿತು. ಅಭಿವ್ಯಕ್ತಿ ಮಾಧ್ಯಮವಾದ ಭಾಷೆ ರೂಪುಗೊಂಡಾಗ ನಂಬಿಕೆಗಳು ಜನಜೀವನದಲ್ಲಿ ಚಲಾವಣೆಗೊಂಡವು. ಆರಂಭದಲ್ಲಿ ಅವು ವ್ಯಕ್ತಿನಿಷ್ಠ ಅನಿಸಿಕೆಗಳಾದರೂ ಕಾಲಕ್ರಮದಲ್ಲಿ ಸಾರ್ವತ್ರಿಕವಾದವು. ಇವುಗಳನ್ನು ನಂಬಿ ನಡೆಯುವುದರಿಂದ ಒಳ್ಳೆಯದಾಗುತ್ತದೆ,

ತೊಂದರೆಗಳು ನಿವಾರಣೆಯಾಗುತ್ತವೆ ಎಂಬ ಭಾವನೆ ಬೆಳೆಯಿತು. ನಂಬಿಕೆಯ ಕ್ರಿಯಾರೂಪಗಳೇ ಆಚರಣೆಗಳು. ನಂಬಿಕೆಗಳು ಸಮುದಾಯದ ಭಾವನಾತ್ಮಕ ಮುಖವಾದರೆ ಆಚರಣೆಗಳು ಅದರ ಕ್ರಿಯಾತ್ಮಕ ಮುಖ. ಆದ್ದರಿಂದ ನಂಬಿಕೆ ಮತ್ತು ಆಚರಣೆಗಳಿಗೆ ಅನ್ಯೋನ್ಯತೆ ಇದೆ. ಅವು ಪರಸ್ಪರ ಒಂದರ ಹಿಂದೆ ಮತ್ತೊಂದು ಇರುತ್ತವೆ. ನಂಬಿಕೆಯು ಅವಲಂಬನೆಯ ರೂಪವಾದರೆ ಆಚರಣೆಯು ಕ್ರಿಯಾರೂಪವಾಗಿದೆ.

ಇಂಗ್ಲಿಷಿನ 'ರಿಚ್ಯುವಲ್' ಪದಕ್ಕೆ ಸಂವಾದಿಯಾಗಿ 'ಆಚರಣೆ' ಪದವನ್ನು ಬಳಸಲಾಗುತ್ತದೆ. ಆಚರಣೆ ಎಂದರೆ "ಮತಧರ್ಮಗಳಿಗೆ ಸಂಬಂಧಿಸಿದಂತೆ, ಅಗೋಚರ ದೈವಶಕ್ತಿಗಳ ಪ್ರೀತ್ಯರ್ಥವಾಗಿ ಮಾನವ ನಡೆಸುತ್ತ ಬಂದಿರುವ ಮತಾಚಾರ ಮತ್ತು ಕರ್ಮವಿಧಿ."[5] ಪ್ರತಿಯೊಂದು ಆಚರಣೆಗಳನ್ನು ಗಮನಿಸಿದಾಗ ಅವುಗಳು ಎಂದಿನಿಂದ ಆಚರಣೆಗೆ ಬಂದವು ಎಂಬುದನ್ನು ತಿಳಿಯುವುದು ಕಷ್ಟ. ಏಕೆಂದರೆ ಮನುಷ್ಯನು ಈ ಎಲ್ಲಾ ಆಚರಣೆಗಳನ್ನು ಭಯ ನಿವಾರಣೆ ಹಾಗೂ ಉಪಕಾರ ಸ್ಮರಣೆಯ ದೃಷ್ಟಿಯಿಂದ ಆಚರಿಸಲು ಆರಂಭಿಸಿದನು. ಹಾಗಾಗಿ ಮನುಷ್ಯನಷ್ಟೇ ಆಚರಣೆಗಳೂ ಪ್ರಾಚೀನವಾಗಿವೆ. ಆಚರಣೆ ಎಂಬುದು ಆದಿಮ ಧಾರ್ಮಿಕ ಕ್ರಿಯೆಯ ಮುಂದುವರಿದ ರೂಪ. ಇದು ಅತೀಂದ್ರೀಯ ಶಕ್ತಿ ಅಥವಾ ಶಕ್ತಿಗಳಿಂದ ಅನುಗ್ರಹ ಪಡೆಯಲು ಕೈಗೊಂಡ ಕ್ರಿಯೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಆದಿಮ ಮಾನವನಿಗೆ ದೈವದ ಕಲ್ಪನೆ ಮೂಡಿದಾಗಿನಿಂದ ಅದಕ್ಕೆ ಸಂಬಂಧಪಟ್ಟ ಅನೇಕ ಆಚರಣೆಗಳನ್ನು ರೂಢಿಸಿಕೊಂಡಿದ್ದಾನೆ. ಪ್ರಾಕೃತಿಕ ವೈಚಿತ್ರ್ಯಗಳಿಂದ ಉಂಟಾಗುವ ಭಯದಿಂದ ರಕ್ಷಿಸಿಕೊಳ್ಳಲು ಆದಿಮಾನವ ಕಣ್ಣಿಗೆ ಕಾಣದ ಅಗೋಚರ ಶಕ್ತಿಯನ್ನು ಆರಂಭದಲ್ಲಿ ಕಂಡುಕೊಂಡ. ನಂತರದಲ್ಲಿ ತಾನು ನೋಡಿದ ಸೂರ್ಯ, ಚಂದ್ರ, ನಿಸರ್ಗದಲ್ಲಿಯೇ ಇದ್ದ ಗಿಡಮರ, ಪ್ರಾಣಿ, ಗುಡುಗು, ಸಿಡಿಲುಗಳನ್ನು ದೈವವೆಂದು ತಿಳಿದು ಆರಾಧನೆಯಲ್ಲಿ ತೊಡಗಿದ. ಅವನ ಪಾಲಿಗೆ ಅವೇ ದೈವಗಳಾದವು. ಅವುಗಳನ್ನು ವಶಪಡಿಸಿಕೊಳ್ಳುವ ಮಾರ್ಗವಾಗಿ ಆರಾಧನೆ, ಆಚರಣೆಗಳನ್ನು ಆರಂಭಿಸಿದನು. ಹೀಗೆ ಜಗತ್ತಿನ ಎಲ್ಲಾ ಸಂಸ್ಕೃತಿಗಳಲ್ಲೂ ವಿವಿಧ ಆಚರಣೆಗಳು, ಆರಾಧನೆಗಳು ಕಂಡು ಬರುತ್ತವೆ. ಆಯಾ ಸಮುದಾಯಗಳು ತಮ್ಮ ದೈವಗಳಿಗೆ ಪ್ರಾಧಾನ್ಯತೆ ಕೊಡುವ ಹಿನ್ನೆಲೆಯಲ್ಲಿ ಹಬ್ಬ ಹರಿದಿನಗಳನ್ನು ಸೃಷ್ಟಿಸಿಕೊಂಡು ಅವುಗಳನ್ನು ವಿಶಿಷ್ಟ ಬಗೆಗಳಿಂದ ಆರಾಧಿಸುತ್ತಾ ಬಂದಿವೆ. ಹೀಗಾಗಿ ಗ್ರಾಮ ದೈವಗಳಿಗೆ ತೆರೆಕಟ್ಟುವುದು ಕೇವಲ ಆಚರಣೆಯಾಗಿರದೆ; ಜನಪದ ಸಂಸ್ಕೃತಿಯ ವಿಭಿನ್ನ ಮುಖಗಳನ್ನು ಅನಾವರಣಗೊಳಿಸುವ ಸಾಧನವಾಗಿದೆ.

**ಸಾಹಿತ್ಯಿಕ ಉಲ್ಲೇಖಗಳು :**

ದೈವಗಳ ಆರಾಧನಾ ವಿಧಿವಿಧಾನಗಳು ಪರಂಪರಾಗತ ಸಂಪ್ರದಾಯಗಳ ಆಚರಣೆಯೇ ಆಗಿವೆ. ತೆರೆಕಟ್ಟುವ ಆಚರಣೆಯಲ್ಲಿ ಆರಾಧಿಸಲ್ಪಡುವ ದೈವಗಳು ಹಾಗೂ ಅವುಗಳ ಆವೇಶದ ಬಗ್ಗೆ ಅನೇಕ ಕೃತಿಗಳಲ್ಲಿ ಉಲ್ಲೇಖಗಳಿವೆ. ಹಳಗನ್ನಡದ ಪ್ರಾಚೀನ ಕೃತಿಗಳಾದ ಪಂಪಭಾರತ, ವಡ್ಡಾರಾಧನೆ ಹಾಗೂ ಯಶೋಧರ ಚರಿತೆಯಲ್ಲಿ ಆವೇಶ, ಆರಾಧನೆ ಹಾಗೂ ಬಲಿಗೆ ಸಂಬಂಧಿಸಿದ ಕೆಲವು ಉಲ್ಲೇಖಗಳು ಸಿಗುತ್ತವೆ. ಪಂಪಭಾರತ ಕೃತಿಯಲ್ಲಿ ೧. 'ನೆಟ್ಟನೆ ಬೂತುಗೊಳ್ವ ತೆರದಿಂ ದಶಕಂಧರನಾಡಿ ಪಾಡಿ ನಾಣ್ಗೆಟ್ಟಿರೆಕೊಂಡನಲ್ಲದೆ'[೧೦] ಹಾಗೂ ೨. 'ಭಗವತಿಯೇರುವೇಳ್ವ ತೆರದಿಂ ಕಥೆಯಾಯ್ತಿವರೇರು'[೧೧] ಎಂಬ ಮಾತುಗಳಿವೆ. ಇಲ್ಲಿ ಉಕ್ತವಾಗಿರುವ 'ಬೂತುಗೊಳು' ಮತ್ತು 'ಭಗವತಿಯೇರು' ಪದಗಳು ಮೈಮೇಲೆ ಆವೇಶ ಬರುವ ಅಂಶವನ್ನು ಹೇಳುತ್ತವೆ. ಅಲ್ಲದೆ ವ್ಯಕ್ತಿಯ ಮೈಮೇಲೆ ಶಕ್ತಿಯ ಪ್ರವೇಶವಾದರೆ ಆವೇಶ ಉಂಟಾಗುತ್ತದೆ ಎಂಬ ನಂಬಿಕೆ ಹಿಂದಿನಿಂದಲೇ ಇತ್ತು ಎಂದು ಭಾವಿಸಬಹುದು. ಸಾಹಿತ್ಯದಲ್ಲಿರುವ ಉಲ್ಲೇಖಗಳು ಪರಿಪೂರ್ಣವಾಗಿ ಕೊಡಗಿನ ತೆರೆಕಟ್ಟುವ ಆಚರಣೆಗೆ ಪೂರಕವಾಗಿವೆ ಎಂದು ಹೇಳಲಾಗುವುದಿಲ್ಲ. ಆದರೆ ಸಾಹಿತ್ಯದಲ್ಲಿ ಉಲ್ಲೇಖವಾಗಿರುವ ಈ ಅಂಶಗಳು ಸಾರ್ವತ್ರಿಕವಾಗಿರುತ್ತವೆ.

ವಡ್ಡಾರಾಧನೆ ಗ್ರಂಥದ ಕಾರ್ತಿಕ ಋಷಿಯ ಕತೆಯಲ್ಲಿ ಪಗರಣದ ಆರಂಭದ ಬಗ್ಗೆ ಕೆಲವು ವಿವರಗಳಿವೆ. ರಾಣಿಯನ್ನು ನಗುವಂತೆ ಮಾಡಲು ಪಗರಣಿಗರು ಪ್ರಯತ್ನಿಸುವ ಪ್ರಸಂಗ ಬರುತ್ತದೆ. "ಲೋಗರ್ ಪಗರಣಿಗರಾಗಿ ಎನಿತಾನುಂ ತೆರದ ರೂಪುಗಳಂ ಕೈಕೊಂಡು ಮರ ಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಂ ಎಂತುಂ...."[೧೨] ಜನರು ಪಗರಣಿಗರಾಗಿ ವಿವಿಧ ವೇಷಗಳನ್ನು ಧರಿಸಿ ಮರದ ಮೊಗಗಳನ್ನು ಕಟ್ಟಿಕೊಂಡು ಹಾಡಿ ಕುಣಿದು ನಗಿಸಿದರು. ಇಲ್ಲಿನ ಪಗರಣಕ್ಕೂ ಕೊಡಗಿನ ತೆರೆಕಟ್ಟುವ ಆಚರಣೆಗೂ ಪರಸ್ಪರ ಹೋಲಿಕೆ ಇದೆ ಎನ್ನಲಾಗದು. ಆದರೆ ಮೇಲಿನ ಸಾಲಿನಲ್ಲಿ ಉಕ್ತವಾಗಿರುವ 'ಮೊಗ'ವು ತೆರೆಕಟ್ಟುವ ಆಚರಣೆಯಲ್ಲಿ ಬಳಸಲ್ಪಡುತ್ತದೆ. ಕೊಡಗಿನಲ್ಲಿ ನಡೆಯುವ ಭದ್ರಕಾಳಿ ಮತ್ತು ಅಯ್ಯಪ್ಪನ ಪ್ರೀತ್ಯರ್ಥವಾಗಿ ನಡೆಯುವ ಬೋಡ್‌ಹಬ್ಬವು ಪಗರಣವನ್ನು ಹೋಲುತ್ತದೆ. ಕೆಲವು ಊರುಗಳಲ್ಲಿ ಈ ಹಬ್ಬದ ಸಂದರ್ಭದಲ್ಲಿ ತೆರೆಕಟ್ಟುವ ಆಚರಣೆ ನಡೆಯುತ್ತದೆ ಎಂಬುದು ಗಮನಾರ್ಹವಾದುದು.

ಜನ್ನ ಕವಿಯ ಪ್ರಮುಖ ಕೃತಿ ಯಶೋಧರ ಚರಿತೆಯಲ್ಲಿ ಚಂಡಮಾರಿ ದೇವಿಯ ಜಾತ್ರೆ, ಆಕೆಯ ಬಗ್ಗೆ ಜನಪದರಿಗೆ ಇರುವ ನಂಬಿಕೆ, ಭಯ ಭಕ್ತಿಯ ಚಿತ್ರಣವಿದೆ.

"ನಿಂದು ನರಪತಿ ತಳಾರಂ

ಗೆಂದಂ ನೀನ್ ಬರಿಸು ಮನುಜಯುಗಮಂ ಮುನ್ನಂ
ಕೊಂದರ್ಚಿಸುವೆಂ ಪೂಜೆಯೊ
ಳೆಂದಿನ ಪರಿ ತಪ್ಪೆ ದೇವಿ ತಪ್ಪದೆ ಮಾಣಳ್
ತಡವಾದಪ್ಪುದು ಪೌರರ್
ಕುಡುವೇಳ್ಪುದು ಪಲವು ಜೀವರಾಶಿಯ ಬಲಿಯಂ"[೧೩]

ಚಂಡಮಾರಿಯ ಜಾತ್ರೆಯಲ್ಲಿ ಪಾಲ್ಗೊಂಡ ಮಾರಿದತ್ತನು ರಂಗಮಂಟಪದ ಬಳಿ ನಿಂತು ತಳಾರನನ್ನು ಕುರಿತು ಹೀಗೆಂದನು. "ಮನುಷ್ಯರ ಜೋಡಿಯನ್ನು ನೀನು ಮೊದಲು ಬರಮಾಡು. ಮೊದಲು ಅವರನ್ನು ಕೊಂದು ಅರ್ಚಿಸುತ್ತೇನೆ. ಪೂಜೆಯ ಪದ್ಧತಿ ತಪ್ಪಿದರೆ ದೇವಿ ಕೆಡುಕು ಮಾಡದೆ ಇರುವುದಿಲ್ಲ. ತಡವಾಯಿತು ಪ್ರಜೆಗಳು ಹಲವು ಪ್ರಾಣಿಗಳ ಸಮೂಹವನ್ನು ಬಲಿ ಕೊಡಬೇಕು." ಎಂಬ ಈ ಸಾಲುಗಳು ನರಬಲಿ ಹಾಗೂ ಪ್ರಾಣಿ ಬಲಿಯ ಚಿತ್ರಣವನ್ನು ನೀಡುತ್ತವೆ. ಜನ್ನ ಕವಿಯು ಚಿತ್ರಿಸಿರುವ ಚಂಡಮಾರಿ ದೇವತೆಯ ಜಾತ್ರೆ ಹಾಗು ಕೊಡಗಿನ ತೆರೆಕಟ್ಟುವ ಆಚರಣೆಗಳು ಒಂದೇ ಅಲ್ಲ. ಆದರೆ ಈ ಮೇಲಿನ ಸಾಲುಗಳು ಆಚರಣೆಗಳ ಸಾರ್ವತ್ರಿಕತೆಯನ್ನು ಬಿಂಬಿಸುತ್ತವೆ ಅಷ್ಟೇ.

**ಜನಪದ ಸಾಹಿತ್ಯದಲ್ಲಿರುವ ಉಲ್ಲೇಖಗಳು :**

ಜಾನಪದದ ಪ್ರಮುಖ ಭಾಗವಾದ ಕೊಡವ ಜನಪದ ಗೀತೆಗಳಲ್ಲಿ ತೆರೆಕಟ್ಟುವ ಆಚರಣೆ, ತೆರೆಕಟ್ಟುವ ಸಮುದಾಯ ಹಾಗೂ ಪ್ರಾಣಿಬಲಿಯ ಬಗ್ಗೆ ಉಲ್ಲೇಖಗಳಿವೆ.

"ಚೆಂಬ ಚೆಂಬ ಚೆಂಬೆಡ್‌ತ,
ಚೆಂಬಂಡ ಮಂದಿ ದುಡಿಯೆಡ್‌ತ,
ಮಾಣಿಕ ಮಂಡ ಮಣಿಯೆಡ್‌ತ,
ಬೊಳ್ಳಿ ಪಣಿಕ ತೆರೆಯೆಡ್‌ತ,
ಕಾಪಳ ಕುಟ್ಟಿ ಕೊಂಬೆಡ್‌ತ,"[೧೪]

**ಕನ್ನಡಾನುವಾದ:**

"ಚೆಂಬ ನೀನು ಚೆಂಬನ್ನು ಎತ್ತಿಕೋ
ಚೆಂಬನ ಪತ್ನಿ ದುಡಿಯನ್ನು ತೆಗೆದುಕೋ
ಮಾಣಿಕ ಎತ್ತೇ ಗಂಟೆ ತೆಗೆದುಕೋ
ಬೊಳ್ಳಿ ಪಣಿಕನೇ ತೆರೆಯನ್ನು ಹೊತ್ತುಕೋ
ಕಾಪಳ ಯುವಕನೇ ಕೊಂಬನ್ನು ತೆಗೆದುಕೋ".

ಮೇಲಿನ ಶಿಶುಪ್ರಾಸದ ಸಾಲುಗಳಲ್ಲಿ ಕೊಡಗಿನ ವಿವಿಧ ಪಂಗಡಗಳ ವಿವರಗಳಿವೆ. ತೆರೆಕಟ್ಟುವ ಸಮುದಾಯಗಳಲ್ಲಿ ಒಂದಾದ ಪಣಿಕ ಸಮುದಾಯದ

ಬೊಳ್ಳಿ ಎಂಬ ವ್ಯಕ್ತಿ ತೆರೆಯನ್ನು ಕಟ್ಟಿ ಹೊತ್ತುಕೊಳ್ಳುವುದರ ಚಿತ್ರಣವಿದೆ. ಸಾವಿನ ಸಂದರ್ಭದಲ್ಲಿ ಕೊಡವ ಜನಪದರು 'ಚಾವುಪಾಟ್' ಎಂಬ ಸಾವಿನ ಹಾಡನ್ನು ಹಾಡುತ್ತಾರೆ. ಇಲ್ಲಿ ಅನಾರೋಗ್ಯದಿಂದ ನರಳುತ್ತಿರುವ ವ್ಯಕ್ತಿಯನ್ನು ಗುಣಪಡಿಸಲೆಂದು ಆತನ ಮಕ್ಕಳು ಊರು ಮತ್ತು ನಾಡಿನಲ್ಲಿ ತೆರೆಕಟ್ಟಿ ಆರಾಧಿಸಲ್ಪಡುವ ಭದ್ರಕಾಳಿ ಮತ್ತು ಚೌಂಡಿ ದೈವಗಳಿಗೆ ಆಡು ಮತ್ತು ಹಂದಿಯನ್ನು ಬಲಿ ಒಪ್ಪಿಸುವ ವಿವರಗಳಿವೆ. ತೆರೆಕಟ್ಟುವ ಆಚರಣೆಯ ಮೂಲಕ ಆರಾಧಿಸಲ್ಪಡುವ ಸಾರ್ತಾವು, ಅಜ್ಜಪ್ಪ, ಪುದಿಯೋದಿ, ಪೊವ್ವದಿ, ಕೇತ್ರಪ್ಪ ದೈವಗಳ ಮೂಲ ಹಾಗೂ ಪ್ರಸರಣವನ್ನು ಕುರಿತ ಜನಪದ ಗೀತೆಗಳಿವೆ. ಈ ಗೀತೆಗಳೆಲ್ಲವೂ ನಡಿಕೇರಿಯಂಡ ಚಿಣ್ಣಪ್ಪ ಅವರ 'ಪಟ್ಟೋಲೆ ಪಳಮೆ' ಕೃತಿಯಲ್ಲಿ ದಾಖಲುಗೊಂಡಿವೆ.

ತೆರೆ ಕಟ್ಟುವ ಆಚರಣೆಗಳು ಗ್ರಾಮ ಹಾಗೂ ಕುಟುಂಬ ಮಟ್ಟದಲ್ಲೂ ನಡೆಯುತ್ತದೆ. ಆಯಾ ದೈವದ ರೂಪಕ್ಕೆ ಅನುಗುಣವಾಗಿ ವೇಷ ಭೂಷಣವನ್ನು ಧರಿಸುವ ವ್ಯಕ್ತಿ ದೈವವನ್ನು ಮೈಗೆ ಆವಾಹಿಸಿಕೊಳ್ಳುತ್ತಾನೆ. ತಾನೇ ದೈವವಾಗಿ ಅಭಿನಯಿಸುತ್ತಾ, ಆವೇಶಭರಿತನಾಗಿ ಕುಣಿಯುತ್ತಾನೆ. ಭಕ್ತರೊಂದಿಗೆ ಮಾತನಾಡುತ್ತಾ ದೈವ ಸಂದೇಶವನ್ನು ನೀಡುತ್ತಾನೆ. ಅವರು ನೀಡುವ ಹರಕೆ ಕಾಣಿಕೆಗಳನ್ನು ಸ್ವೀಕರಿಸುತ್ತಾನೆ. ಆ ಮೂಲಕ ದೈವಗಳನ್ನು ಸಂಪ್ರೀತಗೊಳಿಸುತ್ತಾನೆ. ತೆರೆಗಳನ್ನು ಕಟ್ಟಿ ದೈವಗಳನ್ನು ಆವಾಹಿಸಿಕೊಳ್ಳುವ ಬಣ್ಣ, ಪಣಿಕ ಮತ್ತು ಮಲೆಯರನ್ನು ಕೊಡವ ಭಾಷೆಯಲ್ಲಿ 'ತೆರೆಕಟ್ಟುವಯಿಂಗ' (ತೆರೆಕಟ್ಟುವವರು), 'ತೆರೆಕಾರ'(ತೆರೆಕಾರರು) ಎಂದು ಕರೆಯಲಾಗುತ್ತದೆ. ಈ ಮೂರು ಸಮುದಾಯಗಳ ಪ್ರಮುಖ ವೃತ್ತಿ ತೆರೆ ಕಟ್ಟುವುದಾದರೂ; ಅವರು ಕಟ್ಟುವ ತೆರೆಗಳಲ್ಲಿ ಕೆಲವು ವ್ಯತ್ಯಾಸಗಳು ಹಲವು ಸಾಮ್ಯತೆಗಳೂ ಕಂಡುಬರುತ್ತವೆ. ಕೆಲವು ತೆರೆಗಳು ಆಯಾ ಸಮುದಾಯಕ್ಕೆ ಮೀಸಲಾದವುಗಳಾಗಿವೆ.

**೩.೩ ತೆರೆ ಆಚರಣೆಯ ಸ್ಥಾಪಿತ ಕೇಂದ್ರಗಳು**

ಕೊಡಗಿನಲ್ಲಿ ಪಣಿಕ, ಬಣ್ಣ ಮತ್ತು ಮಲಿಯ ಸಮುದಾಯಗಳು ನೆಲೆಸಿರುವ ನಾಡು ಹಾಗೂ ಗ್ರಾಮಗಳಲ್ಲಿ ತೆರೆಕಟ್ಟುವ ಆಚರಣೆಯ ಸ್ಥಾಪಿತ ಕೇಂದ್ರಗಳಿವೆ. ಅವುಗಳೆಂದರೆ ಗುಡಿ, ಕೋಟ, ಬನ ಮತ್ತು ನೆಲೆಗಳು. ಅಲ್ಲದೆ ಗ್ರಾಮಗಳಲ್ಲಿರುವ ಒಕ್ಕಗಳ ಐನ್‌ಮನೆ(ಮೂಲಮನೆ)ಗಳೂ ಕೂಡ ತೆರೆ ಆರಾಧನೆಯ ಕೇಂದ್ರಗಳಾಗಿವೆ. ಪೂರ್ವದಲ್ಲಿ ಕೊಡಗನ್ನು ಹನ್ನೆರಡು ಕೊಂಬು ಹಾಗೂ ಮೂವತ್ತೈದು ನಾಡುಗಳಾಗಿ ವಿಭಾಗಿಸಲಾಗಿತ್ತು. ಹಲವು ಗ್ರಾಮಗಳು ಸೇರಿ ಒಂದು ನಾಡು ರೂಪುಗೊಳ್ಳುತ್ತಿತ್ತು. 'ಬಾಳೋಪಾಟ್' ಎಂಬ ಕೊಡವ ಜನಪದಗೀತೆಯಲ್ಲಿ ಇದರ ಕುರಿತು ಉಲ್ಲೇಖವಿದೆ. ತೆರೆಯನ್ನು ಕಟ್ಟುವ ಮಲಿಯ, ಬಣ್ಣ ಮತ್ತು ಪಣಿಕ ಸಮುದಾಯದವರು ಪುರಾತನ ಕಾಲದಿಂದಲೂ ಆಯಾಯ ನಾಡುಗಳಿಗೆ ತಮ್ಮ

ಕಾರ್ಯಕ್ಷೇತ್ರವನ್ನು ಸೀಮಿತಗೊಳಿಸಿಕೊಂಡಿದ್ದರು. ಈ ಹಿನ್ನೆಲೆಯಲ್ಲಿ ಕೊಡಗಿನ ಪಾರಂಪರಿಕ ನಾಡುಗಳಿಗೆ ಸೇರುವ ಕೆಲವು ಪ್ರಮುಖ ಗ್ರಾಮಗಳ ವಿವರಗಳು ಹೀಗಿವೆ.

**ಅಯ್ಯಂಗೇರಿ**

ಅಯ್ಯಂಗೇರಿ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಇಲ್ಲಿರುವ ಚರ್ಮಂಗಾಲ ಎಂಬ ಸ್ಥಳವು ಪಣಿಕರ ಮೂಲಸ್ಥಾನ. ಈ ಗ್ರಾಮವು ನಾಲ್‌ನಾಡಿಗೆ ಸೇರುತ್ತದೆ. "ಕೊಡಗಿನಲ್ಲಿ ಅಮ್ಮಂಗೇರಿ ಕಣಿಯ, ಬಲ್ಲತ್ ಮಲೆಯ, ಪಯ್ಯನೂರು ಬಣ್ಣ ಮತ್ತು ಚರ್ಮಂಗಾಲ ಪಣಿಕರೆಂದು ಸಂಭೋದಿಸುವ ಪರಿಪಾಟವಿದೆ."[೧೫] ಈ ಗ್ರಾಮದಲ್ಲಿ ಮಡಿಯಂಡ ಕುಟುಂಬಕ್ಕೆ ಸೇರಿದ ಪಣಿಕರು ನೆಲೆಸಿದ್ದಾರೆ. ಚಿನ್ನತಪ್ಪ ಮತ್ತು ಭಗವತಿ ಈ ಗ್ರಾಮದ ಪ್ರಮುಖ ದೈವಗಳಾಗಿವೆ. ಫೆಬ್ರವರಿ ೧೦ ರಂದು ಚಿನ್ನತಪ್ಪ ದೇವರ ಹಬ್ಬವು ನಡೆಯುತ್ತದೆ. ದೇವತಕ್ಕ(ಮುಖ್ಯಸ್ಥ)ರಾಗಿರುವ ಚೆಂಗಂಡ ಕುಟುಂಬ ಹಾಗೂ ಭಂಡಾರ ತಕ್ಕರಾದ ಬಿದ್ದಿಯಂಡ ಕುಟುಂಬದವರು ಗ್ರಾಮದವರ ಸಹಕಾರದೊಂದಿಗೆ ಹಬ್ಬವನ್ನು ನಡೆಸುತ್ತಾರೆ. ಏಪ್ರಿಲ್ ೧೦ ರಂದು ಗ್ರಾಮದ ಭಗವತಿ ದೇವಿಯ ಉತ್ಸವವು ನಡೆಯುತ್ತದೆ. ಬಿದ್ದಿಯಂಡ ಕುಟುಂಬದರು ಭಂಡಾರ ತಕ್ಕರಾಗಿ ಹಬ್ಬದ ಕಾರ್ಯಗಳನ್ನು ನಡೆಸುತ್ತಾರೆ.

**ಅರುವತೊಕ್ಲು**

ಅರುವತೊಕ್ಲು ಗ್ರಾಮವು ವಿರಾಜಪೇಟೆ ತಾಲೂಕಿನ ಗೋಣಿಕೊಪ್ಪಲು ಹತ್ತಿರವಿದೆ. ಈ ಗ್ರಾಮವು ಬೊಟ್ಟಿಯತ್ ನಾಡಿಗೆ ಸೇರುತ್ತದೆ. 'ಬೊಟ್ಟಿಯತ್' ಎಂದರೆ ಬೆಟ್ಟದ ಮೇಲ್ತುದಿ ಎಂದರ್ಥ. ಕುಂದತ್ ಬೆಟ್ಟದ ತಳದಲ್ಲಿರುವ ಪ್ರದೇಶವಾದುದರಿಂದ ಬೊಟ್ಟಿಯತ್ ನಾಡು ಎಂಬ ಹೆಸರು ಬಂದಿದೆ. ಇದು ಅರುವತ್ತು ಒಕ್ಕಗಳನ್ನು ಹೊಂದಿರುವ ಗ್ರಾಮ. ಈ ಕಾರಣದಿಂದ ಅರುವತ್ತು ಒಕ್ಕಲುಗಳ ಗ್ರಾಮ ಎಂಬ ಹೆಸರು ಬಂದಿದೆ. ಇಲ್ಲಿನ ಪಣಿಕರು ವೈವಿಧ್ಯಮಯ ತೆರೆಯನ್ನು ಕಟ್ಟುತ್ತಾರೆ. ಗ್ರಾಮದಲ್ಲಿ ಕಾಡ್ಲಯ್ಯಪ್ಪ, ಮಾದೇವ ಹಾಗೂ ಬೇಕೋಟ್ ವಿಷ್ಣುಮೂರ್ತಿ ದೈವಗಳ ನೆಲೆಯಿದೆ. ಈ ಗ್ರಾಮದ ಆರಾಧ್ಯ ದೈವ ಅಯ್ಯಪ್ಪ. ಈತ ಕಾಡಿನಲ್ಲಿ ನೆಲೆಸಿರುವುದರಿಂದ ಕಾಡ್ಲಯ್ಯಪ್ಪ ಎಂದು ಕರೆಯಲಾಗುತ್ತದೆ. ಮಾರ್ಚ್ ತಿಂಗಳ ೧೫ ರಂದು ಕಾಡ್ಲಯ್ಯಪ್ಪ ದೇವರ ವಾರ್ಷಿಕೋತ್ಸವ ನಡೆಯುತ್ತದೆ. ಈ ಸಂದರ್ಭದಲ್ಲಿ ಪಣಿಕರು ಕಾಡ್ಲಯ್ಯಪ್ಪನ ನೆಲೆಯಲ್ಲಿ ತೆರೆಯನ್ನು ಕಟ್ಟುತ್ತಾರೆ. ಕೊಡವ ಸಮುದಾಯದ ಕಾಡ್ಯಮಾಡ ಕುಟುಂಬವು ದೇವತಕ್ಕರಾಗಿದ್ದಾರೆ. ಪುರೋಹಿತರಾಗಿ ಅಮ್ಮಕೊಡವ ಸಮುದಾಯದ ಅಚ್ಚಿಯಂಡ ಒಕ್ಕದವರು ಕಾರ್ಯ ನಿರ್ವಹಿಸುತ್ತಾರೆ.

**ಕದನೂರು**

ಕದನೂರು ಬೆಪ್ಪುನಾಡಿಗೆ ಸೇರುವ ಹತ್ತು ಗ್ರಾಮಗಳಲ್ಲಿ ಪ್ರಮುಖವಾದುದು. ಈ ಗ್ರಾಮದ ಆರಾಧ್ಯ ದೇವತೆ ಭಗವತಿ. ಮಾರ್ಚ್ ತಿಂಗಳ ಮೂರನೇ ತಾರೀಕಿನಂದು ಭಗವತಿಯ ವಾರ್ಷಿಕ ಉತ್ಸವವು ನಡೆಯುತ್ತದೆ. ಗ್ರಾಮದಲ್ಲಿ ನೆಲೆಸಿರುವ ಅನ್ನಾರ್‌ಕಂಡ, ಅಮ್ಮಣಿಚಂಡ ಮತ್ತು ಪಾಲೇಕಂಡ ಕುಟುಂಬಗಳ ಮುಂದಾಳತ್ವದಲ್ಲಿ ಈ ಉತ್ಸವವು ನಡೆಯುತ್ತದೆ. ಈ ಸಂದರ್ಭದಲ್ಲಿ ಮಲಿಯರು ಭಗವತಿ ಮತ್ತು ನಂದಿಮಂಡ ತೆರೆಯನ್ನು ಕಟ್ಟುತ್ತಾರೆ. ಭಗವತಿ ದೇವಿ ಮತ್ತು ನಂದಿಮಂಡ ರಾಕ್ಷಸನ ನಡುವೆ ಕದನ ನಡೆದುದರಿಂದ ಕದನೂರು ಎಂಬ ಹೆಸರು ಬಂದಿತು ಎಂಬ ಐತಿಹ್ಯವಿದೆ.

**ಕರಡ**

ಕೊಡಗಿನ ಕಡಿಯತ್‌ನಾಡಿನ ಹನ್ನೊಂದು ಗ್ರಾಮಗಳಲ್ಲಿ ಕರಡ ಗ್ರಾಮವು ಒಂದು. ಈ ಗ್ರಾಮದಲ್ಲಿ ಬಣ್ಣ ಸಮುದಾಯದವರು ನೆಲೆಸಿದ್ದಾರೆ. ಗ್ರಾಮದಲ್ಲಿರುವ ಕೊಡವ ಕುಟುಂಬಗಳಾದ ನಡಿಕೇರಿಯಂಡ ಹಾಗೂ ಐತಿಚಂಡ ಒಕ್ಕಗಳ ಐನ್‌ಮನೆಯಲ್ಲಿ ತೆರೆಕಟ್ಟುವ ಆಚರಣೆಗಳು ನಡೆಯುತ್ತವೆ. ನಡಿಕೇರಿಯಂಡ ಕುಟುಂಬವು ಎತ್ತ್‌ತೆರೆಯನ್ನು ಕಟ್ಟಿಸುತ್ತದೆ. ಐತಿಚಂಡ ಕುಟುಂಬವು ಪುದಿಯೋದಿ ದೇವಿಯ ತೆರೆಯನ್ನು ನಡೆಸುತ್ತದೆ. ಬಣ್ಣರು ಈ ತೆರೆಗಳನ್ನು ಕಟ್ಟುತ್ತಾರೆ.

**ಕರವಲೆ ಬಾಡಗ**

ಕರವಲೆಬಾಡಗ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಈ ಗ್ರಾಮವು ಮಡಿಕೇರಿನಾಡಿಗೆ ಸೇರುತ್ತದೆ. ಮಡಿಕೇರಿಯಿಂದ ಅಬ್ಬಿ ಜಲಪಾತಕ್ಕೆ ಹೋಗುವ ಮಾರ್ಗದಲ್ಲಿರುವ ಭಗವತಿ ನಗರದಲ್ಲಿ ಕರವಲೆ ಭಗವತಿ ಮಹಿಷಮರ್ಧಿನಿ ದೇವಾಲಯವಿದೆ. ಇಲ್ಲಿ ಭಗವತಿ ಮತ್ತು ಮಹಿಷಮರ್ಧಿನಿ ದೇವಿಯರು ಜೊತೆಯಾಗಿ ನೆಲೆಸಿದ್ದಾರೆ. ಮೂಲತಃ ಇದು ಮಹಿಷಮರ್ಧಿನಿ ದೇವಾಲಯ ಎಂಬ ಪ್ರತೀತಿ ಜನಪದರಲ್ಲಿದೆ. ಪೂರ್ವದಲ್ಲಿ ಕರವಲೆ ಬಾಡಗ ಗ್ರಾಮದ ಎರಡು ಕುಟುಂಬದವರು ಗಾಳಿಬೀಡು ಎಂಬ ಸ್ಥಳದಲ್ಲಿದ್ದ ಭಗವತಿಯ ನೆಲೆಗೆ ತೆರಳಿದರು. ಅಲ್ಲಿದ್ದ ಭಗವತಿಯನ್ನು ರಾತ್ರಿಯ ವೇಳೆ ಹೊತ್ತು ತಂದು ಮಹಿಷಮರ್ಧಿನಿ ದೈವದ ಎಡಭಾಗದಲ್ಲಿ ಪ್ರತಿಷ್ಠಾಪಿಸಿದರು. ಇದಕ್ಕೆ ಪೂರಕವಾಗಿ ದೇವಾಲಯದಲ್ಲಿ ಮುಕ್ಕಾಟಿ ಅಯ್ಯಣ ಎಂಬ ವ್ಯಕ್ತಿಯು ಹಾಕಿಸಿರುವ ಶಾಸನವಿದೆ. ದೇವಾಲಯದ ದೇವತೆಯನ್ನು ಕುರಿತು "ಮಡಿಕೇರಿನಾಡು ಕರುವಾಲೆ ಮೈಸಾಸುರಿ ಅಂಮಾ ಎಂದಿದ್ದಾನೆ."[೧೬] ಮಾರ್ಚ್ ತಿಂಗಳ ೧೪ರಿಂದ ೧೭ರವರೆಗೆ ವಾರ್ಷಿಕ ಉತ್ಸವ ನಡೆಯುತ್ತದೆ. ಈ ಸಂದರ್ಭದಲ್ಲಿ ಮಲಿಯರು ಭಗವತಿ, ಪಡಮೊಟ್ಟ್ ಚಾಮುಂಡಿ, ಭದ್ರಕಾಳಿ, ಅಯ್ಯಪ್ಪ, ಅಜ್ಜಪ್ಪ, ವಿಷ್ಣುಮೂರ್ತಿ ದೈವಗಳ ತೆರೆಗಳನ್ನು ಕಟ್ಟುತ್ತಾರೆ.

**ಕಾಂತೂರು**

ಕಾಂತೂರು ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಕಾಂತ ಮೂರ್ನಾಡು ನಾಡಿನ ಗ್ರಾಮಗಳಲ್ಲಿ ಒಂದಾಗಿದೆ. ಭಗವತಿ ಈ ಗ್ರಾಮದ ಆರಾಧ್ಯ ದೇವತೆ. ಈಕೆಯನ್ನು ಪೊವ್ವದಿ ಎಂದು ಕರೆಯುತ್ತಾರೆ. ಮಾರ್ಚ್ ತಿಂಗಳ ಕೊನೆಯ ವಾರದಲ್ಲಿ ವಾರ್ಷಿಕ ಉತ್ಸವ ನಡೆಯುತ್ತದೆ. ಈ ಸಂದರ್ಭದಲ್ಲಿ ಮಲಿಯರು ವಿಷ್ಣುಮೂರ್ತಿ ತೆರೆ ಹಾಗೂ ಮೇಲೆರಿ ಆಚರಣೆಗಳನ್ನು ಮಾಡುತ್ತಾರೆ.

**ಕಿಗ್ಗಾಲ್**

ಮಡಿಕೇರಿ ತಾಲೂಕಿನ ಕಿಗ್ಗಾಲ್ ಗ್ರಾಮವು ಕಾಂತ ಮೂರ್ನಾಡ್ ನಾಡಿಗೆ ಸೇರುತ್ತದೆ. ತೆರೆ ಕಟ್ಟುವ ಬಣ್ಣರು ಗ್ರಾಮದಲ್ಲಿ ನೆಲೆಸಿದ್ದಾರೆ. ಮಾದೇವ, ಚೌಂಡಿ/ ಚಾಮುಂಡಿ, ಅಯ್ಯಪ್ಪ ಹಾಗೂ ವಿಷ್ಣುಮೂರ್ತಿ ದೈವಗಳ ನೆಲೆಗಳು ಗ್ರಾಮದಲ್ಲಿವೆ. ಮಾರ್ಚ್ ತಿಂಗಳ ಕೊನೆಯ ವಾರದಲ್ಲಿ ಚಾಮುಂಡಿ ದೈವದ ಉತ್ಸವ ನಡೆಯುತ್ತದೆ. ಈ ಸಂದರ್ಭದಲ್ಲಿ ಮಲಿಯರು ಚೌಂಡಿ ತೆರೆಯನ್ನು ಕಟ್ಟುತ್ತಾರೆ. ಇದನ್ನು ಕಿಗ್ಗಾಲ್ ಚಾವುಂಡಿ ತೆರೆ, ಕೋಕಾಟ್ ಚಾವುಂಡಿ ತೆರೆ ಎಂದೂ ಕರೆಯುವುದು ರೂಢಿಯಲ್ಲಿದೆ. ಚೌಂಡಿ ಮೇಲೇರಿ ಆಚರಣೆಯೂ ಈ ಸಂದರ್ಭದಲ್ಲಿ ನಡೆಯುತ್ತದೆ.

**ಕಿರುಗೂರು**

ಕಿರುಗೂರು ಗ್ರಾಮವು ವಿರಾಜಪೇಟೆ ತಾಲೂಕಿನ ಪೊನ್ನಂಪೇಟೆಯ ಸಮೀಪದಲ್ಲಿದೆ. ಈ ಗ್ರಾಮವು ಕಿರುಗೂರು ನಾಡಿನ ಭಾಗವಾಗಿದೆ. ಭದ್ರಕಾಳಿ, ಅಯ್ಯಪ್ಪ, ಪೊಲದೇವ ಹಾಗೂ ಶನೀಶ್ವರ ಇಲ್ಲಿನ ಗ್ರಾಮದೈವಗಳು. ಮೂರು ವರ್ಷಗಳಿಗೊಮ್ಮೆ ಭದ್ರಕಾಳಿ ದೈವದ ಬೋಡ್ ಹಬ್ಬವು ನಡೆಯುತ್ತದೆ. ಗ್ರಾಮದಲ್ಲಿರುವ ಪಣಿಕರು ಭದ್ರಕಾಳಿ ಮೊಗ ಕಟ್ಟುವ ಆಚರಣೆಯನ್ನು ಈ ಸಂದರ್ಭದಲ್ಲಿ ನಡೆಸುತ್ತಾರೆ. ಕಿರುಗೂರುನಾಡಿನ ತಕ್ಕ(ಮುಖ್ಯಸ್ಥ) ರಾದ ಚೆಪ್ಪುಡಿರ ಕುಟುಂಬದ ಐನ್‌ಮನೆಯಲ್ಲಿ ವಿಷ್ಣುಮೂರ್ತಿ ತೆರೆ ಕಟ್ಟುವ ಆಚರಣೆ ನಡೆಯುತ್ತದೆ. ಕೊರಕುಟ್ಟೀರ ಕುಟುಂಬವು ಕುಟ್ಟಿಚಾತ ದೈವದ ನೆಲೆಯನ್ನು ಹೊಂದಿದೆ. ವಾರ್ಷಿಕವಾಗಿ ನಡೆಯುವ ಕುಟ್ಟಿಚಾತ ತೆರೆಯನ್ನು ಪಣಿಕರು ಕಟ್ಟುತ್ತಾರೆ.

**ಕ್‌ರ್‌ಂದಾಡ್**

ಕಡಿಯತ್‌ನಾಡಿಗೆ ಒಳಪಡುವ ಕ್‌ರ್‌ಂದಾಡ್ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ನಾಪೋಕ್ಲು ಸಮೀಪದ ಈ ಗ್ರಾಮದಲ್ಲಿ ಭಗವತಿ, ವಿಷ್ಣುಮೂರ್ತಿ ದೇವಾಲಯಗಳಿವೆ. ಭಗವತಿ ದೇವಿಯು ಕೇರಳದ ಬೊಳ್ಳಿಕಂಡೆ ಚೋಯಿಲಿ ಎಂಬ ಸ್ಥಳದಲ್ಲಿ ಹುಟ್ಟಿದವಳು. ಕೇರಳದ ಬಯತೂರಿನಲ್ಲಿರುವ ಬೈತೂರಪ್ಪ ದೈವದ ಅನುಮತಿಯನ್ನು ಪಡೆದು ಕೊಡಗಿಗೆ ಬಂದು ನೆಲೆಸಿದ ಮೊದಲ ದೈವ ಎನ್ನುವ ನಂಬಿಕೆ ಇದೆ. ಸುಮಾರು ೮೦೦ ವರ್ಷಗಳ ಇತಿಹಾಸವನ್ನು ಈ

ದೇವಾಲಯವು ಹೊಂದಿದೆ. ಇಲ್ಲಿನ ಮೂಲ ದೈವ ದುರ್ಗಾದೇವಿ. ಅತಿಥಿಯಾಗಿ ಆಗಮಿಸಿದ ಭಗವತಿಗೆ ಪ್ರಧಾನ ಸ್ಥಾನವನ್ನು ನೀಡಿದ ಈಕೆ ಹತ್ತಿರದಲ್ಲಿ ನೆಲೆಸಿದಳು ಎಂಬ ಐತಿಹ್ಯವಿದೆ. ಪಣಿಕರು ನೆಲೆಸಿರುವ ಈ ಗ್ರಾಮದ ನೆಲೆಗಳಲ್ಲಿ ಹಾಗು ಅಪ್ಪನೆರವಂಡ ಕುಟುಂಬದ ಐನ್‌ಮನೆಯಲ್ಲಿ ತೆರೆ ಆಚರಣೆ ನಡೆಯುತ್ತದೆ.

**ಕುಟ್ಟಂದಿ**

ವಿರಾಜಪೇಟೆ ತಾಲೂಕಿನ ಕುಟ್ಟಂದಿ ಗ್ರಾಮದಲ್ಲಿ ಪಣಿಕರು ನೆಲೆಸಿದ್ದಾರೆ. ಕುತ್ತ್‌ನಾಡಿಗೆ ಸೇರುವ ಈ ಗ್ರಾಮದ ಪ್ರಮುಖ ದೈವ ಕುಂದಚ್ಚಪ್ಪ. ಇದಲ್ಲದೆ ಕುಟ್ಟಂದಿ ಅಯ್ಯಪ್ಪ, ಕಡೇಂದಿ ಅಯ್ಯಪ್ಪ, ಕೊಡಕೇರಿ ಅಯ್ಯಪ್ಪ ದೈವಗಳು ಬನಗಳಲ್ಲಿ ನೆಲೆಸಿವೆ. ಮಾರ್ಚ್ ತಿಂಗಳ ೧೨ ಮತ್ತು ೧೩ರಂದು ಕುಂದಚಪ್ಪ ದೈವದ ವಾರ್ಷಿಕೋತ್ಸವ ನಡೆಯುತ್ತದೆ. ಈ ಸಂದರ್ಭದಲ್ಲಿ ದೇವತೆರೆ ಹಾಗೂ ಪೊಲವಪ್ಪನ ಪೊಲವಂದೆರೆಯನ್ನು ಪಣಿಕರು ಕಟ್ಟುತ್ತಾರೆ.

**ಕೆದಮುಳ್ಳೂರು**

ಕೆದಮುಳ್ಳೂರು ಗ್ರಾಮವು ವಿರಾಜಪೇಟೆ ತಾಲೂಕಿನಲ್ಲಿದೆ. ಪೂರ್ವದಲ್ಲಿ ಕೆದಮುಳ್ಳೂರು ನಾಡು ಎಂದು ಕರೆಯಲ್ಪಡುತಿತ್ತು. ಆರ್ಜಿ, ತೋಮರ, ಬೋಟೋಳಿ ಹಾಗೂ ಪೆಗ್ಗಳ ಗ್ರಾಮಗಳನ್ನು ಒಳಗೊಂಡಿತ್ತು. ನಂತರದಲ್ಲಿ ಬೆಪ್ಪುನಾಡಿಗೆ ಸೇರ್ಪಡೆಗೊಂಡಿತು. ವಿರಾಜಪೇಟೆ ತಾಲೂಕಿನಲ್ಲಿರುವ ಕೆದಮುಳ್ಳೂರಿನ ಪ್ರಮುಖ ದೈವ ಕುಳಿಯಮೆ ಚೌಂಡಿ. ಏಪ್ರಿಲ್ ತಿಂಗಳ ೪ರಂದು ಕುಳಿಯಮೆ ಚೌಂಡಿ ದೈವದ ವಾರ್ಷಿಕ ಉತ್ಸವ ನಡೆಯುತ್ತದೆ. ಗ್ರಾಮದವರೇ ಆದ ಮಲಿಯರು ಕುಳಿಯಮೆ ಚೌಂಡಿ ತೆರೆ ಕಟ್ಟುವುದರ ಮೂಲಕ ಉತ್ಸವದ ಆಚರಣೆ ನಡೆಯುತ್ತದೆ. ತಕ್ಕ ಮುಖ್ಯಸ್ಥರಾದ ಮಾಳೇಟಿರ ಒಕ್ಕದ ಮುಂದಾಳತ್ವದಲ್ಲಿ ನಡೆಯುತ್ತವೆ. ಇದೇ ಸಂದರ್ಭದಲ್ಲಿ ಗ್ರಾಮದಲ್ಲಿರುವ ಬಣ್ಣರು ಮಾದೇರಪ್ಪ ತೆರೆಯನ್ನು ಕಟ್ಟುತ್ತಾರೆ.

**ಕೈಕಾಡು**

ಕೈಕಾಡು ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಈ ಗ್ರಾಮವು ಕಡಿಯತ್‌ನಾಡಿಗೆ ಒಳಪಡುತ್ತದೆ. ಗ್ರಾಮದ ಮಕ್ಕೋಟ್‌ಕೇರಿ ಎಂಬಲ್ಲಿ ಗ್ರಾಮ ದೇವಿ ಮಕ್ಕೋಟ್ ಮಹಾಲಕ್ಷ್ಮಿ ದೇವಾಲಯವಿದೆ. ಅಲ್ಲದೆ ಭಗವತಿ, ವಿಷ್ಣುಮೂರ್ತಿ ಹಾಗೂ ಅಯ್ಯಪ್ಪ ದೈವಗಳ ಗುಡಿ ಹಾಗೂ ನೆಲೆಗಳಿವೆ. ಎರಡು ವರ್ಷಗಳಿಗೊಮ್ಮೆ ಮಕ್ಕೋಟ್ ಮಹಾಲಕ್ಷ್ಮಿ ಉತ್ಸವವು ನಡೆಯುತ್ತದೆ. ಪೀಲಿಯಾಟ್, ತೇಲಾಟ್, ಬಿಲ್ಲಾಟ್, ಕತ್ತಿಯಾಟ್, ಕೊಂಬಾಟ್, ಜೋಡಿಯಾಟ್, ಅಜ್ಜಿಯಾಟ್ ಸೇರಿದಂತೆ ಹದಿನೆಂಟು ವಿಧದ ದೇವರ ಕುಣಿತ ನಡೆಯುತ್ತದೆ. ಮಕ್ಕೋಟ್ ಕೇರಿಯ ದೇವತಕ್ಕ(ಮುಖ್ಯಸ್ಥ)ರಾದ ಚೊಟ್ಟೆಯಂಡ ಕುಟುಂಬ ಹಾಗೂ ಭಂಡಾರ ತಕ್ಕರಾದ

ನೆರೆಯಂಡಮ್ಮಂಡ ಕುಟುಂಬಗಳು ಹಬ್ಬದ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತವೆ. ಏಪ್ರಿಲ್ ತಿಂಗಳ ೧೪ ಮತ್ತು ೧೫ರಂದು ಉತ್ಸವವು ಜರುಗುತ್ತದೆ. ೧೪ರಂದು ಮಧ್ಯಾಹ್ನ ೨ ಗಂಟೆಗೆ ಅಯ್ಯಪ್ಪ ತೆರೆಯ ಆಚರಣೆ ನಡೆಯುತ್ತದೆ. ಮಾರ್ಚ್ ೨೯ ರಿಂದ ಏಪ್ರಿಲ್ ೪ರವರೆಗೆ ಭಗವತಿ ದೇವಿಯ ವಾರ್ಷಿಕೋತ್ಸವ ನಡೆಯುತ್ತದೆ. ಚೌಂಡಿ ತೆರೆ, ಅಂಜಿಕೂಟ್ ಮೂರ್ತಿಯಡ ತೆರೆ ಹಾಗೂ ಮೇಲೇರಿ ಆಚರಣೆಗಳು ಈ ಸಂದರ್ಭದಲ್ಲಿ ನಡೆಯುತ್ತವೆ.

**ಕೊಟ್ಟೋಳಿ**

ವಿರಾಜಪೇಟೆ ತಾಲೂಕಿನ ಕೊಟ್ಟೋಳಿ ಗ್ರಾಮವು ಬೋಟೋಳಿ ನಾಡಿಗೆ ಒಳಪಡುತ್ತದೆ. ಗ್ರಾಮದ ಪ್ರಮುಖ ದೈವ ಈಶ್ವರನನ್ನು ಧಾರಾ ಮಹೇಶ್ವರ ಎಂದು ಕರೆಯುತ್ತಾರೆ. ವಾರ್ಷಿಕವಾಗಿ ಇಲ್ಲಿ ತೆರೆ ಆಚರಣೆ ನಡೆಯುತ್ತದೆ.

**ಕೊಣಂಜಗೇರಿ**

ಕಡಿಯತ್ ನಾಡಿಗೆ ಸೇರಿದ ಗ್ರಾಮ ಕೊಣಂಜಗೇರಿ. ಮಡಿಕೇರಿ ತಾಲೂಕಿನಲ್ಲಿರುವ ಈ ಗ್ರಾಮವನ್ನು ಕೊಣಂಜೇರಿ ಎಂದೂ ಕರೆಯುತ್ತಾರೆ. ಗ್ರಾಮದಲ್ಲಿ ಏಕೈಕ ಭಗವತಿ ಭದ್ರಕಾಳಿ ದೇಗುಲವಿದ್ದು; ತೆರೆಗಳು ನಡೆಯುತ್ತವೆ. ಮಾರ್ಚ್ ತಿಂಗಳ ೧೬, ೧೭, ೧೮ ರಂದು ವಾರ್ಷಿಕ ಹಬ್ಬವು ಜರುಗುತ್ತದೆ.

**ಕೋಕೇರಿ**

ಕೋಕೇರಿ ಕಡಿಯತ್‌ನಾಡಿಗೆ ಸೇರುವ ಗ್ರಾಮ. ಮಡಿಕೇರಿ ತಾಲೂಕಿನಲ್ಲಿದೆ. ಭಗವತಿ ಮತ್ತು ನೀಲಿಯಾಟ್ ಸಾರ್ತಾವು ಗ್ರಾಮದ ಪ್ರಮುಖ ದೈವಗಳಾದರೂ ತೆರೆಕಟ್ಟುವ ಆಚರಣೆಯಿಲ್ಲ. ಆದರೆ ಗ್ರಾಮದಲ್ಲಿನ ಚೇನಂಡ, ಮಚ್ಚಂಡ ಮತ್ತು ಪೊನ್ನಚಂಡ ಕೊಡವ ಒಕ್ಕಗಳ ಐನ್‌ಮನೆಯಲ್ಲಿ ತೆರೆ ಆಚರಣೆಯು ನಡೆಯುತ್ತದೆ. ಚೇನಂಡ ಕುಟುಂಬದಲ್ಲಿ 'ಅಂಜಿಕೂಟ್ ಮೂರ್ತಿ' ಅಂದರೆ ಐದು ಕೂಟದ ದೈವಗಳಿಗೆ ತೆರೆಕಟ್ಟುವ ಆಚರಣೆ ನಡೆಯುತ್ತದೆ. ಚೌಂಡಿ, ಬೀರ, ನುಚ್ಚುಟೆ, ಕರಿಬಾಳ ಹಾಗೂ ಈತ್‌ಂಗುಳಿಯ ದೈವಗಳನ್ನು ಅಂಜಿಕೂಟ್ ಮೂರ್ತಿಗಳೆಂದು ಕರೆಯುವುದು ವಾಡಿಕೆ. ಇದರೊಂದಿಗೆ ಎತ್ತ್‌ತೆರೆ (ಎತ್ತಿನ ತೆರೆ)ಯನ್ನು ಕಟ್ಟಿಸುತ್ತಾರೆ. ಮಚ್ಚಂಡ ಕುಟುಂಬದಲ್ಲಿ ಅಂಜಿಕೂಟ್ ಮೂರ್ತಿಗಳ ತೆರೆ ಆಚರಣೆ ನಡೆಯುತ್ತದೆ. ಪೊನ್ನಚಂಡ ಒಕ್ಕದ ಕೈಮಡದಲ್ಲಿ ಪೊನ್ನಚಂಡ ಅಜ್ಜಪ್ಪನ ತೆರೆಯನ್ನು ಕಟ್ಟಿಸುತ್ತಾರೆ. ಸಮೀಪದ ಮರಂದೋಡ ಗ್ರಾಮದಲ್ಲಿರುವ ಮಲಿಯರು ಈ ತೆರೆಗಳನ್ನು ಕಟ್ಟುತ್ತಾರೆ.

**ಕುಂಜಿಲ**

ಕುಂಜಿಲ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ನಾಲ್‌ನಾಡಿಗೆ ಸೇರುತ್ತದೆ. ಈ ಗ್ರಾಮದ ಕಕ್ಕಬೆ ಎಂಬ ಸ್ಥಳದಲ್ಲಿ ಕೊಡಗಿನ ಅನ್ನದೇವ, ಮಳೆದೇವ, ಕುಲದೇವ ಎನಿಸಿಕೊಂಡಿರುವ ಇಗ್ಗುತ್ತಪ್ಪನ ದೇವಾಲಯವಿದೆ. ಇದರ ಸಮೀಪದ

ಅಮ್ಮಂಗೇರಿ ಎಂಬಲ್ಲಿ ಪುದಿಯೋದಿ ದೇವಿಯು ನೆಲೆಯಿದೆ. ಈ ದೈವವು ಇಗ್ಗುತಪ್ಪನಿಗೆ ಬೆಂಗಾವಲಾಗಿ ನಿಂತಿದೆ ಎಂಬ ಪ್ರತೀತಿ ಜನಪದರಲ್ಲಿದೆ. ಮಾರ್ಚ್ ತಿಂಗಳ ೩೦ ಹಾಗೂ ೩೧ರಂದು ವಾರ್ಷಿಕ ತೆರೆಕಟ್ಟುವ ಆಚರಣೆ ನಡೆಯುತ್ತದೆ. ಹಬ್ಬದ ಮೊದಲನೆಯ ದಿನದಂದು ರಾತ್ರಿ ಬೀರ, ಬೀರಾಳಿ, ಭದ್ರಕಾಳಿ ದೈವಗಳ ತೆರೆಗಳು ನಡೆಯುತ್ತವೆ. ಮರುದಿನ ಮುಂಜಾನೆ ಪುದಿಯೋದಿ ದೇವಿಯ ತೆರೆ ನಡೆಯುತ್ತದೆ. ಇವುಗಳನ್ನು ಬಣ್ಣರು ಕಟ್ಟುತ್ತಾರೆ.

**ಕುಂಜೇರಿ**

ಕುಂಜೇರಿ ಗ್ರಾಮ ವಿರಾಜಪೇಟೆ ತಾಲೂಕಿನಲ್ಲಿದೆ. ಬೆಪ್ಪುನಾಡಿನ ಭಾಗವಾಗಿದೆ. ಕುಂಜೇರಿಗೆ ಕುಂಜಲಗೇರಿ ಎಂಬ ಹೆಸರೂ ಇದೆ. ಗ್ರಾಮದಲ್ಲಿ ಮಡಕೋಡ ಶಾಸ್ತಾವು ದೇವಾಲಯವಿದೆ. ಏಪ್ರಿಲ್ ೧೧ ಮತ್ತು ೧೨ರಂದು ವಾರ್ಷಿಕ ಹಬ್ಬವು ನಡೆಯುತ್ತದೆ. ಚೀಯಂಡಿರ ಕುಟುಂಬದವರು ದೇವಾಲಯದ ತಕ್ಕ ಮುಖ್ಯಸ್ಥರಾಗಿದ್ದಾರೆ. ಎರಡು ವರ್ಷಗಳ ಅವಧಿಯಲ್ಲಿ ತೆರೆ ಆಚರಣೆ ನಡೆಯುತ್ತದೆ. ಹಬ್ಬದ ದ್ವಿತೀಯ ದಿನದಂದು ರಾತ್ರಿ ಅಂಜಿಕೂಟ್ ಮೂರ್ತಿಗಳ ತೆರೆ ಕಟ್ಟಲಾಗುತ್ತದೆ. ಬೆಳಗ್ಗೆ ವಿಷ್ಣುಮೂರ್ತಿ, ಕಲ್ಯಾಟಜ್ಜಪ್ಪ ಹಾಗೂ ಕುಞ್ಞಮೆ/ಕುಳಿಯಮೆ ಚೌಂಡಿ ದೈವಗಳ ತೆರೆಯನ್ನು ಕಟ್ಟುತ್ತಾರೆ. ಅಜ್ಜಪ್ಪ ತೆರೆಯ ತಕ್ಕಮುಖ್ಯಸ್ಥರಾಗಿ ಅಲ್ಲಪಿರ ಒಕ್ಕದವರು ಕಾರ್ಯ ನಿರ್ವಹಿಸುತ್ತಾರೆ. ಚೀಯಂಡಿರ ಒಕ್ಕದವರಿಗೆ ಶಾಸ್ತಾವು ದೈವದ ತೆರೆಯ ಜವಾಬ್ದಾರಿ ಇರುತ್ತದೆ. ವಿಷ್ಣುಮೂರ್ತಿ ಮತ್ತು ಚೌಂಡಿ ದೈವದ ತೆರೆಗೆ ಕುಳಿಯಕಂಡ ಒಕ್ಕಗಳು ತಕ್ಕಮುಖ್ಯಸ್ಥರಾಗಿ ಆಚರಣೆಯನ್ನು ನಡೆಸುತ್ತಾರೆ. ಊರಿನ ಜನರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಾರೆ. ಗ್ರಾಮದಲ್ಲಿರುವ ಚೊಟ್ಟೆರ ಒಕ್ಕದವರು ಐನ್‌ಮನೆಯಲ್ಲಿ ತೆರೆಯನ್ನು ಕಟ್ಟಿಸುತ್ತಾರೆ. ಮೇಷ ಮಾಸದಲ್ಲಿ ಈ ಆಚರಣೆಯು ನಡೆಯುತ್ತದೆ. ತೋತ, ಮಂದಣಮೂರ್ತಿ, ಮಾದೇರಪ್ಪ ಜೋಡ್(ಜೋಡಿ)ತೆರೆ, ಕುಟ್ಟಿಚಾತ, ಕರಿಬಾಳ, ನುಚ್ಚುಟೆ, ಕುಳಿಯ, ಅಜ್ಜ ತೆರೆ, ಬೊಳ್ಳವ್ವ ತಾಯಿ ತೆರೆ ಹಾಗೂ ಕಾರೋಣ(ಕುಟುಂಬದ ಮೂಲ ಪುರುಷ) ತೆರೆಗಳು ನಡೆಯುತ್ತವೆ. ಕ್‌ರ್‌ಂದಾಡ್ ಗ್ರಾಮದ ಮಲಿಯರು ಈ ತೆರೆಗಳನ್ನು ಕಟ್ಟುತ್ತಾರೆ. ಇವರಲ್ಲಿ ತೆರೆಕಟ್ಟುವವರ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿದ್ದು; ಬಣ್ಣರ ಸಹಕಾರದೊಂದಿಗೆ ತೆರೆಗಳನ್ನು ಕಟ್ಟುತ್ತಾರೆ.

**ಕುಂದ ಈಚೂರು**

ಕುಂದ ಈಚೂರು ಗ್ರಾಮವು ಬೊಟ್ಯತ್‌ನಾಡಿಗೆ ಸೇರುತ್ತದೆ. ವಿರಾಜಪೇಟೆ ತಾಲೂಕಿನ ಪೊನ್ನಂಪೇಟೆ ಸಮೀಪದಲ್ಲಿದೆ. ಈ ಗ್ರಾಮದಲ್ಲಿ ಪಣಿಕರು ನೆಲೆಸಿದ್ದಾರೆ. ಗ್ರಾಮದಲ್ಲಿ ನಡೆಯುವ ಬೋಡ್‌ಹಬ್ಬದಲ್ಲಿ ತೆರೆ ಆಚರಣೆ ನಡೆಯುತ್ತದೆ.

**ಕುಂಬಳದಾಳ್**

ಕುಂಬಳದಾಳ್ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಕುಯ್ಯಂಗೇರಿ ನಾಡಿಗೆ ಸೇರುತ್ತದೆ. ಈ ಗ್ರಾಮದ ಪ್ರಮುಖ ದೈವಗಳು ಸಾರ್ತಾವು ಮತ್ತು ಪನ್ನಂಗಾಲತಮ್ಮೆ. ಮೇ ೨೪ರಂದು ಸಾರ್ತಾವು ದೈವದ ವಾರ್ಷಿಕೋತ್ಸವವು ನಡೆಯುತ್ತದೆ. ದೇವ ಹಾಗೂ ಭಂಡಾರ ತಕ್ಕರಾದ ಮುಕ್ಕಾಟಿರ ಒಕ್ಕದವರು ಗ್ರಾಮಸ್ಥರೊಡಗೂಡಿ ಉತ್ಸವವನ್ನು ನಡೆಸುತ್ತಾರೆ. ಸಾರ್ತಾವು ದೈವದ ತೆರೆಯನ್ನು ಪಣಿಕರು ಕಟ್ಟುತ್ತಾರೆ.

**ಗುಹ್ಯ**

ಗುಹ್ಯ ಗ್ರಾಮವು ವಿರಾಜಪೇಟೆ ತಾಲೂಕಿನ ಬೈರನಾಡಿಗೆ ಸೇರುತ್ತದೆ. ಪೂರ್ವದಲ್ಲಿ ಈ ಗ್ರಾಮಕ್ಕೆ ಕುಯ್ಯ ಎಂಬ ಹೆಸರಿತ್ತು. ಗ್ರಾಮದಲ್ಲಿ ಅಗಸ್ತ್ಯೇಶ್ವರ ದೇವಾಲಯವಿದೆ. ಚಾಮುಂಡಿ, ವಿಷ್ಣುಮೂರ್ತಿ ಹಾಗೂ ಬೀರನ ಸ್ಥಾನಗಳೂ ಇಲ್ಲಿವೆ. ಮಾರ್ಚ್ ಅಥವಾ ಏಪ್ರಿಲ್ ತಿಂಗಳಲ್ಲಿ ವಾರ್ಷಿಕವಾಗಿ ತೆರೆ ಆಚರಣೆಗಳು ನಡೆಯುತ್ತವೆ. ಬೀರ, ಅಜ್ಜಪ್ಪ, ಚೌಂಡಿ ಹಾಗೂ ವಿಷ್ಣುಮೂರ್ತಿ ದೈವಗಳನ್ನು ಮಲಿಯರು ತೆರೆ ಕಟ್ಟಿ ಆರಾಧಿಸುತ್ತಾರೆ.

**ಚೆಟ್ಟಳ್ಳಿ**

ಸೋಮವಾರಪೇಟೆ ತಾಲೂಕಿನ ಚೆಟ್ಟಳ್ಳಿ ಗ್ರಾಮವು ಹುಲುಗುಲಿ ಮುದ್‌ಗೇರಿ ನಾಡಿಗೆ ಸೇರುತ್ತದೆ. ಇಲ್ಲಿನ ಗ್ರಾಮದೇವತೆ ಈರಳೆ ಎಂಬಲ್ಲಿ ನೆಲೆಸಿರುವ ಭಗವತಿ. ಹಾಗಾಗಿ ಈರಳೆ ಭಗವತಿ ಎನ್ನುತ್ತಾರೆ. ಈ ದೈವಕ್ಕೆ ಈರಳೆ ಪೊವ್ವದಿ ಎಂಬ ಹೆಸರೂ ಇದೆ. ಮಾರ್ಚ್ ತಿಂಗಳ ಕೊನೆಯ ವಾರದಲ್ಲಿ ವಾರ್ಷಿಕ ಉತ್ಸವವು ನಡೆಯುತ್ತದೆ. ಉತ್ಸವದ ಅಂಗವಾಗಿ ಗ್ರಾಮದ ದೇವರ ಕಾಡಿನಲ್ಲಿ ತೆರೆ ಆಚರಣೆ ನಡೆಯುತ್ತದೆ. ಬಿಳಿಗೇರಿ ಗ್ರಾಮದ ಮಲಿಯರು ತೆರೆಗಳನ್ನು ಕಟ್ಟುತ್ತಾರೆ. ಗ್ರಾಮದ ಚೇರಳ ಎಂಬಲ್ಲಿ ಈರಳೆ ಭಗವತಿಯ ಸಹೋದರಿ ಚೇರಳ ಭಗವತಿಯ ಗುಡಿಯಿದೆ. ಇಲ್ಲಿ ಐದು ವರ್ಷಗಳಿಗೊಮ್ಮೆ ಭಗವತಿ, ಅಯ್ಯಪ್ಪ, ಚಾಮುಂಡಿ ಹಾಗೂ ಅಂಜಿಕೂಟ್ ಮೂರ್ತಿಗಳ ತೆರೆಯನ್ನು ಮಲಿಯರು ಕಟ್ಟುತ್ತಾರೆ.

**ಚೇರಂಗಾಲ**

ತಾವುನಾಡಿಗೆ ಒಳಪಡುವ ಚೇರಂಗಾಲ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಭಾಗಮಂಡಲದ ಸಮೀಪವಿರುವ ಈ ಗ್ರಾಮದಲ್ಲಿ ಏಪ್ರಿಲ್ ತಿಂಗಳ ಮೊದಲ ವಾರದಲ್ಲಿ ಭಗವತಿ ಮತ್ತು ಕ್ಷೇತ್ರಪಾಲ ದೇವರ ದ್ವೈವಾರ್ಷಿಕೋತ್ಸವ ನಡೆಯುತ್ತದೆ. ಇದರ ಅಂಗವಾಗಿ ಏಪ್ರಿಲ್ ತಿಂಗಳ ೨ ಮತ್ತು ೩ ರಂದು ವಿಷ್ಣುಮೂರ್ತಿ ಹಾಗೂ ಚಾಮುಂಡಿ ದೈವಗಳ ತೆರೆ ಆಚರಣೆ ನಡೆಯುತ್ತದೆ.

**ಚೇಲಾವಾರ**

ಮಡಿಕೇರಿ ತಾಲೂಕಿನ ಚೇಲಾವಾರ ಗ್ರಾಮವು ಕಡಿಯತ್‌ನಾಡಿಗೆ ಸೇರುತ್ತದೆ. ಪೊನ್ನೋಲ ಸಾರ್ತಾವು, ಸಾರ್ತಾವು, ಪುದಿಯೋದಿ, ಭಗವತಿ ಹಾಗೂ ಪೈಚಿ ಪೊವ್ವದಿ ಗ್ರಾಮದ ಆರಾಧ್ಯ ದೈವಗಳಾಗಿವೆ. ಏಪ್ರಿಲ್ ೧೪ರಂದು ಪೊನ್ನೋಲ ಸಾರ್ತಾವು ಉತ್ಸವವು ನಡೆಯುತ್ತದೆ. ಈ ಸಂದರ್ಭದಲ್ಲಿ ಸಾರ್ತಾವು ತೆರೆ ಕಟ್ಟುವ ಆಚರಣೆ ನಡೆಯುತ್ತದೆ. ಮುಂಡ್ಯೋಳಂಡ ಕುಟುಂಬವು ದೇವ ಹಾಗೂ ಭಂಡಾರ ತಕ್ಕರಾಗಿ ಹಬ್ಬವನ್ನು ನಡೆಸುತ್ತಾರೆ. ಸಾರ್ತಾವು ದೈವದ ವಾರ್ಷಿಕ ಉತ್ಸವ ಹಾಗೂ ತೆರೆಯನ್ನು ಅಮ್ಮ ಕೊಡವ ಕುಟುಂಬಗಳಾದ ಬಡಕಡಮ್ಮಂಡ ಹಾಗೂ ಪಡ್‌ಇಾರಮ್ಮಂಡ ಒಕ್ಕಗಳು ಹಾಗೂ ಕೊಡವ ಕುಟುಂಬ ಮುಂಡ್ಯೋಳಂಡ ಒಕ್ಕವು ಸೇರಿ ನಡೆಸುತ್ತವೆ. ಈ ಸಂದರ್ಭದಲ್ಲಿ ತೆರೆಯನ್ನು ಮಲಿಯರು ಕಟ್ಟುತ್ತಾರೆ.

**ನಾಪೋಕ್ಲು**

ಕೊಡಗಿನ ಮಡಿಕೇರಿ ತಾಲೂಕಿನಲ್ಲಿರುವ ಗ್ರಾಮ ನಾಪೋಕ್ಲು. ಈ ಗ್ರಾಮದ ದೇವತೆ ಭಗವತಿ. ಈ ದೇವಾಲಯವು ಒಂದು ಸಾವಿರ ವರ್ಷಗಳಷ್ಟು ಪುರಾತನವಾಗಿದೆ. ದೇವಾಲಯದ ವಾರ್ಷಿಕೋತ್ಸವವು ಮಾರ್ಚ್ ತಿಂಗಳ ೧೭ ರಿಂದ ೨೧ ರವರೆಗೆ ನಡೆಯುತ್ತದೆ. ೧೭ರಂದು ಇಲ್ಲಿ ಭಗವತಿಯ ಸಹಗಾಮಿಯಾದ ಭದ್ರಕಾಳಿಯ ತೆರೆ ನಡೆಯುತ್ತದೆ. ೧೯ರಂದು ರಾತ್ರಿ ನುಚ್ಚುಟೆ, ನರಿಪೂದ, ಅಂಜಿಕೂಟ್ ಮೂರ್ತಿಗಳ ತೆರೆ ನಡೆಯುತ್ತದೆ. ೨೧ರಂದು ಕಲ್ಯಾಟಜ್ಜಪ್ಪ ಹಾಗೂ ವಿಷ್ಣುಮೂರ್ತಿ ತೆರೆ ನಡೆಯುತ್ತದೆ. ಮಲಿಯ ಸಮುದಾಯದವರು ಈ ತೆರೆಗಳನ್ನು ಕಟ್ಟುತ್ತಾರೆ.

**ನಾಲ್ಕೇರಿ**

ಬೆಪ್ಪುನಾಡಿನ ನಾಲ್ಕೇರಿ ಗ್ರಾಮವು ವಿರಾಜಪೇಟೆ ತಾಲೂಕಿನಲ್ಲಿದೆ. ಗ್ರಾಮದಲ್ಲಿ ಪಾಂಡ್‌ಮಾಡ್, ಪೆಮ್ಮಾಡ್, ಮೂಗೂರ್ ಮತ್ತು ತೋಣೂರ್ ಎಂಬ ನಾಲ್ಕು ಕೇರಿಗಳಿವೆ. ನಾಲ್ಕು ಕೇರಿಗಳ ಊರು ನಾಲ್ಕೇರಿ ಎಂದಾಗಿದೆ. ಕಾಲಭೈರವ, ಭದ್ರಕಾಳಿ ಹಾಗೂ ಚಾಮುಂಡಿ ದೈವಗಳ ಗುಡಿ ಹಾಗೂನೆಲೆಗಳಿವೆ. ಕಾಕೋಟ್‌ಪರಂಬು ಮಂದ್(ಮೈದಾನ)ನಲ್ಲಿ ಕಾಲಭೈರವ ಉತ್ಸವವು ನಡೆಯುತ್ತದೆ. ಡಿಸೆಂಬರ್ ತಿಂಗಳ ೧೪, ೧೫ ಹಾಗೂ ೧೬ರಂದು ಆಚರಿಸಲ್ಪಡುತ್ತದೆ. ಈ ಸಂದರ್ಭದಲ್ಲಿ ಕಾಲಭೈರವ ಹಾಗೂ ಚೌಂಡಿ ತೆರೆಗಳ ಆಚರಣೆ ನಡೆಯುತ್ತವೆ. ಮೇ ೧೭ರಂದು ಭದ್ರಕಾಳಿ ಮತ್ತು ಚಾಮುಂಡಿ ತೆರೆಗಳ ಆಚರಣೆಯು ನಡೆಯುತ್ತದೆ. ಪಳೆಯಂಡ, ಅರೆಯಂಡ ಹಾಗೂ ತೋರೇರ ಒಕ್ಕಗಳು ತಕ್ಕ ಮುಖ್ಯಸ್ಥರಾಗಿ ತೆರೆ ಆಚರಣೆಯನ್ನು ನಡೆಸುತ್ತಾರೆ. ಕೆದಮುಳ್ಳೂರಿನ ಬಣ್ಣರು ತೆರೆಯನ್ನು ಕಟ್ಟುತ್ತಾರೆ.

**ಪಾರಾಣೆ**

ಪಾರಾಣೆ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಗ್ರಾಮದ ಕೈಕಾಡ್ ಎಂಬಲ್ಲಿ ಭಗವತಿ ದೇವಿಯ ಗುಡಿಯಿದೆ. ಕೈಕಾಡು ಎಂದರೆ ಅರಣ್ಯದ ಒಂದು ಕಿರಿದಾದ ಭಾಗ ಎಂದು ಅರ್ಥ. ಇಲ್ಲಿನ ಭಗವತಿ ಕೇರಳದ ಚೋಲಿ ಎಂಬ ಸ್ಥಳದಲ್ಲಿರುವ ಹುತ್ತದಿಂದ ಉದ್ಭವಿಸಿದವಳು. ನೆಲೆ ಅರಸಿ ಕೊಡಗಿಗೆ ಬಂದವಳು. ಪಯ್ಯಾವೂರು, ಬೈತೂರು, ಮಂಗಾಡ್, ಮಲೆತಿರಿಕೆ ಪೊದವಾಡ ಊರುಗಳಲ್ಲಿ ಸಂಚರಿಸಿದ ಆಕೆಗೆ ಸೂಕ್ತ ನೆಲೆ ಸಿಗಲಿಲ್ಲ. ಮುಂದೆ ತೆರಳಿದ ಆಕೆ ಕೈಕಾಡಿನ ದಟ್ಟ ಅರಣ್ಯ ಪ್ರದೇಶದ ನಿಸರ್ಗ ಸೊಬಗಿಗೆ ಮನಸೋತಳು. ಕಾಡ್ಲ್ ಅಯ್ಯಪ್ಪ ಹಾಗೂ ತನ್ನ ಪರಿವಾರದೊಂದಿಗೆ ಅಲ್ಲಿ ನೆಲೆ ನಿಂತಳು. ಭಗವತಿಗೆ ಪೊವ್ವದಿ ಎಂಬ ಮತ್ತೊಂದು ಹೆಸರಿದೆ. ಏಪ್ರಿಲ್ ತಿಂಗಳ ಮೊದಲ ವಾರದಲ್ಲಿ ವಾರ್ಷಿಕ ಉತ್ಸವವು ನಡೆಯುತ್ತದೆ. ಅದರ ಪ್ರಯುಕ್ತ ತೆರೆಗಳನ್ನು ಮಲಿಯರು ಕಟ್ಟುತ್ತಾರೆ. ಊರುತಕ್ಕರಾದ ಬೊಳ್ಳಂಡ ಒಕ್ಕದವರು ಹಾಗೂ ದೇವತಕ್ಕರಾದ ಮುಕ್ಕಾಟಿರ ಒಕ್ಕದವರ ನೇತೃತ್ವದಲ್ಲಿ ಚಾಮುಂಡಿ, ಕುಟ್ಟಿಚಾತ, ಬೈರವ, ನುಚ್ಚುಟೆ ತೆರೆಗಳು ನಡೆಯುತ್ತವೆ. ಉತ್ಸವದ ಕೊನೆಯ ದಿನದಂದು ವಿಷ್ಣುಮೂರ್ತಿ ತೆರೆಯ ಮೇಲೇರಿ ಅಂದರೆ ಕೊಂಡ ಹಾಯುವಿಕೆ ನಡೆಯುತ್ತದೆ.

**ಪಾಲೂರು**

ಪಾಲೂರು ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಕುಯ್ಯಂಗೇರಿ ನಾಡಿಗೆ ಸೇರುತ್ತದೆ. ಈ ಗ್ರಾಮದಲ್ಲಿ ಇಗ್ಗುತಪ್ಪ ದೇವರ ಸಹೋದರ ಪಾಲೂರಪ್ಪನ ದೇವಾಲಯವಿದೆ. ಇದನ್ನು ಮಹಾಲಿಂಗೇಶ್ವರ ದೇವಾಲಯವೆಂದೂ ಕರೆಯುತ್ತಾರೆ. ಏಪ್ರಿಲ್ ೧೩ ರಿಂದ ೧೯ರವರೆಗೆ ನಡೆಯುವ ವಾರ್ಷಿಕ ಉತ್ಸವದ ಸಂದರ್ಭದಲ್ಲಿ ತೆರೆ ಆಚರಣೆ ನಡೆಯುತ್ತದೆ.

**ಪಾಲಂಗಾಲ**

ಕಡಿಯತ್ ನಾಡಿನ ಪಾಲಂಗಾಲ ಗ್ರಾಮವು ವಿರಾಜಪೇಟೆ ತಾಲೂಕಿನಲ್ಲಿದೆ. ಮಲೆತಿರಿಕೆ ತುಂಬೆಮಲೆದೇವ, ಒಳಮೆವಾನಿ ಈಶ್ವರ ಮಾದೇವ, ಭಗವತಿ, ಕರಿಂಗುತ್ತಿ ಭಗವತಿ, ಕಾಟಿಲ್ ಅಯ್ಯಪ್ಪ ಮತ್ತು ಭದ್ರಕಾಳಿ ಗ್ರಾಮದೈವಗಳಾಗಿವೆ. ಭದ್ರಕಾಳಿ, ಭಗವತಿ ಮತ್ತು ಕಾಟಿಲ್ ಅಯ್ಯಪ್ಪ ದೇವರ ವಾರ್ಷಿಕ ಉತ್ಸವವು ಮಾರ್ಚ್ ೧೭ರಂದು ನಡೆಯುತ್ತದೆ. ಈ ಸಂದರ್ಭದಲ್ಲಿ ಬಣ್ಣರು ಭದ್ರಕಾಳಿ, ಭಗವತಿ ಹಾಗೂ ಅಯ್ಯಪ್ಪ ತೆರೆಯನ್ನು ಕಟ್ಟುತ್ತಾರೆ. ಮಾರ್ಚ್ ೧೯ರಂದು ನಡೆಯುವ ಕರಿಂಗುತ್ತಿ ಭಗವತಿಯ ವಾರ್ಷಿಕ ಉತ್ಸವದಲ್ಲಿ ಕರಿಂಗುತ್ತಿ ಭಗವತಿ ತೆರೆ ಆಚರಣೆ ನಡೆಯುತ್ತದೆ. ಗ್ರಾಮದಲ್ಲಿನ ಪೋಟೋಲ ಕರಿಚಾಮುಂಡಿ ಉತ್ಸವವು ತೆರೆ ಕಟ್ಟುವ ಆಚರಣೆಯೊಂದಿಗೆ ಏಪ್ರಿಲ್ ತಿಂಗಳ ೨೧ರಂದು ನಡೆಯುತ್ತದೆ.

ಏಪ್ರಿಲ್ ೨೨ ಮತ್ತು ೨೩ರಂದು ಗ್ರಾಮದರು ವಿಷ್ಣುಮೂರ್ತಿ ತೋತ, ಕರಿಬಾಳ, ನುಚ್ಚುಟೆ, ಕುಳಿಯ ಹಾಗೂ ವಿಷ್ಣುಮೂರ್ತಿ ತೆರೆಗಳನ್ನು ಕಟ್ಟಿಸುತ್ತಾರೆ.

**ಪೆಗ್ಗಳ**

ವಿರಾಜಪೇಟೆ ತಾಲೂಕಿನ ಪೆಗ್ಗಳ ಗ್ರಾಮವು ಬೋಟೋಳಿ ನಾಡಿಗೆ ಸೇರುತ್ತದೆ. ಭಗವತಿ, ಚಾಮುಂಡಿ ಹಾಗೂ ಅಯ್ಯಪ್ಪ ಗ್ರಾಮದ ಪ್ರಮುಖ ಆರಾಧ್ಯ ದೇವರುಗಳಾಗಿವೆ. ಅಯ್ಯಪ್ಪ ದೇವರನ್ನು ಪೆಗ್ಗಳ ಅಯ್ಯಪ್ಪ, ಪೆಗ್ಗಳ ಸಾರ್ತಾವು, ಪೆರುವಾಳ್ ಸಾರ್ತಾವು, ಪೆರುಮಲೆ ಸಾರ್ತಾವು ಇತ್ಯಾದಿ ಹೆಸರುಗಳಿಂದ ಕರೆಯುವುದು ವಾಡಿಕೆ. ಏಪ್ರಿಲ್ ತಿಂಗಳಿನಲ್ಲಿ ನಡೆಯುವ ವಾರ್ಷಿಕ ಉತ್ಸವದಲ್ಲಿ ಮೂರ್ತಿಗಳ ತೆರೆ ಹಾಗೂ ಕುಟ್ಟಿ ಸಾಸ್ತಾವು ತೆರೆಗಳನ್ನು ಮಲಿಯ ಸಮುದಾಯದವರು ಕಟ್ಟುತ್ತಾರೆ.

**ಪೊದವಾಡ**

ಕಡಿಯತ್‌ನಾಡಿಗೆ ಸೇರುವ ಪೊದವಾಡ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಈ ಗ್ರಾಮವನ್ನು ಹೊದವಾಡ ಎಂದೂ ಕರೆಯುತ್ತಾರೆ. ಚಾಮುಂಡಿ, ಭದ್ರಕಾಳಿ, ಬೀರ ಹಾಗೂ ಅಯ್ಯಪ್ಪ ಗ್ರಾಮದೈವಗಳಾಗಿವೆ. ಮಲಿಯ ಸಮುದಾಯದವರು ಈ ದೈವಗಳ ತೆರೆಗಳನ್ನು ಕಟ್ಟುತ್ತಾರೆ.

**ಪೊರಾಡ್**

ಮರೆನಾಡಿನ ಮೂರು ಗ್ರಾಮಗಳಲ್ಲಿ ಪ್ರಮುಖವಾದುದು ಪೊರಾಡ್. ಕ್‌ಕಟ್ಟ್ ಈಶ್ವರ, ಪೊನ್ಯತ್(ಪೊನ್ನಿ) ಭಗವತಿ ಹಾಗೂ ಕಳತ್ ಭಗವತಿ ಇಲ್ಲಿನ ಗ್ರಾಮದೇವತೆಗಳು. ಏಪ್ರಿಲ್ ೨೩ ರಿಂದ ೨೬ ರವರೆಗೆ ನಡೆಯುವ ಗ್ರಾಮ ದೇವತೆಗಳ ವಾರ್ಷಿಕೋತ್ಸವದ ಕೊನೆಯ ದಿನದಂದು ಭಗವತಿ ತೆರೆ ಕಟ್ಟುವ ಆಚರಣೆ ನಡೆಯುತ್ತದೆ. ಸಮೀಪದ ನೆಮ್ಮಾಲೆ ಗ್ರಾಮದಲ್ಲಿ ನೆಲೆಸಿದ್ದ; ಪ್ರಸ್ತುತ ಕುಟ್ಟಂದಿಯಲ್ಲಿ ನೆಲೆಸಿರುವ ಪಣಿಕರು ಭಗವತಿ ತೆರೆಯನ್ನು ಕಟ್ಟುತ್ತಾರೆ.

**ಬಲಂಬೇರಿ**

ಬಲಂಬೇರಿ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಈ ಗ್ರಾಮಕ್ಕೆ ಬಲಮುರಿ ಎಂಬ ಹೆಸರೂ ರೂಢಿಯಲ್ಲಿದೆ. ಕಡಿಯತ್‌ನಾಡಿಗೆ ಸೇರುವ ಈ ಗ್ರಾಮದ ಬಗ್ಗೆ ಐತಿಹ್ಯವಿದೆ. ಇದು ಕೊಡವ ಸ್ತ್ರೀಯರ ಸೀರೆಯ ಕುರಿತಾಗಿದೆ. ತನ್ನ ಪತಿ ಅಗಸ್ತ್ಯನೊಡನೆ ಮುನಿಸಿಕೊಂಡ ಕಾವೇರಿ ನದಿಯಾಗಿ ಹರಿಯತೊಡಗಿದಳು. ಆಗ ಕೊಡವ ಮಹಿಳೆಯರು ಹರಿಯುತ್ತಿದ್ದ ನೀರಿಗೆ ಅಡ್ಡಲಾಗಿ ನಿಂತು ತಡೆಯಲು ಯತ್ನಿಸಿದರು. ಕಾವೇರಿ ಬಲಮುಖಿಯಾಗಿ ರಭಸದಿಂದ ಪ್ರವಹಿಸಲಾರಂಭಿಸಿದಳು. ಇದರಿಂದ ಅವರ ಸೀರೆಯ ನೆರಿಗೆ ಹಿಂದಕ್ಕೆ ಸರಿಯಿತು. ಈ ಸಂದರ್ಭದಲ್ಲಿ ಅವರು ಕಳಚಿದ ಸೆರಗನ್ನು ಮುಂಭಾಗಕ್ಕೆ ತಂದು ಗಂಟು ಹಾಕಿ ಸೊಂಟಕೆ

ಸಿಕ್ಕಿಸಿಕೊಂಡರು. ಇದರಿಂದ ಸಂತುಷ್ಟಗೊಂಡ ಕಾವೇರಿ ನಿಮಗೆ ಇದೇ ರೀತಿಯ ಉಡುಪು ಶಾಶ್ವತವಾಗಲಿ ಎಂದು ಹರಸಿದಳು. ಗ್ರಾಮದಲ್ಲಿ ವಿಷ್ಣು, ಮಾದೇರಪ್ಪ, ಗಣಪತಿ, ಚೌಂಡಿ, ಮಾಂಗೋಟಪ್ಪ(ಮಾಂಗೋಟ್ ಸಾರ್ತಾವು) ಹಾಗೂ ಭದ್ರಕಾಳಿ ದೈವದ ನೆಲೆಗಳಿವೆ. ಏಪ್ರಿಲ್ ೧೮ ಮತ್ತು ೧೯ರಂದು ಭದ್ರಕಾಳಿಯ ವಾರ್ಷಿಕೋತ್ಸವ ನಡೆಯುತ್ತದೆ. ದೇವತಕ್ಕರಾದ ಪಾಲಂದಿರ ಒಕ್ಕ, ಭಂಡಾರತಕ್ಕರಾದ ಐಚೋಡಿಯಂಡ ಒಕ್ಕದವರು ಉತ್ಸವದಲ್ಲಿ ಕಾರ್ಯನಿರ್ವಹಿಸುತ್ತಾರೆ. ಏಪ್ರಿಲ್ ತಿಂಗಳ ೨೨ರಂದು ಮಾಂಗೋಟ್ ಸಾರ್ತಾವು ದೈವದ ವಾರ್ಷಿಕ ಉತ್ಸವವು ನಡೆಯುತ್ತದೆ. ದೇವತಕ್ಕರಾದ ನಾಡಂಡ ಕುಟುಂಬ ಹಾಗೂ ಭಂಡಾರ ತಕ್ಕರಾದ ತೊತ್ತಿಯಂಡ ಕುಟುಂಬಗಳ ಮುಂದಾಳತ್ವದಲ್ಲಿ ಗ್ರಾಮಸ್ಥರೆಲ್ಲಾ ಸೇರಿ ತೆರೆ ಆಚರಣೆಯನ್ನು ನಡೆಸುತ್ತಾರೆ. ಗ್ರಾಮದಲ್ಲಿರುವ ಪಾಲಂದಿರ ಕುಟುಂಬದ ಐನ್‌ಮನೆಯಲ್ಲಿ ಅಯ್ಯಪ್ಪ ಹಾಗೂ ಭದ್ರಕಾಳಿ ತೆರೆಗಳು ನಡೆಯುತ್ತವೆ. ಮಲಿಯ ಸಮುದಾಯದವರು ಈ ತೆರೆಗಳನ್ನು ಕಟ್ಟುತ್ತಾರೆ.

**ಬಲ್ಲಮಾವಟಿ**

ಬಲ್ಲಮಾವಟಿ ಗ್ರಾಮವು ಪೂರ್ವದಲ್ಲಿ ಬಲ್ಲತ್‌ನಾಡ್ ಎಂದು ಕರೆಯಲ್ಪಡುತ್ತಿತ್ತು. ನಂತರದ ದಿನಗಳಲ್ಲಿ ಇತರ ಪುಟ್ಟ ನಾಡುಗಳು ಹಾಗೂ ಸಮೀಪದ ಕೆಲವು ಗ್ರಾಮಗಳು ಸೇರಿ ನಾಲ್‌ನಾಡ್ ಎಂಬ ದೊಡ್ಡ ನಾಡಾಗಿ ರೂಪುಗೊಂಡಿತು. ಮಡಿಕೇರಿ ತಾಲೂಕಿನ ಈ ಗ್ರಾಮದಲ್ಲಿ ರಾಟೆ ಭಗವತಿ ಭದ್ರಕಾಳಿ ದೇವಾಲಯವಿದೆ. ರಾಟೆ ಭಗವತಿ ಭದ್ರಕಾಳಿ ಉತ್ಸವವು ಎರಡು ವರ್ಷಗಳಿಗೊಮ್ಮೆ ಏಪ್ರಿಲ್ ತಿಂಗಳ ಕೊನೆಯ ವಾರದಲ್ಲಿ ನಡೆಯುತ್ತದೆ. ಬಲ್ಲತ್‌ನಾಡಿನ ವ್ಯಾಪ್ತಿಗೆ ಸೇರುವ ಬಲ್ಲಮಾವಟಿ, ಪೇರೂರು ಹಾಗೂ ಪುಲಿಕೋಟು ಗ್ರಾಮಗಳ ಜನರು ಉತ್ಸವದಲ್ಲಿ ಭಾಗವಹಿಸುತ್ತಾರೆ. ಭದ್ರಕಾಳಿ ದೇವಿಯ ಪ್ರತೀಕವಾದ 'ಕಡತಲೆ' ಎಂಬ ಆಯುಧವನ್ನು ಸಿಂಗರಿಸಿ ರಾಟೆಯ ಉಯ್ಯಾಲೆಯಲ್ಲಿ ತೂಗುವ ವಿಶಿಷ್ಟ ಆಚರಣೆ ಇಲ್ಲಿ ನಡೆಯುತ್ತದೆ. ಆದುದರಿಂದ ಉಯ್ಯಾಲೆ ಹಬ್ಬ, ರಾಟೆ ಹಬ್ಬವೆಂದು ಪ್ರಸಿದ್ಧವಾಗಿದೆ. ಪೂರ್ವದಲ್ಲಿ ಈ ಉತ್ಸವಕ್ಕೆ ಮರದ ರಾಟೆಯನ್ನು ಬಳಸುತ್ತಿದ್ದರು. ಪ್ರಸ್ತುತ ಕಬ್ಬಿಣದ ದೊಡ್ಡ ರಾಟೆಯನ್ನು ನಿರ್ಮಿಸಲಾಗಿದೆ. ಹಬ್ಬದ ಅಂಗವಾಗಿ ಬೋಡ್‌ಹಬ್ಬವು ನಡೆಯುತ್ತವೆ. ಈ ಸಂದರ್ಭದಲ್ಲಿ ಅಯ್ಯಪ್ಪ, ಭದ್ರಕಾಳಿ, ಕೇತ್ರಪ್ಪ(ಕ್ಷೇತ್ರಪಾಲ) ಹಾಗೂ ಶಾಸ್ತಾವು ದೈವಗಳಿಗೆ ತೆರೆಯನ್ನು ಗ್ರಾಮದಲ್ಲಿನ ಮಲಿಯರು ಕಟ್ಟುತ್ತಾರೆ.

**ಬಿಳಿಗೇರಿ**

ಮಡಿಕೇರಿ ತಾಲೂಕಿನ ಬಿಳಿಗೇರಿ ಗ್ರಾಮವು ಕಗ್ಗೋಡ್‌ನಾಡಿಗೆ ಸೇರುತ್ತದೆ. ತೆರೆಕಟ್ಟುವ ಮಲಿಯರು ಗಾಮದಲ್ಲಿ ನೆಲೆಸಿದ್ದಾರೆ. ಗ್ರಾಮದಲ್ಲಿ ಇತಿಹಾಸ ಪ್ರಸಿದ್ಧ

ಭಗವತಿ ದೇವಾಲಯವಿದೆ. ಮಾರ್ಚ್ ೨೨ ರಿಂದ ೨೬ರವರೆಗೆ ವಾರ್ಷಿಕೋತ್ಸವವು ನಡೆಯುತ್ತದೆ. ಮಾರ್ಚ್ ೨೫ರಂದು ದೊಡ್ಡಹಬ್ಬವು ನಡೆಯುತ್ತದೆ. ಅಂದು ಮಧ್ಯಾಹ್ನ ಅಯ್ಯಪ್ಪ, ಅಜ್ಜಪ್ಪ ಹಾಗೂ ಕುಟ್ಟಿಚಾತ ಹಾಗೂ ಭಗವತಿ ದೈವಗಳ ತೆರೆಯನ್ನು ಮಲಿಯರು ಕಟ್ಟುತ್ತಾರೆ. ಅರ್ಧನಾರೀಶ್ವರ ದೇವರ ವಾರ್ಷಿಕೋತ್ಸವವು ಏಪ್ರಿಲ್ ೨೭ ರಿಂದ ಮೇ ೧ ರವರೆಗೆ ನಡೆಯುತ್ತದೆ. ಈ ಸಂದರ್ಭದಲ್ಲಿ ಅಜ್ಜಪ್ಪ ತೆರೆ, ವಿಷ್ಣುಮೂರ್ತಿ ತೆರೆಗಳು ನಡೆಯುತ್ತವೆ.

**ಬಿಳುಗುಂದ**

ಬಿಳುಗುಂದ ಗ್ರಾಮವು ವಿರಾಜಪೇಟೆ ತಾಲೂಕಿನಲ್ಲಿದೆ. ಈ ಗ್ರಾಮವು ಅಮ್ಮತ್ತಿನಾಡಿಗೆ ಸೇರುತ್ತದೆ. ಇಲ್ಲಿ ಪಣಿಕರು ನೆಲೆಸಿದ್ದಾರೆ. ಗ್ರಾಮದಲ್ಲಿ ಭದ್ರಕಾಳಿ ದೈವದ ನೆಲೆಯಿದೆ. ಭದ್ರಕಾಳಿಯ ವಾರ್ಷಿಕೋತ್ಸವ ಹಾಗೂ ಅದರ ಅಂಗವಾಗಿ ಪಣಿಕರ ತೆರೆ ಮತ್ತು ಬೋಡ್ ಹಬ್ಬವನ್ನು ಮೇ ತಿಂಗಳ ೧೩ ರಿಂದ ೧೬ ರವರೆಗೆ ಆಚರಿಸುತ್ತಾರೆ.

**ಬೀರುಗ**

ವಿರಾಜಪೇಟೆ ತಾಲೂಕಿನ ಬೀರುಗ ಗ್ರಾಮವು ಕುರ್ಚಿ ತೋರನಾಡಿಗೆ ಸೇರುತ್ತದೆ. ಗ್ರಾಮದ ಚೆಪ್ಪುಡಿಕೊಲ್ಲಿ ಎಂಬಲ್ಲಿ ಪಾಲ್‌ಪಾರ್ ಚಾಮುಂಡಿ ವಿಷ್ಣುಮೂರ್ತಿ ನೆಲೆಯಿದೆ. ಮೇ ತಿಂಗಳ ೭ ಮತ್ತು ೮ರಂದು ನಡೆಯುವ ವಾರ್ಷಿಕೋತ್ಸವದಲ್ಲಿ ೭ ರಂದು ರಾತ್ರಿ ತೋತ, ಕುಟ್ಟಿಚಾತ, ಭೈರವ, ಕರಿಬಾಳ್ ಭಗವತಿ ಹಾಗೂ ನುಚ್ಚುಟೆ ತೆರೆಗಳನ್ನು ಮಲಿಯರು ಕಟ್ಟುತ್ತಾರೆ. ಮರುದಿನದಂದು ಸಂಜೆ ವಿಷ್ಣುಮೂರ್ತಿ ಮೇಲೇರಿ ಹಾಗೂ ಕುಳಿಯ ತೆರೆಗಳ ಆಚರಣೆ ನಡೆಯುತ್ತದೆ.

**ಬೆಟ್ಟತ್ತೂರು**

ಬೆಟ್ಟತ್ತೂರು ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಕುಯ್ಯಂಗೇರಿ ನಾಡಿನ ಈ ಗ್ರಾಮದಲ್ಲಿ ಸುಬ್ರಮಣ್ಯ, ಮಾದೂರಪ್ಪ ಈಶ್ವರ, ಚಾಮುಂಡಿ, ವಿಷ್ಣುಮೂರ್ತಿ ಹಾಗೂ ಅಯ್ಯಪ್ಪ ಆರಾಧ್ಯ ದೈವಗಳಾಗಿವೆ. ಗ್ರಾಮದೇವತೆಗಳ ವಾರ್ಷಿಕೋತ್ಸವದಲ್ಲಿ ಮಲಿಯರು ತೆರೆಯನ್ನು ಕಟ್ಟುತ್ತಾರೆ.

**ಬೇಂಗೂರ್**

ಬೇಂಗೂರ್ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಈ ಗ್ರಾಮಕ್ಕೆ ಚೇರಂಬಾಣೆ ಎಂಬ ಹೆಸರೂ ಇದೆ. ಬೇಂಗ್‌ನಾಡಿಗೆ ಸೇರಲ್ಪಡುವ ಈ ಗ್ರಾಮದಲ್ಲಿ ಕೋಟೆ ತಿರಿಕೆ ದುರ್ಗಿ, ಕಡಪಾಲಪ್ಪ, ಕೇತ್ರಪ್ಪ, ಅಯ್ಯಪ್ಪ, ಕೊಡಲಿ ಪೊವ್ವದಿಯಮ್ಮೆ, ವಿಷ್ಣುಮೂರ್ತಿ ಮತ್ತು ಮಾರಿಯಮ್ಮ ಎಂಬ ಏಳು ಗ್ರಾಮದೇವತೆಗಳಿವೆ. ಗ್ರಾಮದ ಪ್ರಮುಖ ದೈವ ಕೇತ್ರಪ್ಪನ ಉತ್ಸವವು ಎರಡು ವರ್ಷಗಳಿಗೊಮ್ಮೆ ನಡೆಯುತ್ತದೆ. ಮಾರ್ಚ್ ತಿಂಗಳ ೩೧ರಂದು ನಡೆಯುವ ಉತ್ಸವದಲ್ಲಿ ಕೇತ್ರಪ್ಪ ತೆರೆಕಟ್ಟುವ

ಆಚರಣೆ ಜರುಗುತ್ತದೆ. ಕಲ್ಮಾಡಂಡ ಒಕ್ಕ ದೇವತಕ್ಕರಾಗಿ; ಅರೆಯಂಡ ಮತ್ತು ತಟ್ಟಂಡ ಒಕ್ಕಗಳು ಭಂಡಾರ ತಕ್ಕರಾಗಿ ಕಾರ್ಯ ನಿರ್ವಹಿಸುತ್ತಾರೆ.

**ಬೇತ್**

ಮಡಿಕೇರಿ ತಾಲೂಕಿನ ಬೇತ್ ಗ್ರಾಮವು ನಾಲ್‌ನಾಡಿಗೆ ಸೇರುತ್ತದೆ. ಈ ಗ್ರಾಮದ ಪ್ರಮುಖ ದೇವರು ಮಕ್ಕಿ ಸಾಸ್ತಾವು(ಸಾರ್ತಾವು). ದಟ್ಟ ಕಾಡಿನ ನಡುವೆ ಹಲಸಿನ ಮರದಡಿಯಲ್ಲಿ 'ಸಾರ್ತಾವು' ವಿನ ಸನ್ನಿಧಿಯಿದೆ. ಮರದ ಸುತ್ತಲೂ ಐದು ಅಡಿ ಎತ್ತರದ ಕಟ್ಟೆಯಿದ್ದು ಅದರ ನಡುವೆ ತ್ರಿಶೂಲವಿದೆ. ಕಟ್ಟೆಯ ಸುತ್ತಲೂ ಹರಕೆ ಒಪ್ಪಿಸಿರುವ ಮಣ್ಣಿನ ನಾಯಿಗಳಿವೆ. ವರ್ಷಕ್ಕೆ ಎರಡು ಬಾರಿ ಸಾರ್ತಾವು ದೇವರ ಉತ್ಸವವನ್ನು ಆಚರಿಸುತ್ತಾರೆ. ಮೊದಲ ಉತ್ಸವವು ಮೇ ತಿಂಗಳ ಮೊದಲ ವಾರದಲ್ಲಿ ನಡೆಯುತ್ತದೆ. ಇದನ್ನು ಮಕ್ಕಿ ಸಾಸ್ತಾವು ಎಡಮ್ಯಾರ್ ನಮ್ಮೆ ಎಂದು ಕರೆಯುತ್ತಾರೆ. ಮಕ್ಕಿ ಸಾರ್ತಾವು ದೇವರಿಗೆ ತೆರೆಕಟ್ಟುವ ಆಚರಣೆಯಿಲ್ಲ. ಆದರೆ ಉತ್ಸವದ ಸಂದರ್ಭದಲ್ಲಿ ತೋತ, ಕರಿಬಾಳ, ನುಚ್ಚುಟೆ, ಅಜ್ಜಪ್ಪ ಹಾಗೂ ವಿಷ್ಣುಮೂರ್ತಿ ದೈವಗಳ ತೆರೆ ಹಾಗೂ ಮೇಲೆರಿ ಆಚರಣೆ ನಡೆಯುತ್ತದೆ. ಡಿಸೆಂಬರ್ ತಿಂಗಳ ೧೬, ೧೭ ಮತ್ತು ೧೮ರಂದು ಎರಡನೆಯ ಹಬ್ಬ ನಡೆಯುತ್ತದೆ. ಈ ಸಂದರ್ಭದಲ್ಲೂ ಅಜ್ಜಪ್ಪ ತೆರೆ, ಚೌಂಡಿ ತೆರೆ ಹಾಗೂ ವಿಷ್ಣುಮೂರ್ತಿ ತೆರೆಗಳನ್ನು ಮಲಿಯರು ಕಟ್ಟುತ್ತಾರೆ.

**ಭಾಗಮಂಡಲ**

ಭಾಗಮಂಡಲ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ತಾವುನಾಡಿಗೆ ಸೇರುವ ಗ್ರಾಮವಾಗಿದೆ. "ಪೂರ್ವದಲ್ಲಿ ತಾವುನಾಡಿನಲ್ಲಿ ಹದಿನಾರು ಗ್ರಾಮಗಳಿದ್ದವು. ನಾಡುತಕ್ಕರು(ನಾಡಿನ ಮುಖ್ಯಸ್ಥರು) ಗಳಾದ ಮಂಡೀರ ಮತ್ತು ಮಣವಟ್ಟೀರ ಒಕ್ಕಗಳು ನಾಡಿನ ಜವಾಬ್ದಾರಿಯನ್ನು ವಹಿಸಿಕೊಂಡಿದ್ದರು. ಟಿಪ್ಪುಸುಲ್ತಾನನು ಕೊಡವರನ್ನು ಮಾದೇಟಿ ಪರಂಬುವಿನಿಂದ ಶ್ರೀರಂಗಪಟ್ಟಣಕ್ಕೆ ಬಲವಂತವಾಗಿ ಕರೆದುಕೊಂಡು ಹೋದ ಸಂದರ್ಭದಲ್ಲಿ ಕೊಡಗಿನ ಹಲವು ನಾಡುಗಳು ಚದುರಿಹೋದವು. ಕೊಡಗಿನ ರಾಜ ವೀರರಾಜೇಂದ್ರನ ಆಡಳಿತಾವಧಿಯಲ್ಲಿ ಆತನು ಅಮರ ಸುಳ್ಯ ಹಾಗೂ ಸುಬ್ರಮಣ್ಯದಿಂದ ಜನರನ್ನು ಕರೆತಂದು ಇಲ್ಲಿ ನೆಲೆನಿಲ್ಲಿಸಿದನು. ಹಾಗಾಗಿ ಭಾಗಮಂಡಲ ಸುತ್ತಮುತ್ತಲ ಪ್ರದೇಶಗಳು ತುಳು ಗೌಡ(ಅರೆ ಭಾಷೆ)ರ ಹಿಡಿತಕ್ಕೆ ಒಳಪಟ್ಟಿತು. ಆದುದರಿಂದ ಈ ಭಾಗದಲ್ಲಿ ಮೂಲ ಕೊಡವ ಸಾಮಾಜಿಕ ಹಾಗೂ ಆಚರಣಾತ್ಮಕ ಅಂಶಗಳು ಮರೆಯಾಗಿವೆ."[೧೭] ಆದರೆ ಭಾಗಮಂಡಲದ ತ್ರಿವೇಣಿ ಸಂಗಮದ ಸಮೀಪದಲ್ಲಿ ವಿಷ್ಣುಮೂರ್ತಿಯ ಸ್ಥಾನವಿದೆ. ಕಾವೇರಿ ಚಂಗ್ರಾಂದಿ(ಕಾವೇರಿ ಸಂಕ್ರಮಣ) ಕಳೆದು ಹತ್ತು ದಿನಗಳಲ್ಲಿ ವಿಷ್ಣುಮೂರ್ತಿ ಹಾಗೂ ಚೌಂಡಿತೆರೆಯ ಆಚರಣೆ ನಡೆಯುತ್ತದೆ.

ಈ ತೆರೆಗಳನ್ನು ಮಲಿಯರು ಕಟ್ಟುತ್ತಾರೆ.

**ಮಡಿಕೇರಿ**

ಮಡಿಕೇರಿಯ ಕುಂದೂರು ಮೊಟ್ಟೆ ಎಂಬಲ್ಲಿ ಚೌಟಿ ಮಾರಿಯಮ್ಮ ದೇವಾಲಯವಿದೆ. ಇಲ್ಲಿ ತೆರೆಕಟ್ಟುವ ಆಚರಣೆ ನಡೆಯುತ್ತದೆ. ಇದು ಮೂಲತಃ ಚೌಂಡಿ(ಚಾಮುಂಡಿ)ಯ ನೆಲೆಯಾಗಿದ್ದು ಕಾಲಾಂತರದಲ್ಲಿ ಚೌಂಡಿ ಚೌಟಿಯಾಗಿ, ಚೌಟಿ ಮಾರಿಯಮ್ಮನಾಗಿ ಬದಲಾಗಿದೆ. ಈ ವಿಚಾರವನ್ನು ಐತಿಹ್ಯವೊಂದು ಸ್ಪಷ್ಟಪಡಿಸುತ್ತದೆ. ಕೊಡಗಿನ ಜನಪದ ವೀರರಲ್ಲಿ ಒಬ್ಬನಾದ ಅಪ್ಪಚ್ಚಿರ ಮಂದಣ್ಣ ಕಲ್ಯಾಟಂಡ ಪೊನ್ನಪ್ಪನ ಸಮಕಾಲೀನ. ಈತ ಮೊದಲನೆಯ ವೀರರಾಜನ ಕಾಲದಲ್ಲಿ ಚಾವಡಿಕಾರನಾಗಿದ್ದನು. ಧೈರ್ಯ ಮತ್ತು ಪರಾಕ್ರಮಕ್ಕೆ ಹೆಸರುವಾಸಿಯಾಗಿದ್ದ ಈತ ಚೌಂಡಿ ದೈವವನ್ನು ಅವಮಾನಿಸಿ ಸಂಕಷ್ಟಕ್ಕೆ ಸಿಲುಕಿದ ಬಗ್ಗೆ ಹೀಗೆ ನಿರೂಪಿಸಲಾಗಿದೆ. "ಹಾಲೇರಿಯಿಂದ ಮನೆಗೆ ಹಿಂದಿರುಗುತ್ತಿದ್ದಾಗ ಕುಂದುರು ಮೊಟ್ಟೆ ಚಾಮುಂಡಿ ದೇವತೆಯು 'ಬಾರಣೆ'(ದೇವಿಗೆ ಅರ್ಪಿಸಿದ ಆಹಾರ) ಸೇವಿಸುತ್ತಿರಲು ಕಂಡು ಜಡೆ ಹಿಡಿದೆಳೆದು ಇನ್ನೊಂದು ಕಡೆ ಎಸೆದು ಮನೆಗೆ ಸೇರಿದ. ಚಾಮುಂಡಿಗೆ ಅಪಮಾನವೆನಿಸಿತು. ಅವಳು ಪ್ರತಿಕಾರ ಮಾಡುವ ಸಮಯ ಕಾಯುತ್ತಿದ್ದಳು. ಮಂದಣ್ಣನ ಹೆಂಡತಿಯಲ್ಲಿಗೆ ವೇಷಧರಿಸಿ ಬಂದು, ಮರಳುಮಾಡಿ 'ನೊಜೆ ಚಿಟ್ಟೆ ಪಕ್ಷಿ'ಗೆ ಮಾತ್ರ ಮಂದಣ್ಣ ಹೆದರುವ ಸಂಗತಿ ತಿಳಿದು ಕೊಂಡಳು. ಮರುದಿನ ಅರಮನೆಯಿಂದ ಕುಂದೂರು ಮೊಟ್ಟೆಯ ಹಾದಿಯಲ್ಲಿ ಮನೆಗೆ ಹಿಂದಿರುಗುತ್ತಿರುವಲ್ಲಿ ಚಾಮುಂಡಿಯು ಆ ಪಕ್ಷಿಯ ರೂಪದಲ್ಲಿ ಮಂದಣ್ಣನ ಬಳಿ ಬಂದು ಶಬ್ದಮಾಡಿ ಹಾರಿಹೋದಳು. ಆ ಶಬ್ದಕ್ಕೆ ಹೆದರಿದ್ದ ಮಂದಣ್ಣ ರಾತ್ರಿ ಮನೆಯಲ್ಲಿ ಜ್ವರದಿಂದ ನರಳಿ ತೀರಿದನಂತೆ. ರಾಜಾಸೀಟ್ ಸಮೀಪದಲ್ಲಿ ಈ ದೇವಿಯ ದೇಗುಲ ರುದ್ರಾಕರ್ಷಕ ಮುಖ ಶೈಲಿ ಹೊಂದಿ ಇಂದಿಗೂ ಕಾಣಬರುತ್ತದೆ."[೧೮]

ವರ್ತಮಾನದಲ್ಲಿ ಈ ದೇವಾಲಯವು ಮಾರಿಯಮ್ಮನಾಗಿ ಬದಲಾಗಿದ್ದರೂ ಚೌಂಡಿಯು ಚೌಟಿ ಎಂಬ ಹೆಸರಿನಲ್ಲಿ ಉಳಿದುಕೊಂಡಿದೆ. ವಾರ್ಷಿಕವಾಗಿ ಇಲ್ಲಿ ಚೌಂಡಿ ತೆರೆಯನ್ನು ಮಲಿಯರು ಕಟ್ಟುತ್ತಾರೆ. "ತೆರೆಕಟ್ಟಿ ದೈವವು ಆವಾಹನೆಯಾಗಿ ಮೊದಲು "ಅಪ್ಪಚ್ಚಿರ ಮಂದಣ್ಣ ಉಂಡೋ?"(ಅಪ್ಪಚ್ಚಿರ ಮಂದಣ್ಣ ಇದ್ದಾನೋ?)ಎಂದು ಮೂರು ಬಾರಿ ಪ್ರಶ್ನಿಸುತ್ತದೆ."[೧೯] ಹಾಗೆಯೇ ಅಪ್ಪಂಗಳ ಗ್ರಾಮದಲ್ಲಿರುವ ಮಂದಣ್ಣನ ಕೈಮಡದಲ್ಲಿ ಬೀರ ತೆರೆಯನ್ನು ಕಟ್ಟುತ್ತಾರೆ. ಈ ಸಂದರ್ಭದಲ್ಲಿ ತೆರೆಯು ಕುಂದೂರುಮೊಟ್ಟೆ ಚೌಂಡಿಯನ್ನು ದೂಷಿಸುತ್ತದೆ. ಏಪ್ರಿಲ್ ತಿಂಗಳಿನಲ್ಲಿ ನಡೆಯುವ ದರ್ಶನ ಪೂಜೆಯ ಸಂದರ್ಭದಲ್ಲಿ ಚೌಂಡಿತೆರೆ, ಅಪ್ಪಚ್ಚಿರ ಮಂದಣ್ಣ ತೆರೆ, ಅಜ್ಜಪ್ಪ ತೆರೆ ಹಾಗೂ ವಿಷ್ಣುಮೂರ್ತಿ ಮೇಲೇರಿ

ಆಚರಣೆ ಮಲಿಯರಿಂದ ನಡೆಯುತ್ತದೆ.

**ಮರಗೋಡು**

ಮರಗೋಡು ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಇಲ್ಲಿ ಶಿವ ಪಾರ್ವತಿ ದೇವಾಲಯವಿದೆ. ವಾರ್ಷಿಕ ಉತ್ಸವದ ಸಂದರ್ಭದಲ್ಲಿ ತೆರೆಕಟ್ಟುವ ಆಚರಣೆ ಜರುಗುತ್ತದೆ. ಏಪ್ರಿಲ್ ತಿಂಗಳ ೨೭ ರಿಂದ ಉತ್ಸವವು ಪ್ರಾರಂಭವಾಗುತ್ತದೆ. ಮೇ ತಿಂಗಳ ೨ ಹಾಗೂ ೩ ರಂದು ಅಂಜಿ ಕೂಟ್ ಮೂರ್ತಿಗಳು ಹಾಗೂ ವಿಷ್ಣುಮೂರ್ತಿ ತೆರೆ ನಡೆಯುತ್ತದೆ. ಅಲ್ಲದೆ ಗ್ರಾಮದಲ್ಲಿರುವ ಕೆಲವು ಕೊಡವ ಕುಟುಂಬಗಳ ಐನ್‌ಮನೆಯಲ್ಲಿ ತೆರೆಯನ್ನು ಮಲಿಯರು ಕಟ್ಟುತ್ತಾರೆ.

**ಮರಂದೋಡ**

ಮರಂದೋಡ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ನಾಲ್‌ನಾಡಿಗೆ ಸೇರಿದೆ. ಭದ್ರಕಾಳಿ, ಕೇಕ್‌ಮಾನಿ ಭಗವತಿ, ವಿಷ್ಣುಮೂರ್ತಿ, ಅಯ್ಯಪ್ಪ ಹಾಗೂ ಸಾರ್ತಾವು ಗ್ರಾಮದ ದೈವಗಳಾಗಿವೆ. ಗ್ರಾಮದಲ್ಲಿ ಮಲಿಯರು ನೆಲೆಸಿದ್ದಾರೆ. ಗ್ರಾಮದ ಮೇರಿಯಂಡ ಕುಟುಂಬದ ಐನ್‌ಮನೆಯಲ್ಲಿ ಮಂದಣಮೂರ್ತಿ, ಕರಿಬಾಳ, ನುಚ್ಚುಟೆ, ಕುಳಿಯ, ಬೈರವ, ಚೌಂಡಿ, ಅಪ್ಪಯ್ಯ ಅಜ್ಜಪ್ಪ, ಕುಞ್ಞ ಅಜ್ಜಪ್ಪ ಮತ್ತು ನರಿಪೂದ ತೆರೆಯನ್ನು ಮಲಿಯರು ಕಟ್ಟುತ್ತಾರೆ.

**ಯವಕಪಾಡಿ**

ನಾಲ್‌ನಾಡಿಗೆ ಒಳಪಡುವ ಯವಕಪಾಡಿ ಗ್ರಾಮವು ಮಡಿಕೇರಿ ತಾಲೂಕಿನಲ್ಲಿದೆ. ಗ್ರಾಮದ ಪ್ರಮುಖ ದೇವತೆಗಳು ಪನ್ನಂಗಾಲತಮ್ಮೆ ಮತ್ತು ನೆಟ್ಟ್‌ಮಾಡ್ ಭಗವತಿ. ಫೆಬ್ರವರಿ ೯ ರಿಂದ ೧೨ರವರೆಗೆ ನೆಟ್ಟ್‌ಮಾಡ್ ಭಗವತಿ ಉತ್ಸವ ನಡೆಯುತ್ತದೆ. ಈ ಸಂದರ್ಭದಲ್ಲಿ ಕಲ್ಯಾಟಜ್ಜಪ್ಪ, ಕರಿಚಾವುಂಡಿ, ವಿಷ್ಣುಮೂರ್ತಿ ತೆರೆ ಹಾಗೂ ಮೇಲೇರಿ ಆಚರಣೆಯನ್ನು ಮಲಿಯರು ನಡೆಸುತ್ತಾರೆ.

**ಹಾತೂರು**

ಹಾತೂರು ಗ್ರಾಮವು ವಿರಾಜಪೇಟೆ ತಾಲೂಕಿನಲ್ಲಿದೆ. ವಿರಾಜಪೇಟೆ ಗೋಣಿಕೊಪ್ಪ ರಾಜ್ಯ ಹೆದ್ದಾರಿಯ ಸಮೀಪವಿರುವ ಭದ್ರಕಾಳಿ ದೇವರಕಾಡಿನಲ್ಲಿ ವನ ಭದ್ರಕಾಳಿ ಗುಡಿಯಿದೆ. ಊರಿನ ಜನ, ಬನ ಹಾಗೂ ಬೆಳೆಯನ್ನು ಈ ದೈವವು ರಕ್ಷಿಸುತ್ತದೆ ಎಂಬ ನಂಬಿಕೆಯಿದೆ. ಜುಲೈ ತಿಂಗಳ ೧೦ ಮತ್ತು ೧೧ರಂದು ನಡೆಯುವ ವಾರ್ಷಿಕ ಉತ್ಸವದಲ್ಲಿ ಭದ್ರಕಾಳಿ ತೆರೆ ಹಾಗೂ ಅಯ್ಯಪ್ಪ ತೆರೆಯನ್ನು ಪಣಿಕರು ಕಟ್ಟುತ್ತಾರೆ.

**ಹೊದ್ದೂರು**

ಹೊದ್ದೂರು ಗ್ರಾಮದ ಮೂಲ ಹೆಸರು ಪೊದ್ದ್. ಕುಯ್ಯಂಗೇರಿ ನಾಡಿಗೆ ಒಳಪಡುತ್ತದೆ. ಭದ್ರಕಾಳಿ, ಭಗವತಿ, ಚಾಮುಂಡಿ ಹಾಗೂ ಸಾರ್ತಾವು ಗ್ರಾಮದ

ದೈವಗಳಾಗಿವೆ. ಮಾರ್ಚ್ ತಿಂಗಳ ೨೮ ರಿಂದ ಏಪ್ರಿಲ್ ೨ರವರೆಗೆ ಗ್ರಾಮ ದೈವಗಳ ವಾರ್ಷಿಕ ಉತ್ಸವ ನಡೆಯುತ್ತದೆ. ತಕ್ಕ ಮುಖ್ಯಸ್ಥರಾಗಿ ನೆರವಂಡ ಕುಟುಂಬದವರು ಕಾರ್ಯ ನಿರ್ವಹಿಸುತ್ತಾರೆ. ಚೌಂಡಿ ತೆರೆ, ಕಲ್ಯಾಟಜ್ಜಪ್ಪ ತೆರೆ ಹಾಗೂ ವಿಷ್ಣುಮೂರ್ತಿ ತೆರೆಯನ್ನು ಮಲಿಯ ಸಮುದಾಯದವರು ಕಟ್ಟುತ್ತಾರೆ.

**ಕೊನೆ ಟಿಪ್ಪಣಿ**


೧. ರೆವ. ಎಫ್.ಕಿಟ್ಟೆಲ್, ಕನ್ನಡ ಇಂಗ್ಲಿಷ್ ಡಿಕ್ಷನರಿ, ೨೦೧೨(೧೮ ನೇ ಮುದ್ರಣ), ಪು. ೭೪೩

೨. ಎನ್. ಬಸವಾರಾಧ್ಯ(ಸಂ), ಸಂಕ್ಷಿಪ್ತ ಕನ್ನಡ ನಿಘಂಟು, ೨೦೧೧, ಪು. ೫೬೦

೩. ಎಲ್. ಎಸ್. ಶೇಷಗಿರಿರಾವ್(ಸಂ), ಸುಭಾಷ್ ಕನ್ನಡ- ಕನ್ನಡ- ಇಂಗ್ಲಿಷ್ ನಿಘಂಟು, ೨೦೦೮, ಪು. ೨೩೮

೪. ಅದೇ

೫. ಐ. ಮಾ. ಮುತ್ತಣ್ಣ, ಕೊಡವ ಕನ್ನಡ ನಿಘಂಟು, ೧೯೮೩, ಪು. ೯೪

೬. https://en.m.wikipedia.org.

೭. ಬಿ. ಡಿ. ಗಣಪತಿ, ಕೊಡವರು (ಜೀವನ ಮತ್ತು ಪದ್ಧತಿಗಳು), ೧೯೬೭, ಪು.೪೩

೮. ಮೊಗಳ್ಳಿ ಗಣೇಶ್, ದೇಶಿ, ೧೯೯೭, ಪು. ೨೫

೯. ಕನ್ನಡ ವಿಷಯ ವಿಶ್ವಕೋಶ, ಜಾನಪದ, ೨೦೦೬, ಪು. ೬೩

೧೦. ಬಸವರಾಜು ಎಲ್., ಸರಳ ಪಂಪಭಾರತ, ೨೦೦೯(ದ್ವಿತೀಯ ಆವೃತ್ತಿ), ಆಶ್ವಾಸ ೯, ಪದ್ಯ ೫೩, ಪು. ೨೭೭

೧೧. ಅದೇ, ಆಶ್ವಾಸ ೧೦, ಪದ್ಯ ೧೬, ಪು. ೨೯೬

೧೨. ನರಸಿಂಹಾಚಾರ್ ಡಿ. ಎಲ್.(ಸಂ), ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ, ೨೦೧೪ (ಹದಿನೆಂಟನೆಯ ಮುದ್ರಣ), ಪು. ೧೬೨

೧೩. ಸಿ. ಪಿ. ಕೃಷ್ಣಕುಮಾರ್ (ಸಂ), ಜನ್ನನ ಯಶೋಧರ ಚರಿತೆ, (ಒಂದನೆಯ ಅವತಾರ- ಪದ್ಯ ೪೧,೪೨), ೧೯೯೪, ಪು. ೩೯-೪೦

೧೪. ನಡಿಕೇರಿಯಂಡ ಚಿಣ್ಣಪ್ಪ, ಪಟ್ಟೋಲೆ ಪಳಮೆ, ೨೦೦೨, ಪು. ೫೮

೧೫. ಭೀಮಂಡ. ಈ. ಕುಶಾಲಪ್ಪ, ಕೊಡಗು ಚರಿತ್ರೆಯ ಮೇಲೆ ಹೊಸ ಬೆಳಕು, ೨೦೧೬(ದ್ವಿತೀಯ ಮುದ್ರಣ), ಪು. ೨೬೧

೧೬. ಎಂ. ಜಿ ನಾಗರಾಜ್, ಕೊಡಗಿನ ಹಾಲೇರಿ ರಾಜವಂಶವು, ಭಾಗ ೧, ೨೦೦೪, ಪು. ೨೯೧

೧೭. P. S. Appaiah, A History of Kodagu, 2012, P. 355

೧೮. ಎಂ. ಜಿ ನಾಗರಾಜ್, ಕೊಡಗಿನ ಹಾಲೇರಿ ರಾಜವಂಶವು, ಭಾಗ ೧, ೨೦೦೪, ಪು. ೫೦೯

೧೯. ಟಿ. ಪಿ. ರಮೇಶ್, ವಯಸ್ಸು ೬೯, ಸಂಪಾದಕರು, ಗಡಿನಾಡ ಸಂಚಾರಿ ಪತ್ರಿಕೆ, ಮಡಿಕೇರಿ

# ಅಧ್ಯಾಯ ನಾಲ್ಕು
# ತೆರೆಕಟ್ಟುವ ಸಮುದಾಯಗಳ ಲೋಕಾನುಭವ

## ಅಧ್ಯಾಯ ೪

## ತೆರೆ ಕಟ್ಟುವ ಸಮುದಾಯಗಳ ಲೋಕಾನುಭವ

ಕೊಡಗಿನಲ್ಲಿ ಪ್ರಧಾನವಾಗಿ ಕೊಡವರು ಮತ್ತು ಅರೆಭಾಷೆ ಗೌಡರು ತೆರೆಯನ್ನು ಕಟ್ಟಿಸುತ್ತಾರೆ. ತೆರೆಯನ್ನು ಕಟ್ಟುವವರು ಪಣಿಕರು, ಮಲಿಯರು ಮತ್ತು ಬಣ್ಣ ಜನಾಂಗದವರು. ಇವರು ಮೂಲತಃ ಮಲಬಾರ್ ಪ್ರಾಂತ್ಯದಿಂದ ಬಂದವರು. ಅನೇಕ ವರ್ಷಗಳ ಹಿಂದೆ ಕೊಡಗಿಗೆ ಬಂದು ನೆಲೆಸಿರುವರು. ಕೊಡವರ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವರು. ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯವಾಗಿ ಹಿಂದುಳಿದಿರುವರು. ತೆರೆಕಟ್ಟುವುದು ಇವರ ಮೂಲವೃತ್ತಿಯಾಗಿದೆ. ದೈನಂದಿನ ಬದುಕಿಗಾಗಿ ಕೃಷಿ ಕಾರ್ಮಿಕರಾಗಿ ಅಲ್ಲದೆ ಕೃಷಿಯೇತರ ವೃತ್ತಿಗಳನ್ನು ಅವಲಂಭಿಸಿದ್ದಾರೆ. ಈ ಸಮುದಾಯಗಳನ್ನು ಒಟ್ಟಾಗಿ ತೆರೆಕಟ್ಟುವವರು ಅಥವಾ ತೆರೆಕಾರರು ಎಂದು ಕರೆಯುವುದು ವಾಡಿಕೆಯಾಗಿದೆ.

### ೪.೧ ಪಣಿಕರ ದೃಷ್ಟಿ- ಸೃಷ್ಟಿ

ಕೊಡಗಿನಲ್ಲಿ ನೆಲೆಸಿರುವ ಸಣ್ಣ ಸಮುದಾಯವಿದು. ಜಿ. ರಿಕ್ಟರ್ ಅವರು 'ಚಾಕರಿ ಮಾಡುವ ಜಾತಿಗಳು' ವಿಭಾಗದ "ಜಾತಿರಹಿತ ಬುಡಕಟ್ಟು"ಗಳಿಗೆ ಪಣಿಕರು ಮತ್ತು ಕಣಿಯರನ್ನು ಸೇರಿಸುತ್ತಾರೆ. ಇವರನ್ನು ಮಂತ್ರವಾದಿಗಳು ಎಂದಿದ್ದಾರೆ. "ಪಣಿಕರು ಮತ್ತು ಕಣಿಯುರು ವೃತ್ತೀಯವಾಗಿ ಮಂತ್ರವಾದಿಗಳು, ಭವಿಷ್ಯ ಹೇಳುವವರು ಹಾಗೂ ಜ್ಯೋತಿಷಿಗಳು."[೧] ಎಂದು ಕರೆಯುತ್ತಾರೆ.

### ೧. ಪಣಿಕರ ಮೂಲ :

ಪಣಿಕರು ಮಲಬಾರ್ ಪ್ರಾಂತ್ಯದಿಂದ ಬಂದವರು. ಮಲಬಾರ್ ಪ್ರಾಂತ್ಯದ ಮಾಡಾಯಿ ಎಂಬುದು ಇವರ ಮೂಲಸ್ಥಳವಾಗಿದೆ. ಮಾಡಾಯಿ ಮಡಿಯುಂಗೋಲ್ ಎಂಬ ದೈವಕ್ಷೇತ್ರದಲ್ಲಿ ನೆಲೆಸಿದ್ದ 'ಮಡಿಂಞ'' ಎಂಬ ಪಂಗಡದವರೇ ಪಣಿಕರು ಎನ್ನಲಾಗಿದೆ. ಮಾಡಾಯಿಯಲ್ಲಿ ಹಲವು ದೈವಗಳ ನೆಲೆಯಿರುವ ಬಗ್ಗೆ ಕೊಡವ ಜನಪದ ಗೀತೆಗಳಲ್ಲಿ ಉಲ್ಲೇಖವಿದೆ. ಕೊಡಗಿನ ಬಲ್ಲತ್‌ನಾಡ್ ಎಂಬ ಸ್ಥಳದಲ್ಲಿ ನೆಲೆಸಿರುವ ಪೊವ್ವೆದಿಯಮ್ಮೆ ದೈವವನ್ನು ಕುರಿತು ಜನಪದ ಗೀತೆಯಿದೆ. ಇದನ್ನು 'ಬಲ್ಲತ್‌ನಾಡ್ ಪೊವ್ವೆದಿಯಮ್ಮೆರ ಪಾಟ್(ಬಲ್ಲತ್

ನಾಡಿನ ಪೊವ್ವೇದಿ ತಾಯಿಯ ಹಾಡು) ಎಂದು ಕರೆಯುತ್ತಾರೆ. ಆ ಹಾಡು ಹೀಗಿದೆ.

"ಒಂದ್ ಕೇಳಿ ತಕ್ಕರೆ
ಮಟ್ಟಲಾಯಿ ಮಾಡಾಯಿ
ಮಾಡಾಯಿ ತಿರಿಕೆಲ್
ಮಿನ್ನಿಮಾಲೆ ಪೊವ್ವದಿ
ಪತ್ತ್‌ಕೂಟ್ ಪಾತಾಳ
ಒಂದ್ ಅರೆ ನಾಪದೂ
ಇಚ್ಚಕುಳ್ಳ ದೇವಡ.
ಏರ ಕೇಳಿ ಕೇಪಲ
ಆನಗುಂಡ್ ತಕ್ಕರೆ
ಅಲ್ಲಿ ಪೋಯಿ ಬಕ್ಕನ"[೨]

"ಮಲಬಾರ್ ಪ್ರಾಂತ್ಯದ ಮಾಡಾಯಿ ಎಂಬಲ್ಲಿ ಪೊವ್ವದಿಯ ದೇವಾಲಯವಿದೆ. ಅಲ್ಲಿ ತನ್ನ ಸಹಚರರೊಂದಿಗೆ ನೆಲೆಸಿರುವ ಆಕೆಯ ಪ್ರಖ್ಯಾತಿ ಎಲ್ಲೆಡೆ ಹಬ್ಬಿದೆ. ಹಾಗಾಗಿ ನಾವು ಅಲ್ಲಿಗೆ ಹೋಗೋಣ." ಹೀಗೆಂದು ಹಾಡುಗಾರನು ಗ್ರಾಮದ ತಕ್ಕ ಮುಖ್ಯಸ್ಥನಿಗೆ ಹೇಳುವ ವಿಚಾರ ಈ ಹಾಡಿನಲ್ಲಿದೆ.

ಮಲಬಾರ್ ಪ್ರಾಂತ್ಯದ ಮಾಡಾಯಿ ಎಂಬ ಸ್ಥಳವು ಪೊವ್ವೇದಿ ಅಥವಾ ಭಗವತಿ ದೇವಿಯ ಮೂಲಸ್ಥಾನ. ಅಲ್ಲಿ ದೈವಗಳ ಸೇವೆಯನ್ನು ಮಾಡುತಿದ್ದವರು ಪಣಿಕರು. ಐತಿಹ್ಯವೊಂದರ ಪ್ರಕಾರ 'ಮದಮುಳ್ಳೋರ್ ರಾಜ್ಯ' ಎಂದರೆ ಪ್ರಖ್ಯಾತಿಯನ್ನು ಪಡೆದ ರಾಜ್ಯ ಮಲಯಾಳದಿಂದ ಬಂದವರು ಪಣಿಕರು. ಇವರು ಆದಿ ಬಯತ್ತೂರ್ ಕಾರಿಯಾರ್ ಎಂದು ಕರೆಯಲ್ಪಡುವ ಬಯತೂರಪ್ಪ ದೇವರನ್ನು ನೆಲೆಸಲು ಸ್ಥಳ ಬೇಕೆಂದು ಪ್ರಾರ್ಥಿಸುತ್ತಾರೆ. ಈ ಸಂದರ್ಭದಲ್ಲಿ ಬಯತ್ತೂರಪ್ಪನ ದೈವದ ಆವೇಶವನ್ನು ಮೈದುಂಬಿಕೊಳ್ಳುವ ಕೋರತಚ್ಚ ಕೊಡಗಿಗೆ ಹೋಗುವಂತೆ ಸೂಚಿಸುತ್ತಾನೆ. ಅದರಂತೆ ಇವರು ಕೊಡಗಿಗೆ ಬರುತ್ತಾರೆ. ಅಲ್ಲಿನ ರಾಜನನ್ನು ತಮಗೆ ವಾಸಮಾಡಲು ನೆಲೆ ಬೇಕೆಂದು ಕೇಳಿಕೊಳ್ಳುತ್ತಾರೆ. ಅಲ್ಲಿಂದ ಮುಂದೆ ಕಾವೇರಿ ಮಾತೆಯ ಕ್ಷೇತ್ರಕ್ಕೆ ತೆರಳಿ ತಮಗೆ ಏಳು ಸ್ಥಾನಗಳನ್ನು ಕರುಣಿಸುವಂತೆ ಬೇಡುತ್ತಾರೆ.

ಮುಂದುವರೆದು ಕೊಡಗಿನ ಬೇತ್ ಗ್ರಾಮದ ಮಕ್ಕಿ ಎಂಬಲ್ಲಿ ನೆಲೆಸಿರುವ ಮಕ್ಕಿ ಸಾರ್ತಾವು ದೈವದ ನೆಲೆಗೆ ತೆರಳುತ್ತಾರೆ. ಇವರನ್ನು ಕುರಿತು "ಅರಿಯೆಳುತ್ತುಂ ಕುರಿಯೆಳುತ್ತುಂ ಕುಯ್ಯತ್ತುಂ ನೆಲೆಕೊಂಡ್ ತಣ್‌ಪ್‌ಕುಳ್‌ಪ್ ಉಳ್ಳೋರ್ ಬಾಕಾಡ್ ಬನತ್ತಿಲ್ ಆರ್‌ನಾಟ್‌ಕ್ ನೂರ್ ವೇಷಂ ನೂಯಿಟೊಂದ್ ಅವತಾರ ತಾಳಿ."[೩]

ಅಂದರೆ ಜೋತಿಷ್ಯ ಹೇಳುವ ಹಾಗು ತೆರೆಯನ್ನು ಕಟ್ಟುವ ನೀವು ಆರು ನಾಡಿಗೆ ಒಳಪಡುವ ಗ್ರಾಮುಗಳಲ್ಲಿ ನೂರು ವಿಧದ ವೇಷವನ್ನು ಧರಿಸಿ ನೂರೊಂದು ಅವತಾರ ತಾಳುವಂತಾಗಲಿ ಎಂದು ಮಕ್ಕಿಶಾಸ್ತಾವು ದೈವವು ಹರಸುತ್ತದೆ. ಈ ಹಿನ್ನೆಲೆಯಲ್ಲಿ ಪಣಿಕರು ಕೊಡಗಿನಲ್ಲಿ ಬಂದು ನೆಲೆಸಿರುತ್ತಾರೆ.

ಕೊಡಗಿನ ಅಯ್ಯಂಗೇರಿ ಗ್ರಾಮದ ಚರ್ವಂಗಾಲಕೇರಿ ಪಣಿಕರ ಮೂಲಸ್ಥಾನ. ಕೊಡಗಿಗೆ ಬಂದ ಇವರು ಮೊದಲು ನೆಲೆಸಿದ್ದು ಈ ಊರಿನಲ್ಲಿ ಎನ್ನಲಾಗುತ್ತದೆ. ಪಣಿಕರ ಪ್ರಧಾನ ವೃತ್ತಿ ತೆರೆಕಟ್ಟುವುದು. ಇದರೊಂದಿಗೆ ಮಂತ್ರ, ತಂತ್ರ, ಜ್ಯೋತಿಷ್ಯ ಹಾಗು ಜನಪದ ವೈದ್ಯ ಪದ್ಧತಿಯಲ್ಲೂ ನುರಿತವರಾಗಿದ್ದಾರೆ. ಪಣಿಕರಿಗೂ ಕೊಡವರಂತೆಯೇ 'ಮನೆಪೆದ'(ಮನೆತನದ ಹೆಸರು)ಗಳು ಇವೆ. ಮಡಿಯಂಡ, ದೇವಮಕ್ಕಡ, ಚೀಯಮಂಡ, ಪಾನಂದಿರ, ಪೊನ್ನಜೀರ, ಪೊವ್ವೇರಿಯಂಡ, ಪೊನ್ನೇಂಗಡ, ಪಡುವಂಡ, ಪಣಿಕಡ ಇವು ಪ್ರಮುಖ ಮನೆತನಗಳಾಗಿವೆ. ಜಮ್ಮಭೂಮಿ(ಪರಂಪರಾಗತವಾಗಿ, ಜನ್ಮತಃ ಕುಟುಂಬಕ್ಕೆ ಒದಗಿದ; ಪರಬಾರೆ ಮಾಡಲಾಗದ ಜಮೀನು) ಹಾಗು ಹಿರಿಯರು ಕಟ್ಟಿದ ಮೂಲಮನೆಯಾದ ಐನ್‌ಮನೆ ಇದೆ. ಕುಟುಂಬದ ಮೂಲ ಪುರುಷನ ಸ್ಮರಣಾರ್ಥ ಕಟ್ಟಿದ ಕೈಮಡ ಎಂಬ ಪುಟ್ಟನೆಲೆಗಳೂ ಇವೆ. ಇಲ್ಲಿ ವಾರ್ಷಿಕವಾಗಿ ಹಿರಿಯರಿಗೆ 'ಮೀದಿ' ಅಂದರೆ ನೈವೇದ್ಯವನ್ನು ಇಡುತ್ತಾರೆ. ಅಯ್ಯಂಗೇರಿ, ಮುಗುಟಗೇರಿ, ಕುಂದ, ಈಚೂರು, ಅರುವತೊಕ್ಲು, ಅಮ್ಮತ್ತಿ, ಬಿಳುಗುಂದ, ಹೊದವಾಡ, ಕುಟ್ಟಂದಿ, ಪಾಲೂರು, ಸಿಂಗತ್ತೂರು(ಚರಂಡೇಟಿ), ಬಿರುನಾಣಿ, ನಾಪೋಕ್ಲುವಿನ ವಾಟೆಕಾಡ್ ಗ್ರಾಮುಗಳಲ್ಲಿ ನೆಲೆಸಿದ್ದಾರೆ. ಇವರ ಜನಸಂಖ್ಯೆ ಕಡಿಮೆಯಿರುವುದರಿಂದ ಮಲೆಯರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿದ್ದಾರೆ. ಈ ಕಾರಣದಿಂದಾಗಿ ಪಣಿಕರಲ್ಲಿ ಎರಡು ಪಂಗಡಗಳು ಉಂಟಾಗಿದ್ದು; ಇವರ ನಡುವೆ ವೈವಾಹಿಕ ಸಂಬಂಧಗಳು ಸ್ಥಗಿತಗೊಂಡಿವೆ. ಈ ಹಿನ್ನೆಲೆಯಲ್ಲಿ ಎರಡು ಪಂಗಡಗಳು ಕಟ್ಟುವ ತೆರೆಗಳು ವಿಭಿನ್ನವಾಗಿವೆ.

ಪಣಿಕರಲ್ಲಿ ಜನನ ಸಂಬಂಧಿ ಆಚರಣೆಗಳೆಲ್ಲವೂ ಕೊಡವ ಪದ್ಧತಿಯಂತಿವೆ. ಕೊಡವರಂತೆ ಚಂಗಪ್ಪ, ನಾಣಯ್ಯ, ಬೊಳ್ಳಪ್ಪ, ತಂಗಮ್ಮ, ಬೊಳ್ಳಮ್ಮ ಇತ್ಯಾದಿ ಹೆಸರುಗಳನ್ನು ಇಡುತ್ತಾರೆ. ವಿವಾಹದ ಸಂದರ್ಭದಲ್ಲಿ ಕೊಡವ ಸಾಂಪ್ರದಾಯಿಕ ಉಡುಗೆ ಕುಪ್ಯಚೇಲೆಯನ್ನು ಮದುವೆಯ ಗಂಡು ಧರಿಸುತ್ತಾನೆ. ಮದುಮಗಳಿಗೆ ತಾಯಿಯೇ 'ಪತ್ತಾಕ್' ಕಟ್ಟುತ್ತಾಳೆ. ಕೊಡಗಿನ ಎಲ್ಲಾ ಸಮುದಾಯಗಳೊಂದಿಗೆ ಬೆರೆಯುತ್ತಾರಾದರೂ ಕೊಡವರ ಐನ್‌ಮನೆ(ಮೂಲಮನೆ)ಗಳಲ್ಲಿ ಇರುವ ಕನ್ನಿಕಂಬದ ಐಮರ (ಐನ್‌ಮನೆಯ ಪಡಸಾಲೆಯಲ್ಲಿ ಕೂರುವ ಹಲಗೆಯ ಪೀಠ)ದಲ್ಲಿ ಕೂರುವಂತಿಲ್ಲ. ಪೂರ್ವದಲ್ಲಿ ಇಗ್ಗುತಪ್ಪ ದೇವಾಲಯದಲ್ಲಿ

ಚರ್ಮಂಗಾಲ ಪಣಿಕ, ಬಲ್ಲತ್‌ನಾಡಿನ ಮಲೆಯ ಹಾಗೂ ಅಮ್ಮಂಗೇರಿ ಕಣಿಯ ಸಮುದಾಯದವರನ್ನು ಕರೆಸಲಾಗುತ್ತಿತ್ತು. ಅವರವರ ಪದ್ಧತಿಯಂತೆ ಪಂಚಾಂಗ ಪರಿಶೀಲನೆ ಮಾಡಿ ಪುತ್ತರಿ ಹಬ್ಬದ 'ಕೆಟ್ಟ್'(ಕಟ್ಟಳೆ) ಅನ್ನು ನಿರ್ಧರಿಸಲಾಗುತ್ತಿತ್ತು ಎನ್ನಲಾಗುತ್ತದೆ. ಅದರ ಮುಂದುವರಿಕೆಯಂತೆ ಕೊಡಗಿನಲ್ಲಿ ಇಂದಿಗೂ ಅಮ್ಮಂಗೇರಿ ಕಣಿಯರು ಪುತ್ತರಿ ಹಬ್ಬದ ಮುಹೂರ್ತವನ್ನು ನಿಗಧಿ ಪಡಿಸುತ್ತಾರೆ. ಆದರೆ ಮಲಿಯ, ಬಣ್ಣ ಮತ್ತು ಪಣಿಕ ಸಮುದಾಯದವರು ಈ ಕ್ರಿಯೆಯಲ್ಲಿ ಭಾಗವಹಿಸುತ್ತಿಲ್ಲ.

**೨. ಪಣಿಕರು ಕಟ್ಟುವ ತೆರೆಗಳು :**

ಮಂತ್ರವಿದ್ಯೆ, ಜನಪದ ವೈದ್ಯ ಪದ್ಧತಿಯಲ್ಲಿ ಪರಿಣತರಾಗಿರುವ ಪಣಿಕರು ದೇವಕ್ರಿಯೆ ನಡೆಸುವವರು ಎನ್ನುತ್ತಾರೆ. ಅಂದರೆ ತೆರೆಕಟ್ಟುವ ಸಂದರ್ಭದಲ್ಲಿ ಇವರು ಸಾತ್ವಿಕ ಆಹಾರವಾದ ಹಾಲು ಮತ್ತು ಹಣ್ಣುಗಳನ್ನು ಸ್ವೀಕಾರ ಮಾಡುತ್ತಾರೆ. ತೆರೆ ಆಚರಣೆ ಮುಕ್ತಾಯವಾದ ನಂತರ ಆಯಾಯ ದೈವಗಳ ನೆಲೆಗಳಲ್ಲಿ ಪ್ರಾಣಿಗಳ ಬಲಿ ನೀಡುತ್ತಾರೆ. ಪಣಿಕರು ಈ ಕೆಳಗಿನ ಪ್ರಮುಖ ತೆರೆಗಳನ್ನು ಕಟ್ಟುತ್ತಾರೆ.

೧. ಕೇತ್‌ರಪ್ಪ ತೆರೆ
೨. ಸಾರ್ತಾವು ತೆರೆ
೩. ಕಾಡ್ಲಯ್ಯಪ್ಪ ತೆರೆ
೪. ಭಗವತಿ ತೆರೆ
೫. ಭದ್ರಕಾಳಿ ತೆರೆ
೬. ಕುಳಿಯಂದೆರೆ
೭. ಚಾವುಂಡಿ ತೆರೆ
೮. ನುಚ್ಚುಟೆ ತೆರೆ
೯. ಕಾಳಿ ಪೊಲ್‌ತಿ ತೆರೆ
೧೦. ಮಂದಣ ಮೂರ್ತಿ ತೆರೆ
೧೧. ನರಿಪೂದ
೧೨. ಅಜ್ಜಪ್ಪ ತೆರೆ

ತೆರೆಕಟ್ಟುವುದರೊಂದಿಗೆ ಇವರು ಕಾಲುಗಳಲ್ಲಿ ಊತ ಹಾಗು ಸಂಧಿವಾತಗಳ ನಿವಾರಣೆಗೆ 'ಒಡಿಕೆತ್ತುವೊ' ಮತ್ತು 'ಸಂದೊಡಿ' ಆಚರಣೆಯನ್ನು ನಡೆಸುತ್ತಾರೆ. ದುಷ್ಟಶಕ್ತಿ ಹಾಗೂ ಗ್ರಹಗತಿಗಳಿಂದ ಉಂಟಾದ ಅಡೆತಡೆಗಳ ನಿವಾರಣೆಗೆ 'ತಡೆಒಡ್‌ಪ' ಆಚರಣೆ ನಡೆಸುತ್ತಾರೆ. ಕುಳಿಯ ದೈವದ ದೃಷ್ಟಿಯನ್ನು ನಿವಾರಿಸಲು 'ಕುಳಿಯಂಬೆಲಿ' ಆಚರಣೆ ಮಾಡುತ್ತಾರೆ. ದೃಷ್ಟಿ ನಿವಾಳಿಸಲು 'ದೃಷ್ಟಿಬೆಲಿ' ಆಚರಣೆಯನ್ನು ನಡೆಸುತ್ತಾರೆ. ನೂತನ ಮನೆಯ ಗೃಹ ಪ್ರವೇಶದ ಮುನ್ನಾದಿನ

ಮನೆಯಲ್ಲಿ ದುಷ್ಟಶಕ್ತಿಗಳನ್ನು ನಿವಾರಿಸುವ ರಾವು ನೀಕುವೊ ಆಚರಣೆಯನ್ನು ಮಾಡುತ್ತಾರೆ. ಮಾಟಮಂತ್ರಗಳಿಂದಾದ ದೋಷವನ್ನು 'ಚಿದ್ರ ಎಡ್‌ಪೊ' ಆಚರಣೆಯ ಮೂಲಕ ನಿವಾರಿಸುತ್ತಾರೆ. ಪ್ರೇತಗಳನ್ನು ಬಿಡಿಸುವ 'ಕೂಳಿ ಬುಡ್‌ತುವೊ' ಆಚರಣೆಯನ್ನು ನಡೆಸುತ್ತಾರೆ. ಇಂತಹ ಹಲವು ವಿಧದ ಜನಪದ ವೈದ್ಯಪದ್ಧತಿ ಹಾಗೂ ತಾಂತ್ರಿಕ ಆಚರಣೆಗಳನ್ನು ಪಣಿಕರು ನಡೆಸುತ್ತಾರೆ. ದೈನಂದಿನ ಬದುಕಿನಲ್ಲಿ ಕೊಡವ ಭಾಷೆಯನ್ನಾಡುವ ಇವರು ತೆರೆಕಟ್ಟುವ ಸಂದರ್ಭದಲ್ಲಿ ಆಯಾಯ ದೈವಗಳಿಗೆ ಅನುಗುಣವಾಗಿ ಮಲೆಯಾಳಂ ಮತ್ತು ಕೊಡವ ಭಾಷೆಯನ್ನು ಆಡುತ್ತಾರೆ. ಚಾವುಂಡಿ, ಕುಳಿಯಂದೆರೆ, ನುಚ್ಚುಟೆ ಹಾಗೂ ಮುಂದಣಮೂರ್ತಿ ತೆರೆಗಳು ಮಲೆಯಾಳಂ ಭಾಷೆಯಲ್ಲಿ ಭಕ್ತರೊಂದಿಗೆ ಸಂಭಾಷಣೆ ನಡೆಸುತ್ತವೆ. ಅಜ್ಜಪ್ಪ ಮತ್ತು ಕಾಳಿಪೊಲ್‌ತಿ ತೆರೆ ಕೊಡವ ಭಾಷೆಯನ್ನಾಡುತ್ತದೆ. ದೇವತೆರೆ, ಕರಾಳಾ ಚಾವುಂಡಿ, ಕಾಡ್ಲಯ್ಯಪ್ಪ ತೆರೆಗಳು ಸನ್ನೆಯ ಮೂಲಕ ಸಂವಹನ ನಡೆಸುತ್ತವೆ.

**೩. ತೆರೆಪಾಟ್(ತೆರೆಕಟ್ಟುವ ಹಾಡು) :**

ಕೊಡವ ಭಾಷೆಯಲ್ಲಿ ಪಾಟ್ ಎಂಬುದಕ್ಕೆ ಕನ್ನಡದಲ್ಲಿ ಹಾಡು ಎಂದರ್ಥ. ತೆರೆಪಾಟ್ ಎಂದರೆ ತೆರೆಕಟ್ಟುವ ಹಾಡು. ತೆರೆಕಟ್ಟುವ ಮುನ್ನ ತೆರೆಕಾರರು, ಆಚರಣೆಯನ್ನು ನಡೆಸುವ ತಕ್ಕಮುಖ್ಯಸ್ಥರು ಹಾಗೂ ನೆರೆದಿರುವವರೆಲ್ಲಾ ಸೇರಿ ಪ್ರಾರ್ಥಿಸಿ ಅಕ್ಕಿ ಹಾಕುತ್ತಾರೆ. ಇದನ್ನು ತಪ್ಪಡಕ ಕಟ್ಟುವುದು ಎನ್ನುತ್ತಾರೆ. ಅನಂತರ ಇಬ್ಬರು ಹಾಡುಗಾರರ ಎರಡು ತಂಡ ತೆರೆಕಟ್ಟುವ ಹಾಡನ್ನು ಹೀಗೆ ಹಾಡುವರು.

"ಪೊಲಿ ಪೊಲಿಗಾ ದೈವೋಮೆ
ಪೊಲಿಗಾ ದೈವೋ ಮೆ
ವಾಳ್ಗಂ ಪೊಲಿಗಾ ದೈವೋಮೆ
ಪೊಲಿಗಾ ದೈವೋ ಮೆ
ಪೊಲಿ ಪೊಲಿಗಾ ದೈವೋಮೆ
ಪೊನ್ಯತಮ್ಮೆಕೋ
ಪೊಲಿ ಪೊಲಿಗಾ ದೈವೋಮೇ
ಕಳತಮ್ಮೆಕೋ
ವಾಳ್ಗಂ ಪೊಲಿಗಾ ದೈವೋಮೆ
ತುಪ್ಪನಾಣಮ್ಮೆಕೋ
ಪೊಲಿ ಪೊಲಿಗಾ ದೈವೋಮೆ
ಪೊಲಿಗಾ ದೈವೋಮೆ"

ದೈವವೇ ನೀನು ಒಲಿದು ಬಾ. ಪೊನ್ಯ ಎಂಬ ಸ್ಥಳದಲ್ಲಿ ಪೊನ್ಯ ಭಗವತಿಯಾಗಿ

ನೆಲೆಸಿರುವ ದೈವವೇ ನೀನು ಒಲಿದು ಬಾ. ಕಳತ್ ಎಂಬಲ್ಲಿ ನೆಲೆ ನಿಂತಿರುವ ಕಳತ್‌ಭಗವತಿಯಾಗಿ ಒಲಿದು ಬಾ. ತುಪ್ಪನಾಣಿ ಎಂಬಲ್ಲಿ ನೆಲೆಸಿರುವ ತುಪ್ಪನಾಣಿ ಭಗವತಿಯಾಗಿ ಒಲಿದು ಬಾ ದೈವವೇ ಎಂದು ಆಯಾಯ ತೆರೆ ದೈವಗಳ ಹೆಸರನ್ನು ಹೇಳುತ್ತಾ ಪ್ರಾರ್ಥಿಸುತ್ತಾರೆ. ಹೀಗೆ ಹಾಡುತ್ತಾ ಹೋದಂತೆ ತೆರೆಕಟ್ಟುವವನ ಮೈಮೇಲೆ ದೈವದ ಆವಾಹನೆಯಾಗುತ್ತದೆ. ಇದನ್ನು 'ತೆರೆವರಿಯುವ' ಎನ್ನುತ್ತಾರೆ.

**೪. ಪಣಿಕ ಸಮುದಾಯದ ಸಾಮಾಜಿಕ ಬದುಕು :**

ವಿಶ್ವದಲ್ಲೇ ಭಾರತೀಯ ಸಮಾಜವು ಬಹು ವಿಶಿಷ್ಟವಾದ ರೀತಿಯಲ್ಲಿ ರಚನೆಯಾಗಿದೆ. ಸಮಾಜದಲ್ಲಿನ ಬಹುಸಂಖ್ಯಾತ ಸಮುದಾಯಗಳು ತಮ್ಮ ಅಲೆಮಾರಿತನದ ಪ್ರವೃತ್ತಿಯನ್ನು ಕೊನೆಗಾಣಿಸಿ ನೆಲೆಗೊಂಡಿರುವುದನ್ನು ನಾವಿಲ್ಲಿ ನೋಡುತ್ತೇವೆ. ಅಂತಹ ಸಮುದಾಯಗಳಲ್ಲಿ ಪಣಿಕ ಸಮುದಾಯವು ಒಂದು. ಪೂರ್ವದಲ್ಲಿ ಅಲೆಮಾರಿ ಬದುಕನ್ನು ಬದುಕುತ್ತಿದ್ದ ಪಣಿಕರು ಪ್ರಸ್ತುತದಲ್ಲಿ ಕೊಡವರ ಸಂಸ್ಕಾರಗಳನ್ನು ಅಳವಡಿಸಿಕೊಂಡಿದ್ದಾರೆ.

**ಅ. ಜೀವನಾವರ್ತನದ ಆಚರಣೆಗಳು**

**ಪ್ರಸವ :**

ಪಣಿಕರಲ್ಲಿ ಮೊದಲ ಪ್ರಸವ ತವರಿನಲ್ಲೇ ಮಾಡುವರು. ಗರ್ಭಿಣಿಯನ್ನು 'ಕುಳಿಯಮೆಕರ್ತಿ' ಎಂದು ಕರೆಯುತ್ತಾರೆ. ಏಳನೇ ತಿಂಗಳಿನಲ್ಲಿ ತವರುಮನೆಯವರು ಬುತ್ತಿಯನ್ನು ತಂದು ಆಕೆಗೆ ಉಣಬಡಿಸುತ್ತಾರೆ. ಇದನ್ನು 'ಕೂಪದಿಕೂಳ್' ಎನ್ನುತ್ತಾರೆ. ಅದು ಮೊಸರನ್ನ, ಹಾಗಲಕಾಯಿ ಪಲ್ಯ, ಸೊಪ್ಪು ಪಲ್ಯ, ತರಕಾರಿ ಸಾರು, ಎರಡು ಮೂರು ವಿಧದ ಮಾಂಸಾಹಾರಗಳನ್ನು ಒಳಗೊಂಡಿರುತ್ತದೆ. ತವರು ಮನೆಯ ಬುತ್ತಿಯ ನಂತರ ಬಂಧುಮಿತ್ರರು 'ಕೂಪದಿಕೂಳ್' ತರುತ್ತಾರೆ. ಏಳನೇ ತಿಂಗಳಲ್ಲಿ ಗಂಡನ ಮನೆಯಿಂದ ತವರು ಮನೆಗೆ ಕಳುಹಿಸುತ್ತಾರೆ. ಗರ್ಭವತಿಯನ್ನು ಪೌಷ್ಟಿಕ ಆಹಾರ ನೀಡಿ ಪ್ರೀತಿಯಿಂದ ನೋಡಿಕೊಳ್ಳುವರು.

**ಜನನ :**

ಪಣಿಕರು ಗಂಡು ಮಗುವಿಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಾರೆ. ಗಂಡು ಮಗು ಹುಟ್ಟಿದ ತಕ್ಷಣ ಹರಳು ಗಿಡದ ದಂಟಿನಿಂದ ಮಾಡಿದ ಬಿಲ್ಲು ಬಾಣಗಳನ್ನು ಮಗುವಿನ ಕೈಯಲ್ಲಿ ಹಿಡಿಸುತ್ತಾರೆ. ಹೆಣ್ಣಾದರೆ 'ತಳಿಯಮಣಿ' ಎಂಬ ಕಂಚಿನ ತಟ್ಟೆಯನ್ನು ಬಡಿದು ನಾದ ಮಾಡುತ್ತಾರೆ. ಇಂದು ಆಸ್ಪತ್ರೆಗಳಲ್ಲಿ ಹೆರಿಗೆ ಆಗುವುದರಿಂದ ಇಂತಹ ಪದ್ಧತಿಗಳು ಮರೆಯಾಗುತ್ತಿವೆ. ಹುಟ್ಟಿದ ಮಗುವನ್ನು ಹದವಾದ ನೀರಿನಲ್ಲಿ ಸ್ನಾನಮಾಡಿಸಿ ಸ್ವಲ್ಪ ಬೆಲ್ಲ, ತುಪ್ಪ ಮತ್ತು ಕರಿಮೆಣಸಿನ ಪುಡಿಯನ್ನು ಮಿಶ್ರಮಾಡಿ ತಿನ್ನಿಸುತ್ತಾರೆ. "ಬೆಲ್ಲ ಅಲಿವನ್ನಕೆ ಅಲಿ, ನೈಯಿ ಉರುವನ್ನಕೆ ಉರ್, ಮಳುರನ್ನೆಕೆ ಕಡ್‌ಪ ಆಯಿತಿರ್" ಎಂದು ಹರಸುತ್ತಾರೆ.

ಬೆಲ್ಲದಂತೆ ಸಿಹಿಯಾಗಿ, ತುಪ್ಪ ಕರಗುವಂತೆ ಬೇರೆಯವರ ಕಷ್ಟಗಳಿಗೆ ಕರಗುವ ಮನೋಭಾವ, ಕರಿಮೆಣಸಿನ ಖಾರದಂತೆ ನೀತಿಮಾರ್ಗದಲ್ಲಿ ಕಾಠಿಣ್ಯತೆ ಇರಲಿ ಎಂಬುದು ಇದರ ಆಶಯವಾಗಿದೆ.

**ಬಾಣಂತಿ ಮತ್ತು ಮಗುವಿನ ಆರೈಕೆ :**

ಬಾಣಂತಿಗೆ ನಾಟಿಮದ್ದನ್ನು ನೀಡುತ್ತಾರೆ. ಗಾಳಿಸೊಪ್ಪು, ಹಸಿ ಅರಶಿನ, ಬೆಳ್ಳುಳ್ಳಿ, ಓಮದಕಾಳು, ನಂಜಿನ ಬೀಜವನ್ನು ಅರೆದು ರಸವನ್ನು ಕುಡಿಸುತ್ತಾರೆ. ಬಿಸಿ ಅನ್ನದೊಂದಿಗೆ ಹಸಿ ಈರುಳ್ಳಿ, ಹಾಗಲಕಾಯಿ ಪಲ್ಯ, ಗಣಿಕೆಸೊಪ್ಪಿನ ಪಲ್ಯ, ಕರಿಬಾಳೆ ಪಲ್ಯ, ಕರಿಮೆಣಸಿನ ಪುಡಿ, ಹಸುವಿನ ತುಪ್ಪವನ್ನು ಬಾಣಂತಿಯು ಪಥ್ಯಾಹಾರವಾಗಿ ನೀಡುವರು. ಊಟದ ನಂತರ ಎಲೆಅಡಿಕೆ ಸೇವನೆ ಕಡ್ಡಾಯವಾಗಿದ್ದು; ಹಲ್ಲುಗಳಿಗೆ ಶಕ್ತಿ ದೊರೆಯುತ್ತದೆ ಎಂಬ ನಂಬಿಕೆ ಪಣಿಕರಲ್ಲಿದೆ. ಬಾಣಂತಿಯ ದೇಹಕ್ಕೆ ಎಣ್ಣೆ ಹಚ್ಚಿ ಬೆಂಕಿಯ ಶಾಖ ನೀಡಿ ಬಿಸಿ ನೀರಿನಲ್ಲಿ ಸ್ನಾನ ಮಾಡಿಸಲಾಗುತ್ತದೆ. ಸ್ನಾನದ ನಂತರ ನೊಕ್ಕಿ ಸೊಪ್ಪಿನ ಹೊಗೆಯನ್ನು ಕೊಡುತ್ತಾರೆ. ಇದು ರೋಗ ರುಜಿನಗಳಿಂದ ದೂರವಿರಿಸುವಲ್ಲಿ ಸಹಾಯಕವಾಗಿದೆ. ಬಾಣಂತಿಯ ಕೋಣೆ ಶುಭ್ರವಾಗಿರಬೇಕು. ಬೆಳಗ್ಗೆ ಮಗುವಿಗೆ ಖಾಲಿ ಹೊಟ್ಟೆಗೆ ಹಾಗಲಕಾಯಿ ರಸ, ಕಚ್ಚುಟೆ ಎಂಬ ಸ್ಥಳೀಯ ಗಿಡದ ಹಣ್ಣಿನ ರಸ, ತೋರಳೆಸೊಪ್ಪಿನ ರಸವನ್ನು ನೀಡುತ್ತಾರೆ. ಒಂದು ತಿಂಗಳ ನಂತರ ಮಗುವಿಗೆ ಬಜೆ, ಜಾಯಿಕಾಯಿಗಳನ್ನು ಬೆಣ್ಣೆಯೊಂದಿಗೆ ಅರೆದು ತಿನ್ನಿಸುತ್ತಾರೆ. ಕಣ್ಣಿಗೆ ಕಚ್ಚುಟೆ ಸೊಪ್ಪಿನ ರಸವನ್ನು ಹಿಂಡುವುದರಿಂದ ದೃಷ್ಟಿದೋಷಗಳು ಬರುವುದಿಲ್ಲವೆಂಬ ನಂಬಿಕೆ ಇದೆ. ಬಾಣಂತಿಯ ಹಾಸಿಗೆಯಡಿಯಲ್ಲಿ ಕಬ್ಬಿಣ, ಬೆತ್ತದ ಕೋಲನ್ನು ಇಟ್ಟರೆ ದುಷ್ಟಶಕ್ತಿಗಳಿಂದ ರಕ್ಷಣೆ ಹಾಗು ದೃಷ್ಠಿಯನ್ನು ನಿವಾರಿಸುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಹೆರಿಗೆಯ ನಂತರದ ಹನ್ನೆರಡು ದಿನಗಳು ಸೂತಕದ ಅವಧಿಯಾಗಿರುತ್ತದೆ. ಈ ಅವಧಿಯಲ್ಲಿ ಇಡೀ ಕುಟುಂಬವು ಗ್ರಾಮದ ಯಾವುದೇ ಹಬ್ಬಗಳಲ್ಲಿ ಭಾಗಿಯಾಗುವಂತಿಲ್ಲ. ಊರಿನ ದೇವಸ್ಥಾನಗಳಿಗೆ ಹೋಗಬಾರದು ಎಂಬ ನಿಯಮಗಳಿವೆ.

**ನಾಮಕರಣ :**

ಮಗು ಜನಿಸಿದ ಹನ್ನೆರಡನೆಯ ದಿನ ನಾಮಕರಣ ಶಾಸ್ತ್ರವನ್ನು ಮಾಡುತ್ತಾರೆ. ಆ ದಿನವೇ ಮಗುವನ್ನು 'ತೊಟ್ಟ್‌ಕ್‌ಡುವ'(ತೊಟ್ಟಿಲಿಗೆ ಹಾಕುವ) ಆಚರಣೆಯಿರುತ್ತದೆ. ಸಾಮಾನ್ಯವಾಗಿ ಕೊಡವ ಹೆಸರುಗಳಾದ ಮುದ್ದಪ್ಪ, ಪೊನ್ನಪ್ಪ, ಮಂದಪ್ಪ, ಪೂಣಚ್ಚ, ಬೋಪಣ್ಣ, ಪೊನ್ನಮ್ಮ, ಕಾವೇರಮ್ಮ, ಚೋಂದಮ್ಮ ಇತ್ಯಾದಿ ಹೆಸರುಗಳನ್ನಿಡುತ್ತಾರೆ. ತಾಯಿ ಮಗು ಇಬ್ಬರನ್ನೂ ಸ್ನಾನ ಮಾಡಿಸಿ, ಹೊಸ ಬಟ್ಟೆಯನ್ನು ತೊಡಿಸುತ್ತಾರೆ. ನೆಲ್ಲಕ್ಕಿ ನಡುಬಾಡೆಯಲ್ಲಿ ದೇವರನ್ನು ಪ್ರಾರ್ಥಿಸಿ

ಮಗುವಿನ ಸೊಂಟ, ಕೈ, ಕಾಲುಗಳಿಗೆ ಅರ್‌ಮಂಜಿ ಕೇರ್ ಎಂಬ ಕಪ್ಪುದಾರವನ್ನು ಕಟ್ಟುತ್ತಾರೆ. ಇದರಿಂದ ದೃಷ್ಟಿ ತಾಗುವುದಿಲ್ಲ ಎಂಬ ನಂಬಿಕೆ ಇದೆ. ಮಗುವನ್ನು ತೊಟ್ಟಿಲಿಗೆ ಹಾಕುವ ಮುನ್ನ ಗುಂಡುಕಲ್ಲನ್ನು ಮೂರು ಬಾರಿ ತೊಟ್ಟಿಲಿಗೆ ಹಾಕಿ ನಂತರ ತೆಗೆದಿಡುತ್ತಾರೆ. "ಕಲ್ಲಾಯಿಸತ್ ಬದ್‌ಕ್"(ಕಲ್ಲಿನಂತೆ ಧೀರ್ಘಕಾಲ ಬದುಕು)ಎಂದು ಹಾರೈಸುತ್ತಾರೆ. ಈ ಆಚರಣೆಯನ್ನು ಮಗುವಿನ ಅಜ್ಜಿ ಮೂವರು ಮುತ್ತೈದೆಯರೊಂದಿಗೆ ನಡೆಸುವಳು. ತೊಟ್ಟಿಲಿನಲ್ಲಿ ಮಗುವನ್ನು ಮಲಗಿಸಿದ ನಂತರ ಕಿವಿಯ ಬಳಿ ಮೂರು ಬಾರಿ ಹೆಸರನ್ನು ಹೇಳಿ "ಪಾಲ್‌ಕೂಳುಂಬಕ್ ಏಳ್" (ಹಾಲನ್ನವನ್ನು ಉಣ್ಣಲು ಏಳು) ಎನ್ನುತ್ತಾರೆ. ಹಾಲಿನ ಕೆನೆ ಮತ್ತು ಅನ್ನವನ್ನು ಅರೆದು ಚಿನ್ನದ ನಾಣ್ಯ ಅಥವಾ ಆಭರಣದಲ್ಲಿ ತಿನ್ನಿಸಿ" ಪೊನ್ನ್‌ರಂತ ಬದ್‌ಕ್ ಬಾಳ್" ಅಂದರೆ ಚಿನ್ನದಂತ ಬದುಕನ್ನು ಬಾಳು ಎಂದು ಹರಸುತ್ತಾರೆ. ನಂತರ ನೆಂಟರಿಷ್ಟರೆಲ್ಲಾ ಮಗುವಿನ ಕೈಗೆ ಹಣವನ್ನು ಕೊಟ್ಟು ಹರಸುತ್ತಾರೆ.

ಇತ್ತೀಚಿನ ದಿನಗಳಲ್ಲಿ ಹೆಸರಿಡುವ ಆಚರಣೆಯನ್ನು ಅರವತ್ತು ದಿನಗಳ ನಂತರ ಮಾಡಲಾಗುತ್ತಿದೆ. ನಾಮಕರಣದ ನಂತರ ಬಾಣಂತಿಯು 'ನೀರೆಡ್‌ಪೊ' ಆಚರಣೆಯನ್ನು ಮಾಡಬೇಕಾಗುತ್ತದೆ. ಬಾಣಂತನದ ವಿಶ್ರಾಂತಿಯ ನಂತರ ದೈನಂದಿನ ಕಾರ್ಯಗಳಿಗೆ ಮೊದಲು ಗಂಗಾ ಪೂಜೆಯನ್ನು ಮಾಡಲಾಗುತ್ತದೆ. ಕುಟುಂಬದ ಹೆಂಗಳೆಯರೊಂದಿಗೆ ಬಾವಿಯ ಬಳಿ ತೆರಳುವ ಬಾಣಂತಿಯು ದೇವರನ್ನು ಸ್ತುತಿಸಿ ಅಕ್ಕಿ ಹಾಕಿ ಮೂರು ವೀಳ್ಯದೆಲೆ ಮತ್ತು ಅಡಿಕೆಯನ್ನು ಬಾವಿಗೆ ಬಿಡುವಳು. ನೀರನ್ನು ಸೇದಿ ಮೂರು ಗುಟುಕು ನೀರು ಕುಡಿದು ಎರಡು ಚೆಂಬುಗಳಲ್ಲಿ ನೀರು ತುಂಬಿ ತಲೆಯ ಮೇಲೆ ಒಂದರ ಮೇಲೊಂದಿರಿಸಿ ಹೊತ್ತು ತರುವಳು. ನೆಲ್ಲಕ್ಕಿ ನಡುಬಾಡೆ(ಮಧ್ಯದ ಕೋಣೆ)ಯಲ್ಲಿ ಉರಿಯುತ್ತಿರುವ ದೀಪದಡಿಯಲ್ಲಿ ನೀರನ್ನು ಇಳಿಸಿ ದೀಪಕ್ಕೆ ಅಕ್ಕಿ ಹಾಕಿ ನಮಸ್ಕರಿಸುವಳು. ಹಿರಿಯರ ಕಾಲು ಮುಟ್ಟಿ ಆಶೀರ್ವಾದ ಪಡೆಯುವಳು.

**ಋತುಮತಿ ಆಚರಣೆ :**

ನಿಸರ್ಗ ನಿಯಮದಂತೆ ಹನ್ನೆರಡರಿಂದ ಹದಿನಾರನೆಯ ವಯಸ್ಸಿನಲ್ಲಿ ಹೆಣ್ಣುಮಕ್ಕಳು ಮೈನೆರೆಯುತ್ತಾರೆ. ಇದನ್ನು ಮುಟ್ಟಾಗುವುದು, ಪುಷ್ಪವತಿಯಾಗುವುದು, ರಜಸ್ವಲೆಯಾಗುವುದು, ಋತುಮತಿಯಾಗುವುದು, ದೊಡ್ಡವಳಾಗುವುದೆಂದು ಕರೆಯುವುದು ವಾಡಿಕೆ. ಈ ಸಂದರ್ಭದಲ್ಲಿ ಜನಪದರು ವಿಧವಿಧವಾದ ಆಚರಣೆಯನ್ನು ಮಾಡುವರು. ಪಣಿಕರಲ್ಲಿ ಇದಕ್ಕೆ ಸಂಬಂಧಿಸಿದಂತೆ ಯಾವುದೇ ಕಟ್ಟುಪಾಡುಗಳಿಲ್ಲ. ಆದಷ್ಟು ಗೌಪ್ಯತೆಯನ್ನು ಕಾಪಾಡಿಕೊಳ್ಳುತ್ತಾರೆ. ಹನ್ನೊಂದು ದಿನಗಳವರೆಗೆ ಎಣ್ಣೆಸ್ನಾನ ಮಾಡಿಸುತ್ತಾರೆ. ಬಾಣಂತಿಗೆ ನೀಡುವಂತಹ ಪೌಷ್ಟಿಕ ಪಥ್ಯಾಹಾರವನ್ನು ನೀಡಲಾಗುತ್ತದೆ.

**ಮದುವೆ :**

ವಿವಾಹವು ಕುಟುಂಬ ಜೀವನಕ್ಕೆ ಪ್ರೇರಣೆ ನೀಡುತ್ತದೆ. ಆದುದರಿಂದ ಇದನ್ನು ಎಲ್ಲಾ ಸಂಸ್ಕಾರಗಳ ಆರಂಭ ಬಿಂದು ಎನ್ನಲಾಗುತ್ತದೆ. ಪಣಿಕರ ಮದುವೆಯ ಆಚರಣೆ ಕೆಲವು ವೈಶಿಷ್ಟ್ಯತೆಗಳಿಂದ ಕೂಡಿದೆ. ವರನ ಮನೆಯಲ್ಲಿ ವರನ ವಿವಾಹ ಶಾಸ್ತ್ರಗಳೂ, ವಧುವಿನ ಮನೆಯಲ್ಲಿ ವಧುವಿನ ವಿವಾಹ ಶಾಸ್ತ್ರಗಳು ನಡೆಯುತ್ತವೆ. ಅನಂತರ ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಬಂದು ಹೆಣ್ಣನ್ನು ಕರೆದುಕೊಂಡು ಬರುತ್ತಾರೆ. ಮದುವೆಗಳಲ್ಲಿ ಬ್ರಾಹ್ಮಣ ಪೌರೋಹಿತ್ಯವಿಲ್ಲ. ಗಂಡು ಹೆಣ್ಣಿಗೆ ತಾಳಿ ಕಟ್ಟುವ ಪದ್ಧತಿಯಿಲ್ಲ. ಕೊಡವರ ಪದ್ಧತಿಯಂತೆ ವಧುವಿನ ತಾಯಿ ಮದುವೆಯಂದು 'ಪತ್ತಾಕ್' ಎಂಬ ಸಾಂಪ್ರದಾಯಿಕ ಒಡವೆಯನ್ನು ಹಾಕುತ್ತಾಳೆ. ಬುಡಕಟ್ಟು ಮೂಲದ ಪ್ರಾಚೀನ ಪದ್ಧತಿಯ ಪ್ರಭಾವವನ್ನು ಇವರ ಮದುವೆಗಳಲ್ಲಿ ಕಾಣಬಹುದು.

**ಕನ್ನಿಮಂಗಲ :**

ಪಣಿಕರು ವಿವಾಹವನ್ನು ಮಂಗಲ ಎನ್ನುತ್ತಾರೆ. ಹುಡುಗ ಮತ್ತು ಹುಡುಗಿ ಪ್ರಾಯಕ್ಕೆ ಬಂದ ನಂತರ ಏರ್ಪಡಿಸುವ ಮದುವೆ ಕನ್ನಿಮಂಗಲ. ಕುಟುಂಬದಲ್ಲಿ ಗಂಡು ಹೆಣ್ಣು ಪ್ರೌಢಾವಸ್ಥೆಗೆ ಬಂದಾಗ ಅವರ ಮದುವೆಯ ಜವಾಬ್ದಾರಿ ಆ ಕುಟುಂಬದಾಗಿರುತ್ತದೆ. ಸಂಬಂಧಗಳು ಬಂದಾಗ ಹೂ ತೆಗೆಯುವುದು, ಜಾತಕ ನೋಡುವುದು, ರಾಶಿ ಮಡಗುವುದರ ಮೂಲಕ ಪರಿಶೀಲಿಸಲಾಗುತ್ತದೆ. ದೇವಸ್ಥಾನಗಳಲ್ಲಿ ಹೂ ತೆಗೆಯುವಾಗ ಬಿಳಿಯ ಹೂ ಬಂದರೆ ಶುಭ, ಕೆಂಪು ಹೂ ಬಿದ್ದರೆ ಅಶುಭವೆಂಬ ನಂಬಿಕೆಯಿದೆ. ಇತ್ತೀಚೆಗೆ ಈ ಪದ್ಧತಿ ಕಡಿಮೆಯಾಗಿದೆ. ಜಾತಕ ನೋಡುವಾಗ ಗಂಡಿನ ಜಾತಕವನ್ನು ಹೆಣ್ಣಿನ ಮನೆಯವರು ತರಿಸಿ ನೋಡುತ್ತಾರೆ. ಆದರೆ ಹೆಣ್ಣಿನ ಜಾತಕವನ್ನು ಗಂಡಿನ ಮನೆಗೆ ಕಳುಹಿಸುವಂತಿಲ್ಲ. ಜಾತಕವಿಲ್ಲದ ಸಂದರ್ಭದಲ್ಲಿ ಕಣಿಯನಿಂದ ರಾಶಿ ನೋಡಿಸುತ್ತಾರೆ. ಗಂಡು ಹೆಣ್ಣಿನ ಜಾತಕ ಸರಿ ಹೊಂದಿದಾಗ ಎರಡೂ ಕಡೆಯವರು ಒಪ್ಪಿ ವಿವಾಹ ಮಾಡಿಕೊಳ್ಳುವರು. ಗಂಡಿನ ಕಡೆಯವರು ಸಂಬಂಧಿಕರೊಡನೆ ಹೆಣ್ಣಿನ ಮನೆಗೆ ಹೋಗಿ ಲಗ್ನ ನಿಶ್ಚಯಿಸಿ ಲಗ್ನಪತ್ರಿಕೆ ಬರೆಸುತ್ತಾರೆ. ನೆಲ್ಲಕ್ಕಿ ನಡುಬಾಡೆಯಲ್ಲಿ ತಳಿಯತಕ್ಕಿ ಬೊಳ್‌ಚದ ಮುಂದೆ ನಿಂತು ಮಾತನಾಡಿ ಅಕ್ಕಿಹಾಕಿ ದೀಪಕ್ಕೆ ನಮಸ್ಕರಿಸುತ್ತಾರೆ. ಸಾಕ್ಷಿಯಾಗಿ ಐದು ಹಣ ಅಥವಾ ಒಂದು ರೂಪಾಯಿಯನ್ನು ತಳಿಯತಕ್ಕಿ ಬೊಳ್‌ಚದಲ್ಲಿ ಇಡುತ್ತಾರೆ. ಈ ಆಚರಣೆಯನ್ನು 'ಮಂಗಲ ಕುರಿಪೊ' ಎನ್ನುತ್ತಾರೆ. ಈ ಆಚರಣೆಯ ನಂತರ ಮದುಮಕ್ಕಳು ಶವ ನೋಡಬಾರದು, ಹೊಳೆ ದಾಟಬಾರದು, ತಿಥಿಕರ್ಮಾಂತರಕ್ಕೆ ಹೋಗಬಾರದು. ಮದುವೆಗೆ ಹೋದರೆ ಮಂಟಪದಲ್ಲಿ ವಧುವರರ ತಲೆಗೆ ಅಕ್ಕಿ ಹಾಕಬಾರದೆಂಬ ನಿಷೇಧಗಳಿವೆ.

ಪಾರಂಪರಿಕವಾಗಿ ವಧುವರರ ವಿವಾಹ ಸಂಬಂಧ ಶಾಸ್ತ್ರಗಳು ಅವರವರ ಮನೆಯಲ್ಲಿಯೇ ನೆರವೇರುತ್ತವೆ. ನಂತರ ವರನು ವಧುವಿನ ಮನೆಗೆ ತೆರಳುತ್ತಾನೆ. ಅಲ್ಲಿ ದಂಪತಿ ಮುಹೂರ್ತ ನಡೆಸಿದ ನಂತರ ವರನು ವಧುವನ್ನು ತನ್ನ ಮನೆಗೆ ಕರೆದೊಯ್ಯುತ್ತಾನೆ. ಉಳಿದ ಆಚರಣೆಗಳು ವರನ ಮನೆಯಲ್ಲಿ ಜರುಗುತ್ತವೆ. ಇತ್ತೀಚೆಗೆ ಮದುವೆಗಳು ಛತ್ರಗಳಲ್ಲಿ ನಡೆಯುವುದರಿಂದ ಎಲ್ಲಾ ಆಚರಣೆಗಳು ಅಲ್ಲಿಯೇ ನಡೆಯುತ್ತವೆ.

**ಊರ್‌ಕೂಡುವೊ (ವಿವಾಹದ ಸಿದ್ಧತೆಗಾಗಿ ಊರಿನವರು ಸೇರುವ ದಿನ) :**

ವಿವಾಹದ ಹಿಂದಿನ ದಿನವನ್ನು 'ಊರ್‌ಕೂಡುವೊ' ಎನ್ನುತ್ತಾರೆ. ಇದನ್ನು ಕರಿಕ್‌ಮುರಿಪೊ(ತರಕಾರಿ ಹೆಚ್ಚುವ) ದಿನ, ಪಂದಪಣಿ(ಚಪ್ಪರದ ಕೆಲಸದ) ದಿನವೆಂದೂ ಕರೆಯಲಾಗುತ್ತದೆ. ಗ್ರಾಮದ ಹಾಗು ಕುಟುಂಬದ ಎಲ್ಲಾ ಸದಸ್ಯರು ಮದುವೆ ಮನೆಗೆ ಹೋಗುತ್ತಾರೆ. ಚಪ್ಪರ ಹಾಕುವುದು, ತರಕಾರಿ ಹೆಚ್ಚುವುದು ಹೀಗೆ ಒಂದಿಲ್ಲೊಂದು ಕೆಲಸಗಳಲ್ಲಿ ಸಹಾಯ ಮಾಡುತ್ತಾರೆ. ಅಂದು ಮದುಮಗನು ಬಿಳಿಕುಪ್ಪಸ, ತಲೆಗೆ ಕೆಂಪು ಚೆಕ್ಕ್‌ವಸ್ತ್ರವನ್ನು, ಸೊಂಟಕ್ಕೆ ಚೇಲೆ ಹಾಗು ಪೀಚೆಕತ್ತಿಯನ್ನು ಧರಿಸುತ್ತಾನೆ. ನೆಲ್ಲಕ್ಕಿ ನಡುಬಾಡೆಯ ದೀಪಕ್ಕೆ ಅಕ್ಕಿಹಾಕಿ ನಮಸ್ಕರಿಸಿ ಹಿರಿಯರ ಕಾಲು ಮುಟ್ಟಿ ಆಶೀರ್ವಾದ ಪಡೆಯುತ್ತಾನೆ. ತಾಯಿ ಚಿನ್ನ ಮತ್ತು ಹವಳದ ಗುಂಡಿನ ಪೊಮ್ಮಾಲೆಯನ್ನು ಮಗನ ಕೊರಳಿಗೆ ಹಾಕುತ್ತಾಳೆ. ವಧುವಿನ ಮನೆಯಲ್ಲೂ ಆಕೆ ಕೆಂಪು ಬಣ್ಣದ ಸೀರೆ, ತುಂಬು ತೋಳಿನ ರವಿಕೆ, ತಲೆಗೆ ಕೆಂಪು ವಸ್ತ್ರವನ್ನು ಧರಿಸಿ ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾಳೆ. ಈ ಸಂದರ್ಭದಲ್ಲಿ ತಾಯಿ ಮಗಳಿಗೆ 'ಪತ್ತಾಕ್' ಎಂಬ ಸಾಂಪ್ರದಾಯಿಕ ಒಡವೆಯನ್ನು ಮತ್ತು ಪೊಮ್ಮಾಲೆ(ಚಿನ್ನ ಮತ್ತು ಹವಳದ ಗುಂಡಿನ ಮಾಲೆ)ಯನ್ನು ಹಾಕುತ್ತಾಳೆ. ಊರ್‌ಕೂಡುವೊ ದಿನ ತೇರಣ ಬೆಪ್ಪ(ಮದರಂಗಿ ಹಚ್ಚುವ) ಆಚರಣೆಯು ನಡೆಯುತ್ತದೆ. ಈ ಶಾಸ್ತ್ರದಲ್ಲಿ ಮದುಮಕ್ಕಳನ್ನು ಅವರವರ ಮನೆಯ ನೆಲ್ಲಕ್ಕಿನಡುಬಾಡೆಯಲಿ ಕೂರಿಸಿ ಕೈಕಾಲುಗಳಿಗೆ ಗೋರಂಟಿಯನ್ನು ಹಚ್ಚುತ್ತಾರೆ.

**ಪೆಟ್ಟಿಗೆ ತುಂಬಿಸುವುದು :**

ಮದುವೆ ಹೆಣ್ಣಿಗೆ ಕೊಡುವ ಒಡವೆ, ವಸ್ತ್ರ ಹಾಗೂ ಅಗತ್ಯ ವಸ್ತುಗಳನ್ನು ಪೆಟ್ಟಿಗೆಗೆ ತುಂಬಿಸುವ ಶಾಸ್ತ್ರವಾಗಿದೆ. ನೆಲ್ಲಕ್ಕಿ ನಡುಬಾಡೆಯಲ್ಲಿ ಪ್ರಾರ್ಥಿಸಿ ಉರಿಯುವ ದೀಪಕ್ಕೆ ಅಕ್ಕಿ ಹಾಕಿ ಈ ಆಚರಣೆಯನ್ನು ನಡೆಸಲಾಗುತ್ತದೆ. ಮುತ್ತೈದೆಯೊಬ್ಬಳು ಈ ಕಾರ್ಯವನ್ನು ನಡೆಸುತ್ತಾಳೆ. ಸೂಜಿ ದಾರದಿಂದ ಮೊದಲ್ಗೊಂಡು ಮದುಮಗಳಿಗೆ ಅಗತ್ಯವಾದ ಎಲ್ಲ ವಸ್ತುಗಳನ್ನು ಶಕ್ತ್ಯಾನುಸಾರ ವಿಷಮ ಸಂಖ್ಯೆಯಲ್ಲಿ ತುಂಬಿಸಲಾಗುತ್ತದೆ. ಮದುವೆಗೆ ಮೂರು ದಿನ ಮುಂಚಿತವಾಗಿ ಈ ಶಾಸ್ತ್ರವನ್ನು ನಡೆಸಲಾಗುತ್ತದೆ.

**ಬಳೆ ಹಾಕುವುದು :**

ಮುಹೂರ್ತದಂದು ಬೆಳಗ್ಗೆ ಬೋಜಕಾರ್ತಿ(ಮದುವೆ ಮುಗಿಯುವವರೆಗೂ ವಧುವಿನ ಜೊತೆಯುಲ್ಲಿರುವ ಮಹಿಳೆ) ವಧುವನ್ನು ಕೈಹಿಡಿದುಕೊಂಡು ಕರೆತರುತ್ತಾಳೆ. ಉತ್ತರ ದಕ್ಷಿಣವಾಗಿ ಚಾಪೆ ಹಾಸಲಾಗಿರುತ್ತದೆ. ಪುತ್ತರಿ ಪಚ್ಯ(ಬಿದಿರಿನ ಬುಟ್ಟಿ) ದಲ್ಲಿ ಅಕ್ಕಿ, ಬಾಳೆ, ತೆಂಗಿನಕಾಯಿ ತುಂಬಿಸಿಡಲಾಗಿರುತ್ತದೆ. ಬಳೆಯ ಮಲಾರವನ್ನು ಮುಟ್ಟಿ ನಮಸ್ಕರಿಸಿ ಬಳೆ ಹಾಕಿಸಿಕೊಳ್ಳುತ್ತಾಳೆ. ಅನಂತರ ಇನ್ನಿಬ್ಬರು ಮುತ್ತೈದೆಯುರಿಗೆ ಬಳೆ ತೊಡಿಸಲಾಗುತ್ತದೆ. ಕುಳಿತ ಚಾಪೆ, ಪುತ್ತರಿಪಚ್ಯದಲ್ಲಿರುವ ಸಾಮಾನು ಹಾಗು ಐದು ಹಣವನ್ನು ಬಳೆಗಾರನಿಗೆ ನೀಡಲಾಗುತ್ತದೆ.

**ಕ್ಷೌರ ಮಾಡಿಸುವುದು :**

ಮದುವೆಯ ಮುಹೂರ್ತದಂದು ಮದುಮಗನಿಗೆ ಕ್ಷೌರ ಮಾಡಿಸುವ ಆಚರಣೆ ನಡೆಯುತ್ತದೆ. ಇದನ್ನು 'ಕೊಂಬಂಜವರ' ಎನ್ನುತ್ತಾರೆ. ನೆಲ್ಲಕ್ಕಿ ನಡುಬಾಡೆಯಲ್ಲಿ ಅಕ್ಕಿಹಾಕಿ ಹಿರಿಯರ ಕಾಲುಮುಟ್ಟಿ ನಮಸ್ಕರಿಸಿ ಕ್ಷೌರ ಮಾಡಿಸಿಕೊಳ್ಳುತ್ತಾನೆ. ಕ್ಷೌರ ಮಾಡಲು ಹಾಲನ್ನೇ ಬಳಸಬೇಕು. ಕ್ಷೌರ ಮಾಡಲು ಕುಳಿತ ಚಾಪೆ ಹಾಗು ಹಣವನ್ನು ಕ್ಷೌರಿಕನಿಗೆ ನೀಡಲಾಗುತ್ತದೆ. ಬಳಸಿದ ಹಾಲನ್ನು ಹಾಲೊಸರುವ ಮರದ ಬುಡಕ್ಕೆ ಚೆಲ್ಲಲಾಗುತ್ತದೆ.

**ವೇಷಭೂಷಣಗಳು :**

ಮದುಮಗನು ಬಿಳಿಯ ಕುಪ್ಯ(ಕುಪ್ಪಸ), ಕೆಂಪು ಚೇಲೆ, ಪಾನಿಮಂಡೆ ತುಣಿ(ಪೇಟ) ಧರಿಸಿರುತ್ತಾನೆ. ಸೊಂಟಕ್ಕೆ ಪೀಚೆಕತ್ತಿ, ತೊಡಂಗ್, ಒಡಿಕತ್ತಿ ಎಂಬ ಆಭರಣಗಳನ್ನು ತೊಡುತ್ತಾನೆ. ಕೈಗೆ ಕಟ್ಟಿಬಳೆ, ಉಂಗುರ ಹಾಗು ತಲೆಯ ಮೇಲೆ ಕೆಂಪು ಮುಸುಕನ್ನು  ಹಾಕಿರುತಾನೆ. ಈತನೊಂದಿಗೆ ಬೋಜಕಾರನೆಂಬ ಸಹಾಯಕನಿರುತ್ತಾನೆ. ಮದುಮಗಳಿಗೆ ಕೆಂಪು ಬೊಟ್ಟ್‌ಪೊಡಿಯ(ಜರತಾರಿ ಸೀರೆ), ಉದ್ದತೋಳಿನ ರವಿಕೆ ತೊಡಿಸುತ್ತಾರೆ. ಸಾಂಪ್ರದಾಯಿಕ ಆಭರಣಗಳಾದ ಕೊಕ್ಕೆತಾತಿ, ಜೋಮಾಲೆ, ಕಿವಿಗೆ ಓಲೆ, ಜಡೆಗೆ ಜಡೆಬಿಲ್ಲೆ, ಕೈಗೆ ಕಡಗ, ಕಾಲಿಗೆ ಕಾಚರಪಿಲ್ಲಿ ಧರಿಸಲಾಗುತ್ತದೆ. ಅಲಂಕೃತಗೊಂಡ ವಧುವರರು ಅವರ ಸಹಾಯಕರಾದ ಬೋಜಕಾರ್ತಿ ಮತ್ತು ಬೋಜಕಾರರೊಂದಿಗೆ ನಡೆದು ಬರುತ್ತಾರೆ. ಇವರು ವಧುವರರ ಸಂಬಂಧಿಕರೇ ಆಗಿರುತ್ತಾರೆ. ಸಾಂಪ್ರದಾಯಿಕ ಕೊಂಬುಕೊಟ್ಟ್ ವಾಲಗದೊಂದಿಗೆ ಮುಹೂರ್ತದ ಸ್ಥಳಕ್ಕೆ ಬರುತ್ತಾರೆ.

**ಬಾಳೆಬಿರ್‌ದ್ (ಬಾಳೆ ಬಿರುದು) :**

ಮುಹೂರ್ತಕ್ಕೆ ಮುಂಚಿತವಾಗಿ ಈ ಆಚರಣೆಯನ್ನು ನಡೆಸಲಾಗುತ್ತದೆ. ಇದನ್ನು ಕನ್ನಡದಲ್ಲಿ ಬಾಳೆಬಿರುದು ಅಥವಾ ಬಾಳೆ ಮರ್ಯಾದೆ ಎನ್ನುತ್ತಾರೆ.

ಕೊಡವ ಭಾಷೆಯಲ್ಲಿ ಬಾಳೆ ಬೇಂಗುವೊ, ಬಾಳೆ ಬಳ್ಂಬುವೊ ಎಂದು ಕರೆಯುತ್ತಾರೆ. ಸುಮಾರು ಮೂರು ಅಡಿ ಉದ್ದದ ಬಾಳೆಯ ಕಂದುಗಳನ್ನು ಕತ್ತರಿಸಿ ಗೂಟಗಳಿಗೆ ಚುಚ್ಚಿ ಸಾಲಾಗಿ ನೆಲದಲ್ಲಿ ನಿಲ್ಲಿಸಲಾಗಿರುತ್ತದೆ. ಇವುಗಳನ್ನು ಹೂವುಗಳಿಂದ ಅಲಂಕರಿಸಿರುತ್ತಾರೆ. ಬಾಳೆಬಿರ್‌ದ್ ಪಡೆಯುವವರಲ್ಲಿ ಯಾರಾದರೊಬ್ಬ ಹಿರಿಯರು ಒಡಿಕತ್ತಿಯನ್ನು ಹಿಡಿದು "ಬಾಳೆ ಬೇಂಗಲುವಾ?" (ಬಾಳೆಯನ್ನು ಕತ್ತರಿಸಬಹುದೇ?) ಎಂದು ಕೇಳಿ ಒಂದೊಂದೇ ಏಟಿಗೆ ಕತ್ತರಿಸಿ ಹಾಕುತ್ತಾರೆ. ಪೂರ್ವದಲ್ಲಿ ವರನೇ ಈ ಆಚರಣೆಯನ್ನು ಮಾಡುತಿದ್ದನೆಂಬುದು ಪ್ರತೀತಿ.

**ದಂಪತಿ ಮುಹೂರ್ತ :**

ಆರಂಭದಲ್ಲಿ ವಧುವರರ ಮನೆಯ ನೆಲ್ಲಕ್ಕಿ ನಡುಬಾಡೆಯಲ್ಲಿ ಮುಹೂರ್ತವನ್ನು ನಡೆಸುತಿದ್ದರು. ಆದರೆ ಇಂದು ಮದುವೆಗಳು ಕಲ್ಯಾಣಮಂಟಪಗಳಲ್ಲಿ ನಡೆಯುತ್ತಿವೆ. ಮೊದಲು ವಧು ಮತ್ತು ವರರ ಮುಹೂರ್ತವನ್ನು ಪ್ರತ್ಯೇಕವಾಗಿ ನಡೆಸುತ್ತಾರೆ. ಅನಂತರ ಒಂದೇ ಮಂಟಪದಲ್ಲಿ ದಂಪತಿ ಮುಹೂರ್ತವನ್ನು ನಡೆಸಲಾಗುತ್ತದೆ. ಉತ್ತರದಿಂದ ದಕ್ಷಿಣಕ್ಕೆ ಚಾಪೆ ಹಾಸಿ ಅದರ ಮೇಲೆ ಜಮಖಾನ ಹಾಸಲಾಗುತ್ತದೆ. ಅದರ ಮೇಲೆ ಮೂರುಕಾಲಿನ ಮಣೆ ಮುಕ್ಕಾಲಿಗೆ ಕೆಂಪು ಬಟ್ಟೆ ಹಾಸಿ ಇರಿಸುತ್ತಾರೆ. ಎರಡು ಬದಿಗಳಲ್ಲಿ ತಳಿಯತಕ್ಕಿ ಬೊಳಚವನ್ನು ಇಡಲಾಗುತ್ತದೆ. ತಟ್ಟೆಯಲ್ಲಿ ಅಕ್ಕಿ ತುಂಬಿಸಿ ಅದರ ಮೇಲೆ ಹಾಲು ತುಂಬಿದ ಗಿಂಡಿಯನ್ನು ಇರಿಸುತ್ತಾರೆ. ಮುಕ್ಕಾಲಿಯ ಮೂರು ಸುತ್ತು ಪ್ರದಕ್ಷಿಣೆ ಬಂದ ಮದುಮಕ್ಕಳು ಅಕ್ಕಿಹಾಕಿ ನಮಸ್ಕರಿಸುತ್ತಾರೆ. ಮುಕ್ಕಾಲಿಯ ಹಿಂಬದಿಯಿಂದ ಬಲಗಾಲಿನಲ್ಲಿ ದಾಟಿ ಅದರ ಮೇಲೆ ಕೂರುತ್ತಾರೆ. ಮೊದಲು ಮದುಮಕ್ಕಳ ಮುತ್ತೈದೆ ತಾಯಿ ಮೊಣಕಾಲು, ಹೆಗಲು ಹಾಗು ತಲೆಗೆ ಅಕ್ಕಿಹಾಕಿ ಹರಸುತ್ತಾಳೆ. ಗಿಂಡಿಯಲ್ಲಿನ ಹಾಲನ್ನು ಕುಡಿಸಿ ಆಶೀರ್ವದಿಸಿ ಹಣ ಅಥವಾ ಚಿನ್ನವನ್ನು ಉಡುಗೊರೆಯಾಗಿ ನೀಡುತ್ತಾಳೆ. ಹೀಗೆ ಸಂಬಂಧಿಕರು, ಸ್ನೇಹಿತರು ಉಡುಗೊರೆ ನೀಡಿ ಹರಸುತ್ತಾರೆ.

ಎಲ್ಲರೂ ಹರಸಿದ ನಂತರ ಬೋಜಕಾರ ಅಕ್ಕಿಹಾಕಿ ಹರಸಿ ವರನ ಕೈ ಹಿಡಿದು ಎಬ್ಬಿಸುತ್ತಾನೆ. ವರನು ವಧುವಿನ ತಲೆಗೆ ಅಕ್ಕಿ ಹಾಕಿ, ಗಿಂಡಿ ಹಾಲು ನೀಡಿ ಚೀಲಪಣ(ಉಡುಗೊರೆ) ನೀಡುತ್ತಾನೆ. ಹೆಣ್ಣಿನ ಕೈಹಿಡಿದು ಮುಕ್ಕಾಲಿಯಿಂದ ಎಬ್ಬಿಸುತ್ತಾನೆ. ಪರಸ್ಪರ ಹೂವಿನಹಾರ ಹಾಕುತ್ತಾರೆ. ಅನಂತರ ವಧು ಮತ್ತು ವರನ ಕುಟುಂಬದ ಪರವಾಗಿ ಇಬ್ಬರು ವ್ಯಕ್ತಿಗಳು ನಿಂತು ಮಾತುಕತೆ ನಡೆಸಿ ಪರಸ್ಪರ ಸಂಬಂಧ ಬೆಸೆಯುತ್ತಾರೆ. ಇದನ್ನು ಸಂಬಂಧ ಕೊಡ್‌ಪೊ ಅಥವಾ ಸಂಬಂಧ ಅಡ್‌ಕುವೊ ಎನ್ನುತ್ತಾರೆ.

**ಚಾಣ ನೀರೆಡ್‌ಪೊ (ಸಗಣಿ ಹಾಗು ನೀರು ಹೊತ್ತೊಯ್ಯುವುದು) :**

ಗದ್ದೆಗೆ ಸಗಣಿ ಹೊತ್ತೊಯ್ದು ಹಾಕುವ ಹಾಗು ಮನೆಗೆ ನೀರು ತರುವ ಆಚರಣೆಯನ್ನು ಚಾಣ ನೀರೆಡ್‌ಪೊ ಎನ್ನುತ್ತಾರೆ. ಜನಪದರಲ್ಲಿ ಮನೆವಾರ್ತೆಯನ್ನು ಅರಿತಿರುವ ಹೆಣ್ಣಿಗೆ ವಿಶೇಷ ಗೌರವ. ಗಂಡಿನ ಮನೆಯಲ್ಲಿ ಈ ಆಚರಣೆ ನಡೆಯುತ್ತದೆ. ನೆಲ್ಲಕ್ಕಿ ನಡುಬಾಡೆಯಲ್ಲಿ ಉರಿಯುವ ದೀಪಕ್ಕೆ ಅಕ್ಕಿ ಹಾಕಿದ ವಧು ಹಿರಿಯರ ಕಾಲು ಮುಟ್ಟಿ ನಮಸ್ಕರಿಸುತ್ತಾಳೆ. ದನದ ಕೊಟ್ಟಿಗೆಗೆ ಹೋಗಿ ಸಗಣಿ ತುಂಬಿದ ಕುಕ್ಕೆಯನ್ನು ಹೊತ್ತುಕೊಂಡು ಕುಟುಂಬದ ಗದ್ದೆಗೆ ಹಾಕಿ ಬರುತ್ತಾಳೆ. ನಂತರ ಮನೆಯ ಬಾವಿಗೆ ಅಕ್ಕಿ ಹಾಕಿ ನೀರು ತುಂಬಿದ ತಂಬಿಗೆಯನ್ನು ತಲೆಯ ಮೇಲೆ ಹೊತ್ತು ಬರುತ್ತಾಳೆ. ಅಡುಗೆ ಮನೆಯಲ್ಲಿ ಇಳಿಸಿ ಹಿರಿಯರ ಕಾಲು ಮುಟ್ಟಿ ನಮಸ್ಕರಿಸುತ್ತಾಳೆ. ಇದು ಹೆಣ್ಣಿಗೆ ಮನೆಯ ಜವಾಬ್ದಾರಿಯನ್ನು ನೀಡುವ  ಹಾಗು ಕೃಷಿಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕು ಎಂಬುದರ ಸಂಕೇತವಾಗಿದೆ.

**ಆ. ಸಾವಿನ ಆಚರಣೆಗಳು**

ಜನನ ಮರಣಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಹುಟ್ಟು ಆಕಸ್ಮಿಕ ಆದರೆ ಸಾವು ಖಚಿತ. ಇದು ನಿಸರ್ಗದ ನಿಯಮ. ಪಣಿಕರು ಸಾವಿಗೆ ಚಾವು ಎನ್ನುತ್ತಾರೆ. ಮರಣದ ಸಂದರ್ಭದಲ್ಲಿ ವಿಶಿಷ್ಟ ವಿಧಿಗಳನ್ನು ನಡೆಸುತ್ತಾರೆ. ಶವವನ್ನು ಹೂಳುವ ಮತ್ತು ಸುಡುವ ಎರಡೂ ಪದ್ಧತಿ ರೂಢಿಯಲ್ಲಿದೆ.

**ಬಾಡೆಕೆಡ್‌ಪೊ(ನಡುಮನೆಯಲ್ಲಿ ಮಲಗಿಸುವುದು) :**

ಬಾಡೆ ಎಂದು ಕರೆಯಲ್ಪಡುವ ನಡುಮನೆಯು ಕೊಡಗಿನವರಿಗೆ ಪವಿತ್ರವಾದ ಸ್ಥಳ. ಇಲ್ಲಿನ ಗೋಡೆಯಲ್ಲಿ ತ್ರಿಕೋನ ಅಥವಾ ಆಯತಾಕಾರದ ಗೂಡು ಇರುತ್ತದೆ. ಅಲ್ಲಿ ಪೂರ್ವಾಭಿಮುಖವಾಗಿ ದೀಪ ಹಚ್ಚುವ ಮಣ್ಣಿನ ಹಣತೆ ಇರಿಸಿರುತ್ತಾರೆ. ಇದನ್ನು ನೆಲ್ಲಕ್ಕಿ ಬೊಳ್‌ಚ ಎನ್ನುತ್ತಾರೆ. ಹಾಗಾಗಿ ನೆಲ್ಲಕ್ಕಿ ನಡುಬಾಡೆ ಎಂಬ ಹೆಸರೂ ಇದೆ. ಕೆಲವು ಮನೆಗಳಲ್ಲಿ ತೂಕ್‌ಬೊಳ್‌ಚ ಎಂಬ ತೂಗುದೀಪವು ಇರುತ್ತದೆ.  ಮುಂಜಾನೆ ಮತ್ತು ಸಂಜೆ ದೀಪವನ್ನು ಹಚ್ಚಲಾಗುತ್ತದೆ. ಶುಭಾಶುಭ ಸಂದರ್ಭಗಳಲ್ಲಿ ಪ್ರಾರ್ಥನೆ, ಪ್ರಮಾಣ ಹಾಗೂ ನ್ಯಾಯ ತೀರ್ಮಾನಗಳು ಇಲ್ಲಿ ನಡೆಯುತ್ತವೆ. ಸಾವು ಸಮೀಪಿಸುತ್ತಿದ್ದಂತೆ ನೆಲ್ಲಕ್ಕಿ ನಡುಬಾಡೆ(ನಡುಮನೆ)ಯಲ್ಲಿ ಮಲಗಿಸಲಾಗುತ್ತದೆ. ಇದನ್ನು ಬಾಡೆಕೆಡ್‌ಪೊ ಎನ್ನುತ್ತಾರೆ. ಪ್ರಾಣ ಹೋಗುವ ಸಂದರ್ಭದಲ್ಲಿ ತುಳಸಿಯನ್ನು ತೆಂಗಿನಕಾಯಿ ನೀರಿಗೆ ಅದ್ದಿ ಬಾಯಿಗೆ ಬಿಡಲಾಗುತ್ತದೆ.

**ಚಾವು ಪಾರಕಾಪೊ (ಶವ ಕಾಯುವುದು) :**

ಪೂರ್ವಾಹ್ನ ಹತ್ತು ಗಂಟೆಯ ನಂತರ ಮರಣಿಸಿದಾಗ ಮರುದಿನ

ಅಂತ್ಯಸಂಸ್ಕಾರವನ್ನು ನಡೆಸಲಾಗುತ್ತದೆ. ಶವಕ್ಕೆ ಬಿಳಿಬಟ್ಟೆಯನ್ನು ಹೊದಿಸಲಾಗುತ್ತದೆ. ಮಗುಚಿದ ಚಾಪೆಯ ಮೇಲೆ ದಕ್ಷಿಣ ದಿಕ್ಕಿಗೆ ತಲೆಯಿಟ್ಟು ಗೋಡೆಗೆ ಒರಗಿಸಿ ಮಲಗಿಸುತ್ತಾರೆ. ದೀಪವನ್ನು ಹಚ್ಚಿಡಲಾಗುತ್ತದೆ. ಬಿಳಿಯ ಬಟ್ಟೆಯಲ್ಲಿ ಮುಖವನ್ನು ಮುಚ್ಚಿ ತಲೆಗೆ ಕಚ್ಚಿತಳಿಯ(ಕಂಚಿನ ಗಂಗಳ)ವನ್ನು ಮುಚ್ಚುತ್ತಾರೆ. ರಾತ್ರಿಯಿಡೀ ನಿದ್ರಿಸದೆ ಶವ ಕಾಯುತ್ತಾರೆ. ಶವವನ್ನು ಕಾಯದಿದ್ದರೆ, ಆತ್ಮವು ಮತ್ತೆ ಬಂದು ಶರೀರವನ್ನು ಹೊಕ್ಕು ನಡೆದಾಡುತ್ತದೆ ಎಂಬ ನಂಬಿಕೆ ಇದೆ. ಶವದ ಮುಂದೆ ರಾತ್ರಿ ಸಾವಿಗೆ ಸಂಬಂಧಿಸಿದ ಚಾವು ಪಾಟ್(ಸಾವಿನ ಹಾಡು) ಹಾಡಲಾಗುತ್ತದೆ. ನಾಲ್ಕು ಜನ ಗಂಡಸರು ದುಡಿ ಬಾರಿಸುತ್ತಾ ಹಾಡುತ್ತಾರೆ.

"ಕೆಟ್ಟಿರೋ ಅಜ್ಜಯ್ಯ ನಿಂಗ
ಕೆಟ್ಟನಕೆ ಕೆಟ್ಟ್‌ಲೆ ನಿಂಗ
ನಾರಾಯಣ ದೇವಂಡೋ ಅಜ್ಜಯ್ಯ
ನೋಟುವಳ ಕನ್ನಡಿ ಅಜ್ಜಯ್ಯ
ಕೈತಪ್ಪಿ ನೆಲತಾಂದ್ ಅಜ್ಜಯ್ಯ
ಬುದ್ದೊಡಂದ್ ಪೋನೋಲೆ ಅಜ್ಜಯ್ಯ
ನಿಂಗೊಡಂದ್ ಪೋಯಿರೋ ಅಜ್ಜಯ್ಯ
ನಾರಾಯಣ ದೇವಂಡೋ ಅಜ್ಜಯ್ಯ
ಪೊಲ್ಲುವಳ ಪೊಂಜೂದ್ ಅಜ್ಜಯ್ಯ
ಪಾದತುಂಡಿ ಪೋನೋಲೆ ಅಜ್ಜಯ್ಯ"[೪]

ಅಜ್ಜಯ್ಯ ನೀವು ದೀಪ ಆರಿದಂತೆ ಆರಿಹೋದಿರಿ. ಎಲ್ಲರಂತಹ ಮರಣ ನಿಮ್ಮದಲ್ಲ. ನಾರಾಯಣ ದೇವನ ಕನ್ನಡಿ ಕೈತಪ್ಪಿ ನೆಲಕ್ಕೆ ಬಿದ್ದು ಒಡೆದುಹೋದಂತೆ ನೀವು ಒಡೆದು ಹೋದಿರಿ. ಆತನ ಚಿನ್ನದ ಸೂಜಿಯ ಪಾದ ಮುರಿದಂತೆ ಮುರಿದು ಹೋದಿರಿ ಎಂದು ಹಾಡುತ್ತಾರೆ. ಹೀಗೆ ರಾತ್ರಿಯಿಡಿ ಸತ್ತ ವ್ಯಕ್ತಿಯ ಗುಣಗಾನ ಮಾಡುತ್ತಾ; ಆತನ ಸತ್ಕಾರ್ಯಗಳನ್ನು ಹೊಗಳುತ್ತಾರೆ. ಸಾವು ಸಮೀಪಿಸಿದೆ ಎಂದು ಸೂಚನೆಯ ಅಪಶಕುನಗಳು ಎದುರಾದ ಬಗ್ಗೆ ಹೇಳುತ್ತಾರೆ. ಎಡಗಣ್ಣು ಹಾರಿತು, ಸೌದೆ ಕೊಟ್ಟಿಗೆ ಕುಸಿಯಿತು, ದೇವಸ್ಥಾನ ಒಂದೆಡೆ ವಾಲಿತು ಎನ್ನುತ್ತಾರೆ. ಪಕ್ಷಿಯು ಗೂಡನ್ನು ಬಿಟ್ಟು ಹಾರಿ ಹೋಗುವಂತೆ ನಿಮ್ಮ ಆತ್ಮ ಶರೀರವನ್ನು ಬಿಟ್ಟು ಅಗಲಿತು. ಮತ್ತೊಂದು ಜನ್ಮ ನಿಮಗೆ ಬಾರದಿರಲಿ. ಭಗವಂತನ ಶಿರದಲ್ಲಿ ಬಾಡದ ಹೂವಿನಂತೆ ವೈಕುಂಠದಲ್ಲಿ ಜೀವಿಸಿರಿ. ಎಂದು ಹಾಡುತ್ತಾರೆ. ಸತ್ತಂತ ವ್ಯಕ್ತಿಯು ಸ್ವರ್ಗದಲ್ಲಿ ಸಂತೋಷದಿಂದಿರಲಿ ಎಂಬ ಭಾವನೆಯಿಂದ ಅವನನ್ನು ಹೊಗಳುವ ಕಾರ್ಯ ಇಲ್ಲಿ ಜರುಗುತ್ತದೆ.

ಮುಂಜಾನೆ ಶವಕ್ಕೆ ಎಣ್ಣೆ ಅರಸಿನ ಹಚ್ಚಿ ಸ್ನಾನ ಮಾಡಿಸುತ್ತಾರೆ.

ಗಂಡಸಾದರೆ ಬಿಳಿಕುಪ್ಪಸವನ್ನು ಮಗುಚಿ ಧರಿಸಲಾಗುತ್ತದೆ. ಮದುಮಗನಂತೆ ಸಿಂಗರಿಸಿದ ಶವವನ್ನು ನೆಲ್ಲಕ್ಕಿ ನಡುಬಾಡೆಯಲ್ಲಿ ಮಂಚದ ಮೇಲೆ ಚಾಪೆಯನ್ನು ಮಗುಚಿ ಹಾಕಿ ಒರಗಿಸಿ ಮಲಗಿಸಲಾಗುತ್ತದೆ. ಇದನ್ನು 'ಚಾವುಕೂಟುವೊ' ಎನ್ನುತ್ತಾರೆ. ಮರಣ ಸಂಸ್ಕಾರದ ಸಂದರ್ಭದಲ್ಲಿ ಎಲ್ಲರೂ ಬಿಳಿಯ ಬಣ್ಣದ ಉಡುಪನ್ನೇ ಧರಿಸುತ್ತಾರೆ. ಮರದ ಕುರ್ಚಿಯನ್ನು ಬಿದಿರಿನ ಸಹಾಯದಿಂದ ಚಟ್ಟವನ್ನಾಗಿ ಪರಿವರ್ತಿಸಿ ಶವಯಾತ್ರೆ ಮಾಡುತ್ತಾರೆ. ಸ್ಮಶಾನದಲ್ಲಿ ನಿರ್ದಿಷ್ಟ ಸ್ಥಳದಲ್ಲಿ ಊರಿನವರು ಕಡಿದು ಸಿದ್ಧಪಡಿಸಿದ ಸೌದೆಯನ್ನು ಶವದ ಮೇಲಿರಿಸಿ ಸುಡಲಾಗುತ್ತದೆ. ಹೂಳುವುದಾದರೆ ಶವವನ್ನು ಬಿಳಿಬಟ್ಟೆಯಲ್ಲಿ ಸುತ್ತಿ ಗುಂಡಿಯೊಳಗೆ ಇಳಿಸಿ ಉಪ್ಪು ಹಾಕಿ ಮಣ್ಣು ಮುಚ್ಚಲಾಗುತ್ತದೆ.

**ಕಾಕೆಕ್ ಕೂಳ್ ಬೆಪ್ಪೊ(ಕಾಗೆಗೆ ಅನ್ನ ಹಾಕುವುದು) :**

ಶವ ಸಂಸ್ಕಾರದ ಮರುದಿನದಿಂದ ಈ ಆಚರಣೆ ನಡೆಯುತ್ತದೆ. ಈ ಕ್ರಿಯೆಯನ್ನು ಮರಣ ಹೊಂದಿದ ವ್ಯಕ್ತಿಯ ಆಪ್ತರು ನಡೆಸುತ್ತಾರೆ. ಇವರು ಪ್ರತೀ ದಿನ ಬೆಳಿಗ್ಗೆ ಸ್ನಾನ ಮಾಡಿ ಬಿಳಿಯಬಟ್ಟೆಯನ್ನು ಧರಿಸಿ ಅಡಿಗೆ ಮಾಡುತ್ತಾರೆ. ಒಪ್ಪೊತ್ತಿನ ಊಟ ಮಾಡಬೇಕಾಗುತ್ತದೆ. ಉಣ್ಣುವ ಮೊದಲು ಮಾಡಿದ ಅಡಿಗೆಯನ್ನು ಕಾಗೆಗೆ ನೀಡಬೇಕಾಗುತ್ತದೆ. ಇದಕ್ಕಾಗಿ ಮನೆಯ ಸಮೀಪದಲ್ಲಿ ಮೂರು ಕಾಲಿನ ಸಣ್ಣ ಚಪ್ಪರವನ್ನು ನಿರ್ಮಿಸಲಾಗುತ್ತದೆ. ಅವುಗಳ ತುದಿಯಲ್ಲಿ ಒಂದು ಹಲಗೆಯನ್ನು ಜೋಡಿಸಲಾಗಿರುತ್ತದೆ. ಇದನ್ನು 'ಬೆಲಿಮರ' ಎನ್ನುತ್ತಾರೆ. ಬಾಳೆಲೆಯಲ್ಲಿ ಅಡುಗೆಯನ್ನು ಹಾಕಿ ಬೆಲಿಮರದ ಮೇಲೆ ಇರಿಸುತ್ತಾರೆ. ಕೈ ಚಪ್ಪಾಳೆ ಹೊಡೆದು 'ಕಾಕಾ' ಎಂದು ಮೂರು ಬಾರಿ ಕರೆಯುತ್ತಾರೆ. ಇದನ್ನು 'ಕಾಕೆಕ್ ಕೂಳ್ ಬೆಪ್ಪೊ' ಎನ್ನುತ್ತಾರೆ. ಕಾಗೆ ಬಂದು ಅನ್ನವನ್ನು ತಿಂದರೆ ಮೃತನಾದವನಿಗೆ ತೃಪ್ತಿಯಾಗಿದೆ ಎಂಬ ನಂಬಿಕೆ ಇದೆ. ಕಾಕೆಕ್ ಕೂಳ್ ಬೆಪ್ಪೊ ವಿಧಿಯನ್ನು ನಡೆಸುವವರನ್ನು ಕುಳಿಕ್ ನಿಂದವು(ಸ್ನಾನಕ್ಕೆ ನಿಂತವರು), ಮೇಂಗತೆ/ದೀಕ್ಷೆ ಇಪ್ಪವು(ದೀಕ್ಷೆ ಇರುವವರು) ಎನ್ನುತ್ತಾರೆ.

**ಮಾದ(ತಿಥಿ) :**

ಮೃತಪಟ್ಟ ಹನ್ನೊಂದನೇ ದಿನದಂದು ತಿಥಿ ಕರ್ಮಾಂತರವನ್ನು ನಡೆಸಲಾಗುತ್ತದೆ. ತಿಥಿಕರ್ಮ ಮುಗಿಯುವವರೆಗೆ ಸಾವಿನ ಸೂತಕದ ಮನೆಯನ್ನು 'ತೀಕೆಮನೆ' ಅಂದರೆ ದೀಕ್ಷಾಬದ್ಧ ಮನೆ ಎನ್ನುತ್ತಾರೆ. ತಿಥಿಯಂದು ಇವರು ಸ್ನಾನ ಮಾಡಿ ಮಡಿಯುಟ್ಟು ವಿವಿಧ ರೀತಿಯ ಭಕ್ಷ್ಯ ಪದಾರ್ಥಗಳನ್ನು ತಯಾರಿಸಿ ಬಾಳೆಲೆಯಲ್ಲಿ ಬಡಿಸಿ ಬೆಲಿಮರದ ಮೇಲೆ ಇಡುತ್ತಾರೆ. ದೀಕ್ಷೆ ಇರುವವರು ಎಲೆಅಡಿಕೆಯನ್ನು ಬಾಯಿಗೆ ಹಾಕಿ ಜಗಿದು ಮನೆಯ ಮೇಲೆ ಎಸೆಯುವ ವಿಧಿಯೊಂದಿಗೆ ದೀಕ್ಷೆ ಮುಕ್ತಾಯವಾಗುತ್ತದೆ.

**ಪೊಲ್‌ಚಿ ಪಾಟ್(ಮೃತರ ಗುಣಗಾನದ ಹಾಡು) :**

ತಿಥಿಯಂದು ನಾಲ್ಕು ಮಂದಿ ಹಾಡುಗಾರರು ದುಡಿ ಬಾರಿಸುತ್ತಾ ಪೊಲ್‌ಚಿ ಪಾಟ್ ಹಾಡುತ್ತಾರೆ. ಮೃತನ ಆತ್ಮಕ್ಕೆ ಶಾಂತಿ ಸಿಗಲಿ ಎಂಬುದು ಈ ಹಾಡಿನ ಪ್ರಮುಖ ಉದ್ದೇಶ. ಮರಣಿಸಿದ ವ್ಯಕ್ತಿ ಬದುಕಿದ ರೀತಿಯನ್ನು ಹೊಗಳುತ್ತಾ; ಹಾಡಿನ ಮೂಲಕ ಆತನನ್ನು ಸ್ವರ್ಗಕ್ಕೆ ಸೇರಿಸುವುದೇ ಈ ಹಾಡಿನ ತಿರುಳು. ಮರಣ ಹಾಗೂ ತಿಥಿಯ ಸಂದರ್ಭದಲ್ಲಿ ನಡೆಸಬೇಕಾದ ಎಲ್ಲಾ ವಿಧಿಗಳನ್ನು ಪೊಲ್‌ಚಿ ಪಾಟ್ ಒಳಗೊಂಡಿರುತ್ತದೆ. "ಮಕ್ಕಳೇ ಕೇಳಿ ಸತ್ತವರಿಗಾಗಿ ಅಳುವುದು, ದುಃಖಿಸುವುದರಿಂದ ಪ್ರಯೋಜನವಿಲ್ಲ. ಆಕಾಶವೇ ಬೀಳುತ್ತಿರುವಾಗ ಅಂಗೈ ಅದನ್ನು ತಡೆದು ನಿಲ್ಲಿಸುವುದೇ? ಕಾಲಡಿಯ ಭೂಮಿಯೇ ಕುಸಿಯುತ್ತಿರುವಾಗ ಕಾಲು ಅದನ್ನು ತಡೆದು ನಿಲ್ಲಿಸಲಾಗುವುದೇ? ದೇವರ ಇಚ್ಚೆಗೆ ವಿರುದ್ಧ ನಾವೇನು ಮಾಡಲಾರೆವು. ಅವನ ಇಚ್ಚೆಯಂತೆ ನಡೆಯಬೇಕು. ಈ ಜಗತ್ತಿನಲ್ಲಿ ಹುಟ್ಟು ಸಾವು ಸಾಮಾನ್ಯವಾದುದು." ಎಂದು ಹಾಡುತ್ತಾರೆ. ಬದುಕಿನ ನೋವು ನಲಿವುಗಳ ಭಾವನಾತ್ಮಕ ಸಂಬಂಧ ಈ ಹಾಡಿನಲ್ಲಿದೆ. ಸತ್ತವರ ಒಳ್ಳೆಯ ಗುಣ ಕಿರಿಯರಿಗೆ ಮಾದರಿಯಾಗಲಿ ಹಾಗೂ ಆತನ ಆತ್ಮಕ್ಕೆ ಶಾಂತಿ ಸಿಗಲಿ ಎಂಬ ಅಂಶ ಇಲ್ಲಿ ವೇದ್ಯವಾಗುತ್ತದೆ. ಊಟೋಪಚಾರದ ನಂತರ ಎಲ್ಲರೂ ತಮ್ಮ ಮನೆಗೆ ತೆರಳುತ್ತಾರೆ. ಪ್ರತೀ ವರ್ಷ ನಿಗಧಿತ ದಿನದಂದು 'ಕಾರೋಣಂಗ್ ಕೊಡ್‌ಪೊ' ವಿಧಿಯ ಮೂಲಕ ಮರಣಿಸಿದ ಹಿರಿಯರಿಗೆ ಎಡೆ ಇಡುತ್ತಾರೆ. ಆ ಮೂಲಕ ಮುಂದಿನ ಪೀಳಿಗೆಯವರು ಆಚರಣೆಯನ್ನು ಮುಂದುವರೆಸಿಕೊಂಡು ಹೋಗುವ ಕ್ರಮ ಜನಪದರಲ್ಲಿ ಇಂದಿಗೂ ಮುನ್ನಡೆಯುತ್ತಿದೆ.

**ಇ. ಧಾರ್ಮಿಕ ಆಚರಣೆಗಳು**

ಪಣಿಕರು ಕೊಡಗಿನ ಕೊಡವ ಭಾಷಿಕ ಜನಾಂಗಗಳು ಆಚರಿಸುವ ಪ್ರಮುಖ ಹಬ್ಬಗಳಾದ ಕೈಲ್‌ಪೊಳ್ದ್ (ಕೈಲು ಮುಹೂರ್ತ), ಕಾವೇರಿ ಚಂಗ್ರಾಂದಿ(ತುಲಾ ಸಂಕ್ರಮಣ) ಹಾಗು ಪುತ್ತರಿ(ಹುತ್ತರಿ) ಹಬ್ಬಗಳನ್ನು ಆಚರಿಸುತ್ತಾರೆ. ಗ್ರಾಮ ದೇವತೆಗಳ ವಾರ್ಷಿಕ ಉತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ಈ ಸಂದರ್ಭದಲ್ಲಿ ತೆರೆಕಟ್ಟುವ ಆಚರಣೆಯಿದ್ದರೆ ಅತ್ಯಂತ ಶ್ರದ್ಧೆಯಿಂದ ತೆರೆಕಟ್ಟಿ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ.

**ಕಾರೋಣಂಗ್ ಕೊಡ್‌ಪೊ(ಕಾರೋಣನಿಗೆ ಎಡೆ ಹಾಕುವುದು) :**

ಪಣಿಕರದು ಪಿತೃಪ್ರಧಾನ ಕುಟುಂಬ. ಕೊಡವರಂತೆ ಕುಟುಂಬದ ಮೂಲ ಪುರುಷರನ್ನು ಕಾರೋಣ ಎಂದು ಆರಾಧಿಸುತ್ತಾರೆ. ತಮ್ಮ ಅಸ್ತಿತ್ವಕ್ಕೆ ಕಾರಣರಾದ ವಂಶದ ಪೂರ್ವಜರನ್ನು ಪೂಜಿಸುವುದು ಇವರ ಸಂಸ್ಕಾರದ ವಿಶೇಷತೆಯಾಗಿದೆ. ಪಣಿಕರ ಕಾರೋಣ ಚೆಟ್ಟಿ ಅಜ್ಜಪ್ಪ ಎಂಬವನು ಪಡೆಬೀರ(ಸಮರವೀರ).

ಸೋಮಯ್ಯ ಎನ್ನುವವನು ಮಣ್ಣು(ಭೂಮಿ) ಮತ್ತು ಮನೆಯನ್ನು ಕಾಪಾಡಿದ ಕಾರೋಣ. ಮನೆತನಕ್ಕೆ ಒಳಿತಾಗಲಿ ಎಂಬ ಉದ್ದೇಶದಿಂದ ವಾರ್ಷಿಕವಾಗಿ ಎಡೆಹಾಕುವ ಪದ್ಧತಿಯಿದೆ. ಕೆಲವೆಡೆಗಳಲ್ಲಿ ಕಾರೋಣನನ್ನು ತೆರೆಕಟ್ಟಿ ಆರಾಧಿಸುತ್ತಾರೆ. ಅಂಜಿಕೂಟ್ ಮೂರ್ತಿಗಳಾದ (ಕುಟ್ಟಿಚಾತ, ಕುಳಿಯ, ಕರಿಕಾಳ, ಬೈರವ ಮತ್ತು ನುಚ್ಚುಟೆ) ದೈವಗಳನ್ನು ಆರಾಧಿಸುತ್ತಾರೆ. ಹಾಲು ಒಸರುವ ಮರದಡಿಯಲ್ಲಿ ಇವುಗಳ ನೆಲೆಯಿರುತ್ತವೆ.

**೫. ಸಾಮಾಜಿಕ ಸ್ಥಿತಿಗತಿ**

ಪಣಿಕರು ಸಮಾಜದ ಎಲ್ಲಾ ವರ್ಗದವರೊಂದಿಗೆ ಸರಿಸಮಾನತೆಯಲ್ಲಿ ಬೆರೆಯುತ್ತಾರೆ. ಆದರೂ ಕೊಡವ ಸಮುದಾಯದವರ ಐನ್‌ಮನೆಯ ಐಮರ(ಮನೆಯ ಪಡಸಾಲೆಯಲ್ಲಿ ಕೂರುವ ಹಲಗೆಯ ಪೀಠ)ದಲ್ಲಿ ಕೂರಬಾರದೆಂಬ ನಿಷೇಧವಿದೆ. ಆದರೆ ತೆರೆಕಟ್ಟಿದ ಸಂದರ್ಭದಲ್ಲಿ ಕೂರಬಹುದಾಗಿದೆ. ಕೊಡವರಿಗೆ ಇರುವ ದೇಶ, ನಾಡು, ಊರು, ದೇವಸ್ಥಾನ, ಭಂಡಾರಗಳ ತಕ್ಕಾಮೆ( ಮುಖ್ಯಸ್ಥರ ಪಟ್ಟ) ಪಣಿಕರಿಗೆ ಇಲ್ಲ. ಸರಕಾರ ಇವರನ್ನು ಬಿ.ಸಿ.ಎಂ(ಎ) ವರ್ಗವೆಂದು ದಾಖಲಿಸಿದೆ. ೯೫ ಒಲೆಗಳು ಹಾಗು ಸುಮಾರು ೨೦೦ ಜನಸಂಖ್ಯೆಯನ್ನು ಹೊಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ ಶಿಕ್ಷಣವಂತರಾಗುತ್ತಿದ್ದಾರೆ. ಗರಿಷ್ಟ ಎರಡು ಏಕರೆ ಜಮೀನನ್ನು ಹೊಂದಿರುವ ಇವರು ಆರ್ಥಿಕವಾಗಿ ಸ್ಥಿತಿವಂತರಲ್ಲ. ಇರುವ ಅಲ್ಪ ಜಮೀನನ್ನು ರೂಢಿಸಿಕೊಂಡು ಉಳಿದ ದಿನಗಳಲ್ಲಿ ಕೃಷಿ ಕಾರ್ಮಿಕ, ಗುಮಾಸ್ತ. ಬಸ್‌ಚಾಲಕ. ನಿರ್ವಾಹಕ, ಆಟೋಚಾಲಕ, ಗ್ಯಾರೇಜ್ ಕಾರ್ಮಿಕರಾಗಿ ಕೆಲಸ ನಿರ್ವಹಿಸುತ್ತಾರೆ. ವರ್ಷದಲ್ಲಿ ಐದು ತಿಂಗಳು ತೆರೆಕಟ್ಟುವ ಕಾಯಕದಲ್ಲಿ ನಿರತರಾಗಿರುವ ನಮ್ಮನ್ನು ಉಳಿದ ದಿನಗಳಲ್ಲಿ ಕೇಳುವವರೇ ಇಲ್ಲ ಎಂಬ ಕೊರಗು ಇವರದು. "ತೆರೆಕಟ್ಟುವ ಆಚರಣೆಯನ್ನು ದೇವರ ಕೆಲಸ, ಮೂಲವೃತ್ತಿ ಎಂದು ಆಚರಿಸುತ್ತಿದ್ದೇವೆ. ತೆರೆಯೊಂದಕ್ಕೆ ಐದರಿಂದ ಹತ್ತು ಜನರು ಇರಬೇಕಾಗುತ್ತದೆ. ಅಷ್ಟು ಮಂದಿ ಒಂದೇ ಕುಟುಂಬದಲ್ಲಿ ಇರುವುದಿಲ್ಲ. ಆದುದರಿಂದ ತಮ್ಮ ನೆಂಟರಿಷ್ಟರನ್ನು ಕರೆಸಿಕೊಳ್ಳುತ್ತೇವೆ. ಅವರೆಲ್ಲರ ಖರ್ಚನ್ನು ಮುಖ್ಯ ತೆರೆಕಾರನೇ ಭರಿಸಬೇಕಾಗಿರುತ್ತದೆ. ತೆರೆಯೊಂದಕ್ಕೆ ಸಿಗುವ ಹತ್ತುಹನ್ನೆರಡು ಸಾವಿರ ರೂಪಾಯಿಗಳಿಂದ ಯಾವುದೇ ರೀತಿಯ ಲಾಭವಿಲ್ಲ"[೫] ಎನ್ನುತ್ತಾರೆ.

ಹೀಗೆ ಪಣಿಕ ಸಮುದಾಯವು ಸಂಕಷ್ಟದ ಬದುಕನ್ನು ನಡೆಸುತ್ತಿದೆ. ಈ ಹಿನ್ನೆಲೆಯಲ್ಲಿ ಶಿಕ್ಷಣವಂತರು, ಆರ್ಥಿಕವಾಗಿ ಸಬಲರೂ ಆಗಿರುವ ಕೆಲವು ಪಣಿಕರು ಸೇರಿ ಅಖಿಲ ಕೊಡಗು ಪಣಿಕ ಸಮಾಜವೆಂಬ ಸಹಕಾರ ಸಂಘವನ್ನು ಸ್ಥಾಪಿಸಿಕೊಂಡಿದ್ದಾರೆ. ಪಣಿಕ ಸಮುದಾಯದ ಅಭಿವೃದ್ಧಿ ಇದರ ಪ್ರಮುಖ

ಉದ್ದೇಶವಾಗಿದೆ. ಈ ಸಂಘವು ನಿಗಧಿತ ಅವಧಿಗಳಲ್ಲಿ ಸಭೆ ಸೇರುತ್ತದೆ. ಸಮುದಾಯದ ಅಭಿವೃದ್ಧಿ ಕಾರ್ಯಗಳ ಬಗ್ಗೆ ಚರ್ಚಿಸುತ್ತದೆ. ವಾರ್ಷಿಕವಾಗಿ ಮಹಾಸಭೆಯನ್ನೂ ನಡೆಸುತ್ತದೆ. ಈ ಸಂದರ್ಭದಲ್ಲಿ ಶಿಕ್ಷಣ ಹಾಗೂ ಕ್ರೀಡಾಕ್ಷೇತ್ರದಲ್ಲಿ ಸಾಧನೆ ಮಾಡಿದ ಮಕ್ಕಳನ್ನು ಸನ್ಮಾನಿಸಲಾಗುತ್ತದೆ. ಪ್ರತಿಭಾವಂತ ಮಕ್ಕಳಿಗೆ ಪ್ರೋತ್ಸಾಹಧನ ಹಾಗೂ ಬಹುಮಾನವನ್ನು ನೀಡುತ್ತಾರೆ. ಸರಕಾರದ ಮಟ್ಟದಲ್ಲಿ ಸಮುದಾಯದ ಅಭಿವೃದ್ಧಿಗೆ ಇರುವ ಮಾರ್ಗಗಳು ಹಾಗೂ ಸೌಲಭ್ಯಗಳ ಬಗ್ಗೆ ಅರಿವು ಮೂಡಿಸುವ ಕೆಲಸವನ್ನು ಮಾಡುತ್ತಾರೆ. 'ತಾನು ಪರರಿಗೆ- ಪರರು ತನಗೆ' ಎಂಬ ಸಹಕಾರಿ ಧ್ಯೇಯವನ್ನು ಈ ಸಂಘವು ಹೊಂದಿದೆ. ಆದರೆ ಆರ್ಥಿಕವಾಗಿ ಸಬಲರಾಗಿರುವ ಒಂದು ಪಂಗಡದವರು ಮಾತ್ರ ಇಲ್ಲಿ ಸದಸ್ಯರಾಗಿದ್ದಾರೆ. ಮಲೆಯರೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿರುವ ಪಣಿಕರನ್ನು ಸಂಘದ ಸದಸ್ಯತ್ವದಿಂದ ಹೊರಗಿಡಲಾಗಿದೆ. ಸುಮಾರು ಇನ್ನೂರು ಜನಸಂಖ್ಯೆ ಹೊಂದಿರುವ ಈ ಪುಟ್ಟ ಸಮುದಾಯವೂ ಮೇಲು ಕೀಳು ಎಂಬ ಭಾವನೆಗಳಿಂದ ಹೊರತಾಗಿಲ್ಲ ಎಂಬುದು ವಿಪರ್ಯಾಸ.

**೪.೨ ಮಲೆಯರ ಸೂಕ್ಷ್ಮಾತಿಸೂಕ್ಷ್ಮ ಚಹರೆಗಳು**

ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲಿ ಮಲೆಯರು ಪ್ರಧಾನ ಸ್ಥಾನವನ್ನು ಪಡೆದುಕೊಂಡಿದ್ದಾರೆ. ಮಲೆಗಳಲ್ಲಿ ನೆಲೆಸಿದ್ದರಿಂದ ಇವರನ್ನು ಮಲೆಯರು/ ಮಲಿಯರೆಂದು ಕರೆಯಲಾಗುತ್ತದೆ. "ಮಲೆಯ ಕಾಣತ ಮನೆ ಉಂಡಾ? ಮಲಿಯಂಗಡ್‌ಂಗತ ದೇವ, ಕೂಳಿ, ಕೊರಟಿ, ಕಾಯಲಕಸ ಉಂಡಾ?"[೬](ಮಲಿಯರು ಕಾಣದ ಮನೆಯುಂಟೇ? ಮಲಿಯನಿಗೆ ವಶವಾಗದ ದೇವರು, ದೆವ್ವ, ಕಾಯಿಲೆ ಇದೆಯೇ? )ಎಂಬ ಜನಪದ ಉಕ್ತಿಯು ಕೊಡಗಿನಲ್ಲಿ ಮಲೆಯರಿಗಿದ್ದ ಪ್ರಾಮುಖ್ಯತೆ ಹಾಗು ಬೇಡಿಕೆಯನ್ನು ಬಿಂಬಿಸುತ್ತದೆ. ತೆರೆ ಕಟ್ಟುವುದು, ತಾಂತ್ರಿಕ ವಿಧಿಗಳು, ಭವಿಷ್ಯ ಹೇಳುವುದು ಇವರ ವೃತ್ತಿಯಾಗಿತ್ತು. ಮಲೆಯಾಳ ಮೂಲದವರಾದ ಇವರು ನಾಟಿ ಔಷಧೋಪಚಾರಗಳಲ್ಲಿ ನುರಿತವರಾಗಿದ್ದರು.

**೧. ಹಿನ್ನೆಲೆ :**

"ಪೂರ್ವದಲ್ಲಿ ಕೊಡಗು ರಾಜರ ಆಳ್ವಿಕೆಯಿದ್ದ ಸಂದರ್ಭದಲ್ಲಿ ಕೊಡಗಿನಲ್ಲಿ ಜ್ವರ, ಸಿಡುಬು, ಅರಶಿನ ಕಾಮಾಲೆ, ದಡಾರ, ವಿಷಮಶೀತ ಜ್ವರ, ವಾಂತಿ, ಬೇದಿಯಂತಹ ಕಾಯಿಲೆಗಳು ಕಾಣಿಸಿಕೊಂಡು ಜನರನ್ನು ಕಂಗೆಡಿಸುತ್ತಿತ್ತು. ದೂರದ ಸ್ಥಳಗಳಿಗೆ ಹೋಗಿ ಔಷಧೋಪಚಾರ ಪಡೆದುಕೊಳ್ಳುವ ಸೌಲಭ್ಯವೂ ಇರಲಿಲ್ಲ. ಹೀಗಾಗಿ ಅಧಿಕ ಸಂಖ್ಯೆಯಲ್ಲಿ ಜನರು ಮರಣ ಹೊಂದುತ್ತಿದ್ದರು. ರಾಜನಿಗೆ ಇದೊಂದು ಸಮಸ್ಯೆಯಾಗಿ ಕಾಡಿತು. ಓರ್ವ ಸೈನ್ಯಾಧಿಕಾರಿಯ ಸಲಹೆಯಂತೆ ರಾಜನು ಮಲೆಯಾಳ ದೇಶದ ಕಣ್ಣನೂರು ಜಿಲ್ಲೆಯ ಚರಕಲ್ಲ್ ತಂಬಿರಾನ್

ಬಳಿ ತನ್ನ ಜನರನ್ನು ಕಳುಹಿಸುತ್ತಾನೆ. ಅಲ್ಲಿನ ಕಯತ್‌ಕೋಟೆ ಎಂಬ ಸ್ಥಳದಿಂದ ಮಂತ್ರ, ತಂತ್ರ, ನಾಟಿ ಔಷಧೋಪಚಾರಗಳಲ್ಲಿ ನಿಷ್ಣಾತರಾದ, ತಾಯಿತ ತಗಡುಗಳ ಮೂಲಕ ಎಲ್ಲಾ ಕಾಯಿಲೆಯನ್ನು ಗುಣಪಡಿಸುವವರೆಂದು ಹೆಸರು ಪಡೆದಿದ್ದ 'ಮಲಯನ್' ಪಂಗಡದ ಹನ್ನೆರಡು ಪಂಡಿತರನ್ನು ಹಾಗೂ ಹನ್ನೆರಡು ದೇವತೆಗಳನ್ನು ಕಳುಹಿಸಿದನು. ಇವರನ್ನು ಕೊಡಗಿನ ರಾಜ ಒಂದೊಂದು ಊರಿನಲ್ಲಿ ನೆಲೆಗೊಳಿಸಿದನು. ತಮ್ಮೊಂದಿಗೆ ಬಂದ ದೇವತೆಗಳನ್ನು ಅವರು ಆಯಾಯ ಊರಿನಲ್ಲಿ ನೆಲೆಗೊಳಿಸಿದರು. ಅವುಗಳನ್ನು ಆರಾಧಿಸುತ್ತಾ ಜನರ ಕಾಯಿಲೆಗಳಿಗೆ ಔಷಧ ನೀಡುತ್ತಾ, ತೆರೆಕಟ್ಟುತ್ತಾ, ಯಂತ್ರ, ಮಂತ್ರಗಳ ಮೂಲಕ ತಾಯಿತ ತಗಡು ಇತ್ಯಾದಿಗಳನ್ನು ಮಾಡುತ್ತಾ ನೆಲೆಸಿದರು. ಇವರನ್ನು ರಾಜ ಚಾವಡಿಕಾರರನ್ನಾಗಿಯೂ ನೇಮಿಸಿಕೊಂಡಿದ್ದನೆಂದು ಹೇಳಲಾಗುತ್ತದೆ. ಇವರ ಸೇವೆಯನ್ನು ಮೆಚ್ಚಿದ ಲಿಂಗರಾಜ ಮಲೆಯರಿಗೆ ಜಮ್ಮಭೂಮಿ ನೀಡಿದನು".[೭] ವೀರರಾಜನ ಕಾಲದಲ್ಲಿ ಮಲೆಯರು ಕೊಡಗಿಗೆ ಬಂದರು. ರಾಜನು ಇವರಿಗೆ ಮೂರ್ನಾಡಿನ ಕೋಡಂಬೂರು, ಕಿರುಂದಾಡು, ಬಿಳಿಗೇರಿ, ಪುಲಿಕೋಟು, ಮರಂದೋಡ, ನಾಪೋಕ್ಲು, ಬೊಮ್ಮಂಜಿ, ಮರಗೋಡು, ಪಾಲೂರು, ಹೆರವನಾಡು, ಬಲ್ಲಮಾವಟಿ ಇತ್ಯಾದಿ ಊರುಗಳಲ್ಲಿ ನೆಲೆ ನೀಡಿದನು. ಹೀಗೆ ನೆಲೆಗೊಂಡ ಇವರು ತಮ್ಮ ಊರು ಸೇರಲ್ಪಡುವ ನಾಡಿನ ವ್ಯಾಪ್ತಿಯೊಳಗೆ ತೆರೆಕಟ್ಟುವ ಆಚರಣೆಯನ್ನು ನಡೆಸತೊಡಗಿದರು.

**೨. ಸಾಮಾಜಿಕ ಸ್ಥಿತಿಗತಿ :**

ಪಣಿಕರಂತೆ ಮಲಿಯರಿಗೆ 'ಮನೆಪೆದ'(ಮನೆತನದ ಹೆಸರು) ಇರುವುದಿಲ್ಲ. ಎಲ್ಲಾ ಕುಟುಂಬದವರನ್ನು 'ಮಲಿಯಡ'(ಮಲಿಯರ) ಎಂದು ಕರೆಯಲಾಗುತ್ತದೆ. ಸುಮಾರು ೩೦೦ ಜನಸಂಖ್ಯೆಯನ್ನು ಹೊಂದಿದ್ದಾರೆ. ಶೇಕಡ ೭೦ ರಷ್ಟು ಜನರು ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಕೇವಲ ಶೇಕಡ ಒಂದರಷ್ಟು ಜನರು ಸ್ವಂತ ಜಮೀನನ್ನು ನಂಬಿ ಬದುಕುತಿದ್ದಾರೆ. ಉಳಿದಂತೆ ಚಾಲಕ, ಮೆಕ್ಯಾನಿಕ್‌ನಂತಹ ವೃತ್ತಿಗಳನ್ನು ಅವಲಂಬಿಸಿದ್ದಾರೆ.

ಕೊಡಗಿನ ಹಲವು ಗ್ರಾಮಗಳಲ್ಲಿ ಸಾಂಪ್ರದಾಯಿಕವಾಗಿ 'ಊಮೆ' ಕೊಡುವ ಪದ್ಧತಿಯಿದೆ. 'ಊಮೆ' ಎಂದರೆ ಆಯಾಯ ಊರಿನಲ್ಲಿ ನೆಲೆಸಿರುವ ತೆರೆಕಟ್ಟುವ ಸಮುದಾಯದವರು ತಮ್ಮ ಊರಿನಲ್ಲಿ ಜರುಗುವ ತೆರೆಕಟ್ಟುವ ಆಚರಣೆಗೆ ಭತ್ತದ ರೂಪದಲ್ಲಿ ಪಡೆಯುವ ಗೌರವ ಸಂಭಾವನೆ. ಪೂರ್ವದಲ್ಲಿ ನೂರು ಬಟ್ಟಿ ಭೂಮಿಗೆ ವಾರ್ಷಿಕವಾಗಿ ೧೦ ಸೇರು ಭತ್ತವೆಂದು ನಿಗದಿಯಾಗಿರುತ್ತಿತ್ತು. ಗ್ರಾಮದಲ್ಲಿರುವ ಪ್ರತಿಯೊಂದು ಕುಟುಂಬವು ಇದನ್ನು ಕಡ್ಡಾಯವಾಗಿ ನೀಡಬೇಕಿತ್ತು. ಇತ್ತೀಚಿನ ದಿನಗಳಲ್ಲಿ ಭತ್ತದ ಬದಲಿಗೆ ಹಣದ ರೂಪದಲ್ಲಿ ಸಂಭಾವನೆಯನ್ನು ನೀಡಲಾಗುತ್ತಿದೆ.

"ಒಮ್ಮೆ ತಲೆಗೆ ತಲಪಾಳಿ ಇಟ್ಟರೆ ಆತ ಬೇರೆ ವೃತ್ತಿಗೆ ಹೋಗುವುದಿಲ್ಲ. ತೆರೆಕಟ್ಟುವುದರಲ್ಲೇ ತೊಡಗಿಸಿಕೊಳ್ಳುತ್ತಾನೆ. ರಾತ್ರಿ ನಿದ್ರೆಯಿಲ್ಲದೆ ತೆರೆಕಟ್ಟಬೇಕಾಗುತ್ತದೆ. ಅದರ ಆಯಾಸದ ನಿವಾರಣೆಗೆ ನಮ್ಮ ಯುವಕರು ಮದ್ಯಪಾನದ ಮೊರೆ ಹೋಗುತ್ತಾರೆ. ನಂತರ ಇದರ ಚಟಕ್ಕೆ ಒಳಗಾಗಿ ಬದುಕನ್ನು ಹಾಳು ಮಾಡಿಕೊಳ್ಳುತಿದ್ದಾರೆ."[೮]ಎಂಬ ಆತಂಕ ಇವರಲ್ಲಿದೆ. ಆರ್ಥಿಕ ಮತ್ತು ಸಾಮಾಜಿಕವಾಗಿ ಹಿಂದುಳಿದಿರುವ ಮಲಿಯರನ್ನು ಕರ್ನಾಟಕ ಸರಕಾರವು ಪ್ರವರ್ಗ ೨ ಎಂದು ಪರಿಗಣಿಸಿದೆ. ಮಡಿಕೇರಿ ತಾಲೂಕಿನ ಮೂರ್ನಾಡು ಎಂಬಲ್ಲಿ ಮಲೆಯರ ಸಹಕಾರ ಸಂಘವನ್ನು ಸ್ಥಾಪಿಸಿಕೊಂಡಿದ್ದಾರೆ. ಇದು ನೂರು ಜನ ಸದಸ್ಯರನ್ನು ಹೊಂದಿದೆ. ಕೇರಳದಲ್ಲಿ ಮಲೆಯನ್ ಸಮುದಾಯವಿದ್ದು; ಕೇರಳ ಸರಕಾರ ಅವರನ್ನು ಪರಿಶಿಷ್ಟ ಜಾತಿಯವರೆಂದು ಗುರುತಿಸಿದೆ. ಈ ಹಿನ್ನೆಲೆಯಲ್ಲಿ ಮಲಿಯರು ತಮ್ಮನ್ನು ಪರಿಶಿಷ್ಟ ಜಾತಿ ಎಂದು ಪರಿಗಣಿಸಬೇಕೆಂಬ ಬೇಡಿಕೆಯನ್ನು ಈ ಸಂಘದ ಮೂಲಕ ಸರಕಾರಕ್ಕೆ ಸಲ್ಲಿಸಿದ್ದಾರೆ. ಹಾಗಾದರೂ ತಮಗೆ ಸರಕಾರಿ ಸೌಲಭ್ಯಗಳು ಸಿಗುವಂತಾಗಲಿ ಎಂಬ ನಿರೀಕ್ಷೆ ಅವರಲ್ಲಿದೆ.

**೩. ಪದ್ಧತಿ ಸಂಪ್ರದಾಯಗಳು :**

ಕೊಡವ ಸಂಸ್ಕೃತಿಯನ್ನು ಅಳವಡಿಸಿಕೊಂಡಿರುವ ಮಲಿಯರಿಗೆ ಐನ್‌ಮನೆ, ಕೈಮಡಗಳಿಲ್ಲ. ಮನೆಯ ಸಮೀಪವಿರುವ 'ಕೊರ್ತಿಕಲ್ಲ್'(ಕೊರ್ತಿಕಲ್ಲು) ಮತ್ತು ಕಾರೋಣನಿಗೆ ಮೀದಿ(ನೈವೇದ್ಯ) ಇಡುತ್ತಾರೆ. ವರ್ಷಕೊಮ್ಮೆ ಕಾರೋಣನಿಗೆ ಕೊಡುವ ಆಚರಣೆಯಿದೆ. ಮಲಿಯರು ಅಸುರ ಕ್ರಿಯೆಯ ತಾಂತ್ರಿಕ ಸಾಧಕರು. ತೆರೆಕಟ್ಟಿದ ಸಂದರ್ಭದಲ್ಲಿ ಪ್ರಾಣಿಬಲಿ ನೀಡುವಾಗ ಕೋಳಿ ಮತ್ತು ಹಂದಿಯ ಕೊರಳನ್ನು ಕಚ್ಚಿ ರಕ್ತ ಹೀರುವರು. ಜೀವನಾವರ್ತನ ಆಚರಣೆಗಳಾದ ಜನನದ ಆಚರಣೆ, ನಾಮಕರಣ, ಮದುವೆ, ಸಾವಿನ ಆಚರಣೆಗಳೆಲ್ಲವೂ ಕೊಡವ ಸಂಪ್ರದಾಯದಂತಿವೆ.

ಜ್ವರ, ಸನ್ನಿ, ತಲೆನೋವು, ಪಿತ್ತ, ಕಫ, ಹೊಟ್ಟೆನೋವು, ಮಲದೋಷ, ಮುಟ್ಟಿನ ತೊಂದರೆಗಳು, ಮೂಲವ್ಯಾಧಿ, ವಿಷಮಶೀತಜ್ವರ, ಬಾಲಗ್ರಹದಂತಹ ಕಾಯಿಲೆಗಳಿಗೆ ಮದ್ದು ನೀಡುವರು. ಮನೆಗೆ ಯಂತ್ರ, ಶ್ರೀಚಕ್ರ, ಪ್ರತಿಷ್ಠಾಚಕ್ರ, ಶರೀರರಕ್ಷೆಗಳನ್ನು ಮಾಡುತ್ತಾರೆ. ಕುತ್ತಿ ಇಡುವೊ(ಮನೆ ಕಟ್ಟಲು ಸೂಕ್ತ ಸ್ಥಳ ನೋಡುವುದು), ಚೌಂಡಿಕಲ್ಲು, ಕುಳಿಯಕಲ್ಲುಗಳ ಪ್ರತಿಷ್ಠಾಪನೆ ಮಾಡುತ್ತಾರೆ. ಭೈರವ, ನುಚ್ಚುಟೆ, ಕರಿವಾಳ್ ಭಗವತಿ, ಚೌಂಡಿನೆಲೆಗಳನ್ನು ಸ್ಥಾಪಿಸುತ್ತಾರೆ. ಮಲ್ತಿಯರೆಂದು ಕರೆಯಲಾಗುವ ಮಲಿಯ ಸ್ತ್ರೀಯರು ನುರಿತ ಸೂಲಗಿತ್ತಿಯರಾಗಿದ್ದಾರೆ. ಇವರು ಬಾಣಂತಿ ಹಾಗು ಸಣ್ಣ ಮಕ್ಕಳ ಕಾಯಿಲೆಗಳಿಗೆ ಔಷಧಿ ನೀಡುತ್ತಾರೆ. ಮಗುವಿಗೆ ದೃಷ್ಟಿಯಾಗಿದ್ದರೆ ಭಸ್ಮ, ನೂಲು ಮಂತ್ರಿಸಿ

ಕೊಡುವುದು ಇವರ ವೃತ್ತಿಧರ್ಮಕ್ಕೆ ಸೇರಿದ ಸೇವೆ ಎನ್ನುತ್ತಾರೆ.

**೪. ಮಲಿಯರ ಮಾತು :**

ಮಲಿಯರ ಆಡುಭಾಷೆ ಕೊಡವ. ಇವರ ಮಾತು ಪ್ರಾಸಬದ್ಧವಾಗಿರುತ್ತದೆ. ಮಾತಿಗೊಂದು ಗಾದೆಯ ಬಳಕೆ, ಹಾಸ್ಯ, ಮೂಲ ಕೊಡವಪದಗಳ ಬಳಕೆ ಇವರ ಮಾತಿನ ವಿಶೇಷತೆ. ಅದರ ಒಂದು ಮಾದರಿ ಹೀಗಿದೆ.

"ಮನೆಲ್ ಚಂಜಾದಿಯಡ ಕೂಡೆ ತಾರ್‌ಕಳಿ ಗೋಲಿಕಳಿ ತಕ್ಕ್
ಮಂದ್‌ಮಾನ ಊರ್‌ನಾಡ್‌ಲ್ ತೂಕತ್‌ರ ನ್ಯಾಯತಕ್ಕ್
ಪೊಣ್ಣ್‌ಮಕ್ಕಡ ಕೂಡೆ ಪೊಂದೆಳಿ ತಕ್ಕ್
ನಾಲ್ ಜನ ಕೂಡ್‌ನಕ ಎಲ್ಲಿಲ್ಲತ ತಕ್ಕ್
ಓರೋರ ಮೊಟ್ಟ್‌ಕ್ ಓರೋರ ತಕ್ಕ್"

ಮನೆಯಲ್ಲಿ ಸ್ನೇಹಿತರೊಂದಿಗೆ ಚಿನ್ನಿದಾಂಡು, ಗೋಲಿಯಾಟದ ಮಾತನಾಡಬೇಕು. ಮಂದ್‌ಮಾನಿ(ಪವಿತ್ರ ಮೈದಾನ) ಊರು ನಾಡಿನಲ್ಲಿ ಘನತೆಯ ನ್ಯಾಯದ ಮಾತು ಮುಖ್ಯ. ಹೆಂಡತಿ ಮಕ್ಕಳೊಂದಿಗೆ ಮುಗುಳ್ನಗೆಯಿಂದ ಮಾತನಾಡಬೇಕು. ನಾಲ್ಕು ಜನರು ಸೇರಿದಾಗ ಎಲ್ಲಿಲ್ಲದ ಮಾತು. ಒಂದೊಂದು ಹಂತಕ್ಕೆ ಒಂದೊಂದು ಮಾತು. ಹೀಗೆ ತೆರೆಕಟ್ಟುವಲ್ಲಿ, ಪ್ರಾಣಿಬಲಿಯ ಸಂದರ್ಭದಲ್ಲಿ, ತಪ್ಪಡಕ ಕಟ್ಟುವಲ್ಲಿ ಮಲಿಯರು ಆಡುವ ಮಾತು ವೈವಿಧ್ಯತೆಯಿಂದ ಕೂಡಿರುತ್ತದೆ.

**೫. ಮಲಿಯರು ಕಟ್ಟುವ ತೆರೆಗಳು :**

ನಾಪೋಕ್ಲು, ಅರಪಟ್ಟು, ಬಲಮುರಿ, ಬಿಳಿಗೇರಿ, ಮರಗೋಡು, ಹೊದ್ದೂರು, ಕಿಗ್ಗಾಲ್, ಭಾಗಮಂಡಲ, ಪೆಗ್ಗಳ, ಬೆಟ್ಟತ್ತೂರು ಗ್ರಾಮಗಳಲ್ಲಿ ಮಲಿಯರು ತೆರೆಗಳನ್ನು ಕಟ್ಟುತ್ತಾರೆ. ಈ ಕೆಳಗಿನ ತೆರೆಗಳು ಮಲಿಯರಲ್ಲಿ ಪ್ರಮುಖವಾದವುಗಳು.

೧. ವಿಷ್ಣುಮೂರ್ತಿ ತೆರೆ
೨. ಕುಟ್ಟಿಚಾತ ತೆರೆ
೩. ಕುಳಿಯಂದೆರೆ
೪. ಕರಿಬಾಳ ತೆರೆ
೫. ಭೈರವ ತೆರೆ
೬. ನುಚ್ಚುಟೆ ತೆರೆ
೭. ಎತ್ತ್‌ತೆರೆ
೮. ಅಜ್ಜಪ್ಪ ತೆರೆ
೯. ಕಾರೋಣ ತೆರೆ
೧೦. ಭಗವತಿ ತೆರೆ
೧೧. ಅಯ್ಯಪ್ಪ ತೆರೆ

೧೨. ನಂದಿಮಂಡ ತೆರೆ

೧೩. ಕುಳಿಯಮೆ ಚೌಂಡಿ ತೆರೆ

೧೪. ಕುಂದಮ್ಮೆ ಚೌಂಡಿ ತೆರೆ

೧೫. ಕೋಕಾಟ್‌ಚಾವುಂಡಿ ತೆರೆ

೧೬. ಚೀನಮ್ಮಕಾಳಿ/ಭದ್ರಕಾಳಿ ತೆರೆ

೧೭. ಮಂದಣಮೂರ್ತಿ ತೆರೆ

೧೮. ಪೂ ಭೈರವ ತೆರೆ

ಇವುಗಳಲ್ಲಿ ಕೆಲವು ತೆರೆಗಳನ್ನು ಆಯಾ ಊರಿನ ದೈವನೆಲೆಗಳಲ್ಲಿ ಕಟ್ಟುತ್ತಾರೆ. ಕೆಲವು ತೆರೆಗಳನ್ನು ಆಯಾ ಮನೆತನದವರು ತಮ್ಮ ಐನ್‌ಮನೆಗಳಲ್ಲಿ ಕಟ್ಟಿಸುತ್ತಾರೆ. ಇದನ್ನು 'ಮನೆತೆರೆ' ಎನ್ನುತ್ತಾರೆ. ಸಾಮಾನ್ಯವಾಗಿ ಆಯಾ ಊರಿನ ದೈವನೆಲೆಗಳಲ್ಲಿ ವಾರ್ಷಿಕವಾಗಿ ತೆರೆಗಳನ್ನು ಕಟ್ಟಲಾಗುತ್ತದೆ. ಮನೆತೆರೆಗಳು ಆಯಾ ಕುಟುಂಬದ ಸಂಪ್ರದಾಯದಂತೆ ಮೂರರಿಂದ ಐದು ವರ್ಷಗಳ ಅವಧಿಯಲ್ಲಿ ಜರುಗುತ್ತವೆ.

**೪.೩ ಬಣ್ಣರ ಭಾವನಾತ್ಮಕ ಸಂಬಂಧಗಳು**

ಕೊಡಗಿನ ತೆರೆಕಟ್ಟುವ ಸಮುದಾಯಗಳಲ್ಲಿ ಬಣ್ಣರು ವಿಶಿಷ್ಟರಾದವರು. ಕೊಡಗು ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ಬಣ್ಣರು/ಪಣಿಕರು ಶೀರ್ಷಿಕೆಯಲ್ಲಿ ಇವರ ವಿವರಗಳಿವೆ. "ಇವರು ಜಿಲ್ಲೆಗೆ ಮಲಬಾರಿನಿಂದ ವಲಸೆ ಬಂದವರು. ಇವರ ಮನೆಮಾತು ಮಲೆಯಾಳಿ, ಕೊಡವರ ಮತ್ತು ಇತರರ ಮನೆಗಳಲ್ಲಿ ಕಣಿಯರ ಹೇಳಿಕೆಗೆ ತಕ್ಕಂತೆ ಕಾರೋಣ ಹಾಗೂ ಭೂತ, ದೇವತೆಗಳ ಹಬ್ಬ ಜಾತ್ರೆಗಳಲ್ಲಿ ವೇಷ ಹಾಕುವುದು, ಕುಣಿಯುವುದು ಹಾಗೂ ಮೈಮೇಲೆ ಆವೇಶ ಬಂದಾಗ ಪ್ರಶ್ನೆಗೆ ಉತ್ತರ ಹೇಳುವುದು ಮಾಡುತ್ತಾರೆ. ಆವೇಶದಲ್ಲಿ ಇವರು ಮಲೆಯಾಳದಲ್ಲಿಯೇ ಮಾತನಾಡುತ್ತಾರೆ. ಗ್ರಾಮದೇವತೆಗಳ ಹಬ್ಬದಲ್ಲಿ ಕೋಲ ಕಟ್ಟುವುದೂ ಉಂಟು ಇಂತಹ ಸಂದರ್ಭಗಳಲ್ಲಿ ಹೆಚ್ಚಾಗಿ ಹೆಂಡ ಕುಡಿಯುತ್ತಾರೆ. ಬಣ್ಣರು ಹೆಚ್ಚಾಗಿ ಡೋಲು ಬಾರಿಸುತ್ತಾರೆ. ಪಣಿಕರು ತೆರೆಕಟ್ಟುವುದು ಮತ್ತು ಬಲಿಹೊಡೆಯುವುದು ಮಾಡುತ್ತಾರೆ"[೯]ಎಂದು ದಾಖಲಾಗಿದೆ.

ಪಣಿಕರು ಮತ್ತು ಮಲಿಯರು ಕೊಡಗಿಗೆ ಬಂದ ಸಂದರ್ಭದಲ್ಲಿಯೇ ಬಣ್ಣರೂ ಬಂದು ನೆಲೆಸಿರುತ್ತಾರೆ. ಇವರಲ್ಲಿ ಅಲಕ್‌ಬಣ್ಣ ಮತ್ತು ಆಟ್‌ಬಣ್ಣ ಎಂಬ ಎರಡು ಪಂಗಡಗಳಿವೆ. ಅಲಕ್ ಎಂದರೆ ಬಣ್ಣ ಎಂದು ಅರ್ಥ. ಬಟ್ಟೆಗಳಿಗೆ ಬಣ್ಣ ಹಾಕುವುದು ಮತ್ತು ಬಟ್ಟೆ ಒಗೆಯುವುದು ಇವರ ವೃತ್ತಿಯಾದುದರಿಂದ ಈ ಹೆಸರು ಬಂದಿದೆ. ಇವರು ತೆರೆಯನ್ನು ಕಟ್ಟುವುದಿಲ್ಲ. ಕೊಡವ ಭಾಷೆಯಲ್ಲಿ 'ಆಟ್' ಎಂದರೆ ನೃತ್ಯ/ಕುಣಿತ ಎಂದು ಅರ್ಥ. ತೆರೆಕಟ್ಟಿ ಕುಣಿಯುವುದು ಇವರ ಪ್ರಮುಖ ಕಸುಬಾಗಿರುವುದರಿಂದ ಆಟ್‌ಬಣ್ಣ ಎಂಬ ಹೆಸರು ಬಂದಿದೆ. ಇವರನ್ನು

'ತೆರೆಬಣ್ಣರೆಂದೂ ಕರೆಯುತ್ತಾರೆ.

೧. ಹಿನ್ನೆಲೆ :

ಕೊಡವ ಜನಪದಗೀತೆಯ ಪ್ರಕಾರ ಬಣ್ಣರ ಮೂಲ ಸ್ಥಳ ಕೇರಳದ ಪಯ್ಯಾವೂರ್. ಚೋಲಿ ಪೊವ್ವೇದಿಯಮ್ಮೆರ ಪಾಟ್(ಚೋಲಿ ಪೊವ್ವೇದಿಯಮ್ಮ ದೇವಿಯ ಹಾಡು) ಎಂಬ ಕೊಡವ ಜನಪದಗೀತೆಯಲ್ಲಿ ಬಣ್ಣರ ಮೂಲದ ಬಗ್ಗೆ ಉಲ್ಲೇಖವಿದೆ. ಬಣ್ಣರು ಚೋಲಿ/ಚೋಯಿಲಿ ಪೊವ್ವೇದಿಯಮ್ಮೆಯೊಂದಿಗೆ ಕೊಡಗಿಗೆ ಬಂದವರು. ಮಾಣಿಕ ಮಲೆನಾಡ್(ಕೇರಳ)ನ ಚೋಯಿಲಿ ಎಂಬ ಸ್ಥಳದಲ್ಲಿನ ಹುತ್ತದಲ್ಲಿ ಉದ್ಭವಿಸಿದವಳು ಪೊವ್ವೇದಿಯಮ್ಮೆ. ಈಕೆಗೆ ಪೊವ್ವದಿ, ಭಗವತಿ ಇತ್ಯಾದಿ ಹೆಸರುಗಳಿವೆ. ಶಾಶ್ವತವಾಗಿ ಒಂದೆಡೆ ನೆಲೆಸಬೇಕೆಂಬ ಉದ್ದೇಶದಿಂದ ಪೊವ್ವೇದಿಯಮ್ಮೆ ಸೂಕ್ತ ಸ್ಥಳವನ್ನು ಅರಸುತ್ತಾ ಚೋಲಿಯನ್ನು ಬಿಟ್ಟು ಹೊರಡುತ್ತಾಳೆ. ಮಾರ್ಗದಲ್ಲಿ ಮಹಾವಿಷ್ಣು, ಅಂಜಿಕೂಟ್(ಐದುಕೂಟ) ಮೂರ್ತಿಗಳಾದ ಕುಟ್ಟಿಚಾತ, ಭೈರವ, ಕರಿಕಾಳ, ಕುಳಿಯ, ನುಚ್ಚುಟೆ ದೈವಗಳು ಭೇಟಿಯಾಗಿ ಪೊವ್ವೇದಿಯಮ್ಮೆಯೊಂದಿಗೆ ಪ್ರಯಾಣ ಬೆಳೆಸುತ್ತಾರೆ. ಮುಂದೆ ಮಾಂಜಾಟ್ ಊರಿನ ಮಲೆಯ ಹಾಗೂ ಮೊವಾಯಿಯ ಕಣಿಯ ಇವರ ಗುಂಪನ್ನು ಸೇರಿಕೊಳ್ಳುತ್ತಾರೆ.

ಪಯ್ಯಾವೂರ್ ಎಂಬಲ್ಲಿ 'ಬಣ್ಣ' ಸಮುದಾಯದ ವ್ಯಕ್ತಿಯೊಬ್ಬ ಬಂದು ದೇವಿಗೆ ನಮಸ್ಕರಿಸಿ ತಾನೂ ಬರುತ್ತೇನೆ ಎನ್ನುತ್ತಾನೆ. ಅಲ್ಲಿಂದ ಮುಂದೆ ತೆರಳಿದಾಗ ಬಣ್ಣಾಯಿ ಎಂಬಲ್ಲಿ ಕಾಟಾಳ ಸಮುದಾಯದವನು ಗುಂಪನ್ನು ಸೇರಿಕೊಳ್ಳುತ್ತಾನೆ. ಹೀಗೆ ಎಲ್ಲರೂ ಕೊಡತೋರ ಕಂಡಿ ಎಂಬ ಹಾದಿಯ ಮೂಲಕ ಕೊಡಗಿಗೆ ಬರುತ್ತಾರೆ. ಚೋಮ ಕುಂದ್ ಬೆಟ್ಟದಲ್ಲಿ ತುಂಬೆಮಲೆ ದೇವರಿಗೆ ನಮಸ್ಕರಿಸಿ ನೆಲೆ ಕೇಳುತ್ತಾರೆ. ತುಂಬೆಮಲೆ ದೇವನು ತನ್ನ ಬಿಲ್ಲಿನಿಂದ ಬಾಣ ಪ್ರಯೋಗಿಸುತ್ತಾನೆ. ಬಾಣ ಬಿದ್ದ ಪ್ರದೇಶದ ಗಡಿಯೊಳಗೆ ಎಲ್ಲಿ ಬೇಕೋ ಅಲ್ಲಿ ನೆಲೆಸಿರಿ ಎಂದು ಹರಸುತ್ತಾನೆ. ಹೀಗೆ ಪೊವ್ವೇದಿ ಕೊಡಗಿನ ಕ್‌ರ್‌ಂದಾಡ್ ಗ್ರಾಮದಲ್ಲಿ ಮೊದಲು ನೆಲೆಸುತ್ತಾಳೆ. ಅದರ ಸಮೀಪದಲ್ಲಿಯೇ ಮಹಾವಿಷ್ಣು ಮತ್ತು ಅಂಜಿಕೂಟ್ ಮೂರ್ತಿಗಳು ನೆಲೆ ನಿಲ್ಲುತ್ತಾರೆ. ಇವರೊಂದಿಗೆ ಬಂದ 'ಅಞುತ' ಬಣ್ಣನು ಪೊದವಾಡ ಗ್ರಾಮದಲ್ಲಿ ನೆಲೆನಿಲ್ಲುತ್ತಾನೆ. ಹೀಗೆ ಬಣ್ಣರು ಕೊಡಗಿನಲ್ಲಿ ನೆಲೆನಿಂತರು.

೨. ಸಾಮಾಜಿಕ ಬದುಕು :

ಬಣ್ಣರ ಮೂಲ ಕಸುಬು ತೆರೆಕಟ್ಟುವುದು. ಬಣ್ಣರಿಗೂ ಮನೆಪೆದ(ಮನೆತನದ ಹೆಸರು) ಗಳಿವೆ. ಬಣ್ಣರ, ಬೊಪ್ಪಚಂಡ, ತೆಕ್ಕಡಮ್ಮಂಡ, ಬುಟ್ಟಂಡ, ಭೀಮಚಂಡ, ಬಾಚುರ ಮನೆ ಹೆಸರುಗಳಿಂದ ಇವರ ಕುಟುಂಬಗಳನ್ನು ಗುರುತಿಸಲಾಗುತ್ತದೆ. ಇವರಲ್ಲಿ ಬೊಪ್ಪಚಂಡ ಮನೆತನದವರು ತೆರೆಕಟ್ಟುವುದಿಲ್ಲ. ಇತ್ತೀಚೆಗೆ ತೆಕ್ಕಡಮ್ಮಂಡ

ಮನೆತನದವರು ತೆರೆಕಟ್ಟುವುದನ್ನು ನಿಲ್ಲಿಸಿದ್ದಾರೆ. ಕೆದಮುಳ್ಳೂರು, ಬೋಟೋಳಿ, ಕರಡ, ಕಿಗ್ಗಾಲ್, ಪಚ್ಚಾಟ್ ಮತ್ತು ಹಾಲುಗುಂದ ಗ್ರಾಮಗಳಲ್ಲಿ ಬಣ್ಣರು ನೆಲೆಸಿದ್ದಾರೆ. ಕರಡ ಗ್ರಾಮದಲ್ಲಿ ನೆಲೆಸಿರುವ ಬಣ್ಣರು ತಮ್ಮ ಮೂಲವೃತ್ತಿ ತೆರೆಕಟ್ಟುವುದನ್ನು ತ್ಯಜಿಸಿ ಕೃಷಿ ಹಾಗು ಕೃಷಿಯೇತರ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ.

ಸುಮಾರು ೨೦೦ ಜನಸಂಖ್ಯೆ ಹೊಂದಿರುವ ಇವರನ್ನು ಕರ್ನಾಟಕ ಸರಕಾರ ಬಿ.ಸಿ.ಎಂ. ೧ ಎ ಎಂದು ವರ್ಗೀಕರಿಸಿದೆ. ಬಣ್ಣಂಡ ಮತ್ತು ಬಣ್ಣರ ಮನೆತನದವರು 'ಜಮ್ಮಾ'(ಜಮ್ಮ ಭೂಮಿಯನ್ನು) ಹೊಂದಿದ್ದಾರೆ. ಪಣಿಕ ಮತ್ತು ಮಲೆಯರಂತೆ ಇವರೂ 'ಊಮೆ'ಯನ್ನು ಪಡೆಯುತ್ತಾರೆ. ತೆರೆಕಟ್ಟಿಸುವ ಮುನ್ನ ಆಯಾಯ ಮನೆತನದವರು ಅಥವಾ ಊರಿನವರು ಬಣ್ಣರ ಮನೆಗಳಿಗೆ ತೆರಳಿ ವೀಳ್ಯ ನೀಡಿ ಆಹ್ವಾನಿಸುತ್ತಾರೆ. ತೆರೆಯೊಂದಕ್ಕೆ ೫೦೦೦ ದಿಂದ ೨೫೦೦೦ ರೂಪಾಯಿಗಳನ್ನು ಸಂಭಾವನೆಯಾಗಿ ಪಡೆಯುತ್ತಾರೆ. ಈ ಸಂದರ್ಭದಲ್ಲಿ ಐದು ಅಥವಾ ಆರು ಮಂದಿ ಭಾಗವಹಿಸುತ್ತಾರೆ. ವಾರ್ಷಿಕವಾಗಿ ೪೦-೫೦ ತೆರೆಗಳನ್ನು ಕಟ್ಟುವ ಬಣ್ಣರು ತಮ್ಮ ಊರಿನಲ್ಲಿ ತೆರೆಗಳನ್ನು ದೇವರ ಸೇವೆಯೆಂದು ಉಚಿತವಾಗಿ ತೆರೆಕಟ್ಟುತ್ತಾರೆ. ಉಳಿದ ದಿನಗಳಲ್ಲಿ ಸ್ವಂತ ಜಮೀನುಗಳಲ್ಲಿ ಕೃಷಿ ಮಾಡುತ್ತಾ; ಕೃಷಿಕಾರ್ಮಿಕರಾಗಿ, ಗ್ಯಾರೇಜ್‌ಗಳಲ್ಲಿ, ಆಟೋಚಾಲಕ, ಬಸ್ ನಿರ್ವಾಹಕರಾಗಿ ಕೆಲಸ ಮಾಡುತ್ತಾ ಬದುಕು ನಡೆಸುತ್ತಾರೆ.

ಕೊಡವರಂತೆ ಬಣ್ಣ ಸಮುದಾಯದವರಿಗೂ ಕುಟುಂಬದ ಮೂಲಮನೆ ಯಿದೆ. ಕರಡ, ಹಾಲುಗುಂದ, ಬೋಟೋಳಿ ಗ್ರಾಮದಲ್ಲಿ ನೆಲೆಸಿರುವವರಿಗೆ ಕೈಮಡ ಇದೆ. ಕೆದಮುಳ್ಳೂರು ಗ್ರಾಮದಲ್ಲಿರುವ ಬಣ್ಣರಿಗೆ ಅಜ್ಜಪ್ಪನ ನೆಲೆಯಿದೆ. ಪತ್ತಾಲೋದಿ(ಕಾವೇರಿ ಸಂಕ್ರಮಣ ಕಳೆದು ಹತ್ತು ದಿನಗಳ ಅವಧಿ) ಸಂದರ್ಭದಲ್ಲಿ ಕಾರೋಣನಿಗೆ ಎಡೆ ಹಾಕುವ 'ಕಾರೋಣಂಗ್ ಕೊಡ್‌ಪ' ಆಚರಣೆ ಮಾಡುತ್ತಾರೆ. ಕೆದಮುಳ್ಳೂರಿನಲ್ಲಿ ನೆಲೆಸಿರುವ ಬಣ್ಣರಿಗೆ ಕೊಡವ ಸಮುದಾಯದವರಾದ ಮಾಳೇಟಿರ ಮನೆತನದವರು ನೀಡಿದ ಹನ್ನೊಂದು ಕಾಲು ಏಕರೆ ಜಮ್ಮಾ ಭೂಮಿಯಿದೆ. ಕರಡ ಊರಿನಲ್ಲಿ ನೆಲೆಸಿರುವವರಿಗೆ ಜಮ್ಮ, ಜಾಗೀರು, ಉಂಬಳಿ, ಮತ್ತು ಜಮ್ಮಾಮಲೆಯೂ ಇದೆ. ಪೊದವಾಡ ಗ್ರಾಮದಲ್ಲಿರುವವರು ಜಮ್ಮಾ ಭೂಮಿಯನ್ನು ಮಾರಾಟ ಮಾಡಿದ್ದಾರೆ. ಆರ್ಥಿಕವಾಗಿ ಸ್ಥಿತಿವಂತರಲ್ಲದ ಬಣ್ಣರು ನೂರು ಬಟ್ಟಿಯೊಳಗೆ ಭೂಮಿಯನ್ನು ಹಾಗೂ ಸಣ್ಣ ಕಾಫಿತೋಟಗಳನ್ನು ಹೊಂದಿರುವರು. ಬಣ್ಣರಲ್ಲಿ ಅವರದೇ ಆದ ಸಂಘ-ಸಂಸ್ಥೆಗಳಿಲ್ಲ. ಕರಡ ಗ್ರಾಮದಲ್ಲಿ ನೆಲೆಸಿರುವವರು ಮನೆಫಂಡ್ ಎಂಬ ಪುಟ್ಟ ಕೌಟುಂಬಿಕ ಸಂಘವನ್ನು ರೂಪಿಸಿಕೊಂಡಿದ್ದಾರೆ. ಕಡಿಮೆ ಜನಸಂಖ್ಯೆ ಹೊಂದಿರುವ ಇವರಿಗೆ ಆರ್ಥಿಕ ಭದ್ರತೆಯಾಗಲಿ, ರಾಜಕೀಯ ಬಲವಾಗಲೀ ಇಲ್ಲ. ಸರಕಾರದಿಂದ ಯಾವುದೇ

ವಿಶೇಷ ಸೌಲಭ್ಯ ಸವಲತ್ತುಗಳು ಸಿಗುತ್ತಿಲ್ಲ.

**೩. ಪದ್ಧತಿ ಸಂಪ್ರದಾಯಗಳು :**

ಕೊಡವರಿಗು ಬಣ್ಣರಿಗೂ ಪದ್ಧತಿ ಸಂಪ್ರದಾಯಗಳಲ್ಲಿ ಯಾವುದೇ ವ್ಯತ್ಯಾಸ ಕಂಡುಬರುವುದಿಲ್ಲ. ಮಾದೇವಿ(ದುರ್ಗೆ) ಬಣ್ಣರ ಮನೆದೇವತೆ. ಮಾಗುರು ಹಾಗೂ ಕಾರೋಣರನ್ನೂ ಆರಾಧಿಸುತ್ತಾರೆ. ಶಿವರಾತ್ರಿಯ ಮರುದಿನ ಮಾದೇವಿಗೆ ಕೋಳಿಬಲಿ ನೀಡುತ್ತಾರೆ. ಈ ಸಂದರ್ಭದಲ್ಲಿ ಹಾಲು ಹಣ್ಣನ್ನು ಇಟ್ಟು ಗಣಪತಿ ಪೂಜೆ ಹಾಗೂ ಭದ್ರಪೂಜೆ ಮಾಡುತ್ತಾರೆ. ಅನಂತರ ದೇವಿಗೆ ಬಲಿ ನೀಡಿ ಕೋಳಿಸಾರಿನ ಎಡೆ ಇಡುತ್ತಾರೆ. ಮನೆಯಲ್ಲಿ ತೊಂದರೆ ಕಾಣಿಸಿಕೊಂಡಾಗ ಕಲ್ಯಾಟಜ್ಜಪ್ಪನಿಗೆ ಕೋಳಿಯನ್ನು ಹರಕೆ ಬಿಡುತ್ತಾರೆ. ಮದುವೆಗೆ ಮುನ್ನ ಕೆಮಿಕುತ್ತಿ ಮಂಗಲ (ಕಿವಿ ಚುಚ್ಚುವ ಶಾಸ್ತ್ರ) ಮಾಡುತ್ತಾರೆ. ಕಿವಿ ಚುಚ್ಚದವನಿಗೆ ಮದುವೆ ಮಾಡಬಾರದೆಂಬ ಪ್ರತೀತಿಯಿದೆ. ಪ್ರಬುದ್ಧನಾದ ವ್ಯಕ್ತಿ ಕಿವಿ ಚುಚ್ಚದೆ ಮರಣ ಹೊಂದಿದರೆ ಸ್ವರ್ಗದಲ್ಲಿ ಹಾವಿನಮುಳ್ಳಿನಿಂದ ಚುಚ್ಚುತ್ತಾರೆಂಬುದು ನಂಬಿಕೆ. ಕೊಡವ ಜನಪದಗೀತೆಗಳಾದ ಚಾಮುಪಾಟ್(ಸಾವಿನ ಹಾಡು), ಕಾರೋಣ ಪಾಟ್(ಕಾರೋಣರ ಹಾಡು), ಪುತ್ತರಿ ಪಾಟ್(ಹುತ್ತರಿ ಹಾಡು) ಗಳನ್ನು ಬಣ್ಣರು ಹಾಡುತ್ತಾರೆ. ಬಣ್ಣ ಸಮುದಾಯ ಹಾಗೂ ಕೊಡಗಿನಲ್ಲಿ ನೆಲೆಸಿರುವ ಕೊಡವ ಮಡಿಯೋಳ(ಮಡಿವಾಳ) ಸಮುದಾಯ ಒಂದೇ ಮೂಲದವು ಎನ್ನಲಾಗುತ್ತದೆ. ಆದುದರಿಂದ ಆಟ್‌ಬಣ್ಣ, ಅಲಕ್‌ಬಣ್ಣ ಹಾಗೂ ಕೊಡವ ಮಡಿಯೋಳರ ನಡುವೆ ವೈವಾಹಿಕ ಪದ್ಧತಿ ಇದೆ.

**೪. ಬಣ್ಣರು ಮತ್ತು ತೆರೆಗಳು :**

ಆಯಾಯ ದೈವಗಳಿಗೆ ಅನುಗುಣವಾಗಿ ವೇಷಭೂಷಣಗಳನ್ನು ಧರಿಸಿ ತೆರೆಕಟ್ಟಿ ಆರಾಧಿಸುವುದು ಬಣ್ಣರ ಮೂಲ ವೃತ್ತಿ. ಈ ಸಂದರ್ಭದಲ್ಲಿ ಮುಖ ಹಾಗೂ ದೇಹದ ಭಾಗಗಳಿಗೆ ಬಣ್ಣವನ್ನು ಲೇಪಿಸುವುದರಿಂದ ಬಣ್ಣರು ಎಂಬ ಹೆಸರು ಅನ್ವರ್ಥವಾಗಿದೆ. ಕೇರಳದಲ್ಲಿ ಬಣ್ಣರನ್ನು 'ಎಟ್ಟ್‌ಲ ಕಲ್ಲಾಡಿ' ಎಂದು ಕರೆಯುತ್ತಾರೆ. ಕೊಡಗಿನ ಕೆಲವು ಗ್ರಾಮಗಳ ದೇವಾಲಯಗಳಲ್ಲಿ ಮಲಿಯ, ಬಣ್ಣ ಮತ್ತು ಪಣಿಕರು ಒಟ್ಟಾಗಿ ತೆರೆಕಟ್ಟುತ್ತಾರೆ. ಈ ಸಂದರ್ಭದಲ್ಲಿ ತೆರೆಕಟ್ಟಿದ ಮಲಿಯ ಅಥವಾ ಪಣಿಕರು ಬಣ್ಣನನ್ನು 'ಕಲ್ಲಾಡಿ' ಎಂದು ಕರೆಯುತ್ತಾನೆ.

ಕೊಡಗಿನ ಕೊಡವ ಭಾಷಿಕರ ಐನ್‌ಮನೆಗಳಲ್ಲಿ ಹಾಗೂ ಊರಿನ ದೇವಸ್ಥಾನಗಳಲ್ಲಿ ಈ ಕೆಳಗಿನ ತೆರೆಗಳು ಆಚರಿಸಲ್ಪಡುತ್ತವೆ:

೧. ವಿಷ್ಣುಮೂರ್ತಿ ತೆರೆ
೨. ಅಯ್ಯಪ್ಪ ತೆರೆ
೩. ಭದ್ರಕಾಳಿ ತೆರೆ

೪. ಪುದಿಯೋದಿ ತೆರೆ

೫. ಕಲ್ಯಾಟಜ್ಜಪ್ಪ ತೆರೆ

೬. ಒಕ್ಕದ(ಕುಟುಂಬದ) ಅಜ್ಜಪ್ಪ ತೆರೆ

೭. ಮಾದೇರಪ್ಪ ತೆರೆ

೮. ಕರಿಂಚವುಂಡಿ ತೆರೆ

೯. ಪುಲಿಚವುಂಡಿ ತೆರೆ

೧೦. ಕಾರೋಣ ತೆರೆ

೧೧. ಕಾರಣ್‌ಚಿ/ಚೊಡಲ್‌ಚಿ/ಸೊಡಲ್‌ಚಿ ತೆರೆ

ಇವುಗಳಲ್ಲಿ ಭದ್ರಕಾಳಿ, ಅಯ್ಯಪ್ಪ, ಪುದಿಯೋದಿ ತೆರೆಗಳು ಬಣ್ಣರಿಗೆ ಮೀಸಲಾದವುಗಳಾಗಿವೆ. ಈ ತೆರೆಗಳನ್ನು ಇತರ ತೆರೆಕಟ್ಟುವ ಸಮುದಾಯಗಳು ಕಟ್ಟುವಂತಿಲ್ಲ ಎಂಬ ಅಲಿಖಿತ ನಿಯಮವಿದೆ. ಇದನ್ನು ಮೀರಿ ಕಟ್ಟಿದರೆ ಅವರಿಗೆ ದೋಷ ಉಂಟಾಗುತ್ತದೆ ಎಂಬುದು ನಂಬಿಕೆ. ತೆರೆಕಟ್ಟಿದ ಸಂದರ್ಭದಲ್ಲಿ ಕೆಂಡದ ರಾಶಿಯ ಮೇಲೆ ಬೀಳುವ 'ಮೇಲೇರಿ'(ಕೆಂಡ ಸೇವೆ) ಯನ್ನು ಬಣ್ಣರು ಮಾಡುವಂತಿಲ್ಲ. ಆದರೆ ವರ್ತಮಾನದಲ್ಲಿ ತೆರೆಕಟ್ಟುವವರ ಸಂಖ್ಯೆ ಕ್ಷೀಣಿಸುತ್ತಿರುವುದರಿಂದ ಸಂದರ್ಭಾನುಸಾರ ಈ ಆಚರಣೆಯನ್ನು ಮಾಡುತ್ತಾರೆ.

ಬಣ್ಣರು ತೆರೆಕಟ್ಟುವ ಮುನ್ನ ಮೂರು ದಿನಗಳ ವ್ರತಾಚರಣೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಅನ್ನವನ್ನು ಹೊರತುಪಡಿಸಿ ಇತರ ಆಹಾರವನ್ನು ಸೇವಿಸುತ್ತಾರೆ. ಮಾಂಸಾಹಾರ ತ್ಯಜಿಸಿ ಶುದ್ಧಮುದ್ರಿಕೆಯಲ್ಲಿರುತ್ತಾರೆ. ಇವರು ತಮ್ಮನ್ನು ವಿಷ್ಣುಭಕ್ತರು ಎನ್ನುತ್ತಾರೆ. ಹಾಗಾಗಿ ತೆರೆಕಟ್ಟುವ ಮುನ್ನ ಹರಿನಾಮ ಸ್ಮರಣೆಯನ್ನು ಮಾಡುತ್ತಾರೆ.

"ಹರಿ ವಾರ್ಧಿಕ ವಾನಾಳು,
ಸಂಪತ್ತು, ಸಾಗರ ಎಲ್ಲಾ ಕೂಡಿತ್
ಅರಿಯತವನೊಬ್ಬನ ಕುಳ್‌ಪ್‌ಚಿಟ್ಟಿತ್ ತೆರೆ ಕೈಪ್‌ಚಿಡುವ.
ಅರ್‌ಂಜಿತೋ ಅರಿಯತೆಯೋ ಎನ್ನೇಂಗಿ
ತಟ್ಟ್ ಮುಟ್ಟ್ ಬಾತ್‌ಂದಾಚೇಂಗಿ
ಆಯಿರ ಮಾಪು ಮಾಡಿತ್
ಕಾತ್ ರಕ್ಷಣೆ ಮಾಡಿತಪ್ಪ ಭಾರ
ನೀಕ್ ಕೂಡಿತುಂಡ್."

ಈ ಮೇಲಿನ ಕೊಡವಭಾಷಾ ನುಡಿಗಳನ್ನು ಕನ್ನಡದಲ್ಲಿ ಹೀಗೆ ವಿವರಿಸಲಾಗಿದೆ. "ಹರಿಯ ಅಪೇಕ್ಷೆಯಂತೆ ಸಂಪತ್ತು ಸಮೃದ್ಧಿಗಾಗಿ ಸಂಸಾರ ಸಾಗರದೊಂದಿಗೆ ಸೇರಿ ಏನೂ ಅರಿಯದ ವ್ಯಕ್ತಿಯನ್ನು ಸ್ನಾನ ಮಾಡಿಸಿ ತೆರೆಕಟ್ಟಲು ತೀರ್ಮಾನಿಸಿದ್ದಾರೆ. ಅರಿತೋ ಅರಿಯದೆಯೋ ದೋಷಗಳಾದಲ್ಲಿ; ಅದಕ್ಕೆ ಸಾವಿರ

ಕ್ಷಮೆಯನ್ನು ನೀಡಿ ಕಾಪಾಡುವ ಭಾರ ನಿನಗೆ ಸೇರಿದೆ."ಎಂದು ಪ್ರಾರ್ಥಿಸುತ್ತಾರೆ.

ಕೊಡವ ಮತ್ತು ಇತರ ಕೊಡವ ಭಾಷಿಕ ಸಮುದಾಯದವರ ಮನೆಗಳಲ್ಲಿ ಹಾಗು ವಿವಿಧ ಊರಿನ ದೇವಸ್ಥಾನಗಳಲ್ಲಿ ಬಣ್ಣರು ತೆರೆಯನ್ನು ಕಟ್ಟುತ್ತಾರೆ. ಅಜ್ಜಪ್ಪ ಹಾಗೂ ಕಾರೋಣ(ಆಯಾ ವಂಶದ ಗತಿಸಿದ ಹಿರಿಯ) ತೆರೆಯನ್ನು ಕಟ್ಟುವ ಮುನ್ನ ಕೊಡವ ಜನಪದರು ದುಡಿಯ ಹಿಮ್ಮೇಳದೊಂದಿಗೆ ಅವರ ಸಾಧನೆಯನ್ನು ಹೀಗೆ ಹಾಡುತ್ತಾರೆ.

"ಏದ್ ನಾಡ್ ಏದೂರ್ ಚಂಜಾದ್ಯಳೇ
ಪಾಡಿ ನೋಟಿ ಕಾಂಬಕ ಚಂಜಾದ್ಯಳೇ
ಊರ್ ಪೆದ ಚಾಯುಳ್ಳ ಚಂಜಾದ್ಯಳೇ
ಈ ಊರ್ ನಡುವುಲ್ ಚಂಜಾದ್ಯಳೇ
ಒಕ್ಕ ಪೆದ ಚಾಯುಳ್ಳ ಚಂಜಾದ್ಯಳೇ
ಪಾಡಿ ನೋಟಿ ಕಾಂಬಕೋ ಚಂಜಾದ್ಯಳೇ
ಮಾಲೆ ಚೂಡಿ ಮಾಳೇಟಿ ಚಂಜಾದ್ಯಳೇ..."

ಕೊಡಗಿನಲ್ಲಿರುವ ಯಾವ ನಾಡಿನ ಯಾವ ಊರು ಸುಂದರವಾಗಿದೆ. ಆ ಊರಿನ ನಡುವಿನಲ್ಲಿ ಯಾವ ಮನೆತನದ ಹೆಸರು ಸೊಗಸಾಗಿದೆ. ಹೀಗೆ ಹಾಡಿ ನೋಡುವಾಗ ಮಾಲೆಯನ್ನು ಮುಡಿವ ಮಾಳೇಟಿರ ಮನೆತನ ಸುಂದರವಾಗಿದೆ. ಎಂದು ತೆರೆಕಟ್ಟಿಸುವ ಕುಟುಂಬದ ಮನೆತನದ ಹೆಸರನ್ನು ಹೊಗಳುತ್ತಾ ಹಾಡುತ್ತಾರೆ. ಕೊಡವ ಹಾಡುಗಾರರು ದುಡಿಯನ್ನು ಬಾರಿಸುತ್ತಾ ಹಾಡಿದ ನಂತರ ಬಣ್ಣರು ಚಂಡೆ ಬಾರಿಸುತ್ತಾ ಹಾಡುತ್ತಾರೆ.

ಅಜ್ಜಪ್ಪ ತೆರೆ ಕಟ್ಟುವ ಸಂದರ್ಭದಲ್ಲಿ ಅಜ್ಜಪ್ಪನ ಬದುಕು ಮತ್ತು ಸಾಧನೆಯನ್ನು ಹಾಡಲಾಗುತ್ತದೆ. ಇಲ್ಲಿಯೂ ದುಡಿ ಹಿಮ್ಮೇಳವಾಗಿ ಬಳಕೆಯಾಗುತ್ತದೆ.

"ಏದ್ ನಾಡ್ ಏದ್ ಊರ್ ಚಂಜಾದ್ಯಳೇ
ಪಾಡಿ ನೋಟಿ ಕಾಂಬಕ ಚಂಜಾದ್ಯಳೇ
ಬೈತೂರಪ್ಪ ದೇವನೆಲೆ ಚಂಜಾದ್ಯಳೇ
ಆನೆಬೆಪ್ಪುನಾಡ್‌ರ ಚಂಜಾದ್ಯಳೇ
ಪಂಡ್ ಪಂಡ್ ಕಾಲತ್ ಚಂಜಾದ್ಯಳೇ
ಕೇಳೀಪೋನ ಅಜ್ಜಪ್ಪಂಗ್ ಚಂಜಾದ್ಯಳೇ
ಪುಟ್ಟಿ ನಿಂಗ ಬೊಳಂದಿರೋ ಚಂಜಾದ್ಯಳೇ
ನಿಂಗ ಪುಟ್ಟಿ ಬೊಳೆವಕ ಚಂಜಾದ್ಯಳೇ
ತೂಕಿತಿಂಜ ಕೈತೋಕ್ ಚಂಜಾದ್ಯಳೇ
ತಾಂಡೊಟ್ಟ್‌ಕ್ ಬೊಡಿ ಪೊಟ್ಟ್‌ಚಿ ಚಂಜಾದ್ಯಳೇ

ಕ್‌ಣ್ಣಕುಞಿ ಪರ್‌ಂದತ್ ಚಂಜಾದ್ಯಳೇ"

ಹೀಗೆ ಮುಂದುವರೆಯುವ ಈ ಗೀತೆಯು ತೆರೆಕಟ್ಟಿ ಆರಾಧಿಸಲ್ಪಡುವ ಕುಟುಂಬದ ಅಜ್ಜಪ್ಪನು ಹುಟ್ಟಿ ಬೆಳೆದ ಕಥೆಯನ್ನು ಹೇಳುತ್ತದೆ. ಈತ ಆನೆಬೆಪ್ಪುನಾಡಿನವನು. ಇವನ ತಂದೆ ಊರಿಗೆ ಹೆಸರುವಾಸಿಯಾದವನು. ಅಜ್ಜಪ್ಪ ಜನಿಸಿದಾಗ ತೂಗು ಹಾಕಿದ ಕೋವಿ ಇದ್ದಕಿದ್ದಂತೆ ಗುಂಡು ಹಾರಿಸಿತು. ಕುಟುಂಬಕ್ಕೆ ವೀರನ ಆಗಮನವಾಯಿತು. ಎಂದು ಹಾಡುತ್ತಾರೆ. ಆರಂಭದಲ್ಲಿ ದುಡಿವಾದ್ಯದೊಂದಿಗೆ ದೇವರನ್ನು ಸ್ತುತಿಸಿ ಹಾಡಲಾಗುತ್ತದೆ. ಅನಂತರ ಚಂಡೆ ವಾದ್ಯದ ಹಿಮ್ಮೇಳದೊಂದಿಗೆ ಹಾಡು ಮುಂದುವರೆಯುತ್ತದೆ. ಹೀಗೆ ಹಾಡುತ್ತಿರುವಂತೆಯೇ ತೆರೆಕಾರನ ಮೇಲೆ ಅಜ್ಜಪ್ಪ ಮೈದುಂಬಿ ಬರುತ್ತಾನೆ. ಆವೇಶಗೊಂಡ ತೆರೆಕಾರನು ಆತನಂತೆ ಹಾವಭಾವಗಳನ್ನು ಪ್ರದರ್ಶಿಸುತ್ತಾನೆ. ತನ್ನ ಹಾಗೂ ತನ್ನ ಕುಟುಂಬದ ಚರಿತ್ರೆ ಮತ್ತು ಸಾಧನೆಯನ್ನು ವರ್ಣಿಸುತ್ತಾನೆ. ನೆರೆದ ಜನರು ಹರಕೆ ಕಾಣಿಕೆಗಳನ್ನು ಒಪ್ಪಿಸುತ್ತಾರೆ. ಅಜ್ಜಪ್ಪನ ಇಷ್ಟಾರ್ಥಗಳನ್ನು ಪೂರೈಸುತ್ತಾರೆ. ಸಂತೃಪ್ತಗೊಂಡ ಅಜ್ಜಪ್ಪ ಸರ್ವರನ್ನೂ ಆಶೀರ್ವದಿಸುತ್ತಾನೆ.

ಒಟ್ಟಿನಲ್ಲಿ ಕೊಡಗಿನಲ್ಲಿ ತೆರೆಕಟ್ಟುವ ಆಚರಣೆಗಳ ಉಗಮ ಹಾಗು ಬೆಳವಣಿಗೆಗೆ ಮಲಿಯರು ಮತ್ತು ಪಣಿಕರಂತೆ ಬಣ್ಣರೂ ಪ್ರಮುಖ ಪಾತ್ರ ವಹಿಸಿದ್ದಾರೆ. ಪೂರ್ವದಲ್ಲಿ ಅಲೆಮಾರಿಗಳಾಗಿದ್ದ ಇವರು ನಂತರ ದಿನಗಳಲ್ಲಿ ಕೊಡಗಿನಲ್ಲಿ ನೆಲೆಸಿದರು. ಕಾಲಕ್ರಮೇಣ ಕೊಡವ ಸಂಸ್ಕೃತಿಯನ್ನು ರೂಢಿಸಿಕೊಂಡು ಕೊಡಗಿನ ದೈವಾರಾಧನೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡರು. ಮಲಿಯ ಹಾಗು ಪಣಿಕರಿಗೆ ಹೋಲಿಸಿದರೆ ವರ್ತಮಾನದಲ್ಲಿ ಬಣ್ಣರಲ್ಲಿ ತೆರೆಕಟ್ಟುವವರ ಸಂಖ್ಯೆ ಗಣನೀಯವಾಗಿ ಇಳಿಮುಖಗೊಂಡಿದೆ.

**ಕೊನೆ ಟಿಪ್ಪಣಿ**

೧. ಲೋಕೇಶ್. ಕೆ. ಎಂ. (ಅನು.,ಸಂ.) ರೆವರೆಂಡ್. ಜಿ. ರಿಕ್ಟರ್(ಮೂಲ), ಕೊಡಗು ಪ್ರಾಂತ್ಯದಲ್ಲಿ ಕಂಡುಬರುವ ಜಾತಿಗಳು ಮತ್ತು ಬುಡಗಟ್ಟು ಜನಾಂಗಗಳ ವೃತ್ತಾಂತ ಸಂಹಿತೆ, ೨೦೧೧, ಪು. ೩೧

೨. ನಡಿಕೇರಿಯಂಡ ಚಿಣ್ಣಪ್ಪ, ಪಟ್ಟೋಲೆ ಪಳಮೆ, ೨೦೦೨(ನಾಲ್ಕನೆಯ ಮುದ್ರಣ) ಪು. ೨೮೩

೩. ಪಣಿಕಡ ಎ. ಚಂಗಪ್ಪ, ವಯಸ್ಸು ೫೬, ಕುಟ್ಟಂದಿ ಗ್ರಾಮ

೪. ಪಣಿಕಡ ಗಿಣಿ, ವಯಸ್ಸು ೬೫, ಕುಂದ ಈಚೂರು ಗ್ರಾಮ

೫. ಪಣಿಕಡ ಸಿ. ಕಿಷನ್, ವಯಸ್ಸು ೩೩, ಕುಟ್ಟಂದಿ ಗ್ರಾಮ

೬. ಬಾಚರಣಿಯಂಡ ಅಪ್ಪಣ್ಣ, ವಯಸ್ಸು ೭೮, ಕುಶಾಲನಗರ

೭. ಮಲೆಯರ ಮಾದಯ್ಯ, ವಯಸ್ಸು ೭೩, ಮೂರ್ನಾಡು

೮. ಸಾಬು ಮಂದಪ್ಪ, ವಯಸ್ಸು ೫೮, ಕೈಕಾಡ್ ಗ್ರಾಮ

೯. ಸೂರ್ಯನಾಥ ಯು. ಕಾಮತ್ (ಮು. ಸಂ.), ಭಾರತದ ಗ್ಯಾಸೆಟಿಯರ್ ಕರ್ನಾಟಕ ರಾಜ್ಯ, ಕೊಡಗು ಜಿಲ್ಲೆ, ೧೯೯೨, ಪು. ೧೮೩

## ಅಧ್ಯಾಯ ಐದು

## ತೆರೆಕಟ್ಟುವ ಆಚರಣೆಗಳ ವರ್ಗೀಕರಣ ಮತ್ತು ಸಾಂಸ್ಕೃತಿಕ ಸ್ವೋಪಜ್ಞತೆಯ ಹರವುಗಳು

೫.೧ ತೆರೆಕಟ್ಟುವ ಆಚರಣೆಗಳ ವರ್ಗೀಕರಣ

೫.೧.೧ ಸ್ತ್ರೀ ದೈವಗಳ ತೆರೆಗಳು.

೫.೧.೧.೧ ಚೌಂಡಿ ತೆರೆ

೫.೧.೧.೨ ಪುಲಿಚೌಂಡಿ ತೆರೆ

೫.೧.೧.೩ ಕುಳಿಯಮೆ ಚೌಂಡಿ ತೆರೆ

೫.೧.೧.೪ ಕಾಕೋಟ್‌ಪರಂಬು ಚೌಂಡಿ ತೆರೆ

೫.೧.೧.೫ ಭಗವತಿ ತೆರೆ

೫.೧.೧.೬ ಕದನೂರು ಭಗವತಿ ತೆರೆ

೫.೧.೧.೭ ಪುದಿಯೋದಿ ತೆರೆ

೫.೧.೧.೮ ಬೀರಾಳಿ ತೆರೆ

೫.೧.೧.೯ ಭದ್ರಕಾಳಿ ತೆರೆ

೫.೧.೧.೧೦ ನುಚ್ಚುಟೆ ತೆರೆ

೫.೧.೧.೧೧ ಕಾಳಿ ಪೊಲ್‌ತಿ ತೆರೆ

೫.೧.೧.೧೨ ಚೊಡಲ್‌ಚಿ(ಕಾರೋಣಚಿ) ತೆರೆ

೫.೧.೨ ಪುರುಷ ದೈವಗಳ ತೆರೆಗಳು

೫.೧.೨.೧ ವಿಷ್ಣುಮೂರ್ತಿ ತೆರೆ

೫.೧.೨.೨ ಅಬ್ಬಿಧಾರೆ ವಿಷ್ಣುಮೂರ್ತಿ ತೆರೆ

೫.೧.೨.೩ ಅಯ್ಯಪ್ಪ ತೆರೆ

೫.೧.೨.೪ ಕಾಟಿಲ್ ಅಯ್ಯಪ್ಪ ತೆರೆ

೫.೧.೨.೫ ಮಾದೇರಪ್ಪ ತೆರೆ

೫.೧.೨.೬ ಕಾಡ್ಲಯ್ಯಪ್ಪ ತೆರೆ

೫.೧.೨.೭ ಪೊಲವಂದೆರೆ

## ಅಧ್ಯಾಯ ೫

## ತೆರೆಕಟ್ಟುವ ಆಚರಣೆಗಳ ವರ್ಗೀಕರಣ ಮತ್ತು ಸಾಂಸ್ಕೃತಿಕ ಸ್ವೋಪಜ್ಞತೆಯ ಹರವುಗಳು

### ೫.೧ ತೆರೆಕಟ್ಟುವ ಆಚರಣೆಗಳ ವರ್ಗೀಕರಣ

ಕೊಡಗಿನ ಭೌಗೋಳಿಕತೆಗೆ ಪೂರಕವಾಗಿ ಜನಪದರು ಗ್ರಾಮದೇವತೆಗಳ ವಾರ್ಷಿಕ ಉತ್ಸವಗಳನ್ನು ಆಚರಿಸುತ್ತಾರೆ. ಸಾಮಾನ್ಯವಾಗಿ ಮಾರ್ಚ್ ತಿಂಗಳಿನಿಂದ ಪ್ರಾರಂಭವಾಗುತ್ತವೆ. ಇಲ್ಲಿ ಪ್ರಧಾನವಾಗಿ ಗ್ರಾಮದ ದೇವತೆಗಳಾದ ಭದ್ರಕಾಳಿ, ಭಗವತಿ, ಪೊವ್ವೇದಿಯಮ್ಮೆ, ಚೌಂಡಿ, ಅಯ್ಯಪ್ಪ, ಸಾರ್ತಾವು ದೇವರುಗಳನ್ನೇ ಉತ್ಸವ ರೂಪದಲ್ಲಿ ಕೊಡಗಿನಾದ್ಯಂತ ಆಚರಿಸುವುದನ್ನು ಕಾಣಬಹುದಾಗಿದೆ. ಇಲ್ಲಿ ಪ್ರಧಾನವಾದ ಅಂಶವೆಂದರೆ ಈ ಉತ್ಸವಗಳಿಗೂ ತೆರೆಗಳಿಗೂ ಒಂದು ತೆರನಾದ ಅವಿನಾಭಾವ ಸಂಬಂಧವಿರುತ್ತದೆ. ಈ ಸಂದರ್ಭದಲ್ಲಿ ಗ್ರಾಮದೇವತೆಗೆ ವೈದಿಕ ಕ್ರಮದಂತೆ ಪೂಜಾವಿಧಿಗಳು ನಡೆಯುತ್ತದೆ. ಅದರೊಂದಿಗೆ ಪಣಿಕ, ಬಣ್ಣ ಅಥವಾ ಮಲಿಯರಿಂದ ತೆರೆಕಟ್ಟುವ ಆಚರಣೆಯು ನಡೆಯುತ್ತದೆ. ಪ್ರಧಾನವಾಗಿ ಕೊಡಗಿನ ವಿರಾಜಪೇಟೆ ಮತ್ತು ಮಡಿಕೇರಿ ತಾಲ್ಲೂಕುಗಳ ಅನೇಕ ಗ್ರಾಮಗಳಲ್ಲಿ ಈ ತೆರೆ ಮತ್ತು ಉತ್ಸವಗಳನ್ನು ನೋಡಬಹುದಾಗಿದೆ. ಹಾಗೂ ಸೋಮವಾರಪೇಟೆಯ ಕೆಲವು ಗ್ರಾಮಗಳಲ್ಲಿ ಈ ಆಚರಣೆಯು ಕಂಡುಬರುತ್ತದೆ. ಒಟ್ಟಾರೆ ಕೊಡಗಿನಲ್ಲಿ ಸುಮಾರು ೩೬ ವಿಧದ ತೆರೆಗಳನ್ನು ಕಾಣಬಹುದು. ಅವುಗಳನ್ನು ಈ ಕೆಳಗಿನ ಕೆಲವು ಮಾನದಂಡಗಳ ಆಧಾರದಲ್ಲಿ ವರ್ಗೀಕರಿಸಬಹುದು.

ಅ. ತೆರೆ ಕಟ್ಟುವ ಸಮುದಾಯ

ಆ. ತೆರೆಗಳಲ್ಲಿ ಬಳಸುವ ಭಾಷೆ

ಇ. ತೆರೆ ದೈವಗಳ ಉಗಮ

ಈ. ಪ್ರಾದೇಶಿಕತೆ

ಉ. ಆರಾಧನೆಯ ವಿಧಾನ

**ಅ. ತೆರೆಕಟ್ಟುವ ಸಮುದಾಯ**

ಕೊಡಗಿನಲ್ಲಿ ಆಚರಿಸಲ್ಪಡುವ ತೆರೆಗಳನ್ನು ತೆರೆ ಕಟ್ಟುವವರ

ಸಮುದಾಯ(ಜಾತಿ)ವನ್ನು ಆಧಾರವಾಗಿ ಇರಿಸಿಕೊಂಡು ಈ ಕೆಳಗಿನಂತೆ ವರ್ಗೀಕರಿಸಬಹುದು.

೧. ಪಣಿಕರು ಕಟ್ಟುವ ತೆರೆಗಳು

೨. ಮಲಿಯರು ಕಟ್ಟುವ ತೆರೆಗಳು

೩. ಬಣ್ಣರು ಕಟ್ಟುವ ತೆರೆಗಳು

ಕಾಡ್‌ಲಂಬ್ಯಪ್ಪ, ಭದ್ರಕಾಳಿ, ಕುಳಿಯಂದೆರೆ, ಕಾಳಿಪೊಲ್‌ತಿ, ಮಂದಣಮೂರ್ತಿ, ನರಿಪೂದ, ಅಯ್ಯಪ್ಪ, ಚಾವುಂಡಿ ತೆರೆಗಳನ್ನು ಪಣಿಕರು ಕಟ್ಟುತ್ತಾರೆ. ಮಲಿಯರು ವಿಷ್ಣುಮೂರ್ತಿ, ಕುಟ್ಟಿಚಾತ, ಭೈರವ, ಕರಿಕಾಳ(ಕರಿಬಾಳ), ಕುಳಿಯ, ನುಚ್ಚುಟೆ, ಅಜ್ಜಪ್ಪ, ಕುಳಿಯಮೆ ಚೌಂಡಿ, ಭಗವತಿ ತೆರೆಗಳನ್ನು ಪ್ರಮುಖವಾಗಿ ಕಟ್ಟುತ್ತಾರೆ. ಭದ್ರಕಾಳಿ, ಅಯ್ಯಪ್ಪ, ಪೊವ್ವದಿ ತೆರೆಗಳು ಬಣ್ಣರಿಗೆ ಮೀಸಲಾದವುಗಳು. ತೆರೆಕಟ್ಟುವ ಈ ಸಮುದಾಯಗಳು ಪೊರಂಗೊಟ್ಟ್ ಮತ್ತು ಒಳಂಗೊಟ್ಟ್ ಎಂಬ ಅಲಿಖಿತ ಸಂಪ್ರದಾಯವನ್ನು ಪಾಲಿಸುತ್ತವೆ. ಪೊರಂಗೊಟ್ಟ್ ಎಂಬ ಪದವು ಕೊಡವ ಭಾಷೆಯ 'ಪೊರ' ಎಂದರೆ ಹೊರಗೆ ಮತ್ತು 'ಕೆಟ್ಟ್' ಎಂದರೆ ಕಟ್ಟುವುದು ಎಂಬ ಪದಗಳಿಂದ ನಿಷ್ಪನ್ನಗೊಂಡಿದೆ. ಪೊರ+ಕೆಟ್ಟ್ = ಪೊರಂಗೆಟ್ಟ್ ಆಗಿ ಕ್ರಮೇಣ ಪೊರಂಗೊಟ್ಟ್ ಆಗಿದೆ. ಈ ಸಂಪ್ರದಾಯದವರು ಐನ್‌ಮನೆ ಅಥವಾ ದೇವಸ್ಥಾನಗಳ ಹೊರ ಆವರಣದಲ್ಲಿ ತೆರೆಕಟ್ಟುತ್ತಾರೆ. ಒಳಂಗೊಟ್ಟ್ ಎಂದರೆ 'ಒಳಲ್' ಅರ್ಥಾತ್ ಒಳಗೆ ಕಟ್ಟುವುದು. ಈ ಸಂಪ್ರದಾಯದವರು ಐನ್‌ಮನೆ ಅಥವಾ ದೇವಸ್ಥಾನದ ಒಳಭಾಗದಲ್ಲಿ ತೆರೆಕಟ್ಟುತ್ತಾರೆ. ಈ ಕಟ್ಟಳೆಯನ್ನು ಮೀರಿದರೆ ದೋಷ ಉಂಟಾಗುತ್ತದೆ ಎಂಬ ನಂಬಿಕೆ ಇದೆ. ಬಣ್ಣರು ತಮ್ಮನ್ನು ಒಳಂಗೊಟ್ಟ್ ಸಂಪ್ರದಾಯದವರೆಂದು ಹೇಳಿಕೊಳ್ಳುತ್ತಾರೆ. ಮಲಿಯರು ಪೊರಂಗೊಟ್ಟ್ ವಿಧಿಯಲ್ಲಿ ತೆರೆಕಟ್ಟುವವರು. ಆದರೆ ವರ್ತಮಾನದಲ್ಲಿ ತೆರೆಕಟ್ಟುವವರ ಸಂಖ್ಯೆ ಕ್ಷೀಣಿಸುತ್ತಿದ್ದು; ಇರುವವರು ಯಾವುದೇ ಕಟ್ಟುಪಾಡುಗಳಿಲ್ಲದೆ ಎಲ್ಲಾ ತೆರೆಗಳನ್ನು ಕಟ್ಟುತ್ತಿದ್ದಾರೆ.

**ಆ. ತೆರೆಗಳಲ್ಲಿ ಬಳಸುವ ಭಾಷೆ**

ತೆರೆ ಕಟ್ಟಿದ ನಂತರ ತೆರೆಕಾರನು ದೈವವನ್ನು ಆವಾಹಿಸಿಕೊಂಡು ಭಕ್ತರೊಂದಿಗೆ ಸಂವಹನ ನಡೆಸುತ್ತಾನೆ. ಈ ಸಂದರ್ಭದಲ್ಲಿ ಬಳಸುವ ಭಾಷೆಯನ್ನು ಗಮನದಲ್ಲಿರಿಸಿಕೊಂಡು ತೆರೆಗಳನ್ನು ವರ್ಗೀಕರಿಸಬಹುದು.

೧. ಮಲೆಯಾಳಂ ಭಾಷೆ ಬಳಸುವ ತೆರೆಗಳು

೨. ಕೊಡವ ಭಾಷೆ ಬಳಸುವ ತೆರೆಗಳು

ವಿಷ್ಣುಮೂರ್ತಿ, ಮಂದಣಮೂರ್ತಿ, ನುಚ್ಚುಟೆ, ತೋತ ತೆರೆಗಳು ಮಲೆಯಾಳಂ ಭಾಷೆಯನ್ನಾಡುತ್ತವೆ. ಅಜ್ಜಪ್ಪ, ಕಾರೋಣ, ಈತ್ ಕುಳಿಯ ಹಾಗೂ ಕಾಳಿಪೊಲ್‌ತಿ ತೆರೆಗಳು ಭಕ್ತರೊಂದಿಗೆ ಕೊಡವ ಭಾಷೆಯಲ್ಲಿ ಸಂವಹನ ನಡೆಸುತ್ತವೆ. ಕರಾಳಾ

ಚಾವುಂಡಿ, ಕಾಡ್ಲಯ್ಯಪ್ಪ ಹಾಗೂ ದೇವತೆರೆಗಳು ಸನ್ನೆಯ ಮೂಲಕ ಸಂವಹನ ನಡೆಸುತ್ತವೆ.

**ಇ. ತೆರೆ ದೈವಗಳ ಉಗಮ**

ತೆರೆದೈವಗಳ ಉಗಮ ಸಂಬಂಧವನ್ನು ಆಧಾರವಾಗಿಟ್ಟುಕೊಂಡು ತೆರೆಕಟ್ಟುವ ಆಚರಣೆಯನ್ನು ಈ ಕೆಳಗಿನಂತೆ ವಿಂಗಡಿಸಬಹುದು.

೧. ಪೌರಾಣಿಕ ದೈವಗಳ ತೆರೆಗಳು

೨. ಮನುಷ್ಯ ಸಂಬಂಧವನ್ನು ಪಡೆದಿರುವ ದೈವಗಳ ತೆರೆಗಳು

೩. ಹುಟ್ಟಿನಲ್ಲಿ ಪ್ರಾಣಿ ಸಂಬಂಧವನ್ನು ಪಡೆದಿರುವ ದೈವಗಳ ತೆರೆಗಳು

೪. ನಿರ್ದಿಷ್ಟ ಪ್ರದೇಶಕ್ಕೆ ಸಂಬಂಧಿಸಿದ ದೈವಗಳ ತೆರೆಗಳು

ವಿಷ್ಣುಮೂರ್ತಿ, ಭೈರವ, ಭದ್ರಕಾಳಿ ದೈವಗಳು ಪೌರಾಣಿಕ ಮೂಲವನ್ನು ಹೊಂದಿವೆ. ಅಜ್ಜಪ್ಪ, ಆಯಾ ಕುಟುಂಬದ ಕಾರೋಣ, ಚೊಡಲ್‌ಚಿ ತೆರೆಗಳು ಮನುಷ್ಯ ಸಂಬಂಧಿ ತೆರೆಗಳಾಗಿವೆ. ಎತ್ತ್ ತೆರೆ, ನರಿಪೂದ ತೆರೆಗಳು ಹುಟ್ಟಿನಲ್ಲಿ ಪ್ರಾಣಿ ಸಂಬಂಧವನ್ನು ಪಡೆದಿವೆ. ಪಾಲ್‌ಪಾರ್ ಚಾವುಂಡಿ, ಗುಂಡಿಯತ್ ಅಯ್ಯಪ್ಪ, ಕಾಡ್ಲಯ್ಯಪ್ಪ ತೆರೆಗಳು ನಿಶ್ಚಿತ ಪ್ರದೇಶಕ್ಕೆ ಸಂಬಂಧಿಸಿದ ತೆರೆಗಳಾಗಿವೆ.

**ಈ. ಪ್ರಾದೇಶಿಕತೆ**

ಕೊಡಗಿನ ತೆರೆಕಟ್ಟುವ ಆಚರಣೆಗಳನ್ನು ತೆರೆ ದೈವಗಳು ಪಡೆದಿರುವ ಪ್ರಾದೇಶಿಕ ಅಧಿಕಾರಕ್ಕೆ ಅನುಗುಣವಾಗಿ ಈ ಕೆಳಗಿನಂತೆ ವಿಭಾಗಿಸಬಹುದು

೧. ಒಕ್ಕ ತೆರೆಗಳು

೨. ಗ್ರಾಮದ ತೆರೆಗಳು

**ಒಕ್ಕ ತೆರೆಗಳು :**

ಕೊಡಗಿನಲ್ಲಿ ಕೊಡವ ಭಾಷಿಕ ಸಮುದಾಯಗಳು 'ಒಕ್ಕ' ಎಂಬ ಅವಿಭಕ್ತ ಕುಟುಂಬ ಪದ್ಧತಿಯನ್ನು ಅನುಸರಿಸುತ್ತವೆ. ಪ್ರತಿಯೊಂದು ಒಕ್ಕವೂ 'ಒಕ್ಕಪೆದ' ಅಥವಾ ಮನೆಪೆದ(ಮನೆಹೆಸರು)ದಿಂದ ಗುರುತಿಸಲ್ಪಡುತ್ತದೆ. ಒಕ್ಕದ ಸ್ಥಾಪಕ ಹಿರಿಯನನ್ನು 'ಕಾರೋಣ'ನೆಂದು; ಆತನಿಂದ ಬೆಳೆದು ಬಂದ ಸಮೂಹವನ್ನು 'ಒಕ್ಕ' (ಕುಟುಂಬ) ಎಂದು ಕರೆಯಲಾಗುತ್ತದೆ. ಪ್ರತೀ ಒಕ್ಕದ ಜೀವಂತವಿರುವ ಹಿರಿಯನನ್ನು ಆ ಒಕ್ಕದ 'ಪಟ್ಟೆದಾರ' ಅಥವಾ 'ಕೊರವುಕಾರ' ಎಂದು ಕರೆಯುತ್ತಾರೆ. ಆತನ ಪತ್ನಿ 'ಕೊರವುಕಾರ್ತಿ'. ಕುಟುಂಬದ ಹಿತಾಸಕ್ತಿಗಳನ್ನು ಕಾಪಾಡುವ ಜವಾಬ್ದಾರಿ ಅವರದಾಗಿರುತ್ತದೆ. ಒಕ್ಕಗಳ ಸದಸ್ಯರು ಒಂದಾಗಿ ನಡೆಸುವ ತೆರೆಗಳೇ ಒಕ್ಕತೆರೆಗಳು. ಈ ತೆರೆಗಳನ್ನು ಆಯಾ ಒಕ್ಕಗಳು ತಮ್ಮ ಐನ್‌ಮನೆಗಳಲ್ಲಿ ಎರಡು, ಮೂರು, ಐದು ಅಥವಾ ವಾರ್ಷಿಕವಾಗಿ ನಡೆಸುತ್ತವೆ."ಒಕ್ಕದ ಕಾರೋಣ ಹಾಗು ಆಯಾ ಒಕ್ಕವನ್ನು ಕಾಪಾಡುತ್ತಿರುವ ಕುಟ್ಟಿಚಾತ, ಭೈರವ, ಕರಿಕಾಳ(ಕರಿಬಾಳ),

ಕುಳಿಯ ಮತ್ತು ನುಚ್ಚುಟೆ ದೈವಗಳನ್ನು ಅಂಜಿಕೂಟ್ ಮೂರ್ತಿಗಳೆನ್ನುತ್ತಾರೆ. ವಿಷ್ಣುಮೂರ್ತಿಯು ಅಷ್ಟದಿಕ್ಪಾಲಕರಲ್ಲಿ ಈ ಐದು ಮೂರ್ತಿಗಳು ಪ್ರಮುಖವಾದವುಗಳೆಂಬ ನಂಬಿಕೆಯಿದೆ. ಇವುಗಳನ್ನು ಒಕ್ಕದ ಗುರುಕಾರೋಣನ ಅಂಜಿಕೂಟ್(ಐದು ಕೂಟ) ಮೂರ್ತಿಗಳು ಎಂದೂ ಕರೆಯುತ್ತಾರೆ."[೧] ಕೆಲವೊಮ್ಮೆ ಈ ಮೂರ್ತಿಗಳು ಬದಲಾಗುವ ಸಾಧ್ಯತೆಗಳು ಇರುತ್ತವೆ. ಕೆಲವು ಒಕ್ಕಗಳಲ್ಲಿ ಮಂದಣಮೂರ್ತಿ, ಚೌಂಡಿ, ಬೀರ, ತೀಕುಳಿಯ. ಈತ್‌ಕುಳಿಯ, ತಮ್ಮಚ್ಚ ಎತ್ತ್‌ತೆರೆ, ನರಿಪೂದ ತೆರೆಗಳನ್ನು ಕಟ್ಟಿ ಆರಾಧಿಸಲಾಗುತ್ತದೆ. ಒಕ್ಕತೆರೆಗಳಲ್ಲಿ ಆರಾಧಿಸಲ್ಪಡುವ ತೆರೆದೈವಗಳ ಅಧಿಕಾರ ವ್ಯಾಪ್ತಿಯು ಆಯಾ ಒಕ್ಕವನ್ನು ಒಳಗೊಂಡಿರುತ್ತದೆ. ಎರಡು ದಿನಗಳ ಕಾಲ ನಡೆಯುವ ಈ ತೆರೆಗಳು ರಾತ್ರಿ ಹತ್ತು ಗಂಟೆಗೆ ಪ್ರಾರಂಭವಾಗಿ ಮರುದಿನ ಸಂಜೆ ಮುಕ್ತಾಯಗೊಳ್ಳುತ್ತವೆ.

**ಗ್ರಾಮದ ತೆರೆಗಳು :**

ಗ್ರಾಮದ ತೆರೆಗಳಲ್ಲಿ ಆರಾಧನೆಗೊಳ್ಳುವ ದೈವಗಳು ಇಡೀ ಗ್ರಾಮವನ್ನು ಆಳುತ್ತವೆ. ಚೌಂಡಿ, ಭಗವತಿ, ಭದ್ರಕಾಳಿ, ಅಯ್ಯಪ್ಪ, ಕಾಡ್ಲಯ್ಯಪ್ಪ ದೈವಗಳ ತೆರೆಗಳು ಗ್ರಾಮದ ತೆರೆಗಳಾಗಿ ಆಚರಿಸಲ್ಪಡುತ್ತವೆ. ಗ್ರಾಮಗಳಲ್ಲಿ ಇವುಗಳಿಗೆ ಸಂಬಂಧಿಸಿದಂತೆ ಗುಡಿ, ಕೋಟ ಹಾಗೂ ನೆಲೆಗಳು ಇರುತ್ತವೆ. ಊರಿನಲ್ಲಿ ನೆಲೆಸಿರುವ ಎಲ್ಲಾ ಸಮುದಾಯದವರು ಒಂದಾಗಿ ಸೇರಿ ತಕ್ಕಮುಖ್ಯಸ್ಥರ ಜವಾಬ್ದಾರಿಯಲ್ಲಿ ಈ ತೆರೆಗಳನ್ನು ನಡೆಸುತ್ತಾರೆ. ಗ್ರಾಮ ದೇವತೆಗಳ ವಾರ್ಷಿಕ ಹಬ್ಬ, ಬೋಡ್ ಹಬ್ಬದ ಸಂಧರ್ಭಗಳಲ್ಲಿ ಗ್ರಾಮದವರು ತೆರೆಕಟ್ಟುವ ಆಚರಣೆಯನ್ನು ನಡೆಸುತ್ತಾರೆ. ಕೆಲವು ಸಂದರ್ಭಗಳಲ್ಲಿ ತೆರೆಕಟ್ಟುವ ಆಚರಣೆಯೇ ಆ ಗ್ರಾಮದ ಹಬ್ಬವೂ ಆಗಿರುತ್ತದೆ.

**ಉ. ಆರಾಧನೆಯ ವಿಧಾನ**

ತೆರೆಕಟ್ಟುವ ಆಚರಣೆಯ ಸಂದರ್ಭದಲ್ಲಿ ದೈವಗಳನ್ನು ಆರಾಧಿಸುವ ವಿಧಿವಿಧಾನಗಳನ್ನು ಗಮನದಲ್ಲಿರಿಸಿಕೊಂಡು ವರ್ಗೀಕರಿಸಬಹುದು. ಆರಾಧನೆಯು ತೆರೆ ಆಚರಣೆಯಲ್ಲಿ ಪ್ರಮುಖ ಅಂಶವಾಗಿರುವುದರಿಂದ ವರ್ಗೀಕರಣದಲ್ಲಿ ಆರಾಧನೆಯ ವಿಧಾನವನ್ನು ಪ್ರಮುಖ ಮಾನದಂಡವಾಗಿ ಪರಿಗಣಿಸಬಹುದು. ಆರಾಧನೆಯಲ್ಲಿ ಅನುಸರಿಸುವ ವಿಧಿವಿಧಾನಗಳ ಹಿನ್ನೆಲೆಯಲ್ಲಿ ತೆರೆ ಕಟ್ಟುವ ಆಚರಣೆಯನ್ನು ಹೀಗೆ ವರ್ಗೀಕರಿಸಬಹುದು.

೧. ಪ್ರಮುಖ ದೈವಗಳ ತೆರೆಗಳು

೨. ಪರಿವಾರ ದೈವಗಳ ತೆರೆಗಳು

**ಪ್ರಮುಖ ದೈವಗಳ ತೆರೆಗಳು :**

ಪ್ರಮುಖ ದೈವಗಳ ತೆರೆಗಳಲ್ಲಿ ಆರಾಧನೆಯ ಸ್ವರೂಪವು ಗಂಭೀರ ಹಾಗು

ಹೆಚ್ಚು ಸಂಕೀರ್ಣವಾಗಿರುತ್ತದೆ. ಇಲ್ಲಿ ಆರಾಧನೆಗೊಳ್ಳುವ ದೈವಗಳು ಪ್ರತ್ಯೇಕ ಕೋಟ ಹಾಗೂ ಭಂಡಾರವನ್ನು ಹೊಂದಿರುತ್ತವೆ. ತೆರೆಕಟ್ಟುವ ಆಚರಣೆಗೆ ಮುಂಚಿತವಾಗಿ ನಮ್ಮೆ ಕುರಿಪೊ(ಹಬ್ಬದ ದಿನ ನಿಗದಿಗೊಳಿಸುವುದು), ವೀಳ್ಯ ಕೊಡ್‌ಪೊ(ವೀಳ್ಯ ಕೊಡುವುದು), ಕೊಲೆ ಕೆತ್ತುವೊ(ಗೊನೆ ಕಡಿಯುವುದು), ಭಂಡಾರ ಉಳ್‌ಪೊ(ಭಂಡಾರ ಇಳಿಸುವುದು) ವಿಧಿಗಳು ನಡೆಯುತ್ತವೆ.

ಪ್ರಮುಖ ದೈವಗಳ ತೆರೆಗಳು ಧೀರ್ಘವಾದ ತೆರೆಪಾಟ್(ತೆರೆಹಾಡು) ಹೊಂದಿರುತ್ತವೆ. ಇವು ದೈವಗಳ ಕಥಾನಕಗಳನ್ನು ಒಳಗೊಂಡಿರುತ್ತವೆ. ತೆರೆಕಾರ(ತೆರೆ ಕಟ್ಟುವವನು) ಎಣ್ಣೆಯನ್ನು ಪಡೆದುಕೊಂಡು ಸ್ನಾನದ ವಿಧಿಯನ್ನು ಪೂರೈಸಿ ಆಚರಣೆಗೆ ತೊಡಗುತ್ತಾನೆ. ಪ್ರಮುಖ ದೈವಗಳ ತೆರೆಗೆ ವಿಶಿಷ್ಟವಾದ ಬಣ್ಣಗಾರಿಕೆ ಇರುತ್ತದೆ. ಮುಖಕ್ಕೆ ಮೊಗ(ಮುಖವಾಡ), ನೆತ್ತಿಯ ಮೇಲ್ಭಾಗಕ್ಕೆ ನೆತ್ತಿಪಟ್ಟ್ ಅಥವಾ ತಲಪಾಳಿ ಎಂಬ ನೆತ್ತಿಪಟ್ಟಿ, ತಲೆಗೆ ತಲೆಪೂ ಎಂಬ ಹೂವಿನ ದಂಡೆ. ನೆತ್ತಿಗೆ ನೆತ್ತಿಬೊಟ್ಟ್ ಮತ್ತು ಚಂದ್ರಕಲೆ ಎಂಬ ನೆತ್ತಿಬೊಟ್ಟು ಇರುತ್ತದೆ. ಕಣ್ಣಿಗೆ ಪೊಯ್‌ಕಣ್ಣ್ ಎಂಬ ಲೋಹದ ಕಣ್ಣು, ಕಿವಿಗೆ ಚೆನ್ನೆರ್‌ಲ್, ವಾಲೆ ಕಾದ್ ಎಂಬ ಆಭರಣಗಳಿರುತ್ತವೆ. ಕುತ್ತಿಗೆಗೆ ಕಲತ್‌ಕೆಟ್ಟ್ ಎಂಬ ಕಂಠಹಾರ ಇರುತ್ತದೆ. ತೋಳಿಗೆ ಬಳೆ, ಕೈಗೆ ಚೂಡಗ ಎಂಬ ಕಡಗ, ಕಾಲಿಗೆ ಚಲ್‌ಂಬು ಎಂಬ ಆಭರಣವಿರುತ್ತದೆ. ಎದೆಗೆ ಯ್ಯೆಯಾರ ಎಂಬ ಎದೆಹಾರ ಇರುತ್ತದೆ. ಕೈಯಲ್ಲಿ ಕಡತಲೆ ಎಂಬ ಕತ್ತಿ, ಒಡಿಕತ್ತಿ ಎಂಬ ದೊಡ್ಡ ಕತ್ತಿ, ತೂರಬೆತ್ತ, ಗುರಾಣಿ ಇತ್ಯಾದಿ ಆಯುಧಗಳಿರುತ್ತವೆ.

ಮಿಂದು ಶುಚೀರ್ಭೂತನಾದ ತೆರೆಕಾರನು ಪ್ರಮುಖ ದೈವಗಳ ಮೊಗವನ್ನು ಕೋಟದಿಂದ ಹೊತ್ತು ತರುತ್ತಾನೆ. ಈ ದೈವಗಳ ಹೆಸರಿನಲ್ಲಿ ಅನೇಕ ರೀತಿಯ ಹರಕೆಗಳನ್ನು ಭಂಡಾರಕ್ಕೆ ಒಪ್ಪಿಸಲಾಗುತ್ತದೆ. ಬಾರಣೆಯಲ್ಲಿ ಅಸುರ ಕ್ರಿಯೆಯಾದರೆ ರಕ್ತತರ್ಪಣ ಮಾಡಲಾಗುತ್ತದೆ. ದೇವಕ್ರಿಯೆಯಲ್ಲಿ ಹಾಲುಹಣ್ಣಿನ ಸಮರ್ಪಣೆ ನಡೆಯುತ್ತದೆ. ಪ್ರಮುಖ ದೈವಗಳ ತೆರೆಕಟ್ಟುವ ಆಚರಣೆಯಲ್ಲಿ ಆರಾಧನೆಯ ಎಲ್ಲ ವಿಧಿವಿಧಾನಗಳು ಯಾವುದೇ ಲೋಪವಿಲ್ಲದಂತೆ ನಡೆಯುತ್ತವೆ. ತೆರೆಯ ವೇಷ ಭೂಷಣಗಳ ಸಿದ್ಧತೆ, ಬಣ್ಣಗಾರಿಕೆ, ತೆರೆಹಾಡು, ಬಾರಣೆಯ ಸಿದ್ಧತೆ ಹೀಗೆ ಎಲ್ಲಾ ವಿಧಿವಿಧಾನಗಳು ಪ್ರತ್ಯೇಕವಾಗಿ ಸಂಪೂರ್ಣವಾಗಿ ನಡೆಯುತ್ತವೆ. ಪ್ರಮುಖ ದೈವಗಳ ತೆರೆಯೊಂದಿಗೆ ಪರಿವಾರ ದೈವಗಳ ಆರಾಧನೆ ನಡೆಯುತ್ತದೆ. ಆರಾಧನೆಯ ದೃಷ್ಟಿಯಲ್ಲಿ ಚೌಂಡಿ, ವಿಷ್ಣುಮೂರ್ತಿ, ಪುದಿಯೋದಿ, ಪೊವ್ವದಿ ಅಥವಾ ಭಗವತಿ, ಭದ್ರಕಾಳಿ, ಅಯ್ಯಪ್ಪ, ಸಾರ್ತಾವು, ಕಾಡ್ಲಯ್ಯಪ್ಪ, ಕುಳಿಯಮೆ ಚೌಂಡಿ, ಪಾಲ್‌ಪಾರ್ ಚಾಮುಂಡಿ ಇತ್ಯಾದಿ ದೈವಗಳನ್ನು ಪ್ರಮುಖ ದೈವಗಳೆಂದು ಕರೆಯಲಾಗುತ್ತದೆ.

**ಪರಿವಾರ ದೈವಗಳ ತೆರೆಗಳು :**

ಪ್ರಮುಖ ದೈವಗಳ ತೆರೆಯೊಂದಿಗೆ ಪರಿವಾರ ದೈವಗಳ ತೆರೆ ನಡೆಯುತ್ತದೆ. ಇದನ್ನು ಕೊಡವ ಭಾಷೆಯಲ್ಲಿ 'ಅಂಜಿಕೂಟ್ ಮೂರ್ತಿಯಡ ತೆರೆ' ಹಾಗೂ 'ಪತ್ತ್ ಕೂಟ್ ಪಾತಾಳ ಮೂರ್ತಿಯಡ ತೆರೆ' ಎನ್ನುತ್ತಾರೆ. ಅಂಜಿಕೂಟ್ ಮೂರ್ತಿಗಳಲ್ಲಿ ಚಾವುಂಡಿ ಪ್ರಮುಖ ದೈವವೆನಿಸಿಕೊಂಡರೆ ಕುಳಿಯ, ಕರಿಬಾಳ, ಭೈರವ, ತಮ್ಮಚ್ಚ ಪರಿವಾರ ದೈವಗಳು. ಪತ್ತ್ ಕೂಟ್ ಪಾತಾಳ ಮೂರ್ತಿಗಳ ತೆರೆಯಲ್ಲಿ ತೋತ, ಚಾವುಂಡಿ, ನುಚ್ಚುಟೆ, ಭೈರವ, ಮಂದಣಮೂರ್ತಿ, ಕರಿಬಾಳ, ಕುಟ್ಟಿಚಾತ, ಪೊಟ್ಟ ಕುಳಿಯ, ವಿಷ್ಣುಮೂರ್ತಿ ದೈವಗಳಿಗೆ ತೆರೆ ಕಟ್ಟಲಾಗುತ್ತದೆ. ಇಲ್ಲಿ ವಿಷ್ಣುಮೂರ್ತಿ ಪ್ರಮುಖ ದೈವವಾಗಿದ್ದು ಉಳಿದವು ಪರಿವಾರ ದೈವಗಳಾಗಿವೆ. ಪರಿವಾರ ದೈವಗಳ ತೆರೆಯಲ್ಲಿ ಪ್ರಮುಖ ದೈವಗಳಿಗೆ ಹಚ್ಚಿದ ಬಣ್ಣಗಾರಿಕೆ ಹಾಗೂ ವೇಷಭೂಷಣಗಳಲ್ಲಿಯೇ ತೆರೆಯ ಕುಣಿತ, ಹರಕೆ ಸಲ್ಲಿಸುವುದು ಹಾಗೂ ಬಾರಣೆಯ ಆಚರಣೆ ನಡೆಯುತ್ತದೆ. ಕೆಲವು ಸಂದರ್ಭಗಳಲ್ಲಿ ಬಣ್ಣಗಾರಿಕೆ ಹಾಗೂ ವೇಷಭೂಷಣಗಳಲ್ಲಿ ಅಲ್ಪ ಬದಲಾವಣೆ ಮಾಡಿಕೊಳ್ಳುತ್ತಾರೆ. ಆಚರಣೆಯ ವಿಧಿವಿಧಾನಗಳು ಪ್ರಮುಖ ದೈವಗಳ ತೆರೆಗಳಿಗಿಂತ ಸಂಕ್ಷಿಪ್ತವಾಗಿರುತ್ತವೆ. ಪ್ರಧಾನವಾದ ಕೆಲವು ವಿಧಿಗಳನ್ನು ಮಾತ್ರ ನಡೆಸಲಾಗುತ್ತದೆ.

ಹೀಗೆ ತೆರೆಕಟ್ಟುವ ಆಚರಣೆಗಳನ್ನು ತೆರೆ ಕಟ್ಟುವ ಸಮುದಾಯ, ತೆರೆಗಳಲ್ಲಿ ಬಳಸುವ ಭಾಷೆ, ತೆರೆಗಳ ಉಗಮ, ಪ್ರಾದೇಶಿಕತೆ ಹಾಗೂ ಆರಾಧನೆಯ ವಿಧಾನಗಳ ದೃಷ್ಟಿಯಿಂದ ವರ್ಗೀಕರಿಸಬಹುದು. ತೆರೆಕಟ್ಟುವ ಆಚರಣೆಗಳ ವಿಂಗಡಣೆಯಲ್ಲಿ ತೆರೆಕಾರರ ಸಮುದಾಯ, ತೆರೆಗಳು ಮಾತನಾಡುವ ಭಾಷೆ ಹಾಗೂ ಉಗಮವನ್ನು ಪ್ರಮುಖ ಮಾನದಂಡವಾಗಿ ಪರಿಗಣಿಸುವುದು ಸಮರ್ಪಕ ಎನಿಸುವುದಿಲ್ಲ. ಏಕೆಂದರೆ ಸಮುದಾಯ ದೃಷ್ಟಿಯಿಂದ ಪಣಿಕರು ಕಟ್ಟುವ ತೆರೆಗಳು, ಮಲಿಯರು ಕಟ್ಟುವ ತೆರೆಗಳು ಹಾಗೂ ಬಣ್ಣರು ಕಟ್ಟುವ ತೆರೆಗಳೆಂದು ವರ್ಗೀಕರಣ ಆರಾಧನೆಯ ಸಾಂಸ್ಕೃತಿಕ ಸ್ವರೂಪದ ದೃಷ್ಟಿಯಿಂದ ಸಮರ್ಪಕ ಎನಿಸುವುದಿಲ್ಲ. ಕೊಡಗಿನ ಸಾಂಸ್ಕೃತಿಕ ಪರಂಪರೆಯಲ್ಲಿ ಪ್ರಮುಖ ದೈವ ಎನಿಸಿಕೊಂಡ ಚೌಂಡಿ ದೈವದ ತೆರೆಯನ್ನು ಬಣ್ಣ, ಮಲಿಯ ಮತ್ತು ಪಣಿಕ ಸಮುದಾಯದವರೂ ಕಟ್ಟುತ್ತಾರೆ.

ಸಾಮಾನ್ಯವಾಗಿ ತೆರೆಕಟ್ಟುವವರು ಆಡುವ ಭಾಷೆಯೇ ತೆರೆದೈವಗಳ ಭಾಷೆಯಾಗಿರುತ್ತದೆ. ಆರಾಧನೆಗೊಳ್ಳುವ ಪ್ರದೇಶದ ಸಂಪರ್ಕ ಭಾಷೆಯನ್ನು ತೆರೆಗಳು ಸಂವಹನಕ್ಕೆ ಆಯ್ದುಕೊಳ್ಳುತ್ತವೆ. ಚೌಂಡಿ, ವಿಷ್ಣುಮೂರ್ತಿ, ಕುಳಿಯ ತೆರೆಗಳು ಮಲೆಯಾಳಂ ಭಾಷೆಯಲ್ಲಿ ಮಾತನಾಡಿದರೆ; ಅಜ್ಜಪ್ಪ ತೆರೆಯು ಕೊಡವ ಭಾಷೆಯನ್ನಾಡುತ್ತದೆ. ಕೆಲವು ತೆರೆಗಳು ಮಾತನಾಡದೆ ಕೈಸನ್ನೆಯನ್ನು ಬಳಸುತ್ತವೆ. ತೆರೆಕಟ್ಟುವ ಆಚರಣೆಯ ವಿಧಿವಿಧಾನಗಳ ಸಾಂಸ್ಕೃತಿಕ ಸ್ವರೂಪದ ಮೇಲೆ ಭಾಷೆಯ

ಪ್ರೇರಣೆ, ಪ್ರಭಾವ ಹಾಗೂ ನಿಯಂತ್ರಣ ಕಂಡುಬರುವುದಿಲ್ಲ. ಈ ಕಾರಣದಿಂದ ಭಾಷೆಯನ್ನು ಪ್ರಮುಖ ಮಾನದಂಡವಾಗಿ ಪರಿಗಣಿಸಲಾಗುವುದಿಲ್ಲ. ಭೌಗೋಳಿಕ ಅಂಶವನ್ನು ಮಾನದಂಡವಾಗಿ ಇರಿಸಿಕೊಂಡು ಮಾಡುವ ವಿಂಗಡಣೆ ಸಮರ್ಪಕ ಎನಿಸುವುದಿಲ್ಲ. ಏಕೆಂದರೆ ಒಕ್ಕತೆರೆಗಳಲ್ಲಿ ತೆರೆಕಟ್ಟಿ ಆರಾಧಿಸುವ ಚೌಂಡಿ, ಕುಳಿಯ, ವಿಷ್ಣುಮೂರ್ತಿ ದೈವಗಳನ್ನು ಊರಿನ ತೆರೆಗಳಲ್ಲೂ ತೆರೆಕಟ್ಟಿ ಆರಾಧಿಸಲಾಗುತ್ತದೆ.

ಆರಾಧನೆಯ ವಿಧಿವಿಧಾನಗಳನ್ನು ಮಾನದಂಡವಾಗಿರಿಸಿಕೊಂಡು ನಡೆಸುವ ವರ್ಗೀಕರಣವು ಸಮಂಜಸ ಎನಿಸುವುದಿಲ್ಲ. ಈ ವಿಂಗಡಣೆಯ ಪ್ರಮುಖ ಮಿತಿಯೆಂದರೆ ಒಂದು ಕಡೆಯಲ್ಲಿ ಪ್ರಮುಖ ದೈವವೆಂದು ಆರಾಧಿಸಲ್ಪಡುವ ತೆರೆದೈವಗಳು ಮತ್ತೊಂದು ಕಡೆಯಲ್ಲಿ ಪರಿವಾರ ದೈವಗಳಾಗಿ ಆರಾಧಿಸಲ್ಪಡುತ್ತವೆ. ಒಂದು ದೈವವು ಭೌಗೋಳಿಕವಾಗಿ ಪಡೆದಿರುವ ಸ್ಥಾನಮಾನ ಹಾಗೂ ಅಧಿಕಾರ ವ್ಯಾಪ್ತಿಗೆ ಅನುಗುಣವಾಗಿ ಅದನ್ನು ಪ್ರಮುಖ ದೈವ ಅಥವಾ ಪರಿವಾರ ದೈವಗಳೆಂದು ಕರೆಯಲಾಗುತ್ತದೆ. ದೈವಗಳ ಸ್ಥಾನಮಾನದಲ್ಲಿನ ಈ ರೀತಿಯ ವ್ಯತ್ಯಾಸವು ಆರಾಧನೆಯ ಸ್ವರೂಪದ ಮೂಲಕ ವ್ಯಕ್ತವಾಗುತ್ತದೆ. ಕೊಡಗಿನ ತೆರೆಕಟ್ಟುವ ಆಚರಣೆಯ ಇತಿಹಾಸವನ್ನು ಗಮನಿಸಿದಾಗ ಪ್ರಾಚೀನ ಕಾಲದ ತೆರೆದೈವಗಳೆಲ್ಲಾ ಇಂದು ಪ್ರಮುಖ ದೈವಗಳಾಗಿ ಆರಾಧಿಸಲ್ಪಡುತ್ತಿಲ್ಲ. ಕೆಲವು ವರ್ಷಗಳ ಹಿಂದೆ ಅತ್ಯಂತ ಸರಳವಾಗಿ ಆರಾಧಿಸಲ್ಪಡುತ್ತಿದ್ದ ದೈವಗಳು ಇಂದು ಅತ್ಯಂತ ವೈಭವೋಪೇತ ಆರಾಧನೆಯನ್ನು ಪಡೆಯುತ್ತಿವೆ. ಪ್ರಾಚೀನ ಕಾಲದಲ್ಲಿ ವೈಭವದಿಂದ ಮೆರೆದ ದೈವಗಳು ಸರಳ ಆರಾಧನೆಯನ್ನು ಪಡೆಯುತ್ತಿವೆ. ದೈವಗಳ ಆರಾಧನೆಯನ್ನು ನಡೆಸುವ ವ್ಯಕ್ತಿ ಅಥವಾ ಸಮಾಜದ ಆರ್ಥಿಕ ಸ್ಥಿತಿಗತಿಗೆ ಅನುಗುಣವಾಗಿ ತೆರೆಕಟ್ಟುವ ಆಚರಣೆಯ ಸಾಂಸ್ಕೃತಿಕ ಸ್ವರೂಪವು ಇರುತ್ತದೆ. ಹಿಂದಿನಿಂದಲೂ ಊರಿನ ಹಾಗೂ ಆಯಾ ಒಕ್ಕ(ಕುಟುಂಬ)ದ ಪ್ರತಿಷ್ಠೆ ಹಾಗೂ ವೈಭವದ ಸಂಕೇತವಾಗಿ ತೆರೆಕಟ್ಟುವ ಆಚರಣೆಗಳು ನಡೆಯುತ್ತಿವೆ. ಇಂದಿಗೂ ಅದು ಹಾಗೆಯೇ ಮುಂದುವರೆಯುತ್ತಿದೆ. ಒಟ್ಟಾಗಿ ಈ ಮೇಲಿನ ವರ್ಗೀಕರಣಗಳು ತಮ್ಮದೇ ಆದ ಮಿತಿಗಳನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ಕೊಡಗಿನ ತೆರೆಕಟ್ಟುವ ಆಚರಣೆಯಲ್ಲಿ ಆರಾಧನೆಗೊಳ್ಳುವ ದೈವಗಳ ಲಿಂಗವನ್ನು ಪ್ರಮುಖ ಮಾನದಂಡವಾಗಿರಿಸಿಕೊಂಡು ಈ ಕೆಳಗಿನಂತೆ ವರ್ಗೀಕರಿಸಿ ವಿಶ್ಲೇಷಿಸಲಾಗಿದೆ.

**೫.೧.೧ ಸ್ತ್ರೀ ದೈವಗಳ ತೆರೆಗಳು**

ಸ್ತ್ರೀತ್ವದ ಕಲ್ಪನೆ ಮತ್ತು ಆರಾಧನೆ ಜಗತ್ತಿನಾದ್ಯಂತ ಅನೇಕ ಪರಂಪರೆಗಳಲ್ಲಿ ಕಂಡುಬರುತ್ತದೆ. ಇದೊಂದು ಉದಾತ್ತವಾದ ಪರಿಕಲ್ಪನೆ. ಭೂಮಿಯನ್ನು ಹೆಣ್ಣೆಂದು ಪರಿಗಣಿಸುವ ಜನಪದರು ಭೂಮಿತಾಯಿ ಎಂದು ಪೂಜಿಸುತ್ತಾರೆ. ಆದಿಶಕ್ತಿ, ಮಾತೃದೇವೋಭವ, ಕ್ಷಮಯಾಧರಿತ್ರಿ ಎನ್ನುವ ನುಡಿಗಳು ಸ್ತ್ರೀಯ

ಸ್ಥಾನಮಾನವನ್ನು ಪರಿಚಯಿಸುತ್ತವೆ. ಮಾತೃ ವಾತ್ಸಲ್ಯಕ್ಕಿಂತ ಮಿಗಿಲಾದುದು ಈ ಜಗತ್ತಿನಲ್ಲಿ ಬೇರೊಂದಿಲ್ಲ. ಮಾತೆ ತನ್ನ ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವಂತೆ ಮಾತೃದೇವತೆಗಳು ಭಕ್ತರನ್ನು ಅಕ್ಕರೆಯಿಂದ ಸಲಹುತ್ತವೆ ಎಂಬ ನಂಬಿಕೆ ಜನಪದರಿಗಿದೆ. ಮಾತೃದೇವತೆ ಫಲ ಸಮೃದ್ಧಿಯ ಸಂಕೇತವೂ ಹೌದು. ಶಿಲಾಯುಗದಲ್ಲಿ ಫಲ ಸಮೃದ್ಧಿ ದೇವತೆಯಾದ ಮಾತೃ ದೇವತೆಯೇ ಏಕೈಕ ದೈವವಾಗಿದ್ದಳು. ಜಗತ್ತಿನ ಅತೀ ಪ್ರಾಚೀನ ಪಳೆಯುಳಿಕೆಗಳಲ್ಲಿ ಮಾತೃ ದೇವತೆಯ ವಿಗ್ರಹಗಳು ದೊರೆತಿವೆ. ಪೂರ್ವ ಮೆಡಿಟರೇನಿಯನ್ ಪ್ರದೇಶದ ಉತ್ತರ ಹಾಗೂ ದಕ್ಷಿಣ ದೇಶಗಳು ಮಹಾಮಾತೆಯ ಆರಾಧನಾ ಪಂಥದ ಮೂಲ ನೆಲೆಗಳಾಗಿದ್ದವು. ಈಜಿಪ್ಟ್‌ನ ಅತೀ ಪ್ರಾಚೀನ ದೈವವಾದ ಏಡಿಸ್ ಸಮೃದ್ಧಿ ದೇವತೆಯಾಗಿದ್ದಳು. ವಿಶ್ವದ ವಿವಿಧ ಜನಾಂಗಗಳ ಸಂಸ್ಕೃತಿಯಲ್ಲಿ ಮಾತೃ ದೇವತೆಗಳ ಆರಾಧನೆಯು ಸಾಮಾನ್ಯ ಅಂಶವಾಗಿ ಕಾಣುತ್ತದೆ. ಪ್ರಾಚೀನ ಗ್ರೀಕರು ಅಥೇನಾ ದೇವತೆಯನ್ನು, ರೋಮನ್ನರು ಮಿನರ್ವಾ ದೇವತೆಯನ್ನು ಮಾತೃ ದೇವತೆಗಳಾಗಿ ಪೂಜಿಸುತ್ತಿದ್ದರು. ಈಜಿಪ್ಟ್‌ನ ಐಸಿಸ್, ಇರಾನಿನ ಅನೂಹಿತಾ, ಗ್ರೀಕಿನ ಆಪ್ರೋಡೈಟಿ, ಆರ್ಟಿಮಿಸ್, ರೋಮ್‌ನ ಡಯಾನ, ವೀನಸ್ ಮಾತೃದೇವತೆಗಳ ಸಾಲಿಗೆ ಸೇರುತ್ತವೆ.

ಭಾರತದಲ್ಲಿ ಮಾತೃದೇವತೆಗಳ ಆರಾಧನೆಯು ಚರಿತ್ರೆಯ ಪೂರ್ವಕಾಲದಲ್ಲಿ ಬಳಕೆಯಲ್ಲಿತ್ತು ಎಂಬುದಕ್ಕೆ ವಿಪುಲವಾದ ಸಾಕ್ಷ್ಯಾಧಾರಗಳು ದೊರಕುತ್ತವೆ. ಸಿಂಧೂ ಕಣಿವೆಯಲ್ಲಿ ದೊರಕಿರುವ ಅನೇಕ ಸ್ತ್ರೀ ವಿಗ್ರಹಗಳು ಮಾತೃದೇವತಾ ಪಂಥಕ್ಕೆ ಸಂಬಂಧಿಸಿವೆ. ಹರಪ್ಪಾ ಸಂಸ್ಕೃತಿಯಲ್ಲಿ ಕುತೂಹಲಕರವಾದ ಮುದ್ರೆಯೊಂದು ದೊರಕಿದೆ. ಈ ಮುದ್ರಿಕೆಯಲ್ಲಿ ಒಂದು ಸ್ತ್ರೀ ವಿಗ್ರಹವಿದ್ದು ಆಕೆಯ ಗರ್ಭದಿಂದ ಒಂದು ಸಸ್ಯವು ಹುಟ್ಟುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಇನ್ನೊಂದು ಬದಿಯಲ್ಲಿ ಸ್ತ್ರೀ ಪುರುಷರ ಚಿತ್ರಗಳಿವೆ. ಒಬ್ಬ ಮನುಷ್ಯನು ನೇಗಿಲಿನಿಂದ ಉಳುಮೆ ಮಾಡುವ ರೈತನಾಗಿದ್ದಾನೆ. ಗರ್ಭದಿಂದ ಹೊರಹೊಮ್ಮುತ್ತಿರುವ ಸ್ತ್ರೀ ಚಿತ್ರವನ್ನು ಮಾತೃದೇವತೆಯೆಂದು ಗುರುತಿಸಲಾಗಿದೆ. ಭಾರತದಾದ್ಯಂತ ಆರಾರಾಧನೆಗೆ ಒಳಪಡುವ ಸ್ತ್ರೀದೈವಗಳಲ್ಲಿ ಹೆಚ್ಚಿನವುಗಳು ಗ್ರಾಮದೇವತೆಗಳಾಗಿವೆ. ಅವುಗಳೆಂದರೆ ಚೀರುಂಬಾ, ಮಾರಮ್ಮ, ದುರುಗಮ್ಮ, ಲಕ್ಕವ್ವ, ಗಾಳೆಮ್ಮ, ಉಡುಚಮ್ಮ, ದ್ಯಾಮವ್ವ ಇತ್ಯಾದಿ. ಅಂತೆಯೇ ಕೊಡಗಿನಲ್ಲಿಯೂ ಸ್ತ್ರೀ ದೈವಗಳೇ ಗ್ರಾಮದೇವತೆಗಳಾಗಿವೆ. ತಮ್ಮ ಪರಿಧಿಯ ಗ್ರಾಮಗಳನ್ನು ಕಾಪಾಡುವ ಈ ದೈವಗಳಿಗೆ ಕೊಡಗಿನ ಜನಪದರು ಪ್ರಧಾನವಾಗಿ ತೆರೆಕಟ್ಟುವ ಆಚರಣೆಯನ್ನು ಮಾಡುತ್ತಾರೆ. ಆ ಮೂಲಕ ದೈವಗಳನ್ನು ಸಂತೃಪ್ತಿಪಡಿಸುತ್ತಾರೆ. ಅಂತಹ ಸ್ತ್ರೀದೈವಗಳ ತೆರೆಯನ್ನು ಹೀಗೆ ವಿಶ್ಲೇಷಿಸಲಾಗಿದೆ.

೫.೧.೧.೧ ಚೌಂಡಿ ತೆರೆ

**ಅರ್ಥ :**

ಚೌಂಡಿ ಕೊಡಗಿನಲ್ಲಿ ನೆಲೆನಿಂತಿರುವ ಕೊಡವರ ಸ್ತ್ರೀ ದೈವ. ಚೌಂಡಿಯನ್ನು ವೈವಿಧ್ಯಮಯವಾದ ಹೆಸರಿನಲ್ಲಿ ಕರೆಯುವುದು ರೂಢಿಯಲ್ಲಿದೆ. ಅವುಗಳೆಂದರೆ ಚೌಂಡಿಯಮ್ಮೆ (ಚೌಂಡಿಯಮ್ಮ), ಚಾವುಂಡಿ, ಚಾಮುಂಡಿ ಇತ್ಯಾದಿ. ಪುರಾಣಗಳಲ್ಲಿ ಉಕ್ತವಾಗಿರುವ ಚಾಮುಂಡಿಯೇ ಚೌಂಡಿ ದೇವಿಯಾಗಿರುತ್ತಾಳೆ. ಭಗವತಿಯ ಇನ್ನೊಂದು ಅಂಶವೇ ಚೌಂಡಿ ಎಂಬ ಅಭಿಪ್ರಾಯವೂ ಇದೆ. ಈಕೆಯನ್ನು ಶಕ್ತಿ ದೇವತೆ ಅಂತಲೂ ಕರೆಯುತ್ತಾರೆ. ಚೌಂಡಿದೇವಿಯನ್ನು ಕೊಡಗಿನಲ್ಲಿ ಬೇರೆ ಬೇರೆ ಹೆಸರಿನಲ್ಲಿ ಕರೆಯುವರು. ಅವುಗಳೆಂದರೆ ಪುಲಿ ಚೌಂಡಿ, ಕುಳಿಯಮೆ ಚೌಂಡಿ, ಕಿಗ್ಗಾಲ್/ಕೋಕಾಟ್ ಚೌಂಡಿ, ಪಾಲ್‌ಪಾರ್ ಚೌಂಡಿ ಇತ್ಯಾದಿ. ಇವಳ ಹೆಸರಿನಲ್ಲಿ ಆಯಾಯ ಸ್ಥಳಗಳಿಗೆ ಅನುಗುಣವಾಗಿ ಹೆಸರು, ಗುಣ ವಿಶೇಷಗಳು ಹಾಗೂ ಪೌರಾಣಿಕ ಹಿನ್ನೆಲೆ ಇದೆ.



**ಐತಿಹ್ಯ :**

ಚೌಂಡಿಯ ಕುರಿತು ಐತಿಹ್ಯವೊಂದು ಹೀಗಿದೆ. ಪೂರ್ವದಲ್ಲಿ ಕೊಡಗಿನ ಕ್‌ಗ್ಗಟ್ಟ್‌ನಾಡಿನಲ್ಲಿ ಆಂಡಮಾಡ ಚೆಟ್ಟಿಚ ಎಂಬ ನಾಯಕನಿದ್ದನು. ಈತ ಎಡೆನಾಡಿನ ದೇವಡೇರಿ(ಈಗಿನ ದೇವಣಗೇರಿ) ಊರಿನ ಪುಗ್ಗೇರ ಮೊಣ್ಣಯ್ಯನ ಆಸ್ತಿಯನ್ನು ವಶಪಡಿಸಿಕೊಳ್ಳಲೆಂದು ನಿರ್ಧರಿಸಿದನು. ನಾಲ್ಕು ಮಂದಿ ವೀರರೊಂದಿಗೆ ದೇವಡೇರಿಗೆ ತೆರಳಿದನು. ತನ್ನ ಊರಿಗೆ ಬಂದ ಚೆಟ್ಟಿಚನನ್ನು ಮೊಣ್ಣಯ್ಯ ಅತ್ಯಂತ ಆದರದಿಂದ ಮಾತನಾಡಿಸಿ ಆತಿಥ್ಯ ಸ್ವೀಕರಿಸಲು ಆಹ್ವಾನಿಸುವನು. ಆದರೆ ಚೆಟ್ಟಿಚ ಮೊಣ್ಣಯ್ಯನ ಆಹ್ವಾನವನ್ನು ತಿರಸ್ಕರಿಸಿ ಹೀಗೆಂದನು. "ಎಲೈ ಕೂಪ ಮಂಡೂಕನೆ ಆಂಡಮಾಡ ಚೆಟ್ಟಿಚ ನಾನೇ ಎಂಬುದು ನಿನಗೆ ತಿಳಿದಿಲ್ಲವೇ? ಪೂರ್ವದಿಂದಲೇ ಈ ಆಸ್ತಿ ನಮ್ಮದು. ಇದನ್ನು ನಿನ್ನ ಅಜ್ಜ ಮೋಸದಿಂದ ಕಸಿದುಕೊಂಡನು. ಅದನ್ನು ಸ್ವಾಧೀನ ಪಡಿಸಿಕೊಳ್ಳಲೆಂದು ನಾನು ಬಂದಿದ್ದೇನೆ. ನೀನು ಆಸ್ತಿಯನ್ನು ನನಗೆ ಒಪ್ಪಿಸಿ ಹೊರಡು" ಎಂದನು.

ಆತನ ಮಾತಿಗೆ ಮೊಣ್ಣಯ್ಯ ಹೀಗೆ ತಿರುಗೇಟು ನೀಡುವನು. "ಆಂಡಮಾಡ ಚೆಟ್ಟಿಚನೇ ಕೇಳು. ಕೂಪ ಮಂಡೂಕ ನಾನಲ್ಲ. ಈ ಜಮೀನು ನಿನ್ನದಲ್ಲ. ಇದನ್ನು

ಈ ಕ್ಷಣದಲ್ಲೇ ನಿನಗೆ ತಿಳಿಸುವ ಸಾಮರ್ಥ್ಯ ನನಗಿದೆ. ಆದರೆ ಈಗ ನೀನಿರುವ ಸ್ಥಿತಿಯಲ್ಲಿ ನಾನು ಜಗಳವಾಡಲು ಸಿದ್ಧನಿಲ್ಲ. ಹಾಗಾಗಿ ಬಂದ ದಾರಿಯಲ್ಲೇ ಹಿಂದಿರುಗುವುದು ಕ್ಷೇಮ" ಎನ್ನುವನು. ಮೊಣ್ಣಯ್ಯನ ಮಾತಿಗೆ ಪ್ರತಿಯಾಗಿ ಚೆಟ್ಟಿಚನು "ನಿನ್ನ ಮಾತನ್ನು ಕೇಳಲು ನಾನು ಬಂದಿಲ್ಲ. ಈಗ ನಾನು ಹಿಂದಿರುಗುತ್ತೇನೆ. ಆದರೆ ಇಂದಿಗೆ ಸರಿಯಾಗಿ ಒಂದು ತಿಂಗಳಲ್ಲಿ ಮತ್ತೆ ಬಂದು ಆಸ್ತಿಯನ್ನು ವಶಪಡಿಸಿಕೊಳ್ಳುವೆ. ನೆನಪಿಟ್ಟುಕೋ"ಎಂದು ಹಿಂದಿರುಗುವನು. ಇದರಿಂದ ಮೊಣ್ಣಯ್ಯ ಚಿಂತೆಗೀಡಾದನು. ಆಗ ಮೊಣ್ಣಯ್ಯನ ಸೇವಕ ಬಣ್ಣ ಸಮುದಾಯದ ಕರಿಂಬು ಬೈತೂರಪ್ಪ ದೇವರ ಮೊರೆ ಹೋಗುವಂತೆ ಸಲಹೆ ನೀಡುವನು. ಅದರಂತೆ ಮೊಣ್ಣಯ್ಯ ಕರಿಂಬುವಿನೊಂದಿಗೆ ಬೈತೂರು ದೇವಸ್ಥಾನಕ್ಕೆ ಹೋಗುವನು. ಅಲ್ಲಿ ಕೋಲಕಾರ ಅಚ್ಚು ಎಂಬುವವನ ಮೈಮೇಲೆ ಬೈತೂರಪ್ಪ ದೇವರು ಮೈದುಂಬಿ ಬಂದು ಮೊಣ್ಣಯ್ಯನನ್ನು ಕುರಿತು "ಭಕ್ತನೇ ಕೇಳು, ನೀನು ಹೆದರಬೇಕಾಗಿಲ್ಲ. ಶಕ್ತಿ ಸ್ವರೂಪಿಣಿಯಾದ ಚೌಂಡಿ ದೇವಿಯು ನಿನ್ನ ಬೆಂಗಾವಲಾಗಿ ಇರುವಳು. ಶತ್ರು ಬರುವ ದಿನದಂದು ಕೋವಿ, ಕತ್ತಿ ಮತ್ತು ಈಟಿಯನ್ನು ನೆಲ್ಲಕ್ಕಿ ನಡುಬಾಡೆಯಲ್ಲಿ ಇರಿಸಿ ನನ್ನನ್ನು ಪ್ರಾರ್ಥಿಸು" ಎನ್ನುವನು.

ಒಂದು ತಿಂಗಳ ನಂತರ ಆಂಡಮಾಡ ಚೆಟ್ಟಿಚನ ದಂಡು ಮತ್ತೆ ಬಂದಿತು. ಮೊಣ್ಣಯ್ಯ ಬೈತೂರಪ್ಪನ ಮಾತಿನಂತೆ ನಡೆದುಕೊಂಡನು. ತನ್ನ ಪತ್ನಿ ಹಾಗೂ ತಾಯಿಯೊಂದಿಗೆ ಪ್ರಾರ್ಥಿಸುತ್ತಾ ಕುಳಿತನು. ಶತ್ರುಪಡೆ ಪುಗ್ಗೇರ ಕುಟುಂಬದ ಐನ್‌ಮನೆಯ ಓಣಿಯಲ್ಲಿ ನಿಂತು ಅಬ್ಬರಿಸಿತು. ಶತ್ರುನಾಶಿನಿ ಚೌಂಡಿ ತನ್ನ ಮಹಿಮೆಯನ್ನು ತೋರಿದಳು. ಭೂಮಿ ನಡುಗಿತು. ಮೋಡ ಕವಿದು ಕತ್ತಲಾಯಿತು. ಗುಡುಗು ಸಿಡಿಲು ಮಿಂಚುಗಳುಂಟಾದವು. ಹೆಜ್ಜೇನು ಹಾಗು ಕಡಜಗಳು ಹಾರಿಬಂದು ಶತ್ರು ಪಡೆಯನ್ನು ಮುತ್ತತೊಡಗಿದವು. ನೆಲ್ಲಕ್ಕಿ ನಡುಬಾಡೆಯಲ್ಲಿ ಇರಿಸಿದ್ದ ಕೋವಿಗಳಿಂದ ಗುಂಡು ಸಿಡಿಯಲಾರಂಭಿಸಿತು. ಕತ್ತಿ ಹಾಗು ಈಟಿಗಳು ಶತ್ರುಗಳನ್ನು ಕತ್ತರಿಸಿ ಇರಿಯಲಾರಂಭಿಸಿದವು. ಇದನ್ನು ಕಂಡು ಮೊಣ್ಣಯ್ಯ ಮತ್ತು ಅವನ ಕುಟುಂಬ ಪ್ರಜ್ಞಾಶೂನ್ಯರಾದರು. ಚೌಂಡಿಯು ಹುಲಿಯ ಮೇಲೆ ಕುಳಿತು ಶತ್ರುಗಳ ಮೇಲೆರಗಿದಳು. ಬೆದರಿದ ಚೆಟ್ಟಿಚ ಹಾಗೂ ಆತನ ಸಂಗಡಿಗರು ಪಲಾಯನ ಮಾಡಿದರು.

ಎಚ್ಚರಗೊಂಡ ಮೊಣ್ಣಯ್ಯನಿಗೆ ದೂರದಲ್ಲಿ ನಿಂತು ವೀಕ್ಷಿಸುತ್ತಿದ್ದ ಕರಿಂಬು ಮತ್ತು ನೆರೆಹೊರೆಯವರು ನಡೆದುದೆಲ್ಲವನ್ನು ವಿವರಿಸಿದರು. ಚೌಂಡಿಯ ಶಕ್ತಿಯನ್ನು ಕೊಂಡಾಡಿದರು. ಇದನ್ನು ಕೇಳಿದ ಮೊಣ್ಣಯ್ಯ ಈಟಿಯೊಂದನ್ನು ತಂದು ಐನ್‌ಮನೆಯ ಮುಂಭಾಗದಲ್ಲಿ ಚೌಂಡಿ ಪ್ರತ್ಯಕ್ಷಗೊಂಡ ಸ್ಥಳದಲ್ಲಿ ಚುಚ್ಚಿದನು. ಅದನ್ನು ಚೌಂಡಿಯ ನೆಲೆ ಎಂದು ಘೋಷಿಸಿದನು. ನೆರೆಹೊರೆಯವರನ್ನು,

ಊರಿನವರನ್ನೂ ಆಹ್ವಾನಿಸಿ ಚೌಂಡಿಯನ್ನು ತೆರೆಕಟ್ಟಿ ಆರಾಧಿಸಿದನು. ಮರುದಿನ ಮೊಣ್ಣಯ್ಯನು ಬೈತೂರಿಗೆ ತೆರಳಿದನು. ಪೂಜೆಯ ವೇಳೆಯಲ್ಲಿ ಕೋಲಕಾರ ಅಚ್ಚುವಿನ ಮೇಲೆ ಬೈತೂರಪ್ಪ ದೇವರು ಆವಾಹನೆಯಾಯಿತು. ಮೊಣ್ಣಯ್ಯನನ್ನು ಕುರಿತು "ಇನ್ನು ಮುಂದೆ ನಿನ್ನ ಒಕ್ಕದವರು ನನ್ನ ದೇವಸ್ಥಾನದ ತಕ್ಕಮುಖ್ಯಸ್ಥರಾಗಿ ಪೂಜೆ ಹಾಗೂ ವಾರ್ಷಿಕ ಉತ್ಸವವನ್ನು ನಡೆಸುವಂತಾಗಲಿ"ಎಂದು ಹರಸಿತು. ಅಂದಿನಿಂದ ಪುಗ್ಗೇರ ಒಕ್ಕದವರು ಕೇರಳದ ಬೈತೂರು ದೇವಾಲಯದ ತಕ್ಕ ಮುಖ್ಯಸ್ಥರಾದರು ಎಂಬ ಪ್ರತೀತಿಯಿದೆ. ಇಂದಿಗೂ ಬೈತೂರಪ್ಪನ ವಾರ್ಷಿಕ ಉತ್ಸವದ ಸಂದರ್ಭದಲ್ಲಿ ಪುಗ್ಗೇರ ಕುಟುಂಬದವರು ಮೂರು ಎತ್ತುಗಳ ಹೇರಿನೊಂದಿಗೆ ತೆರಳುವ ಸಂಪ್ರದಾಯವಿದೆ. ಮೊಣ್ಣಯ್ಯನನ್ನು ಪುಗ್ಗೇರ ಒಕ್ಕದವರು ಕಾರೋಣ ಎಂದು ಪರಿಗಣಿಸಿ ಆತನಿಗೆ ಕೈಮಡವನ್ನು ಕಟ್ಟಿ ಆರಾಧಿಸುತ್ತಾರೆ. ಹೀಗೆ ಚೌಂಡಿ ದೇವಿಯನ್ನು ಕುರಿತು ಆಯಾ ಪ್ರದೇಶಗಳಿಗೆ ಅನುಗುಣವಾಗಿ ಐತಿಹ್ಯಗಳಿವೆ.

**ಆಚರಣೆ :**

ಇದು ಸ್ತ್ರೀಪ್ರಧಾನವಾದ ತೆರೆ. ಚೌಂಡಿ ತೆರೆಯ ಆಚರಣೆಯನ್ನು ಜನಪದರು ಹಗಲು ಹೊತ್ತಿನಲ್ಲಿ ಆಚರಿಸುತ್ತಾರೆ. ಈ ಆಚರಣೆಯು ಬೆಳಿಗ್ಗೆ ಹತ್ತು ಗಂಟೆಯಿಂದ ಅಪರಾಹ್ನ ಎರಡು ಗಂಟೆಯುವರೆಗೂ ನಡೆಯುತ್ತದೆ. ಆಚರಣೆಗೆ ಪೂರ್ವಭಾವಿಯಾಗಿ ಕೆಲವು ವಿಧಿಗಳು ನಡೆಯುತ್ತವೆ. ಅವುಗಳನ್ನು ವಿವರಣಾತ್ಮಕವಾಗಿ ಈ ಕೆಳಗೆ ಬರೆಯಲಾಗಿದೆ.

**ನಮ್ಮೆ ಕುರಿಪೊ (ದಿನ ನಿಗದಿಗೊಳಿಸುವುದು) :**

ಇದು ಚೌಂಡಿ ತೆರೆಕಟ್ಟುವ ಆಚರಣೆಯ ಆರಂಭಿಕ ವಿಧಿಯಾಗಿದೆ. ಗ್ರಾಮದ ತಕ್ಕರು(ಮುಖ್ಯಸ್ಥರು) ಒಂದೆಡೆ ಸೇರಿ ಚರ್ಚಿಸುತ್ತಾರೆ. ತೆರೆಕಟ್ಟುವ ಆಚರಣೆಯ ದಿನವನ್ನು ನಿಗದಿಗೊಳಿಸುತ್ತಾರೆ. ಅಂದಿನಿಂದ ಕಟ್ಟುಕಟ್ಟಳೆಗಳು ಜಾರಿಯಾಗುತ್ತವೆ.

**ವೀಳ್ಯ ಕೊಡ್‌ಪೊ (ವೀಳ್ಯ ಕೊಡುವುದು) :**

ತೆರೆ ಕಟ್ಟುವ ಆಚರಣೆಯನ್ನು ನಡೆಸುವವರು ತೆರೆಕಟ್ಟಲು ತೆರೆಕಾರನನ್ನು ಆಹ್ವಾನಿಸುವ ವಿಧಿಯನ್ನು ವೀಳ್ಯ ಕೊಡ್‌ಪೊ ಎನ್ನುವರು. ಗ್ರಾಮದ ತಕ್ಕರು ತೆರೆಕಾರನ ಮನೆಗೆ ಹೋಗುತ್ತಾರೆ. ಆತನ ಮನೆಯ ನೆಲ್ಲಕ್ಕಿ ನಡುಬಾಡೆಯಲ್ಲಿ ಉರಿಯುತ್ತಿರುವ ದೀಪದ ಮುಂದೆ ನಿಂತು ದೇವರನ್ನು ಪ್ರಾರ್ಥಿಸುವರು. ಅನಂತರ ಮೂರು ವೀಳ್ಯದೆಲೆಯ ಮೇಲೆ ಮೂರು ಅಡಿಕೆಯನ್ನು ಇಟ್ಟು ಅದನ್ನು ತೆರೆಕಾರನಿಗೆ ಕೊಡುವರು. ನಿಗಧಿತ ದಿನದಂದು ತೆರೆಕಟ್ಟುವ ಆಚರಣೆಯನ್ನು ಸುಸೂತ್ರವಾಗಿ ನಡೆಸಿಕೊಡುವಂತೆ ಆಹ್ವಾನಿಸುವರು. ತೆರೆಕಾರನಿಗೆ ಗ್ರಾಮದ ಮುಖ್ಯಸ್ಥರು ನೀಡುವ ಅಧಿಕೃತ ಅನುಮತಿ ಇದಾಗಿದೆ. ಕುಟುಂಬದಲ್ಲಿ ಚೌಂಡಿ ತೆರೆಕಟ್ಟುವ ಆಚರಣೆ

ನಡೆದಾಗ ಒಕ್ಕ ಪಟ್ಟೆದಾರ(ಕುಟುಂಬದ ಹಿರಿಯ) ಈ ವಿಧಿಯನ್ನು ನಡೆಸುತ್ತಾನೆ.

**ಕೊಲೆ ಕೆತ್ತುವೊ( ಗೊನೆ ಕಡಿಯುವುದು) :**

ತೆರೆಕಟ್ಟುವ ಆಚರಣೆಗೆ ಅವಶ್ಯಕವಾದ ಬಾಳೆಗೊನೆಯನ್ನು ಕಡಿಯುವ ವಿಧಿಯನ್ನು ಕೊಲೆ ಕೆತ್ತುವೊ ಎನ್ನುತ್ತಾರೆ. ತೆರೆ ಆಚರಣೆಗೆ ಐದು, ಏಳು ಅಥವಾ ಒಂಬತ್ತು ದಿನಗಳ ಮುಂಚಿತವಾಗಿ ಈ ಆಚರಣೆ ನಡೆಯುತ್ತದೆ. ಕುಟುಂಬದಲ್ಲಿ ಚೌಂಡಿ ತೆರೆ ಆಚರಣೆ ನಡೆಯುವಾಗ ಆಯಾ ಕುಟುಂಬದ ಹಿರಿಯ ಮಿಂದು ಶುಚೀರ್ಭೂತನಾಗಿ ಬಾಳೆಗೊನೆ ಕಡಿಯುತ್ತಾನೆ. ಕಡಿದ ಬಾಳೆಗೊನೆಯನ್ನು ಒಕ್ಕದ ಐನ್‌ಮನೆ(ಕುಟುಂಬದ ಮೂಲಮನೆ)ಯ ಕನ್ನಿಕೋಂಬರೆ(ದೇವರಿಗೆ ನೈವೇದ್ಯ ಇಡುವ ಕೋಣೆ)ಯಲ್ಲಿ ಇರಿಸಲಾಗುತ್ತದೆ. ಊರಿನ ತೆರೆಗಳಾದರೆ ಈ ವಿಧಿಯನ್ನು ಊರಿನ ಮುಖ್ಯಸ್ಥರು ನಡೆಸುತ್ತಾರೆ. ಗೊನೆ ಕಡಿದ ನಂತರ ಸುಮಾರು ಒಂಬತ್ತು ದಿನಗಳವರೆಗೆ ಮನೆಯಲ್ಲಿ ಬೇರೆ ಯಾವುದೇ ಸಮಾರಂಭಗಳನ್ನು ಇಟ್ಟುಕೊಳ್ಳುವಂತಿಲ್ಲ. ತೆರೆ ಆಚರಣೆಗೆ ಗೊನೆ ಕಡಿದು ತಂದ ಬಾಳೆ ಹಣ್ಣುಗಳನ್ನು ಉಪಯೋಗಿಸಬೇಕು.

**ಭಂಡಾರ ಉಳ್‌ಪೊ(ಭಂಡಾರ ಇಳಿಸುವುದು) :**

ದೈವದ ಭಂಡಾರವನ್ನು ತಂದು ಶುದ್ಧಗೊಳಿಸುವ ವಿಧಿಯನ್ನು ಭಂಡಾರ ಉಳ್‌ಪೊ ಎನ್ನುತ್ತಾರೆ. ಮನೆಯಲ್ಲಾದರೆ ಭಂಡಾರವನ್ನು ಕನ್ನಿಕೋಂಬರೆಯಿಂದ ತಂದು ಆಚರಣೆಯನ್ನು ಮಾಡುವರು. ಭಂಡಾರದಲ್ಲಿ ದೈವದ ಆಯುಧಗಳು, ಆಭರಣಗಳು ಮತ್ತು ಮೊಗ(ಮುಖವಾಡ) ಇರುತ್ತದೆ. ದುಡಿ ವಾದ್ಯವನ್ನು ಬಾರಿಸುತ್ತಾ ಹಾಡುವ ದುಡಿ ಕೊಟ್ಟ್‌ಪಾಟ್ ಹಾಡಿನೊಂದಿಗೆ ಈ ವಿಧಿಯನ್ನು ನಡೆಸುತ್ತಾರೆ. ತಕ್ಕರು ಮತ್ತು ಗ್ರಾಮಸ್ಥರು ಈ ಆಚರಣೆಯನ್ನು ಮಾಡುತ್ತಾರೆ.

**ಎಣ್ಣೆ ಕೊಡ್‌ಪೊ(ಎಣ್ಣೆ ನೀಡುವುದು) ಮತ್ತು ಸ್ನಾನದ ವಿಧಿ :**

ಈ ವಿಧಿಯಲ್ಲಿ ಒಕ್ಕ ಅಥವಾ ಊರಿನ ತಕ್ಕ ಮುಖ್ಯಸ್ಥನು ತೆರೆಕಾರನಿಗೆ ಎಣ್ಣೆಯನ್ನು ನೀಡುತ್ತಾನೆ. ತೆರೆಕಾರನು ತಕ್ಕ ಮುಖ್ಯಸ್ಥರಿಗೆ ನಮಸ್ಕರಿಸಿ "ಎಣ್ಣೆಯನ್ನು ಪಡೆದುಕೊಳ್ಳುವೆ" ಎಂದು ಮೂರು ಬಾರಿ ಹೇಳಿ ಪಡೆದುಕೊಳ್ಳುತ್ತಾನೆ. ಈ ವಿಧಿಯ ನಂತರ ತೆರೆಯ ಸಮಸ್ತ ಜವಾಬ್ದಾರಿ ತೆರೆಕಾರನದಾಗಿರುತ್ತದೆ. ಪಡೆದುಕೊಂಡ ಎಣ್ಣೆಯನ್ನು ತಲೆ ಮತ್ತು ದೇಹಕ್ಕೆ ಹಚ್ಚಿಕೊಂಡು ಸ್ನಾನಕ್ಕೆ ತೆರಳುತ್ತಾನೆ. ಸ್ನಾನ ಮುಗಿಸಿದ ನಂತರ ಚೌಂಡಿ ದೈವದ ಭಂಢಾರವಿರುವ ಮನೆಯ ನೆಲ್ಲಕ್ಕಿ ನಡುಬಾಡೆಗೆ(ಐನ್‌ಮನೆಯ ಮಧ್ಯಭಾಗದಲ್ಲಿ ದೀಪ ಹಚ್ಚುವ ಪವಿತ್ರ ಸ್ಥಳ) ಬರುತ್ತಾನೆ. ಆತನ ಕೈಯಲ್ಲಿ ಕೈಬೊಳ್‌ಚ ಎಂಬ ಕೈದೀಪ ಇರುತ್ತದೆ. ಅದರಿಂದ ದೀಪವನ್ನು ಹೊತ್ತಿಸಿದ ನಂತರ ತೆರೆ ಆಚರಣೆ ವಿದ್ಯುಕ್ತವಾಗಿ ಆರಂಭಗೊಳ್ಳುತ್ತದೆ.

**ಅರಿಂದಿರಿ(ಅಕ್ಕಿ ಮತ್ತು ಬತ್ತಿ) ಆಚರಣೆ :**

ಅರಿಂದಿರಿ ಎಂದರೆ ಅಕ್ಕಿ ಮತ್ತು ಬತ್ತಿ. ಇವುಗಳನ್ನು ಮುಖ್ಯಸ್ಥರಿಂದ ತೆರೆಕಾರನು ಪಡೆದುಕೊಳ್ಳುತ್ತಾನೆ. ಇವುಗಳನ್ನು ಬಾಳೆಲೆಯ ಮೇಲೆ ಇಟ್ಟು ತೆಂಗಿನ ಕಾಯಿಯನ್ನು ಇಡುವರು. ಅದರ ಮುಂಭಾಗದಲ್ಲಿ ಬತ್ತಿಯನ್ನಿಟ್ಟು ಹೊತ್ತಿಸಿ ತೆರೆಕಾರನ ಮುಂದೆ ಇಡಲಾಗುತ್ತದೆ. ಕುಟುಂಬದಲ್ಲಿ ಈ ವಿಧಿಯನ್ನು ಮಾಡಿದರೆ ಕುಟುಂಬದ ಹಿರಿಯ ಪ್ರಾರ್ಥಿಸುವನು. ಗ್ರಾಮದ ತೆರೆಗಳಾದರೆ ಗ್ರಾಮದ ಮುಖ್ಯಸ್ಥ ಕೈಯಲ್ಲಿ ಅಕ್ಕಿಯನ್ನು ಹಿಡಿದು ಹೀಗೆ ಸಂಬೋಧಿಸುವನು."ನಡೆಯುತ್ತಿರುವ ಈ ಕಾರ್ಯ ಸುಗಮವಾಗಿರಲಿ; ಅರಿತೋ ಅರಿಯದೆಯೋ ತಪ್ಪುಗಳಾಗಿದ್ದರೆ ಚೌಂಡಿಯಮ್ಮ ಎಲ್ಲರನ್ನು ಕಾಪಾಡು ತಾಯೇ"ಎಂದು ಪ್ರಾರ್ಥಿಸುವನು. ಬಳಿಕ ತೆರೆ ಕಟ್ಟುವವನು ಕೂಡ ಮುಖ್ಯಸ್ಥನು ಕೇಳಿದ ಹಾಗೆ ಪ್ರಾರ್ಥಿಸುತ್ತಾನೆ.

**ತಟ್ವತಡೆ(ಬಾಳೆಯ ಕಂದಿನಿಂದ ಮಾಡಿದ ಚೌಕಾಕೃತಿ) :**

ತೆರೆಕಾರನು ಸ್ನಾನ ಮುಗಿಸಿ ಬರುವಷ್ಟರಲ್ಲಿ ಆತನ ಸಹಾಯಕರು ನೆಲವನ್ನು ಶುದ್ಧೀಕರಿಸಿ ತಟ್ವತಡೆಯನ್ನು ಮಾಡಿರುತ್ತಾರೆ. ಇದನ್ನು ಬಾಳೆ ಕಂದುಗಳನ್ನು ಪಟ್ಟಿಗಳಂತೆ ಸೀಳಿ ನಿರ್ಮಿಸಲಾಗುತ್ತದೆ. ಒಂದು ಇಂಚು ಅಗಲ ಮತ್ತು ಎರಡು ಅಡಿ ಉದ್ದದ ಪಟ್ಟಿಗಳನ್ನು ಕತ್ತರಿಸಿಕೊಳ್ಳುವರು. ಈ ಪಟ್ಟಿಗಳನ್ನು ಒಂದರ ಮೇಲೆ ಒಂದರಂತೆ ಚೌಕಾಕಾರವಾಗಿ ಜೋಡಿಸುವರು. ಚೌಕಾಕೃತಿಯ ಮಧ್ಯಭಾಗದಲ್ಲಿ ಪಟ್ಟಿಗಳನ್ನು ಸಂಕಲನ ಚಿಹ್ನೆಯ ಮಾದರಿಯಲ್ಲಿರಿಸಿ ವಿಭಾಗಿಸಲಾಗುತ್ತದೆ. ಆಯಾ ತೆರೆಗಳಿಗೆ ಅನುಗುಣವಾಗಿ ನಾಲ್ಕು, ಆರು, ಹನ್ನೆರಡು ಹೀಗೆ ವಿಭಾಗಗಳಿರುತ್ತವೆ. ಇದರ ಮೇಲ್ಭಾಗಕ್ಕೆ ಬಿದಿರಿನ ಕೋಲಿನಿಂದ ಮಾಡಿದ ಕೋತಿರಿಯನ್ನು ಚುಚ್ಚುತ್ತಾರೆ. ಕೋತಿರಿ ಎಂದರೆ ಬಿದಿರಿನ ಕೋಲಿಗೆ ಬಟ್ಟೆಯನ್ನು ಸುತ್ತಿ ಅದಕ್ಕೆ ಎಣ್ಣೆಯನ್ನು ಅದ್ದಿ ಉರಿಸುವ ಬತ್ತಿ. ಇದನ್ನು ಕೋತ್ರಿ ಎಂದೂ ಕರೆಯುತ್ತಾರೆ.



ಈ ಚೌಕಾಕೃತಿಯನ್ನು ಬಾಳೆ ಎಲೆಯ ಮೇಲೆ ಇರಿಸುವರು. ಮೊದಲ ಎರಡು ವಿಭಾಗಕ್ಕೆ ಭತ್ತದ ಅರಳು ಮತ್ತು ಅಕ್ಕಿಯನ್ನು ತುಂಬಿಸುವರು. ಎರಡನೆಯ ವಿಭಾಗದಲ್ಲಿ ತೆಂಗಿನಕಾಯಿಯನ್ನು ಗಣಪತಿಗೆ ಗಣೋದಿ ಇಡುವರು. ಅದರ ಮತ್ತೊಂದು ಭಾಗದಲ್ಲಿ ಮೇಲ್ಭಾಗದ ಚಿಪ್ಪು ತೆಗೆದ ತೆಂಗಿನಕಾಯಿಯನ್ನು ಇಡುತ್ತಾರೆ.

ಇದರ ನೀರನ್ನು ತೆರೆಯು ತೀರ್ಥವೆಂದು ಸೇವಿಸಿ ಭಕ್ತರಿಗೂ ನೀಡುತ್ತದೆ. ಮತ್ತೆರಡು ವಿಭಾಗಗಳಲ್ಲಿ ತೆಂಗಿನ ಹೋಳುಗಳನ್ನು ಇರಿಸುತ್ತಾರೆ. ತಟ್ಪತಡೆಯ ಸಮೀಪ ಮೊರದಲ್ಲಿ ಭತ್ತದ ಅರಳನ್ನು ಇಡುತ್ತಾರೆ. ಅದರ ಮೇಲ್ಭಾಗದಲ್ಲಿ ಭತ್ತ ತುಂಬಿರುವ ಪಾನಿ(ಎರಡು ಸೇರಿನ ಅಳತೆಯ ಮಾಪಕ) ಇರುತ್ತದೆ. ಪಾನಿಯ ಮೇಲೆ ಅಕ್ಕಿ ತುಂಬಿರುವ ಮಾನ(ಅರ್ಧ ಸೇರಿನ ಅಳತೆಯ ಮಾಪಕ) ಇರಿಸುತ್ತಾರೆ. ಮಾನದ ಮೇಲೆ ತೆಂಗಿನಕಾಯಿಯನ್ನು ಇರಿಸಿ ಎರಡು ಕೋತಿರಿಯನ್ನು ಉರಿಸುವರು. ಪಾತ್ರೆಯೊಂದರಲ್ಲಿ ಅರಶಿನ ಮತ್ತು ಸುಣ್ಣ ಮಿಶ್ರಿತ ನೀರನ್ನು ಇರಿಸಿರುತ್ತಾರೆ. ಇದನ್ನು ಕುರ್ದಿನೀರು ಎನ್ನುತ್ತಾರೆ. ಕೆಂಪು ವರ್ಣದ ಈ ನೀರು ರಕ್ತದ ಸಂಕೇತ.

**ತೆರೆಕುರಿಪೊ(ಬಣ್ಣಗಾರಿಕೆ) :**

ತೆರೆಕಾರನ ಸಹಾಯಕರು ಬಣ್ಣಗಾರಿಕೆಯ ಕೆಲಸವನ್ನು ಮಾಡುತ್ತಾರೆ. ಇದನ್ನು 'ತೆರೆಕುರಿಪೊ' ಎನ್ನುತ್ತಾರೆ. ಚೌಂಡಿ ತೆರೆಯ ಮುಖ ವರ್ಣಿಕೆಯಲ್ಲಿ ಕಪ್ಪು, ಕೆಂಪು, ಹಳದಿ ಬಣ್ಣಗಳನ್ನು ಬಳಸುತ್ತಾರೆ. ವಿಶಿಷ್ಟ ರೇಖೆ, ಮುದ್ರೆ ಹಾಗೂ ಚುಕ್ಕಿಗಳನ್ನು ಮುಖದಲ್ಲಿ ಬಿಡಿಸುತ್ತಾರೆ. ಬಣ್ಣಗಾರಿಕೆಯ ನಂತರ ತೆರೆಕಾರನು ನೆಲ್ಲಕ್ಕಿ ನಡುಬಾಡೆಗೆ ಹೋಗುತ್ತಾನೆ. ಉರಿಯುವ ದೀಪದ ಮುಂದೆ ನಿಂತು ತಕ್ಕಮುಖ್ಯಸ್ಥ ಮತ್ತೊಮ್ಮೆ ಮಾತನಾಡುತ್ತಾನೆ. ಎಲ್ಲರೂ ಅಕ್ಕಿ ಹಾಕಿ ಪ್ರಾರ್ಥಿಸುತ್ತಾರೆ. ತೆರೆಕಾರನು 'ಪ್ೕಡ' ಎಂಬ ನಾಲ್ಕು ಕಾಲಿನ ಮರದ ಪೀಠದಲ್ಲಿ ಕುಳಿತುಕೊಳ್ಳುತ್ತಾನೆ. ಚಂಡೆಯ ವಾದನ ಪ್ರಾರಂಭವಾಗುತ್ತದೆ. ತೆರೆಕಾರನ ಸಹಾಯಕರು ಆತನ ಮೈಗೆ ಅರಶಿನ ಮತ್ತು ಕುಂಕುಮ ಮಿಶ್ರಿತ ಲೇಪನವನ್ನು ಹಚ್ಚುತ್ತಾರೆ.

**ವೇಷ ಭೂಷಣಗಳು :**

ಚೌಂಡಿ ತೆರೆಯ ವೇಷದಲ್ಲಿ ತೆಂಗಿನ ಎಳೆಯ ಗರಿಗಳ ಬಳಕೆ ಹೆಚ್ಚು. ತೆರೆಕಾರನು ಕೆಂಪು ಬಣ್ಣದ ಷರಾಯಿಯನ್ನು ಧರಿಸಿರುತ್ತಾನೆ. ಅದರ ಮೇಲೆ ಸೊಂಟಕ್ಕೆ ಕೆಂಪು ಬಣ್ಣದ ಚೇಲೆ ಎಂಬ ವಸ್ತ್ರವನ್ನು ಸುತ್ತುತ್ತಾರೆ. ನಂತರ ತೆಂಗಿನ ಎಳೆಯ ಗರಿಗಳಿಂದ ಮಾಡಿದ ಸ್ತಂಭಾಕೃತಿಯ ತೊಡುಗೆಯನ್ನು ಕಟ್ಟುತ್ತಾರೆ. ಇದನ್ನು 'ಒಲಿ' ಎಂದು ಕರೆಯಲಾಗುತ್ತದೆ. 'ಒಲಿ'ಯ ಮೇಲೆ ಎದೆಯ ಭಾಗಕ್ಕೆ ಅಂತಹದೇ ಪುಟ್ಟ ಸ್ತಂಭಾಕೃತಿಯ ಉಡುಗೆಯನ್ನು ಧರಿಸಲಾಗುತ್ತದೆ. ಇದನ್ನು 'ಒಡೆ' ಎನ್ನುತ್ತಾರೆ. ತೆರೆಕಾರನು ತನ್ನ ತೋಳುಗಳನ್ನು 'ಒಡೆ'ಯ ಮೇಲ್ಭಾಗಕ್ಕೆ ಚಾಚಿಕೊಂಡಿರುತ್ತಾನೆ. ತೆಂಗಿನ ಎಳೆಯ ಗರಿಗಳಿಂದ ನಿರ್ಮಿಸಲಾದ 'ಪುಂಡ್ಯ' ಎಂಬ ಹೂವಿನ ಆಕೃತಿಯನ್ನು ತೋಳು ಮತ್ತು ಮುಂಗೈಗೆ ಕಟ್ಟಲಾಗುತ್ತದೆ. ಕೈಬೆರಳುಗಳ ಕವಚದಂತೆ ಇರುವ 'ಕೈನಗರ'ವನ್ನು ಮಣಿಕಟ್ಟಿಗೆ ತೊಡಿಸಲಾಗುತ್ತದೆ. ಕೈಯಲ್ಲಿ 'ಚೌರಿ' ಎಂಬ ತೆಂಗಿನ ಎಳೆಯ ಗರಿಗಳ ಕುಚ್ಚು ಇರುತ್ತದೆ. ತಲೆಗೆ 'ನೆತ್ತಿಪಟ್ಟ' ಅಥವಾ 'ತಲಪಾಳಿ' ಎಂಬ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ

ಮೇಲ್ಭಾಗಕ್ಕೆ 'ತಲೆಪೂ' ಎಂಬ ಹೂವಿನ ದಂಡೆ ಇರುತ್ತದೆ. ತೆಂಗಿನ ಗರಿಯಿಂದ ನಿರ್ಮಿಸಿರುವ ಕಲಾತ್ಮಕ ಶಿರೋಭೂಷಣ 'ತಲೆಮಲ್ಲಿಗೆ'ಯನ್ನು ಕಿರೀಟದಂತೆ ಕಟ್ಟುತ್ತಾರೆ. ಕಿವಿಗೆ 'ಚೆನ್ನರ್‌ಲ್' ಅಥವಾ 'ಚೆನ್ನಿಮಲರ್' ಎಂಬ ಕಿವಿಯೋಲೆ ಹಾಕುತ್ತಾರೆ. ಅದರ ಅಂಚಿಗೆ 'ವಾಲೆಕಾದ್', ಕೆಳಭಾಗಕ್ಕೆ 'ಕೊಂಬೋಲೆ ಕಾದ್' ಎಂಬ ಕರ್ಣಾಭರಣಗಳಿರುತ್ತವೆ. ಮಂಡಿಯ ಕೆಳಭಾಗಕ್ಕೆ 'ಮಣಿಕೇರ್' ಎಂಬ ಗೆಜ್ಜೆ ಕಟ್ಟುತ್ತಾರೆ. ಅದರ ಕೆಳಭಾಗಕ್ಕೆ 'ಪಟ್ಟ್‌ಂಬಾಡ'(ಪಟ್ಟೆಮಡ) ಎಂಬ ಕಾಲಿನ ಬಳೆಯನ್ನು ತೊಡಿಸುತ್ತಾರೆ.

**ನೆತ್ತಿಪಟ್ಟ್(ನೆತ್ತಿ ಪಟ್ಟಿ) ಕಟ್ಟುವುದು :**

ತೆರೆಯ ಆಭರಣಗಳಲ್ಲಿ ಹಣೆಗೆ ಧರಿಸುವ ನೆತ್ತಿಪಟ್ಟ್ ಪ್ರಮುಖವಾದುದು. ಬಣ್ಣಗಾರಿಕೆಯ ನಂತರ ನೆತ್ತಿಪಟ್ಟಿ ಧರಿಸುವ ವಿಧಿಯು ನಡೆಯುತ್ತದೆ. ತಕ್ಕ(ಮುಖ್ಯಸ್ಥ) ಮತ್ತು ಪ್ರೇಕ್ಷಕರ ಅನುಮತಿಯನ್ನು ಪಡೆದು ತೆರೆಕಾರನು ನೆತ್ತಿಪಟ್ಟ್ ಕಟ್ಟಿಕೊಳ್ಳುತ್ತಾನೆ. "ನೆತ್ತಿಪಟ್ಟ್ ತೆರೆದೈವದ ಶಕ್ತಿಯ ಮೂಲ. ಇದರಲ್ಲಿ ಇಪ್ಪತ್ತೊಂದು 'ತೊತ್'(ಹಾವಿನ ಹೆಡೆಯನ್ನು ಹೋಲುವ ರೂಪ) ಗಳು ಇದ್ದು; ಇವು ಇಪ್ಪತ್ತೊಂದು ಗುರುಗಳ ಸಂಕೇತವಾಗಿವೆ. ನೆತ್ತಿಪಟ್ಟ್ ಧರಿಸಿದ ನಂತರ ತೆರೆಕಟ್ಟುವ ಆಚರಣೆಯನ್ನು ಕ್ರಮಬದ್ಧವಾಗಿ ನಡೆಸುವುದು ನಮ್ಮ ಜವಾಬ್ದಾರಿ."[೨] ಎಂದು ತೆರೆಕಾರರು ಭಾವಿಸುತ್ತಾರೆ. ಆಚರಣೆಯಲ್ಲಿ ತಪ್ಪುಗಳಾದರೆ ಅದರಿಂದ ತಮಗೆ ದೋಷ ಉಂಟಾಗುತ್ತದೆ ಎಂದು ನಂಬುತ್ತಾರೆ.

**ಚಲ್‌ಂಬು(ಕಾಲಿನ ಆಭರಣ)ಧರಿಸುವುದು :**

'ಚಲ್‌ಂಬು' ಎಂಬುದು ತೆರೆಕಾರನು ಕಾಲಿಗೆ ಕಟ್ಟಿಕೊಳ್ಳುವ ದೊಡ್ಡದಾದ ಗೆಜ್ಜೆಯಂತೆ ಶಬ್ಧ ಮಾಡುವ ಸಾಧನ. ನೆಲ್ಲಕ್ಕಿ ನಡುಬಾಡೆಯಲ್ಲಿ ಬಾಳೆ ಎಲೆಯ ಮೇಲೆ 'ಚಲ್‌ಂಬು'ವನ್ನು ಇರಿಸಲಾಗಿರುತ್ತದೆ. ಚಂಡೆ ಅಥವಾ ಮದ್ದಳೆಯನ್ನು ಬಾರಿಸುತ್ತಾ ಹಾಡುಗಾರರು ತೆರೆಹಾಡನ್ನು ಹಾಡುತ್ತಾರೆ. ಹಾಡು ಮತ್ತು ಚಂಡೆಯ ಬಡಿತ ಹೆಚ್ಚಾಗುತ್ತಿದ್ದಂತೆ ತೆರೆಕಾರನು ಚಲ್‌ಂಬುವನ್ನು ಕೈಯಲ್ಲಿ ಹಿಡಿದುಕೊಂಡು ಎಲ್ಲರ ಅನುಮತಿಯನ್ನು ಕೋರುತ್ತಾನೆ. ಎಲ್ಲರೂ ಪ್ರಾರ್ಥಿಸಿ ಅಕ್ಕಿ ಹಾಕುತ್ತಾರೆ. ತೆರೆಕಾರನು ಚಲ್‌ಂಬುವನ್ನು ಕುಲುಕುತ್ತಾ ತೀವ್ರ ಆವೇಶದಿಂದ ಕುಣಿದು ಕಾಲಿಗೆ ಧರಿಸಿಕೊಳ್ಳುತ್ತಾನೆ. ವೇಷಭೂಷಣವನ್ನು ಧರಿಸಿ ಸಿದ್ಧನಾದ ನಂತರ ತೆರೆಕಾರನು ತಕ್ಕಮುಖ್ಯಸ್ಥನಿಂದ ಕನ್ನಡಿ ಪಡೆದುಕೊಳ್ಳುತ್ತಾನೆ. ಕೋತಿರಿಯ ಬೆಳಕಿನಲ್ಲಿ ಕನ್ನಡಿ ನೋಡಿ ಸಂತೋಷ ಹಾಗು ತೃಪ್ತಿಯನ್ನು ವ್ಯಕ್ತಪಡಿಸುತ್ತಾನೆ.

**ವಾದ್ಯ ಪರಿಕರಗಳು :**

ತೆರೆಕಟ್ಟುವ ಆಚರಣೆಯ ಸಂದರ್ಭದಲ್ಲಿ ಚಂಡೆ, ಮದ್ದಳೆ, ಶ್ರುತಿ, ತಾಳ ಮತ್ತು ನಾದಸ್ವರ ಎಂಬ ವಾದ್ಯ ಪರಿಕರಗಳು ಬಳಕೆಯಾಗುತ್ತವೆ. ಇವುಗಳನ್ನು

ಒಟ್ಟಾಗಿ ಚಂಡೆವಾದನ ಅಥವಾ ಚಂಡೆಮೇಳ ಎಂದು ಕರೆಯುತ್ತಾರೆ. ತೆರೆಕಟ್ಟುವ ಸಮುದಾಯದವರು ಈ ವಾದ್ಯಗಳನ್ನು ನುಡಿಸುತ್ತಾರೆ. ತೆರೆಹಾಡುಗಳನ್ನು ಹಾಡುವಾಗ, ನೆತ್ತಿಪಟ್ಟ್ ಕಟ್ಟುವಾಗ, ಚಲ್ಂಬು ಧರಿಸುವಾಗ, ಆಯುಧಗಳನ್ನು ಹಿಡಿದುಕೊಳ್ಳುವಾಗ, ದೈವವನ್ನು ಆವಾಹಿಸಿಕೊಳ್ಳುವಾಗ, ಪ್ಡದಿಂದ ಎದ್ದು ವಿವಿಧ ಶೈಲಿಗಳಲ್ಲಿ ಕುಣಿಯುವಾಗ, ಮೊಗ ಧರಿಸುವಾಗ, ಆಹಾರ ಸ್ವೀಕರಿಸುವಾಗ ಹಾಗೂ ದೈವದ ಆವೇಶ ಮುಕ್ತಾಯವಾಗುವಾಗ ವಾದ್ಯ ಪರಿಕರಗಳ ಹಿಮ್ಮೇಳ ಇರುತ್ತದೆ. ದೈವದ ಆವೇಶ, ಕುಣಿತ, ಅಟ್ಟಹಾಸಗಳಿಗೆ ಅನುಗುಣವಾಗಿ ಹಿಮ್ಮೇಳವು ತಾರಕಸ್ಥಾಯಿಯಲ್ಲಿ ಇರುತ್ತದೆ.

**ದೈವಾವೇಶ ಮತ್ತು ಕುಣಿತ :**

ಚಂಡೆಯ ವಾದನ ತೀವ್ರವಾಗುತ್ತಿದ್ದಂತೆ ದೈವದ ಆವೇಶವನ್ನು ಮೈದುಂಬಿಕೊಳ್ಳುವ ತೆರೆಕಾರನು ಪ್ಡದಿಂದ ಎದ್ದು ಕುಣಿಯಲಾರಂಭಿಸುವನು. ನೆರೆದವರೆಲ್ಲಾ"ಚೌಂಡಿ ತೆರೆ ವರ್ಂದತ್" ಅಂದರೆ ಚೌಂಡಿ ತೆರೆ ಆವಾಹನೆಯಾಯಿತು ಎನ್ನುತ್ತಾರೆ. ಚೌಂಡಿ ತೆರೆಯು ನೆಲ್ಲಕ್ಕಿ ನಡುಬಾಡೆಯ 'ಮುಂದ್' ಎಂಬ ಒಳತೊಟ್ಟಿಯ ಸುತ್ತ ಕುಣಿಯುತ್ತದೆ. ಭಕ್ತರನ್ನು ಬರಸೆಳೆದು ಅವರ ಹಣೆಯನ್ನು ತನ್ನ ಹಣೆಗೆ ಮುಟ್ಟಿಸಿ ಹರಸುತ್ತದೆ. ಪುಟ್ಟ ಮಕ್ಕಳನ್ನು ಎತ್ತಿಕೊಂಡು ಮುಂದ್‌ನ ಸುತ್ತ ಪ್ರದಕ್ಷಿಣೆ ಬರುತ್ತದೆ. ಉರಿಯುವ ದೀಪದ ಮುಂದೆ ನಿಂತು ಹರಸುತ್ತದೆ. ಅನಂತರ ಮನೆಯ ಹಿರಿಯ ಹೆಣ್ಣುಮಗಳನ್ನು ಕರೆದು ನೆಲ್ಲಕ್ಕಿ ನಡುಬಾಡೆಯಲ್ಲಿ ಉರಿಯುತ್ತಿರುವ ಮಣ್ಣಿನ ದೀಪವನ್ನು ಎತ್ತಿಕೊಡುವಂತೆ ಹೇಳುತ್ತದೆ. ಸಾಂಪ್ರದಾಯಿಕ ಕೊಡವ ಸೀರೆ ಹಾಗೂ ತಲೆಗೆ ವಸ್ತ್ರವನ್ನು ಕಟ್ಟಿರುವ ಆಕೆ ದೀಪವನ್ನು ಎತ್ತಿ ಕೊಡುತ್ತಾಳೆ. ಅದನ್ನು ಹೊಟ್ಟೆಯ ಮೇಲಿರಿಸಿಕೊಂಡು ಚಂಡೆಯ ಬಡಿತಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತದೆ.

**ಪ್ರೇಕ್ಷಕರು :**

ತೆರೆಕಟ್ಟುವ ಆಚರಣೆಯು ಕುಟುಂಬದಲ್ಲಿ ನಡೆದಾಗ ಆಯಾಯ ಕುಟುಂಬದ ಸದಸ್ಯರು, ಮದುವೆಯಾಗಿ ಹೋದ ಹೆಣ್ಣು ಮಕ್ಕಳು, ನೆಂಟರಿಷ್ಟರು ಹಾಗೂ ಕುಟುಂಬದವರು ಆಹ್ವಾನಿಸಿದ ಗ್ರಾಮಸ್ಥರು ಪ್ರೇಕ್ಷಕರಾಗಿರುತ್ತಾರೆ. ಪ್ರಮುಖ ವಿಧಿಗಳನ್ನು ಕುಟುಂಬದವರು ಮಾಡುತ್ತಾರೆ. ಇನ್ನುಳಿದ ಆಚರಣೆಗಳಲ್ಲಿ ಎಲ್ಲರೂ ಭಾಗವಹಿಸುತ್ತಾರೆ.

**ಭಕ್ತರೊಂದಿಗೆ ಮಾತು ಮತ್ತು ಅನುವಾದ(ಆಶೀರ್ವಾದ) :**

ಚೌಂಡಿ ತೆರೆಯಲ್ಲಿ ದೈವದ ಮಾತು ಪರಿಣಾಮಕಾರಿಯಾಗಿರುತ್ತದೆ. ತಕ್ಕರನ್ನು ಕುರಿತು "ನಾನು ಜಗತ್ತಿಗೆ ತಾಯಿ ಇವರೆಲ್ಲಾ ನನ್ನ ಮಕ್ಕಳು. ಅವರೊಂದಿಗೆ ನಾನು ಮಾತನಾಡಬೇಕು, ಸಮಸ್ಯೆಗಳನ್ನು ಪರಿಹರಿಸಬೇಕು" ಎಂದು ಹೇಳುತ್ತದೆ.

ಪ್ೕಡ ಎಂಬ ನಾಲ್ಕು ಕಾಲಿನ ಪೀಠದಲ್ಲಿ ಕುಳಿತುಕೊಳ್ಳುತ್ತದೆ. ಆಚರಣೆ ನಡೆಸುವ ಕುಟುಂಬದವರು ಮೊದಲು ಕಾಣಿಕೆಯನ್ನು ಸಲ್ಲಿಸಿ ಆಶೀರ್ವಾದ ಪಡೆದುಕೊಳ್ಳುವರು. ನಂತರ ಭಾಗವಹಿಸಿದವರೆಲ್ಲರೂ ಹೋಗುತ್ತಾರೆ. ತಪ್ಪಾಗಿದ್ದರೆ ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತಾರೆ. ತಮ್ಮ ಸಮಸ್ಯೆಗಳನ್ನು ಚೌಂಡಿದೇವಿಯೊಂದಿಗೆ ಹೇಳಿಕೊಳ್ಳುವರು. ದೈವವು ಸೂಕ್ತ ಪರಿಹಾರವನ್ನು ಹೇಳುತ್ತಾ ಹಣೆಗೆ ಭಸ್ಮವನ್ನು ಹಚ್ಚುತ್ತದೆ. ತನ್ನ ಕೈಯಲ್ಲಿರುವ ಚೌರಿಯಿಂದ ಅವರ ತಲೆಗೆ ಹೊಡೆದು ಆಶೀರ್ವದಿಸುತ್ತದೆ. ಕೆಲವರಿಗೆ ತನ್ನ ಹಣೆಯಿಂದ ಬೊಟ್ಟನ್ನು ತೆಗೆದು ಹಚ್ಚುತ್ತದೆ. ಕೌಟುಂಬಿಕ ಹಾಗೂ ಆರೋಗ್ಯ ಸಮಸ್ಯೆಗಳಿಗೆ ಪರಿಹಾರವನ್ನೂ ನೀಡುತ್ತದೆ. ಪ್ರತಿಫಲವಾಗಿ ಏನು ಕೊಡುವೆ ಎಂದು ಕೇಳುತ್ತದೆ. "ಚಿನ್ನಾಭರಣಗಳು ನನಗೆ ಬೇಕಾಗಿಲ್ಲ ಭಕ್ತಿಯಿಂದ ಅಮೃತ(ಕಳ್ಳು) ಮತ್ತು ರಕ್ತ(ಪ್ರಾಣಿ ಬಲಿ) ವನ್ನು ಕೊಟ್ಟರೆ ಸಾಕು. ನಂಬಿದವರನ್ನು ಕೈಬಿಡದೆ ರಕ್ಷಿಸುತ್ತೇನೆ" ಎಂದು ಭರವಸೆ ನೀಡುತ್ತದೆ.

ಜನರು ಹರಕೆ, ಕಾಣಿಕೆಗಳನ್ನು ಚೌಂಡಿ ದೈವದ ನೆತ್ತಿಪಟ್ಟಿಯಲ್ಲಿ ಇರಿಸುತ್ತಾರೆ. ಈ ಪ್ರಕ್ರಿಯೆಯನ್ನು ಒಟ್ಟಾಗಿ ಅನುವಾದ ಕೊಡ್‌ಪೊ ಎನ್ನುತ್ತಾರೆ. ಈ ಸಂದರ್ಭದಲ್ಲಿ ಜನರು ಭಕ್ತಿ, ಬಿನ್ನಹ, ಭರವಸೆ, ವಿನಂತಿಯ ಭಾವನೆಗಳನ್ನು ತಮ್ಮ ಮಾತಿನಲ್ಲಿ ವ್ಯಕ್ತಪಡಿಸುತ್ತಾರೆ. ಅದೇ ರೀತಿ ಚೌಂಡಿ ತೆರೆಯು ತನ್ನ ಶಕ್ತಿ, ಮಹಿಮೆ, ಅಲೌಕಿಕ ವ್ಯಕ್ತಿತ್ವವನ್ನು ಹಲವು ರೀತಿಯಲ್ಲಿ ಪ್ರಕಟಗೊಳಿಸುತ್ತದೆ. "ನಂಬಿದವರಿಗೆ ಇಂಬು ನೀಡುತ್ತೇನೆ" ಎಂದು ಮತ್ತೆ ಮತ್ತೆ ಹೇಳುತ್ತಾ ಜನರಿಗೆ ಧೈರ್ಯ, ಭರವಸೆಯನ್ನು ನೀಡುತ್ತದೆ. ಈ ವಿಧಿಯ ಮೂಲಕ ತೆರೆಯು ಜನಪದರಿಗೆ ಹತ್ತಿರವಾಗುತ್ತದೆ.

**ಬಾರಣೆ(ಆಹಾರ ಸ್ವೀಕಾರ ಮತ್ತು ಪ್ರಸಾದ ನೀಡುವುದು) :**

ಜನಪದರು ಚೌಂಡಿ ದೈವಕ್ಕೆ ನೀಡುವ ಆಹಾರವನ್ನು ಬಾರಣೆ ಎನ್ನುತ್ತಾರೆ. ನೆಲದಲ್ಲಿ ಬಾಳೆಲೆಯನ್ನು ಹಾಸಿ ಅದಕ್ಕೆ ಭತ್ತದ ಅರಳು ಹಾಗೂ ತೆಂಗಿನಕಾಯಿಯ ಚೂರುಗಳನ್ನು ಹಾಕುತ್ತಾರೆ. ತೆರೆಯು ಅದರ ಮುಂದೆ ಕುಳಿತುಕೊಂಡು ಒಂದೊಂದು ಹಿಡಿಯಷ್ಟನ್ನು ಎಲ್ಲರಿಗೂ ನೀಡುತ್ತದೆ. ಎಲ್ಲರಿಗೂ ಪ್ರಸಾದ ದೊರೆಯಿತೇ ಎಂದು ವಿಚಾರಿಸಿ "ಪ್ರಸಾದ ಸ್ವೀಕರಿಸಲೇ" ಎಂದು ಅನುಮತಿ ಪಡೆಯುತ್ತದೆ. ಪ್ರಸಾದದ ಮೇಲೆ ಬೋರಲು ಬಿದ್ದು ಎರಡೂ ಕೈಗಳಿಂದ ಬಾಚಿ ಬಾಯಿಗೆ ತುರುಕುತ್ತಾ ಸಂಭ್ರಮಿಸುತ್ತದೆ. ಈ ಕ್ರಿಯೆಯನ್ನು 'ಬಾರಣೆ ನೀಕುವೋ' ಅಥವಾ 'ಬಾರಣೆ ಎಡ್‌ಪೊ'(ಬಾರಣೆ ಸ್ವೀಕಾರ) ಎಂದೂ ಕರೆಯಲಾಗುತ್ತದೆ. ರೆವರೆಂಡ್ ಎಚ್. ಮೋಗ್ಲಿಂಗ್ ಕೊಡಗಿನ ಕೈಮಡಗಳಲ್ಲಿ ಜರುಗುತಿದ್ದ 'ಬಾರಣೆ'ಯನ್ನು "ನರ್ತನವಿಲ್ಲದೆ ನೀಡುವ ಅರ್ಪಣೆ."[೩] ಎನ್ನುತ್ತಾರೆ. ಇದು ದೈವಗಳಿಗೆ ಆಚರಣೆಯ ಕೊನೆಯ ಕ್ರಿಯಾಭಾಗವಾಗಿ ಅರ್ಪಿಸುವ ಭೋಜನವಾಗಿದೆ.

**ಬಲಿ :**

ಬಲಿ ನೀಡುವ ಹಂತ ಚೌಂಡಿ ತೆರೆಯಲ್ಲಿ ಪ್ರಮುಖವಾದುದು. ಪ್ರಾಣಿಬಲಿ ನೀಡುವ ಸ್ಥಳವನ್ನು 'ಕಡಿಯಕಳ' ಎಂದು ಕರೆಯುತ್ತಾರೆ. ಅಲ್ಲಿ ಬಾಳೆ ಗಿಡದ ಕಾಂಡದ ಪಟ್ಟಿಗಳಿಂದ ಚೌಕಾಕೃತಿಯ ತಟ್ಟ್‌ತಡೆ ನಿರ್ಮಿಸಲಾಗಿರುತ್ತದೆ. ಅದರ ಮೇಲ್ಭಾಗಕ್ಕೆ ಚುಚ್ಚಿರುವ ಕೋತಿರಿಯನ್ನು ಉರಿಸಲಾಗುತ್ತದೆ. ಬಲಿ ನೀಡುವ ಹಂದಿಯ ಕುತ್ತಿಗೆಯನ್ನು ತೆರೆಕಾರನ ಸಹಾಯಕರು ಕತ್ತರಿಸುತ್ತಾರೆ. ರಕ್ತದ ಬಿಂದುಗಳನ್ನು ತಟ್ಟ್‌ತಡೆಗೆ ಸುರಿದು ಅರ್ಪಿಸುತ್ತಾರೆ. ಬಲಿ ಕ್ರಿಯೆಯ ನಂತರ ತೆರೆಯು ಮುಕ್ತಾಯಗೊಳ್ಳುತ್ತದೆ.

**ತೆರೆ ಬಾಂಗುವೊ(ತೆರೆಯು ಮುಕ್ತಾಯ) :**

ತೆರೆಯ ಮುಕ್ತಾಯದ ಹಂತವನ್ನು ತೆರೆ ಬಾಂಗುವೊ ಎನ್ನುತ್ತಾರೆ. ಈ ಹಂತದಲ್ಲಿ ವ್ಯಕ್ತಿ ಮಾಧ್ಯಮವನ್ನು ಬಿಟ್ಟು ದೈವವು ಅಗೋಚರವಾಗುತ್ತದೆ. ಕಡಿಯಕಳ(ಬಲಿ ನೀಡುವ ಸ್ಥಳ)ದಲ್ಲಿ ರಕ್ತಬಲಿ ನೀಡಿದ ನಂತರ ತೆರೆ ಬಾಂಗುವೊ ವಿಧಿ ನಡೆಯುತ್ತದೆ. ಕೆಲವು ತೆರೆಗಳಲ್ಲಿ ತೆರೆಯ ಮುಕ್ತಾಯದ ನಂತರ ಬಲಿ ಆಚರಣೆ ನಡೆಯುತ್ತದೆ. ಇದಾದ ನಂತರ ದೈವದ ಭಂಡಾರ ಮತ್ತು ಮೊಗವನ್ನು ಮೂಲಸ್ಥಾನವಾದ ಕೋಟದಲ್ಲಿ ಇರಿಸಿದರೆ ಅಲ್ಲಿಗೆ ತೆರೆ ಆಚರಣೆ ಮುಗಿಯಿತೆಂದು ಜನಪದರ ಭಾವನೆಯಾಗಿದೆ.

**ಚೌಂಡಿ ತೆರೆ ಮತ್ತು ಮೇಲೇರಿ ಆಚರಣೆ :**

ಮೇಲೇರಿ ಅಂದರೆ ಬೆಂಕಿ ಕೊಂಡ ಅಥವಾ ಕೆಂಡದ ದೊಡ್ಡ ರಾಶಿ ಎಂದರ್ಥ. ತೆರೆಕಟ್ಟಿ ದೈವಾವಾಹನೆಯಾದಾಗ ತೆರೆಕಾರನು ಈ ಕೆಂಡದ ರಾಶಿಯ ಮೇಲೆ ಬೀಳುವ ಕಠಿಣ ಆಚರಣೆಯನ್ನು ಮಾಡುತ್ತಾನೆ. ಇದನ್ನು 'ಮೇಲೇರಿ ಬೂವೋ' ಅಥವಾ 'ಮೇಲೇರಿ ಬೀಳುವುದು' ಎನ್ನುತ್ತಾರೆ. ಇದರೊಂದಿಗೆ 'ಮೇಲೇರಿ'ಯಲ್ಲಿ 'ಚೌಟ್ ಮೇಲೇರಿ' ಹಾಗೂ 'ಅಗ್‌ಟಿ ಮೇಲೇರಿ' ಎಂಬ ವಿಧಗಳೂ ಇವೆ.



ಕೊಡವ ಭಾಷೆಯಲ್ಲಿ 'ಚೌಟ್' ಎಂದರೆ ತುಳಿಯುವುದು ಎಂದರ್ಥ. 'ಚೌಟ್ ಮೇಲೇರಿ'ಯಲ್ಲಿ ತೆರೆಕಾರನು ಬೆಂಕಿಯ ಕೊಂಡವನ್ನು ತುಳಿದು ಹಾರುತ್ತಾನೆ. 'ಅಗ್‌ಟಿ ಮೇಲೆರಿ'ಯು ಭಿನ್ನವಾದುದು. ಇಲ್ಲಿ ಬೆಂಕಿಕೊಂಡದ ಮೇಲೆ ಬಾಳೆಯ

ದಿಂಡನ್ನು ನಿಲ್ಲಿಸಿರುತ್ತಾರೆ. ಅದರ ಮೇಲೆ ಬೆಂಕಿಯ ಕೆಂಡವನ್ನು ತುಂಬಿದ ಮಣ್ಣಿನ ಚಟ್ಟಿ (ಪಾತ್ರೆ)ಯನ್ನು ಇರಿಸಿರುತ್ತಾರೆ. ತೆರೆಕಾರನು ಮಣ್ಣಿನ ಪಾತ್ರೆಯನ್ನು ಹೊಡೆದು ಒಡೆದು ಹಾಕಿ ಬೆಂಕಿ ಕೊಂಡವನ್ನು ಹಾಯಬೇಕಾಗುತ್ತದೆ. ಕೊಡಗಿನಲ್ಲಿ ಆಚರಿಸಲ್ಪಡುವ ಎಲ್ಲಾ ಚೌಂಡಿ ತೆರೆಗಳಲ್ಲಿ ಮೇಲೇರಿ ಆಚರಣೆ ಇರುವುದಿಲ್ಲ. ಆಯಾಯ ಪ್ರದೇಶಗಳ ಸಂಪ್ರದಾಯದಂತೆ ಚೌಂಡಿ ತೆರೆಯಲ್ಲಿ ಮೇಲೇರಿ ಬೀಳುವ ಆಚರಣೆಯನ್ನು ನಡೆಸಲಾಗುತ್ತದೆ.

**ವಿಧಿ ನಿಷೇಧಗಳು :**

ಚೌಂಡಿ ತೆರೆಯ ಸಂದರ್ಭದಲ್ಲಿ ಜನಪದರು ಕೆಲವು ಕಟ್ಟುನಿಟ್ಟಿನ ವಿಧಿ ನಿಷೇಧಗಳನ್ನು ಪಾಲಿಸುತ್ತಾರೆ. ತೆರೆಕಟ್ಟುವ ತೆರೆಕಾರನು ಆಚರಣೆಗೆ ಒಂದು ವಾರಕ್ಕೆ ಮುಂಚಿತವಾಗಿ ಶುದ್ಧಮುದ್ರಿಕೆಯಲ್ಲಿ ಇರುತ್ತಾನೆ. ಶಾಕಾಹಾರವನ್ನೇ ಸೇವಿಸುತ್ತಾನೆ. ಆಗ ತಾನೇ ತಂದ ನೀರಿನಿಂದ ತಯಾರಿಸಿದ ಆಹಾರವನ್ನು ಉಪಯೋಗಿಸಬೇಕು. ಹಾಲು, ಹಣ್ಣು, ಅಕ್ಕಿಹಿಟ್ಟಿನಿಂದ ತಯಾರಿಸಲಾದ ರೊಟ್ಟಿಯನ್ನು ತಿನ್ನಬೇಕು. ಮದ್ಯ, ಮಾಂಸಾಹಾರವನ್ನು ವರ್ಜಿಸಬೇಕಾಗುತ್ತದೆ. ಮುಟ್ಟಾದ ಸ್ತ್ರೀಯರು ಮನೆಯಲ್ಲಿ ಇರುವಂತಿಲ್ಲ. ಊರಿನ ತೆರೆಗಳಾದರೆ ಉತ್ಸವಕ್ಕೆ ಮುಂಚಿತವಾಗಿ ತಕ್ಕ ಮುಖ್ಯಸ್ಥರೆಲ್ಲಾ ದೇವಸ್ಥಾನದಲ್ಲಿ ಸೇರಿ ಹಬ್ಬದ ಕಟ್ಟು ಕಟ್ಟಳೆಗಳನ್ನು ಜಾರಿಗೊಳಿಸುತ್ತಾರೆ. ಇದನ್ನು'ನಮ್ಮೆ ಕೆಟ್ಟ್ ಇಡ್‌ವೊ' ಎನ್ನುವರು. ಅಂದಿನಿಂದ ಹಬ್ಬ ಮತ್ತು ತೆರೆಯ ಕಟ್ಟುಕಟ್ಟಳೆಗಳು ಪ್ರಾರಂಭಗೊಳ್ಳುತ್ತವೆ. ಊರಿನಲ್ಲಿ ಹಸಿ ಗಿಡಮರಗಳನ್ನು ಕಡಿಯುವಂತಿಲ್ಲ. ಯಾವುದೇ ರೀತಿಯ ಹತ್ಯೆ, ಹಿಂಸೆ, ಸುಳ್ಳು ಹೇಳುವುದು, ನೋಯಿಸುವುದು ಹಾಗೂ ಅನೈತಿಕ ಚಟುವಟಿಕೆಗಳು ಕೂಡದು ಎಂಬ ಕಟ್ಟುಪಾಡುಗಳಿರುತ್ತವೆ. ತೆರೆಕಟ್ಟುವ ಆಚರಣೆಗಳಲ್ಲಿ ಮುಟ್ಟಾದ ಮಹಿಳೆಯರು ಭಾಗವಹಿಸುವಂತಿಲ್ಲ. ಕೆಲವೆಡೆಗಳಲ್ಲಿ ಅವರು ಆಚರಣೆ ನಡೆಯುವ ಗ್ರಾಮದಲ್ಲೇ ಇರುವಂತಿಲ್ಲ ಎಂಬ ಕಟ್ಟುಪಾಡುಗಳಿವೆ. ಅಂತಹ ಸಂದರ್ಭಗಳಲ್ಲಿ ಬಂಧುಗಳ ಮನೆಯಲ್ಲಿ ಇರುತ್ತಾರೆ. ಇವುಗಳನ್ನು ಕಟ್ಟುನಿಟ್ಟಾಗಿ ಪಾಲಿಸದಿದ್ದರೆ ದೈವಕ್ಕೆ ಅಪಚಾರ ಎಸಗಿದಂತೆ ಎಂಬ ನಂಬಿಕೆ ಜನಪದರಲ್ಲಿದೆ.

**೫.೧.೧.೨ ಪುಲಿಚೌಂಡಿ ತೆರೆ**

**ಅರ್ಥ :**

ಕೊಡವ ಭಾಷೆಯಲ್ಲಿ 'ಪುಲಿ' ಅಂದರೆ ಹುಲಿ ಎಂದು ಅರ್ಥ. ಇಲ್ಲಿ ಚೌಂಡಿಯೊಂದಿಗೆ ಹುಲಿಯ ಹೆಸರು ಸೇರಿಕೊಂಡಿದೆ. ಜನಪದರ ಪ್ರಕಾರ ಪುಲಿ ಚೌಂಡಿ ಹುಲಿಯ ಮೇಲೆ ಕುಳಿತು ಸಂಚರಿಸುವವಳು. ಹಾಗಾಗಿ ಪುಲಿ ಚೌಂಡಿ ಎಂಬ ಹೆಸರು ಬಂದಿದೆ. ಈಕೆ ದುರ್ಗೆಯ ಅಂಶದವಳು, ರಕ್ತ ಬೀಜಾಸುರ ಸಂಹಾರಿಣಿ ಎಂಬ ನಂಬಿಕೆಯೂ ಇದೆ.

**ಆಚರಣೆ :**

ಪುಲಿಚೌಂಡಿ ತೆರೆಯನ್ನು ಮಲಿಯರು ಕಟ್ಟುತ್ತಾರೆ. ಒಕ್ಕ(ಕುಟುಂಬ)ತೆರೆಗಳ ಆಚರಣೆಯಲ್ಲಿ ಪುಲಿಚೌಂಡಿ ತೆರೆಯು ನಡೆಯುತ್ತದೆ. ತೆರೆಯ ಆರಂಭಿಕ ಹಂತದಲ್ಲಿ ತೆರೆಕಾರನು ಕುಟುಂಬದ ಹಿರಿಯನಾದ ಒಕ್ಕ ಪಟ್ಟೆದಾರನೊಂದಿಗೆ ನೆಲ್ಲಕ್ಕಿ ನಡುಬಾಡೆಯಲ್ಲಿ ನಿಂತು ಪ್ರಾರ್ಥಿಸುತ್ತಾನೆ. ಬಾಳೆ ಎಲೆಯಲ್ಲಿ ಅಕ್ಕಿ ಹಾಕಿ ಅದರ ತುದಿಯಲ್ಲಿ ಉರಿಸಿದ ಬತ್ತಿಯನ್ನು ಕುಟುಂಬದ ಹಿರಿಯನು ತೆರೆಕಾರನಿಗೆ ನೀಡುತ್ತಾನೆ. ಇದನ್ನು ಅರಿಂದಿರಿ ಕೊಡ್‌ಪೊ(ಅಕ್ಕಿ ಬತ್ತಿ ನೀಡುವುದು) ಎನ್ನುತ್ತಾರೆ. ಅಕ್ಕಿ ಬತ್ತಿ ಪಡೆದುಕೊಂಡ ತೆರೆಕಾರನು ಪುಲಿಚೌಂಡಿಯು 'ಕೋಟ'ದ ಸಮೀಪವಿರುವ ಕೊಳಕ್ಕೆ ತೆರಳುತ್ತಾನೆ. ಮಿಂದು ಶುಚೀರ್ಭೂತನಾಗಿ ಕೋಟದ ಮುಂದೆ ನಿಂತು ಪ್ರಾರ್ಥಿಸುತ್ತಾನೆ. ಕೋಟದಲ್ಲಿ ಪುಲಿ ಚೌಂಡಿಯ ಮೊಗವನ್ನು ಕೆಂಪು ವಸ್ತ್ರದಲ್ಲಿ ಸುತ್ತಿ ಇರಿಸಲಾಗಿರುತ್ತದೆ. ಅದನ್ನು ಹೊತ್ತು ತಂದು ನೆಲ್ಲಕ್ಕಿ ನಡುಬಾಡೆಯಲ್ಲಿ ಇರಿಸುತ್ತಾನೆ.

**ಬಣ್ಣಗಾರಿಕೆ ಹಾಗೂ ವೇಷಭೂಷಣಗಳು :**



ಪುಲಿಚೌಂಡಿ ತೆರೆಯು ಬಣ್ಣಗಾರಿಕೆಗೆ ಕಪ್ಪು, ಕೆಂಪು ಮತ್ತು ಹಳದಿ ವರ್ಣಗಳನ್ನು ಪ್ರಧಾನವಾಗಿ ಬಳಸುತ್ತಾರೆ. ಮುಖ ವರ್ಣಿಕೆಯು ವಿಶಿಷ್ಟ ರೇಖೆ, ಮುದ್ರೆ ಹಾಗೂ ಚುಕ್ಕಿಗಳಿಂದ ಕೂಡಿರುತ್ತದೆ. ಬಣ್ಣಗಾರಿಕೆಯ ನಂತರ ವೇಷಭೂಷಣಗಳನ್ನು ಧರಿಸಲಾಗುತ್ತದೆ. ಪುಲಿ ಚೌಂಡಿ ತೆರೆಯ ವೇಷದಲ್ಲಿ ತೆಂಗಿನ ಎಳೆಯ ಗರಿಗಳನ್ನು ಬಳಸಲಾಗುತ್ತದೆ. ತೆರೆಕಾರನು ಕೆಂಪು ಬಣ್ಣದ ಷರಾಯಿಯನ್ನು ಧರಿಸಿರುತ್ತಾನೆ. ಸಹಾಯಕರು ಆತನ ಸೊಂಟಕ್ಕೆ ಕೆಂಪುಬಣ್ಣದ ಬಟ್ಟೆಯನ್ನು ಸುತ್ತುತ್ತಾರೆ. ತೆಂಗಿನ ಎಳೆಯ ಗರಿಗಳ ಸ್ತಂಭಾಕೃತಿಯ ಉಡುಗೆ 'ಒಲಿ'ಯನ್ನು ತೆರೆಕಾರನ ಸೊಂಟಕ್ಕೆ ಕಟ್ಟುತ್ತಾರೆ. ಅದರ ಮೇಲೆ ಎದೆಯ ಭಾಗಕ್ಕೆ 'ಒಡೆ'ಯನ್ನು ಧರಿಸಲಾಗುತ್ತದೆ. ತೋಳು ಮತ್ತು ಮುಂಗೈ 'ಒಡೆ'ಯಿಂದ ಮೇಲಕ್ಕೆ ಚಾಚಿಕೊಂಡಿರುತ್ತದೆ. ತೆಂಗಿನ ಎಳೆಯ ಗರಿಗಳಿಂದ ನಿರ್ಮಿಸಲಾದ 'ಪುಂಡ್ಯ'ವನ್ನು ತೋಳು ಮತ್ತು ಮುಂಗೈಗೆ ಕಟ್ಟಲಾಗುತ್ತದೆ. ಕೈಬೆರಳ ಕವಚದಂತಿರುವ 'ಕೈನಗರ'ವನ್ನು ಮಣಿಕಟ್ಟಿಗೆ ತೊಡಿಸಲಾಗುತ್ತದೆ. ಪ್ರಾರ್ಥಿಸಿ ಎಲ್ಲರ ಅನುಮತಿ ಪಡೆದು 'ನೆತ್ತಿಪಟ್ಟಿಯನ್ನು ಹಣೆಗೆ ಕಟ್ಟಲಾಗುತ್ತದೆ. ಅದರ ಮೇಲ್ಭಾಗಕ್ಕೆ 'ತಲೆಪೂ'

ಎಂಬ ಹೂವಿನ ದಂಡೆಯುನ್ನು ಕಟ್ಟುತ್ತಾರೆ. ಅದರೊಂದಿಗೆ ತೆಂಗಿನ ಗರಿಯು ಕಲಾತ್ಮಕವಾದ ಚಿಕ್ಕ ತಲೆತೊಡವು 'ತಲೆಮಲ್ಲಿಗೆ' ಇರುತ್ತದೆ. ಕಿವಿಗೆ 'ಚೆನ್ನರ್‌ಲ್' ಅಥವಾ 'ಚೆನ್ನಿಮಲರ್' ಎಂಬ ಕಿವಿಯೋಲೆ ತೊಡಿಸುತ್ತಾರೆ. ಅದರ ಅಂಚಿಗೆ 'ವಾಲೆಕಾದ್', ಕೆಳಭಾಗಕ್ಕೆ 'ಕೊಂಬೋಲೆ ಕಾದ್' ಎಂಬ ಕರ್ಣಾಭರಣಗಳಿರುತ್ತವೆ. ಮಂಡಿಯು ಕೆಳಭಾಗಕ್ಕೆ 'ಮಣಿಕೇರ್' ಕಟ್ಟುತ್ತಾರೆ. ಅದರ ಕೆಳಭಾಗಕ್ಕೆ 'ಪಟ್ಟ್‌ಂಬಾಡ'(ಪಟ್ಟಿಮಡ) ಎಂಬ ಕಾಲಿನ ಬಳೆ ಇರುತ್ತದೆ. ಅಕ್ಕಿ ಹಾಕಿ ಪ್ರಾರ್ಥಿಸಿ ಕಾಲಿಗೆ ಚಲ್‌ಂಬು ಧರಿಸಲಾಗುತ್ತದೆ. ಅಲಂಕಾರ ಪೂರ್ಣಗೊಂಡ ನಂತರ ತೆರೆಯು ಮನೆಯ ಹಿರಿಯನು ನೀಡುವ ಕೋತಿರಿಯ ಬೆಳಕಿನಲ್ಲಿ ಮುಖವನ್ನು ನೋಡಿ ಸಂತಸಗೊಳ್ಳುತ್ತದೆ.

**ಚಂಡೆಯ ಹಿಮ್ಮೇಳ ಮತ್ತು ತೆರೆಯ ಕುಣಿತ :**

ತೆರೆಹಾಡು ಹಾಗು ಚಂಡೆಯ ಹಿಮ್ಮೇಳ ತೀವ್ರವಾಗುತ್ತಿದ್ದಂತೆ ತೆರೆಕಾರನು ದೈವಾವೇಶಕ್ಕೆ ಒಳಗಾಗುತ್ತಾನೆ. ಉಗ್ರತೆ, ರೋಷದಿಂದ ಕೂಡಿದ ವರ್ತನೆಯ ಮೂಲಕ ದೈವವು ತನ್ನ ಅಲೌಕಿಕತೆಯನ್ನು ವ್ಯಕ್ತಪಡಿಸುತ್ತದೆ. ಐನ್‌ಮನೆಯ ನೆಲ್ಲಕ್ಕಿ ನಡುಬಾಡೆಯಲ್ಲಿ ಸುಮಾರು ಅರ್ಧಗಂಟೆಯ ಹೊತ್ತು ವಿವಿಧ ಭಂಗಿಗಳಲ್ಲಿ ಕುಣಿಯುತ್ತದೆ. ಚಂಡೆಯ ನಾದ ತಾರಕಕ್ಕೇರುತಿದ್ದಂತೆಯೇ ಕುಣಿತದ ಗತಿಯು ತೀವ್ರವಾಗುತ್ತದೆ. ಇಲ್ಲಿ ದೈವಕ್ಕೆ ಪ್ರೀತ್ಯರ್ಥದ ಕುಣಿತ ನಡೆಯುತ್ತದೆ.

**ಭಾಗವಹಿಸುವವರು ಹಾಗೂ ದೈವದ ಮಾತುಕತೆ :**

ಪುಲಿ ಚೌಂಡಿ ದೈವವು ನರ್ತಿಸಿದ ನಂತರ ನೆಲ್ಲಕ್ಕಿ ನಡುಬಾಡೆಯ ಒಳಗೆ ಪ್‌ಡದಲ್ಲಿ ಕುಳಿತುಕೊಳ್ಳುತ್ತದೆ. ಭಕ್ತರ ಸಮಸ್ಯೆಗಳನ್ನು ಆಲಿಸಿ ಪರಿಹಾರ ಸೂಚಿಸಿ ಹರಸುತ್ತದೆ. ಇದನ್ನು 'ಅನುವಾದ ಕೊಡ್‌ಪೊ'(ಅನುವಾದ ನೀಡುವುದು)ಎನ್ನುತ್ತಾರೆ. ಎಲ್ಲರೂ ಕಾಣಿಕೆಯ ರೂಪದಲ್ಲಿ ನಾಣ್ಯಗಳನ್ನು ಚೌಂಡಿತೆರೆಯ ಹಣೆಗೆ ಅಂಟಿಸುತ್ತಾರೆ. ಇದನ್ನು 'ನೆತ್ತಿಕ್ ಪತ್ತ್‌ಚಿಡುವೊ' ಎನ್ನುತ್ತಾರೆ. ಹರಕೆ ಮಾಡಿಕೊಂಡವರು ಹರಕೆಯ ಹಣವನ್ನು ನೆತ್ತಿಪಟ್ಟಿಯಲ್ಲಿ ಇರಿಸುತ್ತಾರೆ. ಭಕ್ತರೆಲ್ಲರ ಹಣೆಗೆ ತೆರೆಯು ಅರಶಿನ ಪುಡಿಯ ಬೊಟ್ಟನ್ನು ಹಚ್ಚುತ್ತದೆ. ಅನಂತರ ಪಡಸಾಲೆಯಲ್ಲಿ ಕುಳಿತು ಮತ್ತೊಮ್ಮೆ ಭಕ್ತರೊಂದಿಗೆ ಮಾತನಾಡಿ ಆಶೀರ್ವದಿಸುತ್ತದೆ.

**ಮೊಗ(ಮುಖವಾಡ) ಧರಿಸುವುದು ಮತ್ತು ತೆರೆಯ ಮುಕ್ತಾಯ :**

ಆಚರಣೆಯಲ್ಲಿ ಭಾಗವಹಿಸಿದವರೆಲ್ಲರೂ ಪ್ರಾರ್ಥಿಸಿ ಅಕ್ಕಿ ಹಾಕಿದ ನಂತರ ಮೊಗ ಧರಿಸುವ ವಿಧಿ ನಡೆಯುತ್ತದೆ. ನೆಲ್ಲಕ್ಕಿ ನಡುಬಾಡೆಯಲ್ಲಿ ಇರಿಸಿರುವ ಮುಖವಾಡವನ್ನು ತೆರೆಕಾರನು ಧರಿಸುತ್ತಾನೆ. ಚಂಡೆಯ ಬಡಿತಕ್ಕೆ ತಕ್ಕಂತೆ ಆವೇಶದಿಂದ ಕುಣಿಯುತ್ತಾನೆ. ಇದನ್ನು 'ಪುಲಿ ಚೌಂಡಿ ಮೊಗ ಎಡ್‌ಪೊ' ಎನ್ನುತ್ತಾರೆ. ಅನಂತರ ತೆರೆಕಾರನು ಬಲಿಕೊಡುವ ಸ್ಥಳಕ್ಕೆ ತೆರಳುತ್ತಾನೆ. ಅಲ್ಲಿ

ನಿರ್ಮಿಸಲಾಗಿರುವ ತಟ್ಟ್‌ತಡೆಗೆ ಕೋಳಿ ಮತ್ತು ಹಂದಿಯನ್ನು ಬಲಿ ನೀಡಲಾಗುತ್ತದೆ. ತೆರೆಕಾರನು ಬಲಿ ನೀಡಿದ ಹಂದಿಯ ಮೇಲೆ ಬಿದ್ದು ಕೊರಳಿಗೆ ಬಾಯಿ ಹಾಕಿ ರಕ್ತವನ್ನು ಸೇವಿಸುತ್ತಾನೆ. ತೆರೆಕಾರ ಶಕ್ತಿವಂತನಾಗಿದ್ದರೆ ಕತ್ತರಿಸಿದ ಹಂದಿಯ ಕುತ್ತಿಗೆಯನ್ನು ಹಲ್ಲಿನಲ್ಲಿ ಕಚ್ಚಿ ಹಿಡಿದುಕೊಂಡು ತಟ್ಟ್‌ತಡೆಯ ಒಂದು ಸುತ್ತು ಬರುತ್ತಾನೆ. ತೆರೆ ಬಾಂಗುವೊ ವಿಧಿಯ ಮೂಲಕ ತೆರೆಯು ಮುಕ್ತಾಯಗೊಳ್ಳುತ್ತದೆ.

**೫.೧.೧.೩. ಕುಳಿಯಮೆ ಚೌಂಡಿ ತೆರೆ**

**ಅರ್ಥ ಮತ್ತು ಹಿನ್ನೆಲೆ :**

ಕುಳಿಯಮೆ ಚೌಂಡಿ ಸ್ತ್ರೀ ದೈವ. ಕೊಡವ ಭಾಷೆಯಲ್ಲಿ 'ಕುಳಿಯಮೆ' ಎಂದರೆ ಬಸಿರು ಎಂದು ಅರ್ಥ. ಹಾಗಾಗಿ ಈಕೆ ಬಸುರಿನ ಚೌಂಡಿ. ತಾಯಿ ತನ್ನ ಮಕ್ಕಳನ್ನು ಸಲಹುವಂತೆ ಕುಳಿಯಮೆ ಚೌಂಡಿಯು ತನ್ನ ಭಕ್ತರನ್ನು ಕಾಪಾಡುತ್ತಾಳೆ. ವಾತ್ಸಲ್ಯಮಯಿಯಾದ ಆಕೆಗೆ ನೂರು ಮದಗಜಗಳ ಬಲವಿದೆ. ಆಕೆ ಕೋಪಿಸಿಕೊಂಡರೆ ಬೆಟ್ಟವನ್ನೇ ಜರುಗಿಸಬಲ್ಲಳು ಎಂದು ಜನಪದರು ನಂಬುತ್ತಾರೆ. ಕುಳಿಯಮೆ ಚೌಂಡಿಗೆ ಸಂಬಂಧಿಸಿದಂತೆ ಐತಿಹ್ಯವೊಂದು ಹೀಗಿದೆ. "ನೆಲೆಯುರಸಿ ಮಾಣಿಕ ಮಲೆನಾಡು(ಮಲೆಯಾಳ)ದಿಂದ ಪೆರಂಬಾಡಿ ಎಂಬ ಊರಿನ ಮಾರ್ಗವಾಗಿ ಕುಳಿಯಮೆ ಚೌಂಡಿ ದೇವಿಯು ಕೊಡಗಿಗೆ ಆಗಮಿಸಿದಳು. ಮಾರ್ಗದಲ್ಲಿ ಬಾಳುಗೋಡು ಎಂಬಲ್ಲಿ ಕುಳಿತು ಸುಧಾರಿಸಿಕೊಂಡಿದ್ದರಿಂದ ಅಲ್ಲಿ ನೆಲೆ ಪಡೆದಳು. ಅಲ್ಲಿಂದ ಮುಂದೆ ಸಾಗಿದ ಆಕೆ ಕೆದಮುಳ್ಳೂರು ಗ್ರಾಮಕ್ಕೆ ಬಂದು ನೆಲೆಸಿದಳು."[೪] ಈ ಹಿನ್ನೆಲೆಯಲ್ಲಿ ಕೆದಮುಳ್ಳೂರು ಹಾಗೂ ಬಾಳುಗೋಡು ಗ್ರಾಮಗಳಲ್ಲಿ ಕುಳಿಯಮೆ ಚೌಂಡಿಯನ್ನು ತೆರೆಕಟ್ಟಿ ಆರಾಧಿಸಲಾಗುತ್ತದೆ. ಆದರೆ ಬಾಳುಗೋಡು ಗ್ರಾಮದಲ್ಲಿ ಕುಳಿಯಮೆ ಚೌಂಡಿ ದೇವಿಯನ್ನು ಕುನ್ನಮೆ ಚೌಂಡಿ, ಅಗ್ನಿ ಚೌಂಡಿ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ.



**ಭಾಗವಹಿಸುವವರು :**

ಮಲಿಯರು ಕುಳಿಯಮೆ ಚೌಂಡಿ ತೆರೆಯನ್ನು ಕಟ್ಟುವರು. ಇದು ಗ್ರಾಮದ ತೆರೆಯಾಗಿ ಆಚರಿಸಲ್ಪಡುತ್ತದೆ. ಗ್ರಾಮದ ತಕ್ಕರೆಲ್ಲರೂ ಸೇರಿ ತೆರೆಯನ್ನು ನಡೆಸುತ್ತಾರೆ.

ಗ್ರಾಮಸ್ಥರು ಅವರ ಕುಟುಂಬ ವರ್ಗದವರು ಹಾಗೂ ಬಂಧು ಮಿತ್ರರು ಆಚರಣೆಯಲ್ಲಿ ಭಾಗವಹಿಸುತ್ತಾರೆ.

**ಆಚರಣೆ :**

ಕೋಟದ ಮುಂಭಾಗದಲ್ಲಿ ಕುಳಿಯಮೆ ಚೌಂಡಿ ತೆರೆಯ ಆಚರಣೆ ನಡೆಯುತ್ತದೆ. ದೈವಗಳು ಅಲೌಕಿಕವಾಗಿ ವಾಸಿಸುವ ಸ್ಥಳವನ್ನು ಕೋಟ ಎನ್ನುತ್ತಾರೆ. ಇದನ್ನು ಕೊಟ್ಟ ಎಂದು ಕರೆಯುವ ವಾಡಿಕೆಯೂ ಇದೆ. ಆಯತ ಅಥವಾ ಚೌಕಾಕಾರವಾಗಿರುವ ಕೋಟಗಳು ಚಿಕ್ಕ ಗುಡಿಯಂತಿರುತ್ತವೆ. ಸಾಮಾನ್ಯವಾಗಿ ಇವುಗಳನ್ನು ಎತ್ತರವಾದ ಪ್ರದೇಶಗಳಲ್ಲಿ ನಿರ್ಮಿಸಲಾಗಿರುತ್ತದೆ. ದೈವವು ಎತ್ತರದ ಸ್ಥಾನದಲ್ಲಿ ನಿಂತು ತನ್ನ ವ್ಯಾಪ್ತಿಯ ಪ್ರದೇಶವನ್ನು, ಅಲ್ಲಿನ ಜನ ಜಾನುವಾರುಗಳನ್ನು ಕಾಪಾಡುತ್ತದೆ ಎಂಬ ಜನಪದರ ಆಶಯವನ್ನು ಇಲ್ಲಿ ಗಮನಿಸಬಹುದು.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ದೈವದ ಭಂಡಾರ ಇಳಿಸುವ ವಿಧಿಯನ್ನು ತಕ್ಕರು ನಡೆಸುತ್ತಾರೆ. ಅನಂತರ ತೆರೆಕಾರನು ಗ್ರಾಮದ ತಕ್ಕ(ಮುಖ್ಯಸ್ಥ) ನಿಂದ ಎಣ್ಣೆಯನ್ನು ಪಡೆದುಕೊಳ್ಳುವನು. ಸ್ನಾನಮಾಡಿ ಬಣ್ಣಗಾರಿಕೆಗಾಗಿ ನಿರ್ಮಿಸಿರುವ ತಾತ್ಕಾಲಿಕ ಕೋಣೆಗೆ (ಅಣಿಯಾರ) ಹೋಗುವನು. ಗ್ರಾಮದ ಮುಖ್ಯಸ್ಥನು ಅಕ್ಕಿ ಹಾಗೂ ತೆಂಗಿನಕಾಯಿಯನ್ನು ಬಾಳೆ ಎಲೆಯ ಮೇಲೆ ಇಟ್ಟು ಅದರ ಮುಂಭಾಗದಲ್ಲಿ ಬತ್ತಿಯನ್ನು ಹೊತ್ತಿಸಿ ತೆರೆಕಾರನಿಗೆ ನೀಡುವನು. ಇದನ್ನು ಅರಿಂದಿರಿ ಪಡೆದುಕೊಳ್ಳುವುದು ಎನ್ನುತ್ತಾರೆ. ಗ್ರಾಮದ ಮುಖ್ಯಸ್ಥರೆಲ್ಲರೂ ಕೈಯಲ್ಲಿ ಅಕ್ಕಿಯನ್ನು ಹಿಡಿದುಕೊಂಡು ನಾಲ್ಕು ಮಾತುಗಳನ್ನಾಡಿ ಕುಳಿಯಮೆ ಚೌಂಡಿ ದೇವಿಯನ್ನು ಪ್ರಾರ್ಥಿಸುವರು. ಅನಂತರ ತೆರೆಕಾರನು ಪ್ರಾರ್ಥಿಸಿ ಬಣ್ಣಗಾರಿಕೆಯಲ್ಲಿ ತೊಡಗಿಸಿಕೊಳ್ಳುವನು. ಕುಳಿಯಮೆ ಚೌಂಡಿ ತೆರೆಯ ಬಣ್ಣಗಾರಿಕೆಯಲ್ಲಿ ಕೆಂಪು ಬಣ್ಣವನ್ನು ಪ್ರಧಾನವಾಗಿ ಬಳಸಲಾಗುತ್ತದೆ. ಕಪ್ಪು, ಮತ್ತು ಹಳದಿ ವರ್ಣಗಳನ್ನು ಅಲ್ಲಲ್ಲಿ ಬಳಸುತ್ತಾರೆ. ಮುಖ ವರ್ಣಿಕೆಯು ವಿಶಿಷ್ಟವಾದ ಮುದ್ರೆ, ರೇಖೆ ಮತ್ತು ಚುಕ್ಕಿಗಳಿಂದ ಕೂಡಿರುತ್ತದೆ. ಬಣ್ಣಗಾರಿಕೆಯ ನಂತರ ವೇಷಭೂಷಣಗಳನ್ನು ಧರಿಸಲಾಗುತ್ತದೆ. ಕೆಂಪುಬಣ್ಣದ ಷರಾಯಿ ಹಾಗೂ ಉದ್ದತೋಳಿನ ಅಂಗಿಯನ್ನು ತೆರೆಕಾರನು ಧರಿಸುತ್ತಾನೆ. ಅದರ ಮೇಲ್ಭಾಗಕ್ಕೆ ಬಿದಿರಿನ 'ಕನ್ನಿಬಳೆ' ಎಂಬ ಚಕ್ರವನ್ನು 'ಕೋಲ್‌ಂಗ್ಯೆರ್' ಎಂಬ ಕೋಲು ಮತ್ತು ಹಗ್ಗದಿಂದ ಸೊಂಟಕ್ಕೆ ಬಿಗಿದು ಕಟ್ಟಲಾಗುತ್ತದೆ. ಕನ್ನಿಬಳೆಯನ್ನು ಮುಚ್ಚಲು 'ಅಡಕ್' ಎಂಬ ಮರದ ಚಿಕ್ಕ ಕಲಾತ್ಮಕ ಹಲಗೆಗಳನ್ನು ಇರಿಸಲಾಗುತ್ತದೆ. ಅದರ ಮೇಲೆ ತೆರೆಕಾರನು 'ಚೆರುಬೊಳಂಬ' ಎಂಬ ಲಂಗದಂತಹ ಉಡುಪನ್ನು ಧರಿಸುತ್ತಾನೆ. ಬಟ್ಟೆ ಹಾಗೂ ತೆಂಗಿನ ಗರಿಗಳಿಂದ ನಿರ್ಮಿಸಲಾದ ಪ್ರಭಾವಳಿಯಂತಹ ರಚನೆಯನ್ನು ಬೆನ್ನಿಗೆ ಕಟ್ಟಲಾಗುತ್ತದೆ. ಇದನ್ನು 'ಮುಡಿ' ಎನ್ನುತ್ತಾರೆ. ಮುಡಿಯು ದೈವಕ್ಕೆ ಒಂದು

ರೀತಿಯ ವಿಸ್ತಾರತೆಯನ್ನು ನೀಡುತ್ತದೆ. ಕೈಬೆರಳ ಕವಚದಂತಿರುವ ಕೈನಗರವನ್ನು ಮಣಿಕಟ್ಟಿಗೆ ತೊಡಿಸುತ್ತಾರೆ. ಕುಳಿಯಮೆ ಚೌಂಡಿ ತೆರೆಯಲ್ಲಿ ಮುಡಿ ಹಾಗೂ ಕೈನಗರ ಹೊರತುಪಡಿಸಿದರೆ ಉಳಿದ ವೇಷಭೂಷಣಗಳೆಲ್ಲವೂ ಬಟ್ಟೆಯದ್ದಾಗಿರುತ್ತದೆ. ದೈವವನ್ನು ಪ್ರಾರ್ಥಿಸಿ ತೆರೆಕಾರನ ಹಣೆಗೆ 'ನೆತ್ತಿಪಟ್ಟ್' ಎಂಬ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ ಮೇಲ್ಭಾಗಕ್ಕೆ 'ತಲೆಪೂ' ಎಂಬ ಹೂವಿನ ದಂಡೆ ಇರುತ್ತದೆ. ಮರದಿಂದ ತಯಾರಿಸಲಾದ 'ಪೂಕೊಟ್ಟ' ಎಂಬ ಚಿಕ್ಕ ಶಿರೋಭೂಷಣವನ್ನು ತಲೆಗೆ ಕಟ್ಟುತ್ತಾರೆ. ಕಿವಿಗಳಿಗೆ 'ಚೆನ್ನರ್‌ಲ್' ಅಥವಾ 'ಚೆನ್ನಿಮಲರ್' ಎಂಬ ಕಿವಿಯೋಲೆ, ಅದರ ಅಂಚಿಗೆ 'ವಾಲೆಕಾದ್', ಕೆಳಭಾಗಕ್ಕೆ 'ಕೊಂಬೋಲೆ ಕಾದ್' ಎಂಬ ಕರ್ಣಾಭರಣಗಳಿರುತ್ತವೆ. ಮಂಡಿಯ ಕೆಳಭಾಗಕ್ಕೆ 'ಮಣಿಕೇರ್' ಅದರ ಕೆಳಗೆ 'ಪಟ್ಟ್ಂಬಾಡ'(ಪಟ್ಟಿಮಡ) ಎಂಬ ಕಾಲಿನ ಬಳೆ ಇರುತ್ತದೆ. ತೆರೆಕಾರನು ಪ್ರಾರ್ಥಿಸಿ ಪಾದಗಳಿಗೆ ಚಲ್‌ಂಬು ಧರಿಸುತ್ತಾನೆ. ಬಸುರಿನ ಸಂಕೇತವಾಗಿ 'ಮೊಲೆಮಾರ್' ಎಂಬ ಕಂಚಿನ ಮೊಲೆಕಟ್ಟು ಹಾಗೂ ಹೊಟ್ಟೆಯನ್ನು ಧರಿಸುತ್ತಾನೆ.

**ತೆರೆಯ ಕುಣಿತ ಮತ್ತು ಅನುವಾದ ನೀಡುವುದು :**

ಚಂಡೆಯ ವಾದನ ಹಾಗೂ ತೆರೆಹಾಡುಗಳು ತಾರಕಕ್ಕೆ ಏರುತ್ತಿದ್ದಂತೆ ತೆರೆಕಾರನು ದೈವಾವೇಶಕ್ಕೆ ಒಳಗಾಗುತ್ತಾನೆ. ಪ್‌ಡ ಎಂಬ ಪೀಠದಿಂದ ಎದ್ದು ಕುಣಿಯಲು ಆರಂಭಿಸುತ್ತಾನೆ. ನೆರೆದವರೆಲ್ಲಾ "ಚೌಂಡಿಯಮ್ಮ ಆವಾಹನೆಯಾದಳು"ಎಂದು ಕೈಮುಗಿಯುತ್ತಾರೆ. ಕೋಟದ ಅಂಗಳದ ಸುತ್ತ ಬಸುರಿಯ ಹಾವಭಾವಗಳನ್ನು ವ್ಯಕ್ತಪಡಿಸುತ್ತಾ ತೆರೆಯು ಕುಣಿಯುತ್ತದೆ. ಹಿನ್ನಡೆ, ಮುನ್ನಡೆ, ಕೈಬಳುಕು, ಮೈಬಳುಕು ಈ ಕುಣಿತದಲ್ಲಿರುವ ಪ್ರಮುಖ ಅಂಶಗಳಾಗಿವೆ. ಹೀಗೆ ಕುಣಿದ ನಂತರ ಕೋಟದ ಮುಂದೆ ಪ್‌ಡದಲ್ಲಿ ಕುಳಿತು ಭಕ್ತರನ್ನು ಹರಸುತ್ತದೆ. ನೆರೆದಿರುವ ಭಕ್ತರೆಲ್ಲರೂ 'ನೆತ್ತಿಪಟ್ಟ'ದಲ್ಲಿ ಕಾಣಿಕೆಯನ್ನು ಇರಿಸುತ್ತಾರೆ. ಹೊಟ್ಟೆಯನ್ನು ಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆದುಕೊಳ್ಳುತ್ತಾರೆ. ಹರಕೆ ಹೊತ್ತುಕೊಂಡವರು ಹೂವಿನ ಮಾಲೆ ಹಾಗೂ ಇತರ ಕಾಣಿಕೆಗಳನ್ನು ಒಪ್ಪಿಸುತ್ತಾರೆ.

**ತೆರೆಮುಡಿ/ತಿರಿಮುಡಿ ಎಡ್‌ಪೊ(ತೆರೆಮುಡಿ ಹೊತ್ತುಕೊಳ್ಳುವುದು) :**

ತೆರೆಮುಡಿ ಅಥವಾ ತಿರುಮುಡಿ ಎಂದರೆ ದೈವದ ಶಿರೋಭೂಷಣ ಎಂದು ಅರ್ಥ. ದೈವವು ಭಕ್ತರಿಗೆ ಅನುವಾದ ನೀಡಿದ ನಂತರ ತೆರೆಮುಡಿ ಅಥವಾ ತಿರುಮುಡಿ ಹೊತ್ತುಕೊಳ್ಳುವ ವಿಧಿ ನಡೆಯುತ್ತದೆ. ಇದನ್ನು 'ತೆರೆಮುಡಿ ಕೇತುವೊ' ಅಥವಾ 'ತೆರೆಮುಡಿ ಎಡ್‌ಪೊ' ಎಂದು ಕರೆಯುತ್ತಾರೆ. ತೆರೆಮುಡಿ ಕಟ್ಟಲು ಬಿದಿರನ್ನು ಬಳಸುತ್ತಾರೆ. ೧೮ ಮೊಳ, ೨೧ ಮೊಳ ಹೀಗೆ ಆಯಾಯ ದೈವಗಳಿಗೆ ಅನುಗುಣವಾಗಿ ಅಳತೆ ಇರುತ್ತದೆ. ಕುಳಿಯಮೆ ಚೌಂಡಿಗೆ ೧೮ ಮೊಳ ಉದ್ದದ ತೆರೆಮುಡಿ ಕಟ್ಟಲಾಗುತ್ತದೆ. ತೆರೆಮುಡಿಯ ಬುಡ ಸುಮಾರು ೩

ಅಡಿ ಅಗಲವಿರುತ್ತದೆ. ತುದಿ ಚೂಪಾಗಿದ್ದು; ಚಪ್ಪಟೆ ಶಂಖುವಿನಾಕಾರದಲ್ಲಿರುತ್ತದೆ. ಮುಂಭಾಗಕ್ಕೆ ಕೆಂಪು ಬಟ್ಟೆ ಹೊದಿಸಿ ಹೂವಿನ ಮಾಲೆಗಳಿಂದ ಅಲಂಕರಿಸಿರುತ್ತಾರೆ. ತೆರೆಮುಡಿಯನ್ನು ಹೊತ್ತ ಕುಳಿಯಮೆ ಚೌಂಡಿ ದೈವವು ಕೈಯಲ್ಲಿ ತನ್ನ ಆಯುಧವಾದ ಡೊಂಕಾದ ಕಿರುಗತ್ತಿಯನ್ನು ಹಿಡಿದುಕೊಳ್ಳುತ್ತದೆ. ಕೋಟದ ಅಂಗಳದ ಸುತ್ತಲೂ ಹೆಜ್ಜೆ ಹಾಕುತ್ತದೆ. ತೆರೆಮುಡಿಯ ಅಲಂಕಾರ, ಎತ್ತರ ಹಾಗೂ ಚಂಡೆಯ ಬಡಿತ ಪ್ರೇಕ್ಷಕರಲ್ಲಿ ಒಂದು ವಿಶಿಷ್ಟ ಆಕರ್ಷಣೆ ಹಾಗೂ ಭಕ್ತಿಯನ್ನು ಮೂಡಿಸುತ್ತದೆ. ತೆರೆಮುಡಿಯನ್ನು ಇಳಿಸಿದ ನಂತರ ಕಡಿಯಕಳದಲ್ಲಿ ತಟ್ಟ್ತಡೆಗೆ ಕೋಳಿ ಮತ್ತು ಹಂದಿಯನ್ನು ಬಲಿ ನೀಡುವ ಮೂಲಕ ತೆರೆಯು ಮುಕ್ತಾಯಗೊಳ್ಳುತ್ತದೆ.

**೩.೧.೧.೪ ಕಾಕೋಟ್‌ಪರಂಬು ಚೌಂಡಿ ತೆರೆ**

**ಅರ್ಥ :**

ಕಾಕೋಟ್‌ಪರಂಬು ಚೌಂಡಿ ಸ್ತ್ರೀದೈವ. ಕಾಕೋಟ್ ಪರಂಬು ಎಂಬ ಪಾರಂಪರಿಕ ಮೈದಾನದಲ್ಲಿ ನೆಲೆಸಿರುವುದರಿಂದ ಈ ಹೆಸರು ಬಂದಿದೆ. ಕಾಕೋಟ್ ಪರಂಬುವಿನ ದೈವ ಕಾಕೋಟಚ್ಚ. ಈತನನ್ನು ಕಾಲಭೈರವ ಎಂದೂ ಕರೆಯುತ್ತಾರೆ. ಕಾಕೋಟಚ್ಚನ ವಾರ್ಷಿಕೋತ್ಸವವು ಡಿಸೆಂಬರ್ ತಿಂಗಳಿನಲ್ಲಿ ನಡೆಯುತ್ತದೆ. ಇದನ್ನು ಕಾಕೋಟ್ ಪರಂಬು ನಮ್ಮೆ(ಉತ್ಸವ) ಎಂದು ಕರೆಯುತ್ತಾರೆ. ಮೂರು ದಿನಗಳ ಕಾಲ ನಡೆಯುವ ಈ ಉತ್ಸವದಲ್ಲಿ ಕೊನೆಯ ದಿನದಂದು ತೆರೆಕಟ್ಟುವ ಆಚರಣೆಯನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ನಡೆಯುವ ಕಾಕೋಟಚ್ಚ/ಕಾಲಭೈರವ ತೆರೆಯೊಂದಿಗೆ ಕಾಕೋಟ್‌ಪರಂಬು ಚೌಂಡಿ ತೆರೆಯು ಆಚರಣೆ ನಡೆಯುತ್ತದೆ. ಎರಡೂ ತೆರೆಗಳ ಆಚರಣೆ ಏಕ ಕಾಲದಲ್ಲಿ ನಡೆಯುವುದು ಈ ಉತ್ಸವದ ವಿಶೇಷತೆಯಾಗಿದೆ.



**ಆಚರಣೆ :**

ಕಾಕೋಟ್ ಪರಂಬು ಮೈದಾನದಲ್ಲಿ ತೆರೆಯ ಆಚರಣೆ ನಡೆಯುತ್ತದೆ. ಈ ತೆರೆಯನ್ನು ಬಣ್ಣರು ಕಟ್ಟುತ್ತಾರೆ. ಅಪರಾಹ್ನ ಮೂರು ಗಂಟೆಯಿಂದ ತೆರೆಕಟ್ಟುವ ಆಚರಣೆ ಆರಂಭವಾಗುತ್ತದೆ. ತೆರೆಕಟ್ಟುವಂದು ತೆರೆಕಾರರು ಗ್ರಾಮದ ಮುಖ್ಯಸ್ಥನ ಮನೆಗೆ ಹೋಗುತ್ತಾರೆ. ತೆರೆಕಟ್ಟುವವನು ಮುಖ್ಯಸ್ಥನಿಂದ ಎಣ್ಣೆಯುನ್ನು ಪಡೆದುಕೊಂಡು ಸ್ನಾನವಾಡಿ ಬಣ್ಣಗಾರಿಕೆಗೆ ಸಿದ್ಧನಾಗುತ್ತಾನೆ. ಅಕ್ಕಿ ಹಾಕಿ

ಪ್ರಾರ್ಥಿಸಿ ಅನುಮತಿಯನ್ನು ಪಡೆಯುತ್ತಾನೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ಬಣ್ಣಗಾರಿಕೆಯಲ್ಲಿ ಮುಖವರ್ಣಿಕೆ ಮುಖ್ಯವಾಗಿರುತ್ತದೆ. ಮುಖಕ್ಕೆ ತಳಹದಿಯಾಗಿ ಅರಿಸಿನ ಬಣ್ಣವನ್ನು ಬಳಸುತ್ತಾರೆ. ತುಟಿಗೆ ಕೆಂಪು ಬಣ್ಣವನ್ನು ಹಚ್ಚುತ್ತಾರೆ. ಕೆಂಪು ಬಣ್ಣದಿಂದ ನೆತ್ತಿ, ಮೂಗು, ಕೆನ್ನೆ ಮತ್ತು ಗಲ್ಲದ ಮೇಲೆ ವಿವಿಧ ನಮೂನೆಯ ರೇಖಾ ಚಿತ್ರಗಳನ್ನು ಬಿಡಿಸುತ್ತಾರೆ. ಕಣ್ಣು, ಕಣ್ಣಿನ ಸುತ್ತ ಹಾಗೂ ಹುಬ್ಬಿನ ಮೇಲ್ಭಾಗಕ್ಕೆ ಕಾಡಿಗೆಯನ್ನು ಹಚ್ಚುತ್ತಾರೆ. ಕಾಕೋಟ್ ಪರಂಬು ಚೌಂಡಿ ತೆರೆಯ ವೇಷಭೂಷಣಗಳು ಕೊಡಗಿನ ಇತರ ಗ್ರಾಮಗಳಲ್ಲಿ ನಡೆಯುವ ಚೌಂಡಿ ತೆರೆಗಳಿಗಿಂತ ಭಿನ್ನವಾಗಿವೆ. ಸಾಮಾನ್ಯವಾಗಿ ಚೌಂಡಿ ತೆರೆಯಲ್ಲಿ ಪ್ರಮುಖವಾಗಿರುವ ಎಳೆಯ ತೆಂಗಿನ ಗರಿಗಳ ಬಳಕೆ ಇಲ್ಲಿಲ್ಲ. ಬಟ್ಟೆ, ಮರ ಹಾಗೂ ಲೋಹದಿಂದ ತಯಾರಿಸಿದ ವೇಷಭೂಷಣಗಳನ್ನು ಬಳಸಲಾಗುತ್ತದೆ. ಕೆಂಪುಬಣ್ಣದ ಷರಾಯಿ ಹಾಗೂ ಉದ್ದತೋಳಿನ ಅಂಗಿಯನ್ನು ತೆರೆಕಾರನು ಧರಿಸುತ್ತಾನೆ. ಅದರ ಮೇಲ್ಭಾಗಕ್ಕೆ ಬಿದಿರಿನಿಂದ ನಿರ್ಮಿಸಲಾದ 'ಕನ್ನಿಬಳೆ' ಎಂಬ ಚಕ್ರವನ್ನು ಧರಿಸುತ್ತಾರೆ. ಇದನ್ನು 'ಕೋಲ್‌ಂಗ್ಯೆರ್' ಎಂಬ ಕೋಲು ಮತ್ತು ಹಗ್ಗದಿಂದ ಸೊಂಟಕ್ಕೆ ಬಿಗಿದು ಕಟ್ಟಲಾಗುತ್ತದೆ. ಕನ್ನಿಬಳೆಯ ಮೇಲ್ಭಾಗಕ್ಕೆ 'ಅಡಕ್' ಎಂಬ ಮರದ ಚಿಕ್ಕ ಕಲಾತ್ಮಕ ಹಲಗೆಗಳನ್ನು ಇರಿಸಿ ಮುಚ್ಚಲಾಗುತ್ತದೆ. ಅದರ ಮೇಲೆ 'ಚೆರುಬೊಳಂಬ' ಎಂಬ ಲಂಗದಂತ ಉಡುಪು ಧರಿಸಲಾಗುತ್ತದೆ. ಕೆಂಪು ಬಣ್ಣದ ಈ ಉಡುಪಿನ ಮಧ್ಯಭಾಗಕ್ಕೆ ಕೆಂಪು, ಬಿಳಿ ಹಾಗೂ ಕಪ್ಪು ಬಣ್ಣದ ನೂಲಿನ ಕಲಾತ್ಮಕ ಕುಚ್ಚು ಇರುತ್ತದೆ. ಕೆಳಭಾಗಕ್ಕೆ ಬಿಳಿ ಹಾಗೂ ಕಪ್ಪು ಬಣ್ಣದ ಪಟ್ಟಿಗಳಿರುತ್ತವೆ.

ದೈವವನ್ನು ಪ್ರಾರ್ಥಿಸಿ ತಲೆಗೆ 'ನೆತ್ತಿಪಟ್ಟ್' ಎಂಬ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ ಮೇಲ್ಭಾಗಕ್ಕೆ 'ತಲೆಪೂ' ಎಂಬ ಹೂವಿನ ದಂಡೆಯನ್ನು ಕಟ್ಟಲಾಗುತ್ತದೆ. ಕಿವಿಗಳಿಗೆ 'ಚೆನ್ನೆರ್‌ಲ್' ಅಥವಾ 'ಚೆನ್ನಿಮಲರ್' ಎಂಬ ಕಿವಿಯೋಲೆ ಹಾಕುತ್ತಾರೆ. ಅದರ ಅಂಚಿಗೆ 'ವಾಲೆಕಾದ್', ಕೆಳಭಾಗಕ್ಕೆ 'ಕೊಂಬೋಲೆ ಕಾದ್' ಎಂಬ ಕರ್ಣಾಭರಣಗಳಿರುತ್ತವೆ. ಮಂಡಿಯ ಕೆಳಭಾಗಕ್ಕೆ 'ಮಣಿಕೇರ್' ಎಂಬ ಗೆಜ್ಜೆಯನ್ನು ಕಟ್ಟುತ್ತಾರೆ. ಅದರ ಕೆಳಗೆ 'ಪಟ್ಟ್‌ಂಬಾಡ'(ಪಟ್ಟಿಮಡ) ಎಂಬ ಕಾಲಿನ ಬಳೆ ಇರುತ್ತದೆ. ತೆರೆಕಾರನು ಪ್ರಾರ್ಥಿಸಿ 'ಚಲ್‌ಂಬು' ಧರಿಸುವ ವಿಧಿಯ ಮೂಲಕ ಪಾದಗಳಿಗೆ ಚಲ್‌ಂಬು ಧರಿಸುತ್ತಾನೆ. ಕೊರಳಿಗೆ 'ಕಯುತ್‌ಕೆಟ್ಟ್' ಎಂಬ ಆಭರಣವನ್ನು ಧರಿಸುತ್ತಾನೆ. ಮರದಿಂದ ನಿರ್ಮಿಸಲಾದ ಈ ಆಭರಣವು ಎದೆ ಹಾಗೂ ಹೊಟ್ಟೆಯನ್ನು ಮುಚ್ಚುವಂತಿರುತ್ತದೆ. ಬಿದಿರು ಹಾಗೂ ಕೆಂಪು ಬಟ್ಟೆಯನ್ನು ಬಳಸಿ ನಿರ್ಮಿಸಿದ ಆಯತಾಕಾರದ ರಚನೆಯೊಳಗೆ ಮೈತೂರಿಸಿ ತೆರೆಕಾರನು

ಹೊತ್ತುಕೊಳ್ಳುತ್ತಾನೆ. ಕಾಕೋಟ್ ಪರಂಬು ಚೌಂಡಿ ದೇವಿಯ ಆಯುಧವಾದ ಒಡಿಕತ್ತಿಯನ್ನು ಬಲಗೈಯಲ್ಲಿ ಹಿಡಿದುಕೊಳ್ಳುತ್ತಾನೆ. ಹೀಗೆ ಸಿದ್ಧಗೊಂಡ ಕಾಕೋಟ್‌ಪರಂಬು ಚೌಂಡಿ ತೆರೆಯು ಕಾಲಭೈರವ ತೆರೆಯೊಂದಿಗೆ ಕಾಕೋಟ್‌ಪರಂಬು ಮೈದಾನಕ್ಕೆ ಬರುತ್ತದೆ. ತೆರೆಹಾಡು ಮತ್ತು ಚಂಡೆಯ ಬಡಿತ ತೀವ್ರವಾದಂತೆ ದೈವಾವೇಶವಾಗುತ್ತದೆ. ಇಲ್ಲಿ ಚಂಡೆಯ ಹಿಮ್ಮೇಳದೊಂದಿಗೆ 'ಕೊಂಬುಕೊಟ್ಟ್ ವಾಲಗ' ಎಂಬ ಕೊಡಗಿನ ಸಾಂಪ್ರದಾಯಿಕ ವಾದ್ಯದ ಹಿಮ್ಮೇಳ ಇರುತ್ತದೆ. ಆವಾಹನೆಗೊಂಡ ಚೌಂಡಿ ದೇವಿಯು ಕುಣಿಯುತ್ತಾ ಭಕ್ತರನ್ನು ಹರಸುತ್ತದೆ. ಕಾಕೋಟ್ ಪರಂಬು ಮೈದಾನವು ವಿರಾಜಪೇಟೆ ಮಡಿಕೇರಿ ಮುಖ್ಯರಸ್ತೆಯ ಸಮೀಪದಲ್ಲಿದೆ. ಹಾಗಾಗಿ ಚೌಂಡಿ ಹಾಗೂ ಕಾಲಭೈರವ ತೆರೆಗಳು ಮಾರ್ಗದಲ್ಲಿ ಬರುವ ವಾಹನಗಳ ಬಳಿ ತೆರಳಿ ಆಶೀರ್ವದಿಸಿ ಕಾಣಿಕೆಯನ್ನು ಪಡೆದುಕೊಳ್ಳುತ್ತದೆ.

**ತೆರೆಮುಡಿ :**

ಕಾಕೋಟ್‌ಪರಂಬು ಚೌಂಡಿ ತೆರೆಯಲ್ಲಿ ತೆರೆಮುಡಿ ಹೊತ್ತುಕೊಳ್ಳುವ ಆಚರಣೆ ವಿಶೇಷವಾದುದು. ಕೊಡಗಿನ ಕೆಲವು ಗ್ರಾಮಗಳಲ್ಲಿ ನಡೆಯುವ ಚೌಂಡಿ ತೆರೆಗಳಲ್ಲಿ ಮಾತ್ರ ಈ ಆಚರಣೆಯಿದೆ. ತೆರೆಮುಡಿ ಎಂಬುದು ಉದ್ದವಾದ ತ್ರಿಕೋನಾಕೃತಿ. ಬಿದಿರು ಮತ್ತು ಕೆಂಪುಬಟ್ಟೆಯನ್ನು ಬಳಸಿ ಇದನ್ನು ನಿರ್ಮಿಸಲಾಗುತ್ತದೆ. ಚೌಂಡಿತೆರೆ ಕಟ್ಟಿದ ತೆರೆಕಾರನು ಈ ತೆರೆಮುಡಿಯನ್ನು ಹೊತ್ತುಕೊಳ್ಳುತ್ತಾನೆ. ಹೂವಿನಿಂದ ಅಲಂಕರಿಸಲ್ಪಟ್ಟ ತೆರೆಮುಡಿಯು ನೋಡಲು ದೇವಾಲಯದ ಗೋಪುರದಂತೆ ಕಾಣುತ್ತದೆ. ಏಕಕಾಲದಲ್ಲಿ ಕಾಲಭೈರವ ತೆರೆಯು ತೆರೆಮುಡಿಯನ್ನು ಹೊತ್ತುಕೊಳ್ಳುತ್ತದೆ. ನಂತರ ಎರಡೂ ತೆರೆಗಳು ಚಂಡೆಯ ಹಿಮ್ಮೇಳಕ್ಕೆ ಸರಿಯಾಗಿ ಮೈದಾನದಲ್ಲಿರುವ ಆಲದ ಮರದ ಸುತ್ತಲೂ ಆವೇಶಭರಿತವಾಗಿ ಕುಣಿಯುತ್ತವೆ. ತದನಂತರ ಭಕ್ತಾದಿಗಳೆಲ್ಲಾ ಬಂದು ದೈವಗಳ ದರ್ಶನ ಪಡೆದು ಅನುವಾದ ಪಡೆದುಕೊಳ್ಳುತ್ತಾರೆ. ಹರಕೆ ಹೊತ್ತುಕೊಂಡವರು ಹರಕೆಗಳನ್ನು ಒಪ್ಪಿಸುತ್ತಾರೆ. ತೆರೆಬಾಂಗುವ ವಿಧಿಯು ಮೂಲಕ ಮುಕ್ತಾಯಗೊಳ್ಳುತ್ತದೆ.

**೫.೧.೧.೫ ಭಗವತಿ ತೆರೆ**

**ಅರ್ಥ ಮತ್ತು ಹಿನ್ನೆಲೆ :**

ಭಗವತಿ ಕೊಡಗಿನ ಹಲವು ಗ್ರಾಮಗಳ ಗ್ರಾಮದೇವತೆ. ಭಗವತಿ ದೇವಿಗೆ ಪೊವ್ವದಿ, ಪೊವ್ವೇದಿ, ಚೋಲಿ ಪೊವ್ವೇದಿಯಮ್ಮೆ ಎಂಬ ಹೆಸರುಗಳಿವೆ. ಬಹುತೇಕ ಕೊಡಗಿನ ಎಲ್ಲಾ ಗ್ರಾಮಗಳಲ್ಲಿ ಭಗವತಿಯ ಗುಡಿಗಳಿರುತ್ತವೆ. ಪೊವ್ವೇದಿಯಮ್ಮೆ ಎಂದು ಕರೆಯಲ್ಪಡುವ ಭಗವತಿ ಮಾಣಿಕ ಮಲೆನಾಡ್ ಅಂದರೆ ಮಲೆಯಾಳದಿಂದ ಬಂದವಳು. ಕೊಡವ ಜನಪದಗೀತೆ ಚೋಲಿ ಪೊವ್ವೇದಿಯಮ್ಮೆರ ಪಾಟ್ ಈಕೆಯ

ಜನ್ಮವೃತ್ತಾಂತವನ್ನು ಹೀಗೆ ವಿವರಿಸುತ್ತದೆ. "ಪೊವ್ವೇದಿಯಮ್ಮೆ ಮಾಣಿಕ ಮಲೆನಾಡಿನ ಚೋಲಿ/ಚೋಯಿಲಿ ಎಂಬ ಸ್ಥಳದ ಹುತ್ತದಲ್ಲಿ ಉದ್ಭವಿಸಿದಳು. ಹುಟ್ಟಿದ ಮೂರು ದಿನಗಳಲ್ಲಿ ದೈವನೆಲೆಯನ್ನು ಅರಸುತ್ತಾ ಮಾಜಾಟ್ ಮಣಿಮಾಡ ಎಂಬ ಊರಿಗೆ ಹೋದಳು. ನೆಲೆಸಲು ಸರಿಯಾದ ಸ್ಥಳ ಸಿಗದೆ ಚಿಂತಿಸುತ್ತಾ ಆಲದ ಮರದ ಕೆಳಗೆ ಕುಳಿತಿದ್ದಳು. ಅಷ್ಟರಲ್ಲಿ ಮಾಯಗಾರ ವಿಷ್ಣು, ಅಂಜಿಕೂಟ್ ಮೂರ್ತಿಗಳು (ಕುಟ್ಟಿಚಾತ, ಭೈರವ, ಕರಿಕಾಳ, ಕುಳಿಯ, ನುಚ್ಚುಟೆ ದೈವಗಳು) ಹಾಗೂ ಆ ಊರಿನ ಮಲೆಯ ಆಕೆಯನ್ನು ಭೇಟಿಯಾದರು. ಪೊವ್ವೇದಿಯಮ್ಮೆಗೆ ನಮಸ್ಕರಿಸಿ ಪ್ರಯಾಣದ ಕಾರಣವನ್ನು ಪ್ರಶ್ನಿಸುವರು. ತಾನು ಸೂಕ್ತ ನೆಲೆಯನ್ನು ಅರಸುತ್ತಾ ಹೊರಟಿರುವುದಾಗಿ ಪೊವ್ವೇದಿಯಮ್ಮೆ ಉತ್ತರಿಸುವಳು. ಎಲ್ಲರೂ ಆಕೆಯನ್ನು ಹಿಂಬಾಲಿಸುವರು. ಹಾದಿಯಲ್ಲಿ ಮೊವಾಯಿ ಎಂಬ ಸ್ಥಳದಲ್ಲಿನ 'ಕಣಿಯ' ಇವರ ಗುಂಪನ್ನು ಸೇರಿಕೊಳ್ಳುವನು.

ಎಲ್ಲರೂ ಬೈತೂರು ದೇವರ ಸನ್ನಿಧಿಗೆ ತಲುಪುವರು. ಅಲ್ಲಿ ಪೊವ್ವೇದಿಯಮ್ಮೆ ಬೈತೂರಪ್ಪ ದೇವನನ್ನು ನೆಲೆ ಬೇಡುವಳು. ಆತ ಕೊಡಗಿನ ಕಡಿಯತ್‌ನಾಡಿನ ಚೋಮಕುಂದ್(ಸೋಮಗಿರಿ) ಬೆಟ್ಟದ 'ತುಂಬೆಮಲೆದೇವ'ನನ್ನು ನೆಲೆ ಬೇಡುವಂತೆ ಸೂಚಿಸುವನು. ಅಲ್ಲಿಂದ ಮುಂದೆ ಸಾಗಿದ ಇವರ ಗುಂಪಿಗೆ ಪಯ್ಯಾವೂರ್ ಎಂಬಲ್ಲಿ 'ಬಣ್ಣ'ನೊಬ್ಬ ಸೇರಿಕೊಳ್ಳುವನು. ಮುಂದೆ ಬಣ್ಣಾಯಿ ಕಡುವು ಎಂಬಲ್ಲಿನ ಕಪ್ಪೊಳೆ ಹೊಳೆಯ ದಡದಲ್ಲಿ ವಾಸಿಸುತ್ತಿದ್ದ 'ಕಾಟಾಳರು' ಈ ಗುಂಪನ್ನು ಸೇರಿಕೊಳ್ಳುವರು. ಎಲ್ಲರೂ ಕೋಡತೊರ ಕಂಡಿ ಎಂಬ ಮಾರ್ಗದ ಮೂಲಕ ಕೊಡಗನ್ನು ಪ್ರವೇಶಿಸುವರು. ಚೋಮ ಕುಂದ್ ಬೆಟ್ಟದ ತುಂಬೆಮಲೆ ದೇವನ ಬಳಿ ತೆರಳಿದ ಪೊವ್ವೇದಿಯಮ್ಮೆ ನೆಲೆ ಕೇಳುವಳು. ತುಂಬೆಮಲೆ ದೇವನು ತನ್ನ ಬಿಲ್ಲಿನಿಂದ ಬಾಣ ಪ್ರಯೋಗಿಸಿ ಅದು ನಾಟುವ ಪ್ರದೇಶದ ಗಡಿಯೊಳಗೆ ನೆಲೆಸು ಎಂದನು.

ಅದರಂತೆ ಪೊವ್ವೇದಿಯಮ್ಮೆ ಕೊಡಗಿನ ಕ್‌ರ್‌ಂದಾಡ್ ಗ್ರಾಮದಲ್ಲಿ ನೆಲೆಸುವಳು. ಸಮೀಪದಲ್ಲಿಯೇ ಮಹಾವಿಷ್ಣು, ಅಂಜಿಕೂಟ್ ಮೂರ್ತಿಗಳು ಹಾಗೂ ಮಾಜಾಟ್ ಮಲೆಯ ನೆಲೆ ನಿಲ್ಲುವರು. ಅಲ್ಲಿಂದ ಮುಂದೆ ತೆರಳಿದ ಆಕೆ ಅರಪಟ್ಟ್ ಊರಿನಲ್ಲಿ ನೆಲೆಸುವಳು. ಪೊವ್ವೇದಿಯಮ್ಮೆಯ ಸಂಗಡವಿದ್ದ ಮೋವಾಯಿ ಕಣಿಯನೂ ಅಲ್ಲೇ ನೆಲೆಸುವನು. ಹತ್ತಿದಲ್ಲಿದ್ದ ಪೊದವಾಡ ಊರಿನಲ್ಲಿ 'ಅಞುತ' ಬಣ್ಣನು ನೆಲೆ ನಿಲ್ಲುವನು. ಅಲ್ಲಿಂದಲೂ ಮುಂದೆ ತೆರಳಿದ ಪೊವ್ವೇದಿಯಮ್ಮೆ ಕೋಕೇರಿ ಗ್ರಾಮದಲ್ಲೂ ನೆಲೆಸುವಳು. ಆಕೆಯೊಡನೆ ಬಂದಿದ್ದ ಕಾಟಾಳರು ಅಲ್ಲಿ ನೆಲೆಸುವರು. ಹೀಗೆ ಮುಂದೆ ಸಾಗಿದ ಪೊವ್ವೇದಿಯಮ್ಮೆ ಕೊಡಗಿನ ಎಲ್ಲಾ ಊರುಗಳಲ್ಲಿ ಸಂಚರಿಸಿ ನೆಲೆ ಪಡೆದುಕೊಳ್ಳುವಳು.

'ಊರ್‌ಕೋರ್(ಊರಿಗೊಬ್ಬಳು) ಪೊವ್ವದಿ' ಅಥವಾ 'ಊರ್‌ಕೋರ್ ಭಗವತಿ' ಎನಿಸಿಕೊಂಡಳು."

**ಆಚರಣೆ :**

ಕೊಡಗಿನ ಕೆಲವು ಗ್ರಾಮಗಳಲ್ಲಿ ಭಗವತಿ ದೇವಿಯ ವಾರ್ಷಿಕೋತ್ಸವದಲ್ಲಿ ತೆರೆಕಟ್ಟುವ ಆಚರಣೆಯನ್ನು ನಡೆಸುತ್ತಾರೆ. ಕೆಲವು ಗ್ರಾಮಗಳ ವಾರ್ಷಿಕ ಉತ್ಸವದಲ್ಲಿ ಬ್ರಾಹ್ಮಣರು ಭಗವತಿಯ ಬಿಂಬವನ್ನು ಹೊತ್ತು ದೇವಾಲಯದ ಪ್ರಾಂಗಣದಲ್ಲಿ ನರ್ತಿಸುತ್ತಾರೆ. ಇನ್ನೂ ಕೆಲವು ಗ್ರಾಮಗಳಲ್ಲಿ ಗ್ರಾಮದೇವತೆಯಾಗಿರುವ ಭದ್ರಕಾಳಿಯೊಂದಿಗೆ ಭಗವತಿಗೆ ಸಂಬಂಧವಿರುತ್ತದೆ. ಅಲ್ಲಿ ಭಗವತಿ ಮತ್ತು ಭದ್ರಕಾಳಿ ದೇವಿಯರು ಒಂದೇ ಎಂಬಂತೆ ಆರಾಧಿಸಲಾಗುತ್ತದೆ. ಇಂತಹ ಗ್ರಾಮಗಳಲ್ಲಿ ಭಗವತಿಯ ಸಹಗಾಮಿಯಾದ ಭದ್ರಕಾಳಿಗೆ ತೆರೆಕಟ್ಟುವ ಆಚರಣೆ ಮಾಡುತ್ತಾರೆ. ಸಾಮಾನ್ಯವಾಗಿ ಭಗವತಿ ತೆರೆಯ ಆಚರಣೆ ಬೆಳಗ್ಗೆ ನಡೆಯುತ್ತದೆ. ಮಲಿಯರು ಭಗವತಿ ತೆರೆಯನ್ನು ಕಟ್ಟುತ್ತಾರೆ. ತೆರೆಕಟ್ಟುವ ಆಚರಣೆಗೆ ಪೂರ್ವಭಾವಿಯಾಗಿ ವೀಳ್ಯ ಕೊಡುವ ವಿಧಿ ನಡೆಯುತ್ತದೆ. ಗ್ರಾಮದ ಮುಖ್ಯಸ್ಥರು ತೆರೆಕಟ್ಟುವವನ ಮನೆಗೆ ಹೋಗಿ ವೀಳ್ಯವನ್ನು ನೀಡುವರು. ನಿಗದಿತ ದಿನದಂದು ತೆರೆಯನ್ನು ಕಟ್ಟುವಂತೆ ಅಧಿಕೃತ ಆಹ್ವಾನ ನೀಡುವರು.



**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ತೆರೆಕಟ್ಟುವ ದಿನದಂದು ಆಗಮಿಸುವ ತೆರೆಕಾರನಿಗೆ ಗ್ರಾಮದ ಮುಖ್ಯಸ್ಥನು ಎಣ್ಣೆಯನ್ನು ನೀಡುತ್ತಾನೆ. ಸ್ನಾನದ ನಂತರ ಆತನು ಬಣ್ಣಗಾರಿಕೆಗೆ ಸಿದ್ಧನಾಗುವನು. ಭಗವತಿ ತೆರೆಯ ಮುಖವರ್ಣಿಕೆಯಲ್ಲಿ ಹಳದಿ ಬಣ್ಣವು ಪ್ರಧಾನವಾಗಿರುತ್ತದೆ. ಕಣ್ಣು ಮತ್ತು ಹುಬ್ಬಿನ ಮೇಲ್ಭಾಗಕ್ಕೆ ಕಪ್ಪುಬಣ್ಣವನ್ನು ಬಳಸುತ್ತಾರೆ. ಬಣ್ಣಗಾರಿಕೆಯ ನಂತರ ವೇಷಭೂಷಣಗಳನ್ನು ಧರಿಸಲಾಗುತ್ತದೆ. ತೆರೆಕಟ್ಟುವವನು ಕೆಂಪು ಬಣ್ಣದ ಷರಾಯಿಯನ್ನು ಧರಿಸಿರುತ್ತಾನೆ. ಆತನ ಸಹಾಯಕರು ಸೊಂಟಕ್ಕೆ ಕೆಂಪು ಬಣ್ಣದ ಬಟ್ಟೆಯನ್ನು ಸುತ್ತುವರು. ಕನ್ನಿಬಳೆಯೆಂಬ ಬಿದಿರಿನ ಬಳೆಯನ್ನು ಕೋಲು ಮತ್ತು ಹಗ್ಗದ ಸಹಾಯದಿಂದ ಸೊಂಟಕ್ಕೆ ಕಟ್ಟುವರು. ಅದರ ಮೇಲೆ ತೆರೆಕಾರನು

ಕೆಂಪುಬಣ್ಣದ ಚೆರುಬೊಳಂಬ ಎಂಬ ಉಡುಪನ್ನು ತೊಡುವನು. ಕೆಲವು ಗ್ರಾಮಗಳಲ್ಲಿ ಈ ಉಡುಪಿನ ಮೇಲೆ ತೆಂಗಿನ ಎಳೆಯ ಗರಿಗಳ 'ಓಲಿ'ಯನ್ನು ಕಟ್ಟುತ್ತಾರೆ. ತೆರೆಕಾರನು ಭಗವತಿಯನ್ನು ಪ್ರಾರ್ಥಿಸಿ ತಕ್ಕರ ಅನುಮತಿಯನ್ನು ಪಡೆದು ಹಣೆಗೆ ನೆತ್ತಿಪಟ್ಟಿಯನ್ನು ಕಟ್ಟುವನು. ಇದನ್ನು 'ನೆತ್ತಿಪಟ್ಟ್ ಕೆಟ್ಟ್‌ವೊ' ಎನ್ನುತ್ತಾರೆ. ನೆತ್ತಿಪಟ್ಟಿಯ ಮೇಲ್ಭಾಗಕ್ಕೆ ತಲೆಪೂ ಎಂಬ ಹೂವಿನದಂಡೆಯನ್ನು ಕಟ್ಟಲಾಗುತ್ತದೆ. ಹಣೆಗೆ ಚಂದ್ರಕಲೆ ಎಂಬ ನೆತ್ತಿಬೊಟ್ಟು, ಬಾಯಲ್ಲಿ 'ಎದ್‌ರ್' ಎಂಬ ಕೋರೆ ಇರುತ್ತದೆ. ಸ್ತ್ರೀದೈವದ ಸಂಕೇತವಾಗಿ ಎದೆಗೆ ಲೋಹದ ಮೊಲೆಕಟ್ಟನ್ನು ತೊಡಿಸುತ್ತಾರೆ. ತೋಳುಗಳಿಗೆ 'ತಂಡೆಬಳೆ' ಎಂಬ ಮರದಬಳೆ, 'ಕೈಪೂ' ಎಂಬ ಹೂವಿನ ದಂಡೆ ಹಾಗೂ ಚೂಡಗ ಎಂಬ ಕೈಕಡಗವನ್ನು ಧರಿಸುತ್ತಾನೆ. ಬಲಗೈಯಲ್ಲಿ ಭಗವತಿಯ ಆಯುಧವಾದ ಚೂಪಾದ ಕತ್ತಿ ಇರುತ್ತದೆ. ಎಡಗೈಯಲ್ಲಿ ಪಾಂಬಾಳೆಯ(ಕತ್ತಾಳೆ ಜಾತಿಗೆ ಸೇರುವ ಗಿಡ) ಎಲೆಗಳಿಂದ ಮಾಡಿದ ಹೂವು ಹಾಗೂ ತೂರೆಕೋಲ್ ಎಂಬ ಬೆತ್ತವನ್ನು ಹಿಡಿದುಕೊಳ್ಳುತ್ತಾನೆ.

**ಭಗವತಿ ತೆರೆಮುಡಿ :**

ತೆರೆಮುಡಿ ಹೊತ್ತುಕೊಳ್ಳುವ ಆಚರಣೆ ಭಗವತಿ ತೆರೆಯ ವಿಶೇಷತೆಯಾಗಿದೆ. ಭಗವತಿಗೆ ಹದಿನೆಂಟು ಮೊಳ ಉದ್ದದ ತೆರೆಮುಡಿಯನ್ನು ಕಟ್ಟಲಾಗುತ್ತದೆ. ಆಯಾಯ ಊರಿನ ಕಟ್ಟುಕಟ್ಟಳೆಗಳಿಗೆ ಅನುಗುಣವಾಗಿ ತೆರೆಮುಡಿಯು ಅಳತೆಯಲ್ಲಿ ವ್ಯತ್ಯಾಸಗಳಿರುತ್ತವೆ. ತ್ರಿಕೋನಾಕಾರದಲ್ಲಿರುವ ತೆರೆಮುಡಿಯನ್ನು ಹಸಿಬಿದಿರಿನಿಂದ ನಿರ್ಮಿಸಲಾಗುತ್ತದೆ. ಅದರ ಮೇಲೆ ಕೆಂಪು ಬಣ್ಣದ ಬಟ್ಟೆಯನ್ನು ಹೊದಿಸಿ ಹೂವಿನಮಾಲೆಗಳಿಂದ ಅಲಂಕರಿಸುತ್ತಾರೆ. ತೆರೆಮುಡಿಯ ಮಧ್ಯಭಾಗದಲ್ಲಿ ಭಗವತಿಯ ಮೊಗ(ಮುಖವಾಡ)ವನ್ನು ಇರಿಸುತ್ತಾರೆ. ಹೀಗೆ ಸಿದ್ಧಗೊಂಡ ತೆರೆಮುಡಿಯನ್ನು ತೆರೆಕಾರನ ಬೆನ್ನಿಗೆ ಹೊಂದಿಸಿ ಕಟ್ಟಲಾಗುತ್ತದೆ. ಉದ್ದನೆಯ ತೆರೆಮುಡಿಯನ್ನು ಹೊತ್ತ ತೆರೆಕಾರನು ಚಂಡೆಯ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತಾನೆ. ಅತಿಯಾದ ಭಾರ ಹಾಗೂ ಉದ್ದವನ್ನು ಹೊಂದಿರುವ ತೆರೆಮುಡಿಯನ್ನು ಅತ್ಯಂತ ಎಚ್ಚರಿಕೆಯಿಂದ ಹೊತ್ತುಕೊಳ್ಳಬೇಕಾಗುತ್ತದೆ. ಕೊಂಚ ಮೈಮರೆತರೂ ಒಂದೆಡೆಗೆ ವಾಲುವ, ಜೋತುಬೀಳುವ ಅಪಾಯವಿರುತ್ತದೆ. ಹಾಗಾಗಿ ತೆರೆಕಾರನು ಅತ್ಯಂತ ಜಾಗರೂಕತೆಯಿಂದ ಹೊತ್ತುಕೊಂಡು ನರ್ತಿಸುತ್ತಾನೆ. ಸೇರಿರುವ ಭಕ್ತಾಧಿಗಳೆಲ್ಲಾ ಅಕ್ಕಿ ಹಾಕಿ ಭಗವತಿಯ ಆಶೀರ್ವಾದವನ್ನು ಪಡೆದುಕೊಳ್ಳುತ್ತಾರೆ. ಮುಡಿಯನ್ನು ಇಳಿಸಿದ ನಂತರ ತೆರೆಯು ಮುಕ್ತಾಯಗೊಳ್ಳುತ್ತದೆ.

**೫.೧.೧.೬ ಕದನೂರು ಭಗವತಿ ತೆರೆ**

**ಅರ್ಥ :**

ಕದನೂರು ಭಗವತಿ ವಿರಾಜಪೇಟೆ ತಾಲೂಕಿನ ಕದನೂರಿನ ಗ್ರಾಮದೇವತೆ.

ಕದನೂರಿನಲ್ಲಿ ನೆಲೆಸಿರುವುದರಿಂದ ಕದನೂರು ಭಗವತಿ ಎಂಬ ಹೆಸರು ಬಂದಿದೆ. ಮಾರ್ಚ್ ತಿಂಗಳ ಒಂದು ಮತ್ತು ಎರಡನೇ ತಾರೀಕಿನಂದು ಭಗವತಿಯ ವಾರ್ಷಿಕ ಹಬ್ಬವನ್ನು ಆಚರಿಸಲಾಗುತ್ತದೆ. ಈ ಸಂದರ್ಭದಲ್ಲಿ ಭಗವತಿ ತೆರೆ ಕಟ್ಟುವುದರ ಮೂಲಕ ದೇವಿಯನ್ನು ಆರಾಧಿಸಿ ಸಂತೃಪ್ತಗೊಳಿಸಲಾಗುತ್ತದೆ. ಇದನ್ನು ಪೊವ್ವದಿ ತೆರೆ ಎಂದೂ ಕರೆಯುತ್ತಾರೆ. ಮಲಿಯ ಸಮುದಾಯದವರು ಈ ತೆರೆಯನ್ನು ಕಟ್ಟುತ್ತಾರೆ.

**ಐತಿಹ್ಯ :**

ಕದನೂರು ಭಗವತಿಯು ಕುರಿತು ಐತಿಹ್ಯವೊಂದು ಜನಪದರಲ್ಲಿ ಪ್ರಚಲಿತವಾಗಿದೆ. "ಒಂದು ದಿನ ಭಗವತಿ ದೇವಿಯು ಕದನೂರು ಗ್ರಾಮದ ಓರಣಮೊಟ್ಟೆ ದಿಬ್ಬದ ಸಮೀಪದಲ್ಲಿದ್ದ ಕೆರೆಯಲ್ಲಿ ಸ್ನಾನಮಾಡಿ ಅಲ್ಲಿದ್ದ ಬಂಡೆಕಲ್ಲಿನ ಮೇಲೆ ತನ್ನ ತಲೆಗೂದಲನ್ನು ಹರಡಿ ಒಣಗಿಸುತ್ತಿದ್ದಳು. ಅಷ್ಟರಲ್ಲಿ ಅಲ್ಲಿಗೆ ನಂದಿಮಂಡ ಎಂಬ ರಾಕ್ಷಸನು ಬಂದನು. ಭಗವತಿಯ ಚೆಲುವಿಗೆ ಮನಸೋತು ಹಸುವಿನ ರೂಪ ತಾಳಿ ಆಕೆಯ ಬಳಿ ಬಂದನು. ಹಸುವನ್ನು ಕಂಡ ಭಗವತಿಯು ಅಕ್ಕರೆಯಿಂದ ಅದರ ಮೈತಡವಿ ಕೆಚ್ಚಲಿಗೆ ಕೈಹಾಕಿದಳು. ಆದರೆ ಕೆಚ್ಚಲಿನ ಬದಲು ವೃಷಣಾಂಗವಿತ್ತು. ನಂದಿಮಂಡ ರಾಕ್ಷಸನ ಇಂಗಿತ ಭಗವತಿ ದೇವಿಗೆ ಅರಿವಾಯಿತು. ಕೋಪಗೊಂಡ ಆಕೆ ನಂದಿಮಂಡನನ್ನು ಕೊಲ್ಲಲು ಮುಂದಾಗುವಳು. ತಪ್ಪಿಸಿಕೊಂಡ ಆತ ಓರಣಮೊಟ್ಟೆಯ ಕಡೆಗೆ ಓಡುವನು.

ನಂದಿಮಂಡನನ್ನು ಬೆನ್ನಟ್ಟಿದ ಭಗವತಿ ಸಮೀಪದ ಕಾಡಿನಲ್ಲಿದ್ದ ಕಾಟಿಲ್ ಅಯ್ಯಪ್ಪ ದೇವರನ್ನು ಸಹಾಯಕ್ಕಾಗಿ ಕರೆಯುವಳು. ಕರೆಗೆ ಓಗೊಟ್ಟು ಬಂದ ಅಯ್ಯಪ್ಪ ನಂದಿಮಂಡನೊಡನೆ ಹೋರಾಡುವನು. ಅಷ್ಟರಲ್ಲಿ ಭಗವತಿ ಇಪ್ಪತ್ತೈದು ಅಡಿ ಎತ್ತರ ಬೆಳೆದಳು. ಹದಿನೆಂಟು ಆಯುಧಗಳನ್ನು ಹಿಡಿದು ರೌದ್ರರೂಪ ತಾಳಿ ನಂದಿಮಂಡ ರಾಕ್ಷಸನನ್ನು ಕೊಲ್ಲಲು ಪ್ರಯತ್ನಿಸುವಳು. ಆದರೆ ನಂದಿಮಂಡನ ರಕ್ತ ಬಿದ್ದೆಡೆಯೆಲ್ಲಾ ಅವನ ಪ್ರತಿರೂಪ ಹುಟ್ಟತೊಡಗಿತು. ಆಗ ಅಯ್ಯಪ್ಪನು ತನ್ನ ಜೊತೆಗಾರರಾದ ಸೀಳುನಾಯಿಗಳನ್ನು ಕರೆತಂದನು. ರಕ್ತದ ಹನಿ ನೆಲಕ್ಕೆ ಬೀಳುತ್ತಿದ್ದಂತೆಯೇ ಸೀಳುನಾಯಿಗಳು ನೆಕ್ಕತೊಡಗಿದವು. ಭಗವತಿಯು ತನ್ನ ಹದಿನೆಂಟನೇ ಆಯುಧದಿಂದ ನಂದಿಮಂಡನ ಶಿರವನ್ನು ಛೇಧಿಸಿದಳು. ಹೀಗೆ ತುಂಡರಿಸಲ್ಪಟ್ಟ ರುಂಡವು ಉರುಳುತ್ತಾ ಕಾಣತಂಡ ಕುಟುಂಬದವರ ಸ್ಥಳದಲ್ಲಿ ನಿಂತಿತು. ನಂತರ ಅಮ್ಮಣಿಚಂಡ ಐನ್‌ಮನೆಯ ಮುಂಭಾರ ಹಾಗೂ ದೇವಟಿ ಎಂಬ ಜಾಗದಲ್ಲಿ ಉರುಳಿತು. ಅನಂತರ ಪಾಲೇಕಂಡ, ಪೆಮ್ಮಂಡ ಮತ್ತು ಅನ್ನೇರ್‌ಕಂಡ ಕುಟುಂಬಕ್ಕೆ ಸೇರಿದ ಸ್ಥಳಗಳಲ್ಲಿ ಉರುಳುತ್ತಾ ಸಾಗಿತು. ಮುಂದೆ ಹಾವಿನ ರೂಪ ತಳೆದು ಕಾಣತಂಡ ಕುಟುಂಬದ ಸಮೀಪವಿದ್ದ ಹುತ್ತವನ್ನು

ಸೇರಿಕೊಂಡಿತು."[೫] ಹೀಗೆ ಕದನ ನಡೆದ ಸ್ಥಳಕ್ಕೆ ಕದನೂರು ಎಂಬ ಹೆಸರಾಯಿತು ಎಂಬ ಪ್ರತೀತಿಯಿದೆ.

**ಆಚರಣಾ ವಿಧಿಗಳು :**

ಹಬ್ಬದ ದಿನ ನಿಗದಿಗೊಳಿಸುವುದರ ಮೂಲಕ ಕದನೂರು ಭಗವತಿ ತೆರೆಯು ಆರಂಭವಾಗುತ್ತದೆ. ಗ್ರಾಮದ ಮುಖ್ಯಸ್ಥರೆಲ್ಲಾ ಸೇರಿ ಹಬ್ಬದ ದಿನವನ್ನು ನಿಶ್ಚಯಿಸುತ್ತಾರೆ. ಇದನ್ನು ನಮ್ಮೆಕುರಿಪೊ ಎನ್ನುತ್ತಾರೆ. ಇದರೊಂದಿಗೆ ಹಬ್ಬದ ಕಟ್ಟುಕಟ್ಟಳೆಗಳನ್ನು ಹಾಕುವ ವಿಧಿ ನಡೆಯುತ್ತದೆ. ಇದನ್ನು ನಮ್ಮೆ ಕೆಟ್ಟ್ ಇಡ್‌ವೊ ಎನ್ನುತ್ತಾರೆ. ವರ್ಷಂಪ್ರತೀ ಕುಂಭ ಮಾಸ ಅಂದರೆ ಫೆಬ್ರವರಿ ತಿಂಗಳ ಕೊನೆಯ ವಾರದಲ್ಲಿ ಈ ಆಚರಣೆಯನ್ನು ಮಾಡುತ್ತಾರೆ.

**ವೀಳ್ಯ ಕೊಡ್‌ಪೊ (ವೀಳ್ಯ ಕೊಡುವುದು) :**

ಕದನೂರು ಭಗವತಿ ತೆರೆಯನ್ನು ಕಟ್ಟುವವರು ಅದೇ ಗ್ರಾಮದವರಾದ ಮಲಿಯರು. ಇವರನ್ನು ಗ್ರಾಮದ ಮುಖ್ಯಸ್ಥರು ವೀಳ್ಯ ನೀಡಿ ತೆರೆಕಟ್ಟಲು ಆಹ್ವಾನಿಸುವರು. ತೆರೆಕಟ್ಟುವವರ ಮನೆಯಲ್ಲಿ ಈ ಆಚರಣೆಯು ನಡೆಯುತ್ತದೆ.

**ತೆರೆಕಟ್ಟುವ ಮಲಿಯನಿಗೆ ಪೂಣೆನೂಲು(ಜನಿವಾರ) ಹಾಕುವ ವಿಧಿ :**

ಹಬ್ಬಕ್ಕೆ ಏಳು ದಿನಗಳು ಮುಂಚಿತವಾಗಿ ಭಗವತಿ ದೇವಾಲಯದ ಅರ್ಚಕನು ತೆರೆಕಟ್ಟುವ ಮಲಿಯನಿಗೆ ಜನಿವಾರ ಹಾಕುವ ವಿಶೇಷ ವಿಧಿ ನಡೆಯುತ್ತದೆ. ಇದನ್ನು 'ಪೂಣೆನೂಲ್‌ಡ್‌ವೊ' ಎನ್ನುತ್ತಾರೆ. ಈ ವಿಧಿಯ ನಂತರ ತೆರೆಕಟ್ಟುವವನು ಮತ್ತು ಆತನ ಕುಟುಂಬ ಕೆಲವು ಕಟ್ಟುಪಾಡುಗಳನ್ನು ಪಾಲಿಸಬೇಕಾಗುತ್ತದೆ. ಏಳು ದಿನಗಳವರೆಗೆ ಶುದ್ಧ ಶಾಕಾಹಾರವನ್ನೇ ಸೇವಿಸುತ್ತಾರೆ. ವ್ರತ ನಿಯಮಗಳನ್ನು ಪಾಲಿಸುತ್ತಾ ಭಗವತಿಯನ್ನು ಪೂಜಿಸುತ್ತಾರೆ. ನೇಮದಲ್ಲಿರುವ ತೆರೆಕಾರನು ಅಕ್ಕಿಯಿಂದ ತಯಾರಿಸಿದ ಪದಾರ್ಥಗಳನ್ನು ತಿನ್ನುವಂತಿಲ್ಲ. ಹೆಸರುಕಾಳಿನಿಂದ ಮಾಡಿದ ಪಾಯಸವನ್ನು ಮಾತ್ರ ಸೇವಿಸಬೇಕು. ಭಗವತಿ ದೇವಾಲಯದ ಸಮೀಪವಿರುವ ಹುತ್ತದ ಮೇಲೆ ಕೆಂಪುಬಟ್ಟೆಯನ್ನು ಹಾಸಿ ಮಲಗಬೇಕು ಎಂಬ ಕಠಿಣ ವ್ರತನಿಯಮಗಳನ್ನು ಪಾಲಿಸುತ್ತಾನೆ. ಇದೇ ಹುತ್ತದೊಳಗೆ ನಂದಿಮಂಡನ ತಲೆಯು ಹಾವಾಗಿ ಸೇರಿಕೊಂಡಿತು ಎಂಬ ಪ್ರತೀತಿ ಇದೆ. ತೆರೆಕಟ್ಟುವ ಮಲಿಯನಿಗೆ ಪೂಣೆನೂಲು(ಜನಿವಾರ) ಹಾಕುವ ವಿಧಿಯನ್ನು ಗಮನಿಸಿದಾಗ ಇಲ್ಲಿ ಜನಪದ ಸಂಸ್ಕೃತಿಯ ಮೇಲೆ ವೈದಿಕ ಸಂಸ್ಕೃತಿಯ ಹೇರಿಕೆಯನ್ನು ಪ್ರಮುಖವಾಗಿ ಗಮನಿಸಬಹುದು. ನಂದಿಮಂಡ ರಾಕ್ಷಸನನ್ನು ಸಂಹರಿಸಲು ಭಗವತಿ ದೇವಿಗೆ ಸಹಕರಿಸಿದ ದೈವ ಕಾಟಿಲ್ ಅಯ್ಯಪ್ಪ. ಆದುದರಿಂದ ಕದನೂರು ಭಗವತಿಯನ್ನು ತೆರೆಕಟ್ಟಿ ಆರಾಧಿಸುವುದಕ್ಕಿಂತ ಮುಂಚಿತವಾಗಿ 'ಕಾಟಿಲ್ ಅಯ್ಯಪ್ಪ ತೆರೆ'[೬]ಯನ್ನು ಕಟ್ಟಲಾಗುತ್ತದೆ. ನಂದಿಮಂಡ ರಾಕ್ಷಸನೊಡನೆ ಯುದ್ಧ

ನಡೆದ ಓರಣಮೊಟ್ಟೆ ಎಂಬ ಸ್ಥಳದಲ್ಲಿಯೇ ಈ ತೆರೆಯನ್ನು ಕಟ್ಟಲಾಗುತ್ತದೆ. ಕಾಟಿಲ್ ಅಯ್ಯಪ್ಪ ತೆರೆ ಜರುಗಿದ ಮರುದಿನದಂದು ಕದನೂರು ಭಗವತಿ ದೇವಿಯ ತೆರೆ ನಡೆಯುತ್ತದೆ. ಪೂಣೆನೂಲು ಧರಿಸಿ ವ್ರತಧಾರಿಯಾದ ಮಲೆಯ ತೆರೆಕಾರನು ಈ ತೆರೆಯನ್ನು ಕಟ್ಟುತ್ತಾನೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ಭಗವತಿ ತೆರೆಯ ಬಣ್ಣಗಾರಿಕೆ ಚೌಂಡಿ ತೆರೆಯನ್ನು ಹೋಲುತ್ತದೆ. ಆದರೆ ವೇಷಭೂಷಣಗಳಲ್ಲಿ ಎಳೆಯ ತೆಂಗಿನ ಗರಿಗಳ ಬಳಕೆ ಇಲ್ಲ. ಕೆಂಪು ವರ್ಣದ ಉಡುಪನ್ನು ಧರಿಸಲಾಗುತ್ತದೆ. ಸ್ತ್ರೀದೈವ ಎಂಬುದನ್ನು ಸಂಕೇತಿಸಲು ಲೋಹದ ಮೊಲೆಕಟ್ಟನ್ನು ತೊಡುತ್ತಾರೆ. ಹಣೆಗೆ ನೆತ್ತಿಪಟ್ಟ್ ಎಂಬ ನೆತ್ತಿಪಟ್ಟಿ ಹಾಗೂ ಚಂದ್ರಕಲೆ ಎಂಬ ನೆತ್ತಿಬೊಟ್ಟು ಇರುತ್ತದೆ. ಬಾಯಿಗೆ ಎದ್ರ್ ಎಂದು ಕರೆಯಲ್ಪಡುವ ಲೋಹದ ಕೋರೆಯನ್ನು ಇರಿಸಿಕೊಳ್ಳುತ್ತಾರೆ. ಬಣ್ಣಗಾರಿಕೆಯಲ್ಲಿ ಹಳದಿ ಬಣ್ಣವು ಪ್ರಧಾನವಾಗಿ ಬಳಸಲ್ಪಡುತ್ತದೆ.



**ಕದನೂರು ಭಗವತಿ ತೆರೆಮುಡಿ :**

ಕದನೂರು ಭಗವತಿಗೆ ಹದಿನೆಂಟು ಮೊಳ ಉದ್ದದ ತೆರೆಮುಡಿಯನ್ನು ಕಟ್ಟಲಾಗುತ್ತದೆ. ತ್ರಿಕೋನಾಕಾರದಲ್ಲಿರುವ ಈ ತೆರೆಮುಡಿಯನ್ನು ಹಸಿಬಿದಿರಿನಿಂದ ನಿರ್ಮಿಸಲಾಗುತ್ತದೆ. ಬಿಳಿ ಹಾಗೂ ಕಪ್ಪು ಬಣ್ಣದ ಪಟ್ಟಿಗಳಿರುವ ಕೆಂಪು ಬಣ್ಣದ ಬಟ್ಟೆಯನ್ನು ಮುಡಿಗೆ ಹೊದಿಸುತ್ತಾರೆ. ಇದನ್ನು ತೆರೆಕಾರನ ಬೆನ್ನಿಗೆ ಹೊಂದಿಸಿ ಕಟ್ಟಲಾಗುತ್ತದೆ. ಉದ್ದನೆಯ ತೆರೆಮುಡಿಯನ್ನು ಹೊತ್ತ ತೆರೆಕಾರನು ಚಂಡೆಯ ತಾಳಕ್ಕೆ ತಕ್ಕಂತೆ ಹೆಜ್ಜೆಹಾಕುತ್ತಾನೆ. ತೆರೆಮುಡಿಯು ಎತ್ತರವಾಗಿರುವುದರಿಂದ ಹೆಚ್ಚು ಭಾರವಾಗಿರುತ್ತದೆ. ತೆರೆಕಾರನು ಅತ್ಯಂತ ಸಮತೋಲನದಿಂದ ತೆರೆಮುಡಿಯನ್ನು ಹೊತ್ತುಕೊಂಡು ನರ್ತಿಸುತ್ತಾನೆ. ಸೇರಿದ ಭಕ್ತಾದಿಗಳೆಲ್ಲಾ ಭಗವತಿ ದೇವಿಗೆ ಅಕ್ಕಿ ಹಾಕಿ ಆಶೀರ್ವಾದವನ್ನು ಪಡೆದುಕೊಳ್ಳುತ್ತಾರೆ. ಇದೇ ಸಂದರ್ಭದಲ್ಲಿ ನಂದಿಮಂಡ ತೆರೆಯನ್ನು ಕಟ್ಟುತ್ತಾರೆ. ಭಗವತಿ ದೇವಿಯು ಆತನನ್ನು ಹದಿನೇಳು ಬಾರಿ ಓಡಿಸಿಕೊಂಡು ಹೋಗುತ್ತಾಳೆ. ಹದಿನೆಂಟನೆಯ ಸಲ ಭಗವತಿಯು ತನ್ನ

ಆಯುಧದಿಂದ ನಂದಿಮುಂಡನ ಶಿರವನ್ನು ಛೇಧಿಸುವ ಅಣಕು ಪ್ರದರ್ಶನ ನಡೆಯುತ್ತದೆ. ಅನಂತರ ಸೇರಿರುವ ಭಕ್ತರೆಲ್ಲಾ ಬಂದು ಕಾಣಿಕೆ ಸಲ್ಲಿಸಿ ಭಗವತಿಯ ಆಶೀರ್ವಾದವನ್ನು ಪಡೆದುಕೊಳ್ಳುತ್ತಾರೆ. ಕೆಲವರು ತಮ್ಮ ಸಂಕಷ್ಟಗಳನ್ನು ಹೇಳಿ ಪರಿಹಾರವನ್ನೂ ಪಡೆದುಕೊಳ್ಳುತ್ತಾರೆ. ಇದನ್ನು ಅನುವಾದ ಕೊಡ್‌ಪೊ ಎಂದು ಕರೆಯುತ್ತಾರೆ. ತೆರೆಬಾಂಗುವೊ ವಿಧಿಯ ಮೂಲಕ ತೆರೆಯು ಮುಕ್ತಾಯಗೊಳ್ಳುತ್ತದೆ.

ಕೊಡಗಿನ ತೆರೆಕಟ್ಟುವ ಆಚರಣೆಯನ್ನು ಗಮನಿಸಿದಾಗ ಇಲ್ಲಿನ ಬಹುಪಾಲು ಆಚರಣೆಗಳೆಲ್ಲಾ ಅವೈದಿಕ ವಿಧಿಗಳಾಗಿದ್ದು ಬುಡಕಟ್ಟು ಮೂಲದ ಆಚರಣೆಗಳಾಗಿವೆ. ಆದರೆ ಕದನೂರು ಭಗವತಿ ತೆರೆಯು ವೈದಿಕ ಸಂಪ್ರದಾಯವಾದ ಪೂಣೆನೂಲು(ಜನಿವಾರ) ಹಾಕುವ ವಿಧಿಯೊಂದಿಗೆ ಪ್ರಾರಂಭವಾಗುತ್ತದೆ. ಇದಕ್ಕೆ ಪೂರಕವಾಗಿ "ಪೂರ್ವದಲ್ಲಿ ಹಬ್ಬದ ಕಟ್ಟುಕಟ್ಟಳೆ ಆರಂಭವಾದಾಗ ನಿರ್ದಿಷ್ಟ ತಳ ಸಮುದಾಯದ ಕುಟುಂಬಗಳು ಊರಿನಲ್ಲಿ ಇರುವಂತಿಲ್ಲ ಎಂಬ ಕಠಿಣ ಕ್ರಮವಿತ್ತು. ಆದರೆ ಇಂದು ಆ ರೀತಿಯ ಕಟ್ಟುಪಾಡುಗಳೆಲ್ಲಾ ಸಡಿಲಗೊಂಡಿವೆ."[೭] ಎಂಬ ಅಭಿಪ್ರಾಯವಿದೆ. ಪೂಣೆನೂಲು ಹಾಕುವ ವಿಧಿಯ ಮೂಲಕ ಇಲ್ಲಿ ತೆರೆಕಾರನನ್ನು ಬ್ರಾಹ್ಮಣನಾಗಿಸುವ ಪ್ರಯತ್ನ ನಡೆಯುತ್ತದೆ. ತೆರೆ ಮುಗಿದ ನಂತರ ಆತ ಮೂಲ ಸಮುದಾಯದವನೇ ಆಗಿಬಿಡುತ್ತಾನೆ. ಕದನೂರು ಭಗವತಿ ತೆರೆಯನ್ನು ಹೊರತುಪಡಿಸಿ ಕೊಡಗಿನ ಇತರ ಗ್ರಾಮಗಳಲ್ಲಿ ನಡೆಯುವ ಭಗವತಿ ತೆರೆಗಳಲ್ಲಿ ಪೂಣೆನೂಲು ಹಾಕುವ ವಿಧಿ ಕಂಡುಬರುವುದಿಲ್ಲ. ಭಗವತಿ ದೇವತೆಯ ಹಬ್ಬವು ತುಳು ಬ್ರಾಹ್ಮಣರು ಕೊಡಗಿಗೆ ತಂದ ಹಬ್ಬ ಅಥವಾ ಹಿಂದಿನಿಂದ ಬಂದ ಕೊಡಗಿನ ಹಬ್ಬವೆಂದಾದರೆ ಅದು ಪೂರ್ಣವಾಗಿ ಬ್ರಾಹ್ಮಣೀಕರಣಗೊಂಡಿದೆ ಎಂದು ಜಿ. ರಿಕ್ಟರ್ ಅಭಿಪ್ರಾಯ ಪಡುತ್ತಾರೆ. ಜನಿವಾರ ಹಾಕುವುದು ಹಾಗೂ ಭಗವತಿ ಹಬ್ಬದ ಸಂದರ್ಭದಲ್ಲಿ ಬ್ರಾಹ್ಮಣರು ಭಗವತಿಯ ಉತ್ಸವಮೂರ್ತಿ(ತಡ್‌ಂಬು)ಯನ್ನು ಹೊತ್ತು ನರ್ತಿಸುವ ಅಂಶ ರಿಕ್ಟರ್‌ನ ಅಭಿಪ್ರಾಯವನ್ನು ಪುಷ್ಟೀಕರಿಸುತ್ತವೆ. ಆದರೆ ತೆರೆಕಟ್ಟುವ ಆಚರಣೆಗಳಲ್ಲಿ ಅನುಸರಿಸಲ್ಪಡುವ ಉಳಿದ ವಿಧಿ ವಿಧಾನಗಳೆಲ್ಲವೂ ಜನಪದ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಹಾಗಾಗಿ ಭಗವತಿ ತೆರೆ ಆಚರಣೆಯಲ್ಲಿ ಜನಪದ ಹಾಗೂ ಶಿಷ್ಟ ಸಂಸ್ಕೃತಿಯ ಸಮನ್ವಯತೆ ಕಂಡುಬರುತ್ತದೆ.

**೫.೧.೧.೭ ಪುದಿಯೋದಿ ತೆರೆ**

**ಅರ್ಥ ಮತ್ತು ಹಿನ್ನೆಲೆ :**

ಪುದಿಯೋದಿ ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲಿ ಆರಾಧಿಸಲ್ಪಡುವ ಪ್ರಮುಖ ದೈವ. ಈಕೆ ಸಾಂಕ್ರಾಮಿಕ ಕಾಯಿಲೆಗಳನ್ನು ನಿವಾರಿಸುವವಳು ಎಂಬ ನಂಬಿಕೆ ಇದೆ. ಕೊಡವ ಜನಪದಗೀತೆಗಳಲ್ಲಿ ಪುದಿಯೋದಿ ದೈವವನ್ನು ಓಮಾಲೆ ಪುದಿಯೋದಿ ಎಂದು ಕರೆಯಲಾಗಿದೆ. ಜನಪದರು ಪುದಿಯೋದಿಯ ಕಥೆಯನ್ನು

ಹೀಗೆ ನಿರೂಪಿಸುತ್ತಾರೆ. "ಮಾಣಿಕ ಮಲೆನಾಡಿನಲ್ಲಿ ಬಿಲ್ಲಪುರ ಎಂಬ ಊರಿತ್ತು. ಅಲ್ಲಿನ ಬಿಲ್ಲಪುರ ಕೋಟೆಯ ಒಡೆಯ ಮಾದೇವ ತಿರುಮುಡಿ. ಆತನಿಗೆ ಮೂರು ಹೆಣ್ಣು ಮಕ್ಕಳು. ಮೊದಲನೆಯವಳು ನೀಲಕೊಡಿ ಚೀರಂಬೆ. ಎರಡನೆಯವಳು ಓಮಾಲೆ ಪುದಿಯೋದಿ. ಮೂರನೆಯವಳು ಜೋಗನಲ್ಲ ಬೀರಾಳಿ. ಹತ್ತು ವರ್ಷ ತುಂಬಿದಾಗ ಓಮಾಲೆ ಪುದಿಯೋದಿ ಮನೆಯನ್ನು ಬಿಟ್ಟು ಹೋಗುವಳು. ಒಂದು ದಿನ ಇದ್ದಕಿದ್ದಂತೆ ಬಿಲ್ಲಪುರ ಕೋಟೆಯ ಮುಂಭಾಗದಲ್ಲಿದ್ದ ಆಲದ ಮರದ ಎಲೆಗಳು ಉದುರಿ ಒಣಗತೊಡಗಿದವು. ಇದನ್ನು ನೋಡಲೆಂದು ಹೋದ ತಿರುಮುಡಿಯು ಆಲದ ಮರದಡಿಯಲ್ಲಿ ಓಮಾಲೆ ಪುದಿಯೋದಿ ಕುಳಿತಿರುವುದನ್ನು ಕಂಡನು. ತಂದೆಯನ್ನು ಕಂಡ ಪುದಿಯೋದಿ ತಾನು ಇಲ್ಲಿ ಇರುವುದಿಲ್ಲ ಎಂದಳು. ಅಷ್ಟರಲ್ಲಿ ಸಹೋದರಿಯರಾದ ನೀಲಕೊಡಿ ಚೀರಂಬೆ ಮತ್ತು ಜೋಗನಲ್ಲ ಬೀರಾಳಿ ತಾವು ಕೂಡ ಪುದಿಯೋದಿಯೊಂದಿಗೆ ಹೋಗುತ್ತೇವೆ ಎಂದರು.

ಮಕ್ಕಳ ಮಾತಿಗೆ ಒಪ್ಪಿದ ತಿರುಮುಡಿ ಒಂದು ಹಿಡಿ ಭತ್ತವನ್ನು ನೀಡಿ ದಾರಿಯಲ್ಲಿ ಬಿತ್ತುತ್ತಾ ಸಾಗಿ ಎಂದನು. ಭತ್ತವನ್ನು ಪಡೆದುಕೊಂಡ ಪುದಿಯೋದಿ ತಂದೆಯ ಮುಖಕ್ಕೆ ಎರಚಿದಳು. ಇದರಿಂದ ಆತನ ಮುಖದಲ್ಲಿ ಹಸಿರು ಬಣ್ಣದ ಗುಳ್ಳೆಗಳು ಎದ್ದವು. ದುಃಖಿತನಾದ ತಿರುಮುಡಿ ಮಗಳ ವರ್ತನೆಗೆ ಕಾರಣವೇನೆಂದು ಪ್ರಶ್ನಿಸಿದನು. ಆಗ ಪುದಿಯೋದಿ ಹಲಸಿನ ಮರದ ಸೌದೆಯಿಂದ ಹೋಮವನ್ನು ಮಾಡಿದಳು. ತಿರುಮುಡಿಯನ್ನು ಕುರಿತು ಹೋಮಕುಂಡದ ಹೊಗೆಗೆ ಮುಖವನ್ನು ಒಡ್ಡಿ ಒರೆಸುವಂತೆ ಹೇಳಿದಳು. ಹಸಿರು ಬಣ್ಣದ ಗುಳ್ಳೆಗಳು ಮಾಯವಾದವು. ತನ್ನ ಮಗಳ ಶಕ್ತಿಯನ್ನು ಕಣ್ಣಾರೆ ಕಂಡು ತಿರುಮುಡಿಗೆ ಸಂತೋಷವಾಯಿತು. ಅಷ್ಟರಲ್ಲಿ ನೀಲಕೊಡಿ ಚೀರಂಬೆ ಹಾಗು ಜೋಗನಲ್ಲ ಬೀರಾಳಿಯರು ತಂದೆಯನ್ನು ಕುರಿತು ನಾವೂ ದೇಶ ಸುತ್ತುತ್ತೇವೆ. ನಮಗೂ ವರ ನೀಡು ಎನ್ನುವರು. ಆಗ ತಿರುಮುಡಿ "ಚಿನ್ನದ ತೇರು ಯಾರಿಗೆ ಬೇಕು? ಬೆಳ್ಳಿಯ ತೇರು ಯಾರಿಗೆ? ಅರಿಸಿನ ಪುಡಿ ಯಾರಿಗೆ? ಮೆಣಸಿನ ಪುಡಿ ಯಾರಿಗೆ?" ಎಂದು ಪ್ರಶ್ನಿಸಿದನು. ಆಗ ಓಮಾಲೆ ಪುದಿಯೋದಿ "ಚಿನ್ನದ ತೇರು ಮತ್ತು ಮೆಣಸಿನ ಪುಡಿ ಅಕ್ಕನಾದ ನೀಲಕೊಡಿ ಚೀರಂಬೆಗೆ ಇರಲಿ. ಬೆಳ್ಳಿ ತೇರು ಮತ್ತು ಅರಿಸಿನ ಪುಡಿ ನನಗಿರಲಿ" ಎನ್ನುವಳು.

ಅಲ್ಲಿಂದ ಹೊರಟ ಮೂವರು ಸೋದರಿಯರು ಬಳವಡತ್ ಎಂಬ ಊರಿನ ರಾಜನನ್ನು ಭೇಟಿಮಾಡಿ ತಮಗೆ ನೆಲೆ ಬೇಕು ಎನ್ನುವರು. ರಾಜನು ಇವರ ಕೋರಿಕೆಯನ್ನು ನಿರಾಕರಿಸಿದನು. ಕೋಪಗೊಂಡ ಸಹೋದರಿಯರು ಬಳವಡತ್ ರಾಜನ ಸಾವಿರ ದನಗಳು ಹಾಗೂ ಐದುನೂರು ಹಸುಗಳು ಮಾರಿಚೂರಿ(ಮಾರಿ ಕಾಯಿಲೆ) ಯಿಂದ ಸಾಯುವಂತೆ ಮಾಡಿದರು.

ಗಾಬರಿಗೊಂಡ ರಾಜನು "ನಾನು ನಿಮಗೆ ನೆಲೆ ನೀಡುತ್ತೇನೆ ನನಗೆ ಬಂದ ಕಷ್ಟವನ್ನು ಪರಿಹರಿಸಿ" ಎಂದು ಬೇಡಿಕೊಂಡನು. ಪುದಿಯೋದಿಯ ಮನಸ್ಸು ಕರಗಿತು. ರಾಜನನ್ನು ಕುರಿತು ಮೇಲೇರಿ(ಕೆಂಡ ಸೇವೆ) ಗೆ ಬೇಕಾದ ಹಲಸಿನ ಸೌದೆ ಹಾಗೂ ತಿರುಮುಡಿ(ತೆರೆ) ಗೆ ಬೇಕಾದ ಸಿದ್ಧತೆ ಮಾಡು ಎಂದಳು.

ಪುದಿಯೋದಿಯ ಮಾತಿಗೆ ಒಪ್ಪಿದ ರಾಜನು ಸೌದೆಯನ್ನು ಕಡಿದು ರಾಶಿ ಹಾಕುವನು. ಬಳವಡತ್ ಹೊಳೆಯಾಚೆಗಿನ ದಡದಲ್ಲಿ ಮೇಲೇರಿ ಸಿದ್ಧಗೊಂಡಿತು. ಮಧ್ಯರಾತ್ರಿಯ ಹೊತ್ತಿಗೆ ಮೇಲೇರಿಗೆ ಬೆಂಕಿ ಹಚ್ಚಲಾಯಿತು. ಬೆಂಕಿ ಉರಿಯುತ್ತಿದ್ದಂತೆ ಪುದಿಯೋದಿ ಅರಿಸಿನ ಪುಡಿಯಿಂದ ಮುಖಕ್ಕೆ ಬಣ್ಣವನ್ನು ಹಚ್ಚಿಕೊಂಡಳು. ಆವೇಶಗೊಂಡು ಹೊಳೆಯನ್ನು ದಾಟಿ ಮೇಲೇರಿಯ ಮುಂದೆ ನಿಂತಳು. ಅದನ್ನು ಕಂಡ ರಾಜನು ಎಂಟು ಪಂಜುಗಳನ್ನು ತಂದು ನಾಲ್ಕು ದಿಕ್ಕುಗಳಿಗೆ ಕಟ್ಟಿಸಿ ಉರಿಸಿದನು. ಪುದಿಯೋದಿಯು ಮತ್ತಷ್ಟು 'ಮೇಲೇರಿ ತಿರುಮುಡಿ' ಬೇಕೆಂದಳು. ಬೇಸರಗೊಂಡ ರಾಜನು "ಈಗಾಗಲೇ ಕಾಗೆ ಪಕ್ಷಿಗಳು ಕುಳಿತುಕೊಳ್ಳಲು ಸ್ಥಳವಿಲ್ಲದಂತೆ ಮರದ ಕೊಂಬೆಗಳನ್ನು ಕಡಿದಾಗಿದೆ" ಎಂದನು. ಆಗ ಪುದಿಯೋದಿಯು ಸಂತೋಷದಿಂದ "ರಾಜನೇ ಕೇಳು, ಇಂದು ನೀನು ನೀಡಿದ 'ಮೇಲೇರಿ' ಮತ್ತು 'ತಿರುಮುಡಿ' ಸೇವೆ ಗುಲಗಂಜಿಯಷ್ಟಾದರೂ ಅದನ್ನು ಬೆಟ್ಟದಷ್ಟೆಂದು ಪರಿಗಣಿಸುತ್ತೇನೆ" ಎಂದಳು. ತನ್ನ ಅಕ್ಕ ಪೊಂದೇರ್ ಚೀರಂಬೆಗೆ ಅಲ್ಲೇ ನೆಲೆ ನೀಡಬೇಕೆಂದು ರಾಜನಿಗೆ ಸೂಚಿಸಿದಳು. ಆಕೆಯನ್ನು ಕುರಿತು "ಮಾಣಿಕ ಮಲೆನಾಡಿನ ಕಡಲ ತಡಿಯಲ್ಲಿ ನೀನು ನೆಲೆಸು. ನಾನು ಬೆಟ್ಟದ ಮೇಲ್ಭಾಗಕ್ಕೆ ಹೋಗುತ್ತೇನೆ" ಎಂದಳು.

ಮಧ್ಯರಾತ್ರಿಯ ಹೊತ್ತಿಗೆ ತಂಗಿ ಜೋಗ ನಲ್ಲ ಬೀರಾಳಿಯನ್ನು ಕರೆದುಕೊಂಡು ಹೊರಟಳು. ದಾರಿಯಲ್ಲಿ ಮುಲ್ಲೆಚೇರಿ ಕುರಿಪೋಂಡ ಎಂಬವನ ಮನೆಗೆ ತೆರಳಿ ಕುಡಿಯಲು ನೀರು ಹಾಗೂ ಊಟ ಬೇಕು ಎಂದಳು. ಆತನ ಪತ್ನಿ ಇಬ್ಬರನ್ನೂ ಉಪಚರಿಸಿದಳು. ಆಗ ಪುದಿಯೋದಿಯು ತನಗೆ ಕುಡಿಯಲು ಹಾಲು ಹಾಗೂ ಹಲಸಿನ ಸೌದೆಯ ಹೋಮ ಬೇಕು ಎನ್ನುವಳು. ಮನೆಯಾತನು ಮಧ್ಯರಾತ್ರಿಯಲ್ಲೇ ಹಸುವಿನ ಹಾಲನ್ನು ಕರೆದು ಪುದಿಯೋದಿಗೆ ನೀಡಿದನು. ಮರವನ್ನು ಕಡಿದು ಸೀಳಿ ಸೌದೆ ಮಾಡಿದನು. ಆದರೆ ಪುದಿಯೋದಿಯು "ನನಗೆ ನೂರಾ ಒಂದು ಸೌದೆಯ ಹೋಮ ಹಾಗೂ ನೂರಾ ಒಂದು ತೆಂಗಿನಕಾಯಿ ಬೇಕು. ಮಂತ್ರ, ತಂತ್ರಗಳನ್ನು ತಪ್ಪದೆ ಪಾಲಿಸಬೇಕು; ಕಿಂಚಿತ್ತು ತಪ್ಪಾದರೂ ನಿನ್ನನ್ನು ನಾಶ ಮಾಡುತ್ತೇನೆ" ಎಂದು ಎಚ್ಚರಿಸುವಳು. ಪುದಿಯೋದಿಯ ಮಾತಿನಿಂದ ಗಾಬರಿಗೊಂಡ ಆತನ ಆರಾಧನಾ ಕ್ರಮದಲ್ಲಿ ವ್ಯತ್ಯಾಸ ಉಂಟಾಯಿತು. ಕೋಪಗೊಂಡ ಪುದಿಯೋದಿ ಮುಲ್ಲೇಚೇರಿ ಕುರಿಪೋಂಡನ ಎದೆಯನ್ನು

ಸೀಳಿದಳು. ಆತನ ಮನೆಗೆ ಬೆಂಕಿ ಹೊತ್ತಿಕೊಳ್ಳುವಂತೆ ಮಾಡಿದಳು.

ಅಲ್ಲಿಂದ ಹೊರಟ ಪುದಿಯೋದಿ ಪಾಂಡಾಂಡ ಕೊಳಕೆರೆ ಎಂಬಲ್ಲಿಗೆ ಬೆಳಗ್ಗೆ ತಲುಪಿದಳು. ಅಲ್ಲಿ ಪದ್ರಕಾಳಿ(ಭದ್ರಕಾಳಿ)ಯ ಕೋಟಕ್ಕೆ ಪೂಜೆ ಮಾಡಲು ಹೋಗುತ್ತಿದ್ದ ಅರ್ಚಕನನ್ನು ಭೇಟಿಯಾದಳು. ಆತ ಪೂಜೆಗೆಂದು ಬೆಳ್ಳಿಚೆಂಬಿನಲ್ಲಿ ಹಾಲನ್ನು ತಂದಿದ್ದನು. ಅದನ್ನು ಕಂಡ ಪುದಿಯೋದಿ ತನಗೆ ಬೇಕು ಎನ್ನುವಳು. ಆಗ ಅರ್ಚಕನು ಪದ್ರಕಾಳಿಯ ಪೂಜೆಗೆ ಹಾಲು ಬೇಕಾಗಿರುವುದರಿಂದ ನೀಡಲಾಗುವುದಿಲ್ಲ ಎಂದನು. ಸಿಟ್ಟಿನಿಂದ ಪುದಿಯೋದಿ ಚೆಂಬನ್ನು ಕಸಿದುಕೊಂಡು ಹಾಲು ಕುಡಿದಳು. ಅನಂತರ ಅರ್ಚಕನನ್ನು ಕುರಿತು ಪಾಂಡಾಂಡ ಕೊಳಕೆರೆಯಲ್ಲಿ ನೂರಾ ಒಂದು ಬಾರಿ ಮುಳುಗಿ ಸ್ನಾನ ಮಾಡುವಂತೆ ಹೇಳಿದಳು. ಆತ ಮೂರನೆಯ ಸಾರಿ ಮುಳುಗಿ ಏಳುವಷ್ಟರಲ್ಲಿ ಪುದಿಯೋದಿಯು ತನ್ನ ಶೂಲದಲ್ಲಿ ಆತನನ್ನು ಇರಿದು ಕೊಂದು ಮುಂದೆ ಹೊರಟಳು. ಅಷ್ಟರಲ್ಲಿ ತನಗೆ ನಿತ್ಯವೂ ಪೂಜೆ ಮಾಡುತ್ತಿದ್ದ ಅರ್ಚಕನನ್ನು ಹುಡುಕುತ್ತಾ ಬಂದ ಪದ್ರಕಾಳಿ(ಭದ್ರಕಾಳಿ) ಪುದಿಯೋದಿಗೆ ಎದುರಾದಳು. ಅರ್ಚಕನನ್ನು ಕುರಿತು ವಿಚಾರಿಸಿದಳು. ನಡೆದ ವಿಚಾರವನ್ನು ತಿಳಿಸಿದ ಪುದಿಯೋದಿ "ಇಂದಿನಿಂದ ನಿನಗೆ ಪೂಜೆ ಇಲ್ಲ "ಎಂದು ಅಪಹಾಸ್ಯ ಮಾಡಿದಳು. ಇದರಿಂದ ದುಃಖಿತಳಾದ ಭದ್ರಕಾಳಿ "ಇನ್ನು ಇಲ್ಲಿ ನನಗೆ ಯಾರೂ ದಿಕ್ಕಿಲ್ಲ, ನಾನಿದ್ದೂ ಫಲವಿಲ್ಲ. ನಾನೂ ಕೂಡ ನಿನ್ನೊಡನೆ ಬರುತ್ತೇನೆ" ಎನ್ನುವಳು. ಆಕೆಯ ಮಾತಿಗೆ ಒಪ್ಪಿದ ಪುದಿಯೋದಿ "ನಾನು ಸ್ಥಾನ ಪಡೆದುಕೊಳ್ಳುವ ಸ್ಥಳಗಳಲ್ಲಿ ನೀನೂ ಸ್ಥಾನ ಪಡೆದುಕೊಳ್ಳಬಹುದು. ಆದರೆ ಮೊದಲು ನನಗೆ ತೆರೆಯನ್ನು ಕಟ್ಟಿ ಅನಂತರ ನಿನಗೆ ಕಟ್ಟಲಾಗುವುದು" ಎಂದಳು.

ಪುದಿಯೋದಿಯ ಷರತ್ತಿಗೆ ಒಪ್ಪಿದ ಭದ್ರಕಾಳಿ ಆಕೆಯೊಂದಿಗೆ ಹೊರಟಳು. ಇಬ್ಬರೂ ಬಯತೂರಪ್ಪ ನೆಲೆಸಿರುವ ಪಯ್ಯಾವೂರಿಗೆ ಹೋದರು. ಬೈತೂರಪ್ಪನಿಗೆ ನಮಸ್ಕರಿಸಿ ನೆಲೆಯನ್ನು ಬೇಡಿದರು. ಸಂತುಷ್ಟನಾದ ಬೈತೂರಪ್ಪ ಅಲ್ಲಿ ನೆಲೆ ನೀಡಿದನು. ವಾರ್ಷಿಕವಾಗಿ ಕುಂಭಮಾಸದ ಹತ್ತರಂದು ನನ್ನ ಹೆಸರಿನಲ್ಲಿ ಹಬ್ಬ ಜರುಗುವಾಗ ನನ್ನ ಆರಾಧನೆಯ ನಂತರ ನಿನ್ನ ಹೆಸರಿನಲ್ಲಿ ಮೇಲೇರಿ ತಿರುಮುಡಿ(ತೆರೆ) ಕಟ್ಟಿ ಆರಾಧಿಸಲಿ ಎಂದು ಪುದಿಯೋದಿಯನ್ನು ಹರಸಿದನು. ಸಂತಸಗೊಂಡ ಪುದಿಯೋದಿ ಅಲ್ಲಿ ನೆಲೆಸಿದಳು. ಕೆಲವು ದಿನಗಳ ನಂತರ ಕೊಡಗಿನ ಕಡಿಯತ್‌ನಾಡಿನವರು ಕುಂಭಮಾಸದ ಐದರಂದು ಪಯ್ಯಾವೂರಿಗೆ ಎತ್ತಿನ ಹೇರಿನೊಂದಿಗೆ ತೆರಳಿದರು. ಕುಂಭಮಾಸದ ಹತ್ತರಂದು ಅಲ್ಲಿ ಪೂಜಿಸಿ ಆರಾಧಿಸಿದರು. ಈ ಸಂದರ್ಭದಲ್ಲಿ ಕಡಿಯತ್‌ನಾಡಿನವರ ಒಗ್ಗಟ್ಟನ್ನು ಕಂಡು ಸಂತಸಗೊಂಡ ಪುದಿಯೋದಿ ಅವರನ್ನು ಹಿಂಬಾಲಿಸಿದಳು. ತಿತ್ತುಡುಂಬೆ ಎಂಬ

ಸ್ಥಳವನ್ನು ಹಾದು ಕೋಡತೊರ ಕಂಡಿ ಎಂಬಲ್ಲಿಗೆ ತಲುಪಿದ ಪುದಿಯೋದಿಯ ಮನಸನ್ನು ಕೊಡಗಿನ ಪ್ರಕೃತಿ ಸೌಂದರ್ಯ ಆಕರ್ಷಿಸಿತು. ನಾಲ್ಕು ದಿಕ್ಕುಗಳನ್ನು ನೋಡುತ್ತ ಯಾವ ದಿಕ್ಕಿನಲ್ಲಿ ನೆಲೆಸಲಿ ಎಂದು ಯೋಚಿಸತೊಡಗಿದಳು. ಅಷ್ಟರಲ್ಲಿ ಕೋಡತೊರ ಕಂಡಿಯಲ್ಲಿ ಬಿಲ್ಲಸೇರನೈಯ್ಯಪ್ಪ(ಬಿಲ್ಲುಗಾರ ಅಯ್ಯಪ್ಪ) ನನ್ನು ಕಂಡಳು. ತನ್ನ ವೃತ್ತಾಂತವನ್ನು ಆತನಿಗೆ ವಿವರಿಸಿ ನೆಲೆಯನ್ನು ಬೇಡುವಳು. ಬಿಲ್ಲುಗಾರ ಅಯ್ಯಪ್ಪ ಪುದಿಯೋದಿಯ ಬೇಡಿಕೆಯನ್ನು ನಿರಾಕರಿಸುವನು. ಚೋಮಕುಂದ್ ಬೆಟ್ಟದಲ್ಲಿರುವ ತುಂಬೆಮಲೆ ದೇವನನ್ನು ನೆಲೆ ಬೇಡುವಂತೆ ಹೇಳುವನು.

ತುಂಬೆಮಲೆ ದೇವನ ಬಳಿ ತೆರಳಿದ ಪುದಿಯೋದಿ ನೆಲೆ ನೀಡುವಂತೆ ಬೇಡಿದಳು. ತಾನು ಮೂವಾಯಿರ ನಾಡನ್ನು 'ಮಾರಿ ಚೂರಿ'( ಮಾರಿಯಿಂದ ಬರುತ್ತದೆಯೆಂದು ನಂಬಲಾಗಿರುವ ದಡಾರ, ಸಿಡುಬು, ಸೀತಾಳೆ ಇತ್ಯಾದಿ ಸಾಂಕ್ರಾಮಿಕ ರೋಗ) ಗಳಿಂದ ರಕ್ಷಿಸುತ್ತೇನೆ ಎನ್ನುವಳು. ಆಕೆಯ ಮಾತಿಗೆ ಒಪ್ಪಿದ ತುಂಬೆಮಲೆ ದೇವನು "ನಿನಗೆ ನಾನು ನೆಲೆ ನೀಡುತ್ತೇನೆ. ಆದರೆ ನೀನು ಮೂವಾಯಿರ ನಾಡಿಗೆ ಬೇಲಿಯಂತೆ ನಿಂತು ಮಾರಿಚೂರಿಯ ಉಪಟಳದಿಂದ ರಕ್ಷಿಸಬೇಕು. ಮೇಷ ಮಾಸದ ಸಂಕ್ರಮಣದಂದು ಮೂವಾಯಿರ ನಾಡಿನವರು ಅಯ್ಯಪ್ಪನ ಹೆಸರಿನಲ್ಲಿ ಪಟ್ಟಣಿ(ವೃತ) ಇದ್ದು 'ಊಟ್ ಪಾಟ್' ಎಂಬ ಆರಾಧನೆ ಮತ್ತು ಸಾಮೂಹಿಕ ಊಟೋಪಚಾರವನ್ನು ನಡೆಸಲಿ. ನಂತರ ಮೇಷಮಾಸದ ಎರಡರಂದು ನಿನ್ನ ಮೇಲೇರಿ ತಿರುಮುಡಿಯನ್ನು ಕಟ್ಟಿ ಆರಾಧಿಸುವಂತಾಗಲಿ" ಎಂದು ಹರಸಿದನು.

ಕೋಡತೊರ ಕಂಡಿಯ ಬಿಲ್ಲುಗಾರ ಅಯ್ಯಪ್ಪ ನೆಲೆಯ ಮುಂಭಾಗದ ಕೊಲ್ಲಿಯ ದಡದಲ್ಲಿನ ಬನದಲ್ಲಿ ಪುದಿಯೋದಿಗೆ ಸ್ಥಾನ ನೀಡಿದನು. ಅಲ್ಲಿ ನೆಲೆ ನಿಂತ ಪುದಿಯೋದಿ ಮತ್ತೆ ಮುಂದೆ ತೆರಳಿದಳು. ಚೇಲೋರ(ಚೇಲವಾರ) ಮತ್ತು ಪೊನ್ನೋಲ ಎಂಬ ಊರುಗಳ ನಡುವೆ ಸ್ಥಾನ ಪಡೆದಳು. ಆಕೆಯನ್ನು ಹಿಂಬಾಲಿಸಿದ ಭದ್ರಕಾಳಿಯು ಅಲ್ಲಿ ನೆಲೆಸಿದಳು. ಮುಂದೆ ಹೊರಟ ಪುದಿಯೋದಿ ನಾಲಾಯಿರ ನಾಡಿನ ಇಗ್ಗ್‌ತಪ್ಪ ದೇವರ ಗುಡಿಗೆ ತೆರಳಿ ನೆಲೆ ಬೇಡಿದಳು. ಇಗ್ಗ್‌ತಪ್ಪನು ಅಮ್ಮಂಗೇರಿ ಎಂಬ ಊರಿನಲ್ಲಿ ನೆಲೆಸು" ಎಂದನು. ಅಲ್ಲಿ ನೆಲೆಸಿದ ಪುದಿಯೋದಿ ನಂತರ ಕೊಡಗಿನ ಏಳು ಭಾಗಗಳಲ್ಲಿ ನೆಲೆಸಿದಳು. ಹೀಗೆ ಮಾಣಿಕ ಮಲೆನಾಡಿನ ಬಿಲ್ಲಪುರದ ಬೆಳ್ಳಿ ತೇರಿನ ಓಮಾಲೆ ಪುದಿಯೋದಿ ಕೊಡಗಿನ ವಿವಿಧ ಸ್ಥಳಗಳಲ್ಲಿ ನೆಲೆ ಪಡೆದುಕೊಂಡಳು. ಕೊಡಗಿನಲ್ಲಿ ಈಕೆಯನ್ನು ಗ್ರಾಮದೈವ ಹಾಗೂ ಕುಟುಂಬ(ಒಕ್ಕ)ದೈವವಾಗಿ ಆರಾಧಿಸುತ್ತಾರೆ. ಚೇಲವಾರ ಗ್ರಾಮದಲ್ಲಿ ಪುದಿಯೋದಿ ಗ್ರಾಮದೇವಿಯಾದರೆ; ಮೈತಾಡಿ ಗ್ರಾಮದ ಐಚ್ಚೆಟ್ಟಿರ ಒಕ್ಕ ಹಾಗು ಕರಡ ಗ್ರಾಮದ ಐತಿಚಂಡ ಒಕ್ಕಗಳಲ್ಲಿ ಕುಟುಂಬ ದೈವವಾಗಿ ಆರಾಧಿಸಲ್ಪಡುತ್ತಾಳೆ.

ಐಚ್ಚೆಟ್ಟಿರ ಒಕ್ಕದ ಕುಲದೇವಿಯಾಗಿ ಆರಾಧಿಸಲ್ಪಡುವ ಪುದಿಯೋದಿಯ ಮಹಿಮೆಯನ್ನು ವಿವರಿಸುವ ಐತಿಹ್ಯವೊಂದು ಹೀಗಿದೆ. "೧೭೬೩ ರಿಂದ ೧೮೦೯ ರ ಅವಧಿಯಲ್ಲಿ ಕೊಡಗನ್ನು ಹಾಲೇರಿ ಅರಸ ದೊಡ್ಡ ವೀರರಾಜನು ಆಳುತ್ತಿದ್ದನು. ಆಗ ಐಚೆಟ್ಟಿರ ಬಿದ್ದಯ್ಯನ ಮಗ ಅಪ್ಪಯ್ಯ ಪುತ್ತೂರು ತಾಲೂಕಿನ ಸುಬೇದಾರನಾಗಿ ಕಾರ್ಯ ನಿರ್ವಹಿಸುತ್ತಿದ್ದನು. ಈ ಸಂದರ್ಭದಲ್ಲಿ ಮಡಿಕೇರಿ ಕೋಟೆಯಲ್ಲಿ ದೊಡ್ಡ ವೀರರಾಜನನ್ನು ಕೊಲ್ಲಲು ಷಡ್ಯಂತ್ರವನ್ನು ರೂಪಿಸಲಾಯಿತು. ಅದರಂತೆ ರಾಜನ ಸಿಂಹಾಸನದ ಬಳಿ ಸಿಡಿಮದ್ದು ತುಂಬಿರುವ ಕೋವಿಯನ್ನು ಇರಿಸಿ ಆತ ಕುಳಿತುಕೊಳ್ಳುವಾಗ ಸ್ಫೋಟಗೊಳ್ಳುವಂತೆ ಏರ್ಪಾಡು ಮಾಡಲಾಗಿತ್ತು. ಅದೃಷ್ಟವಶಾತ್ ಆ ಕೋವಿಯು ರಾಜನು ಕುಳಿತುಕೊಳ್ಳುವುದಕ್ಕೆ ಮುಂಚಿತವಾಗಿ ಸ್ಫೋಟಗೊಂಡಿತು. ರಾಜನು ಅಪಾಯದಿಂದ ಪಾರಾದನು. ಈ ಸಂಚಿನ ರೂವಾರಿ ಸುಬೇದಾರ ಅಪ್ಪಯ್ಯ ಎಂದು ತಿಳಿದ ಅರಸನು ಆತನನ್ನು ಕೊಲ್ಲಲೆಂದು ಪುತ್ತೂರಿಗೆ ತನ್ನ ಭಂಟರನ್ನು ಕಳುಹಿಸಿದನು. ವಿಚಾರವನ್ನು ತಿಳಿದ ಅಪ್ಪಯ್ಯ ತನ್ನ ಮನೆಯಲ್ಲಿ ದೇವರ ಪೂಜೆ ಮಾಡುತ್ತಾ ಕುಳಿತುಕೊಂಡನು. ದೇವರ ಪೂಜೆಯ ಸಮಯದಲ್ಲಿ ಯಾರನ್ನು ಕೊಲ್ಲುವಂತಿಲ್ಲ ಎಂಬ ನಿಯಮವಿದ್ದುದರಿಂದ ರಾಜನ ಭಂಟರಿಗೆ ಅಪ್ಪಯ್ಯನನ್ನು ಕೊಲ್ಲಲಾಗಲಿಲ್ಲ. ಪೂಜೆ ಮುಗಿಸಿ ಬಂದ ಅಪ್ಪಯ್ಯ ಅವರನ್ನು ಸತ್ಕರಿಸಿ ಭೋಜನ ಏರ್ಪಡಿಸಿದನು. ಅವರು ಊಟ ಮಾಡುವಷ್ಟರಲ್ಲಿ ಅಪ್ಪಯ್ಯ ಮಡಿಕೇರಿ ಕೋಟೆಗೆ ತೆರಳಿದನು. "ಯಾವ ತಪ್ಪೂ ಮಾಡದಿರುವ ನನ್ನನ್ನು ಈ ಶಿಕ್ಷೆಯಿಂದ ಪಾರು ಮಾಡಿದರೆ ತಾನು ಪ್ರತೀ ವರ್ಷವೂ ಪುದಿಯೋದಿ ದೇವಿಯನ್ನು ತೆರೆಕಟ್ಟಿ ಕೊಂಡಾಡುತ್ತೇನೆ"ಎಂದು ಹರಕೆ ಹೊತ್ತುಕೊಂಡನು.

ಅರಮನೆಗೆ ತೆರಳಿದ ಅಪ್ಪಯ್ಯ ರಾಜನನ್ನು ಕಂಡು ತಾನು ನಿರಪರಾಧಿಯೆಂದು ಬಿನ್ನವಿಸಿಕೊಂಡನು. ರಾಜನು ಆತನ ಪ್ರಾಮಾಣಿಕತೆಯನ್ನು ಪರೀಕ್ಷೆಗೆ ಒಡ್ಡುವನು. ಕುದಿಯುವ ಎಣ್ಣೆಯ ಬಾಣಲೆಯೊಳಗೆ ತನ್ನ ಉಂಗುರವನ್ನು ಹಾಕಿ ಅದನ್ನು ತೆಗೆದುಕೊಡುವಂತೆ ಹೇಳುವನು. ಪುದಿಯೋದಿಯ ಶಕ್ತಿಯಿಂದ ಅಪ್ಪಯ್ಯ ಉಂಗುರವನ್ನು ತೆಗೆದುಕೊಡುವನು. ಮೆಚ್ಚಿದ ದೊಡ್ಡ ವೀರರಾಜನು ಅಪ್ಪಯ್ಯನಿಗೆ ಚಿನ್ನದ ಬಳೆ ಹಾಗು ಒಡಿಕತ್ತಿಯನ್ನು ನೀಡಿ ಗೌರವಿಸುವನು. ಅಂದಿನಿಂದ ಸುಬೇದಾರ ಅಪ್ಪಯ್ಯ ತಾನು ನಂಬಿದ ಪುದಿಯೋದಿ ದೇವಿಯನ್ನು ಪೂಜಿಸಲಾರಂಭಿಸಿದನು. ಮೇಷ ಮಾಸದ ಸಂಕ್ರಮಣ (ವಿಷು ಸಂಕ್ರಾಂತಿ)ದಂದು ಪುದಿಯೋದಿಯ ತೆರೆಕಟ್ಟಿಸಿ ಆರಾಧಿಸಲು ಆರಂಭಿಸಿದನು."[೮] ಹೀಗೆ ಐಚ್ಚೆಟ್ಟಿರ ಒಕ್ಕದಲ್ಲಿ ಪುದಿಯೋದಿ ತೆರೆಯ ಆಚರಣೆ ಪ್ರಾರಂಭವಾಯಿತು.

**ಆಚರಣೆ:**

ಗ್ರಾಮವನ್ನು ಸಾಂಕ್ರಾಮಿಕ ಕಾಯಿಲೆಗಳಿಂದ ರಕ್ಷಿಸುವ ಉದ್ದೇಶದಿಂದ

ವಾರ್ಷಿಕವಾಗಿ ಪುದಿಯೋದಿ ತೆರೆಯನ್ನು ಆಚರಿಸಲಾಗುತ್ತದೆ. ಬಣ್ಣ ಸಮುದಾಯದವರು ಪುದಿಯೋದಿ ತೆರೆಯನ್ನು ಕಟ್ಟುತ್ತಾರೆ. ಕುಟುಂಬಗಳಲ್ಲಿ ಪುದಿಯೋದಿ ತೆರೆಯನ್ನು ಮನೆದೇವತೆಯ ತೆರೆಯೆಂದು ಆಚರಿಸುತ್ತಾರೆ. ಮುಂಜಾನೆ ಐದು ಗಂಟೆಗೆ ಪುದಿಯೋದಿ ತೆರೆಯ ಆಚರಣೆ ನಡೆಯುತ್ತದೆ.

**ಪೂರ್ವಭಾವಿ ಸಿದ್ಧತೆ :**

ಪುದಿಯೋದಿ ತೆರೆಯನ್ನು ಕಟ್ಟುವವರು ಬಣ್ಣ ಸಮುದಾಯದವರು. ತೆರೆ ಆಚರಣೆಯಂದು ಬೆಳಗ್ಗೆ ತೆರೆಕಟ್ಟುವ ಸ್ಥಳಕ್ಕೆ ತೆರಳುತ್ತಾರೆ. ಕುಟುಂಬದ ಕೈಮಡದಲ್ಲಿ ತೆರೆಗೆ ಬೇಕಾದ ಎಲ್ಲಾ ಸಾಮಗ್ರಿಗಳನ್ನು ಸಿದ್ಧಗೊಳಿಸುತ್ತಾರೆ. ಪುದಿಯೋದಿ ತೆರೆಗೆ ಪ್ರಮುಖವಾಗಿ ಬೇಕಾದುದು ಪಂಜು. ಇದನ್ನು 'ಪೊಂಜಿ' ಎನ್ನುತ್ತಾರೆ ಎರಡು ಅಡಿ ಉದ್ದ ಹಾಗು ಒಂದು ಇಂಚು ದಪ್ಪದ ಆರು ಕೋಲುಗಳು, ಮೂರು ಮೀಟರ್ ಬಿಳಿಯ ಬಟ್ಟೆ ಮತ್ತು ಸ್ವಲ್ಪ ತೆಂಗಿನ ನಾರು – ಇವು ಪಂಜು ತಯಾರಿಸಲು ಬೇಕಾದ ಸಾಮಗ್ರಿಗಳಾಗಿವೆ. ಕೋಲಿನ ತುದಿಗೆ ತೆಂಗಿನಕಾಯಿಯ ಗಾತ್ರದಲ್ಲಿ ತೆಂಗಿನ ನಾರನ್ನು ಸುತ್ತಿ ಕಟ್ಟುತ್ತಾರೆ. ಅದರ ಮೇಲೆ ಬಿಳಿಯ ಬಟ್ಟೆಯನ್ನು ಸುತ್ತಿದರೆ ಪಂಜು ಸಿದ್ಧವಾಗುತ್ತದೆ. ದೊಡ್ಡ ಹಂಡೆಯೊಂದಕ್ಕೆ ಎಣ್ಣೆಯನ್ನು ಸುರಿದು ಅದರೊಳಗೆ ಪಂಜನ್ನು ಮುಳುಗಿಸಲಾಗುತ್ತದೆ. ಹೀಗೆ ಆರು ಪಂಜುಗಳನ್ನು ಸಿದ್ಧಗೊಳಿಸಲಾಗುತ್ತದೆ. ಪುದಿಯೋದಿಗೆ ಪಂಜುಗಳನ್ನು ಹರಕೆ ಒಪ್ಪಿಸುವುದು ವಾಡಿಕೆ. ಹಾಗಾಗಿ ಪುದಿಯೋದಿ ತೆರೆಯ ಸಂದರ್ಭದಲ್ಲಿ ೨೦೦ ರಿಂದ ೩೦೦ ಹರಕೆ ಪಂಜುಗಳು ಇರುತ್ತವೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**



ಪುದಿಯೋದಿ ತೆರೆ ಕಟ್ಟುವಂದು ಒಕ್ಕದ ಸದಸ್ಯರೆಲ್ಲರೂ ಐನ್‌ಮನೆಯಲ್ಲಿ ಸೇರುತ್ತಾರೆ. ಐಚ್ಚೆಟ್ಟಿರ ಕುಟುಂಬದಲ್ಲಿ ನಡೆಯುವ ಪುದಿಯೋದಿ ತೆರೆಯಲ್ಲಿ ಐನೂರಕ್ಕೂ ಹೆಚ್ಚು ಜನರು ಸೇರಿರುತ್ತಾರೆ. ಒಕ್ಕದ ಪಟ್ಟೆದಾರ(ಮುಖ್ಯಸ್ಥ) ಹಾಗೂ ಕುಟುಂಬದವರೆಲ್ಲಾ ಕೈಮಡದಲ್ಲಿ ಸೇರಿ ನಾಲ್ಕು ಮಾತುಗಳನ್ನಾಡಿ ಪ್ರಾರ್ಥಿಸಿ ಅಕ್ಕಿ ಹಾಕುತ್ತಾರೆ. ಸ್ನಾನದ ವಿಧಿಯ ನಂತರ ತೆರೆಕಾರನು

ಬಣ್ಣಗಾರಿಕೆಗೆ ಸಿದ್ಧನಾಗುತ್ತಾನೆ. ಬಣ್ಣಗಾರಿಕೆಯಲ್ಲಿ ಹಳದಿ ಹಾಗೂ ಕೆಂಪು ಬಣ್ಣವನ್ನು ಪ್ರಧಾನವಾಗಿ ಬಳಸುತ್ತಾರೆ. ಪುದಿಯೋದಿ ತೆರೆಯ ವೇಷಭೂಷಣಗಳನ್ನು ಬಟ್ಟೆ ಹಾಗೂ ತೆಂಗಿನ ಎಳೆಯ ಗರಿಗಳಿಂದ ನಿರ್ಮಿಸಲಾಗುತ್ತದೆ. ತೆರೆಕಟ್ಟುವವನ ತಲೆಗೆ ನೆತ್ತಿಪಟ್ಟ್ ಎಂಬ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ ಮೇಲ್ಭಾಗಕ್ಕೆ ತಲೆಪೂ ಎಂಬ ತಲೆಹೂವು ಹಾಗೂ ತೆರೆಮುಡಿ ಎಂಬ ಶಿರೋಭೂಷಣ ಇರುತ್ತದೆ. ತೆರೆಮುಡಿಯನ್ನು ಕೆಂಪು ಬಣ್ಣದ ಬಟ್ಟೆ ಹಾಗೂ ತೆಂಗಿನ ಎಳೆಯ ಗರಿಗಳಿಂದ ನಿರ್ಮಿಸಿರುತ್ತಾರೆ. ಕಿವಿಗೆ ಚೆನ್ನೆರ್‌ಲ್, ವಾಲೆಕಾದ್, ಕೊಂಬೋಲೆಕಾದ್ ಎಂಬ ಕರ್ಣಾಭರಣಗಳಿರುತ್ತವೆ. ಕೊರಳಿಗೆ 'ಯೆಯ್ಯಾರ' ಎಂಬ ಮರದ ಪದಕವನ್ನು ತೊಡಿಸುತ್ತಾರೆ. ಸ್ತ್ರೀ ದೈವದ ಸಂಕೇತವಾಗಿ ಎದೆಗೆ ಮೊಲೆಕಟ್ಟನ್ನು ಕಟ್ಟುತ್ತಾರೆ. ಕೈಗಳಿಗೆ ಕೈಪೂ ಹಾಗೂ ಚೂಡಗ ಎಂಬ ಕಡಗವನ್ನು ತೊಡಿಸುತ್ತಾರೆ. ಸೊಂಟಕ್ಕೆ ತೆಂಗಿನ ಎಳೆಯ ಗರಿಗಳಿಂದ ನಿರ್ಮಿಸಿದ ಸ್ತಂಭಾಕೃತಿಯ ಉಡುಪು 'ಓಲಿ'ಯನ್ನು ಕಟ್ಟಿರುತ್ತಾರೆ. ಹೀಗೆ ವೇಷಭೂಷಣಗಳನ್ನು ಧರಿಸಿದ ನಂತರ ತೆರೆಕಾರನು ಆಯುಧಗಳನ್ನು ಹಿಡಿದುಕೊಳ್ಳುತ್ತಾನೆ. ಪುದಿಯೋದಿಯ ಆಯುಧವಾದ ಕತ್ತಿಯನ್ನು ಬಲಗೈಯಲ್ಲಿ ಹಾಗೂ ಚಿಕ್ಕ ಗುರಾಣಿಯನ್ನು ಎಡಗೈಯಲ್ಲಿ ಹಿಡಿದುಕೊಳ್ಳುತ್ತಾನೆ.

ತೆರೆಮುಡಿಯ ಮೇಲ್ಭಾಗಕ್ಕೆ ಕೋತಿರಿಯನ್ನು ಉರಿಸಿ ಸಿಕ್ಕಿಸುತ್ತಾರೆ. ಸಿದ್ಧಗೊಳಿಸಿರುವ ಪಂಜನ್ನು ಓಲಿಯ ಮಧ್ಯೆ ಸೊಂಟದ ಸುತ್ತಲೂ ಕಟ್ಟಲಾಗುತ್ತದೆ. ಕೋತಿರಿ ಹಾಗು ಪಂಜನ್ನು ಉರಿಸಲಾಗುತ್ತದೆ. ಹೀಗೆ ಸಿದ್ಧಗೊಂಡಿರುವ ಪುದಿಯೋದಿ ತೆರೆಯನ್ನು ನಾಲ್ಕೈದು ಯುವಕರು ಕೈಹಿಡಿದುಕೊಂಡು ಐನ್‌ಮನೆಗೆ ಕರೆತರುತ್ತಾರೆ. ಚಂಡೆಯ ಹಿಮ್ಮೇಳದೊಂದಿಗೆ ತೆರೆಯು ಬರುತ್ತಿದ್ದರೆ ಪಂಜಿನ ಬೆಳಕು ಸುಮಾರು ಐವತ್ತು ಮೀಟರ್ ದೂರದವರೆಗೆ ಕಾಣಿಸುತ್ತದೆ. ಯುವಕರು ಹರಕೆ ಒಪ್ಪಿಸಿದ ಪಂಜುಗಳನ್ನು ತೆರೆಯ ಸುತ್ತಲೂ ಕಟ್ಟಿ ಅದನ್ನು ಉರಿಸುತ್ತಾ ತೆರೆಯೊಂದಿಗೆ ಸಾಗುತ್ತಾರೆ. ತೆರೆಯು ಐನ್‌ಮನೆಯ ಅಂಗಳಕ್ಕೆ ಬಂದಾಗ ಸೇರಿರುವವರೆಲ್ಲಾ ಪಂಜಿಗೆ ಹಸುವಿನ ತುಪ್ಪವನ್ನು ಸುರಿಯುತ್ತಾರೆ. ಪಂಜು ಹೊತ್ತಿ ಉರಿಯುತ್ತದೆ. ಅರ್ಧ ಗಂಟೆಯ ಹೊತ್ತು ಮನೆಯ ಅಂಗಳದಲ್ಲಿ ನಿಂತು ಕೈಮಡಕ್ಕೆ ಹಿಂದಿರುಗುತ್ತದೆ. ಅಲ್ಲಿ ಹರಕೆ ಒಪ್ಪಿಸಿದ ಕೋಳಿಗಳ ಬಲಿಯನ್ನು ಸ್ವೀಕರಿಸುತ್ತದೆ. ಅಲ್ಲಿಂದ ಮರಳಿ ಐನ್‌ಮನೆಯ ಕಯ್ಯಾಲೆ(ಪಡಸಾಲೆ)ಯಲ್ಲಿ ಕುಳಿತುಕೊಳ್ಳುತ್ತದೆ. ಮನೆಯ ಹೆಣ್ಣುಮಕ್ಕಳು ಹಾಲು ಮತ್ತು ಮದ್ಯವನ್ನು ತೆರೆಗೆ ನೀಡುತ್ತಾರೆ. ತೆರೆಯು ಇದನ್ನು ಸ್ವೀಕರಿಸುತ್ತದೆ.

**ಅನುವಾದ (ಆಶೀರ್ವಾದ) :**

ಪುದಿಯೋದಿ ತೆರೆಯ ಆಚರಣೆಯ ಕೊನೆಯಲ್ಲಿ ಭಾಗವಹಿಸಿದವರೆಲ್ಲಾ ದೇವಿಯ ಆಶೀರ್ವಾದ ಪಡೆದುಕೊಳ್ಳುತ್ತಾರೆ. ಈ ವಿಧಿಯನ್ನು ಅನುವಾದ

ನೀಡುವುದು ಅಥವಾ 'ಅನುವಾದ ಕೊಡ್‌ಪೊ' ಎನ್ನುತ್ತಾರೆ. ತೆರೆಯ ಬಲಭಾಗದಲ್ಲಿ ಯುವಕನೊಬ್ಬ ಭಂಡಾರ ತಟ್ಟೆಯನ್ನು ಹಿಡಿದು ನಿಂತುಕೊಳ್ಳುತ್ತಾನೆ. ಬಂದವರೆಲ್ಲರೂ ತಟ್ಟೆಗೆ ಕಾಣಿಕೆ ಹಾಕಿ ಹಣೆಗೆ ಹಚ್ಚುವ 'ಕುರಿ'(ಅಕ್ಕಿ ಹಾಗು ಅರಿಸಿನವನ್ನು ಕುಟ್ಟಿ ತಯಾರಿಸಿದ ಹುಡಿ)ಯನ್ನು ಪ್ರಸಾದವಾಗಿ ಪಡೆದುಕೊಳ್ಳುತ್ತಾರೆ. ಈ ಪುಡಿಯನ್ನು ಯುವಕರೇ ತಯಾರಿಸಬೇಕೆಂಬುದು ಪದ್ಧತಿ. ತೆರೆಯು ನೀಡಿದ ಕುರಿಯನ್ನು ಒಕ್ಕದವರು ಹಾಗು ತವರುಮನೆಯ ಹೆಣ್ಣುಮಕ್ಕಳು ತಮ್ಮ ಮನೆಯ ನೆಲ್ಲಕ್ಕಿ ನಡುಬಾಡೆಯಲ್ಲಿ ಇಟ್ಟು ದಿನವೂ ಹಣೆಗೆ ಹಚ್ಚಿಕೊಳ್ಳುತ್ತಾರೆ. ಅನುವಾದ ನೀಡಿದ ನಂತರ ಪುದಿಯೋದಿ ತೆರೆಯು ಕೈಮಡಕ್ಕೆ ಹಿಂದಿರುಗುತ್ತದೆ. ಅಲ್ಲಿ ಪುದಿಯೋದಿ ದೇವಿಯು ಕೆಲವು ಹೊತ್ತಿನವರೆಗೆ ಭದ್ರಕಾಳಿಯ ರೂಪವನ್ನು ತಾಳುತ್ತಾಳೆ. ಇದನ್ನು ಸ್ತ್ರೀಯರು ನೋಡಬಾರದೆಂಬ ನಿಷೇಧವಿದೆ.

ಹಲವು ವರ್ಷಗಳಿಂದ ಒಬ್ಬನೇ ವ್ಯಕ್ತಿ ಪುದಿಯೋದಿ ತೆರೆಯನ್ನು ಕಟ್ಟುತ್ತಿದ್ದರೆ ಅಂತಹ ತೆರೆಕಾರನಿಗೆ ತೆರೆಕಟ್ಟಿಸುವ ಕುಟುಂಬದವರು ಚಿನ್ನದ 'ಕಟ್ಟಿಬಳೆ'(ಗಟ್ಟಿಬಳೆ)ಯನ್ನು ಉಡುಗೊರೆಯಾಗಿ ನೀಡುವುದು ವಾಡಿಕೆ. ಆದರೆ ಈ ಬಳೆಯನ್ನು ಅನ್ಯರಿಗೆ ಕೊಡುವುದು, ಮಾರುವುದೂ ಮಾಡುವಂತಿಲ್ಲ. "ಪೂರ್ವದಲ್ಲಿ ಬಣ್ಣ ಸಮುದಾಯದ ತೆರೆಕಾರನೊಬ್ಬ ಕಟ್ಟಿಬಳೆಯನ್ನು ಅಡವಿರಿಸಿದ್ದರಿಂದ ತೀವ್ರ ಅನಾರೋಗ್ಯಕ್ಕೆ ಈಡಾದನು. ಪುದಿಯೋದಿ ದೇವಿಗೆ ಹರಕೆ ಹೊತ್ತುಕೊಂಡ ನಂತರ ಆತನ ಆರೋಗ್ಯ ಸುಧಾರಿಸಿತು. ಮರುವರ್ಷವೇ ಪುದಿಯೋದಿ ತೆರೆಗೆ ಬಂದು ತನ್ನ ಹರಕೆಯನ್ನು ತೀರಿಸಿದನು."[೯] ಇತ್ಯಾದಿ ನಂಬಿಕೆಗಳು ಪ್ರಚಲಿತದಲ್ಲಿವೆ.

**೫.೧.೧.೮ ಬೀರಾಳಿ ತೆರೆ**

**ಅರ್ಥ ಮತ್ತು ಆಚರಣೆ :**

ಬೀರಾಳಿ ಪುದಿಯೋದಿ ದೇವಿಯ ಸಹೋದರಿ. 'ಓಮಾಲೆ ಪುದಿಯೋದಿರ ಪಾಟ್' ಎಂಬ ಕೊಡವ ಜನಪದ ಗೀತೆಯಲ್ಲಿ ಬೀರಾಳಿಯ ಬಗ್ಗೆ ಉಲ್ಲೇಖವಿದೆ. ಓಮಾಲೆ ಪುದಿಯೋದಿಯ ಸಹೋದರಿಯಾದ ಈಕೆಯನ್ನು 'ಜೋಗನಲ್ಲ ಬೀರಾಳಿ' ಅಂದರೆ ಸುಯೋಗವನ್ನು ಪಡೆದಿರುವ ಬೀರಾಳಿ ಎಂದು ಕರೆಯಲಾಗಿದೆ. ಬೀರಾಳಿ ಪುದಿಯೋದಿಯೊಂದಿಗೆ ನೆಲೆಯನ್ನು ಅರಸಿ ಕೊಡಗಿಗೆ ಬಂದವಳು. ಹಾಗಾಗಿ ಪುದಿಯೋದಿಗೆ ನೆಲೆ ಇರುವ ಗ್ರಾಮಗಳಲ್ಲೆಲ್ಲಾ ಬೀರಾಳಿ ದೇವಿಗೆ ನೆಲೆಯಿರುತ್ತದೆ. ಬೀರಾಳಿಯು ಪುದಿಯೋದಿ ದೇವಿಯ ಪರಿವಾರ ದೈವ ಎಂಬುದು ಜನಪದರ ಅಭಿಪ್ರಾಯ. ಆದುದರಿಂದ ಪುದಿಯೋದಿ ತೆರೆಯ ವೇಷಭೂಷಣ ಹಾಗೂ ವಿಧಿವಿಧಾನಗಳಲ್ಲಿ ಬೀರಾಳಿ ತೆರೆಯನ್ನು ಕಟ್ಟಲಾಗುತ್ತದೆ. ಕೊಡವ ಭಾಷಿಕ ಸಮುದಾಯಗಳಲ್ಲಿ ಒಂದಾದ ಐರಿಗಳು ಪುದಿಯೋದಿಯ

ಅಕ್ಕ ಚೀರಂಬೆಯನ್ನು ಪೂಜಿಸುತ್ತಾರೆ. ಆದರೆ ಈ ದೈವಕ್ಕೆ ತೆರೆಕಟ್ಟುವ ಆಚರಣೆಯಿಲ್ಲ.

**೫.೧.೧.೯ ಭದ್ರಕಾಳಿ ತೆರೆ**

**ಅರ್ಥ :**

ಭದ್ರಕಾಳಿಯು ಕೊಡಗಿನ ಹಲವು ಗ್ರಾಮಗಳಲ್ಲಿ ಪೂಜಿಸಲ್ಪಡುವ ಜನಪ್ರಿಯ ದೇವತೆ. ಈಕೆಯನ್ನು ಪದ್ರಕಾಳಿ ಎಂದೂ ಕರೆಯುತ್ತಾರೆ. ಜನಪದರ ಅಭಿಪ್ರಾಯದಂತೆ ಭದ್ರಕಾಳಿ ಮಾಣಿಕ ಮಲೆನಾಡಿನಿಂದ ಬಂದವಳು. ಭಗವತಿ ಅಥವಾ ಪೊವ್ವೇದಿಯಮ್ಮ ದೇವಿಯೊಂದಿಗೆ ಭದ್ರಕಾಳಿಗೆ ಅವಿನಾಭಾವ ಸಂಬಂಧವಿದೆ. ಆದುದರಿಂದ ಕೊಡಗಿನ ಕೆಲವು ಗ್ರಾಮಗಳಲ್ಲಿ ಭದ್ರಕಾಳಿ ಮತ್ತು ಭಗವತಿ ದೇವಿಯರಿಗೆ ಒಂದೇ ದೇವಸ್ಥಾನವಿರುತ್ತದೆ. 'ಬಲ್ಲತ್‌ನಾಡ್ ಪೊವ್ವೇದಿಯಮ್ಮರ ಪಾಟ್' ಎಂಬ ಕೊಡವ ಜನಪದ ಗೀತೆಯಲ್ಲಿ ಭದ್ರಕಾಳಿ ಹಾಗೂ ಭಗವತಿಯ ಸಂಬಂಧದ ಬಗ್ಗೆ ಉಲ್ಲೇಖವಿದೆ. ಕೆಲವು ಗ್ರಾಮಗಳಲ್ಲಿ ಭದ್ರಕಾಳಿಯನ್ನು ಗುಡಿಗಳಲ್ಲಿ ಮೂರ್ತಿರೂಪದಲ್ಲಿ ಆರಾಧಿಸುತ್ತಾರೆ. ಇನ್ನೂ ಕೆಲವು ಗ್ರಾಮಗಳಲ್ಲಿ ಪುಟ್ಟ ಕೋಟ ಹಾಗೂ ಬನಗಳ ಮರದಡಿಯಲ್ಲಿ ತ್ರಿಶೂಲಗಳಿಂದ ಸಂಕೇತಿಸಲಾಗಿರುತ್ತದೆ.



**ಪಾರಂಪರಿಕ ಏಳುನೆಲೆ ಭದ್ರಕಾಳಿಯರು**

ಭದ್ರಕಾಳಿ ದೇವಿಗೆ ಕೊಡಗಿನ ಏಳು ಗ್ರಾಮಗಳಲ್ಲಿ ಪಾರಂಪರಿಕವಾದ ನೆಲೆಗಳಿವೆ. ಆಯಾಯ ಗ್ರಾಮದ ಹೆಸರಿನೊಂದಿಗೆ ಆಕೆಯನ್ನು ಕರೆಯುತ್ತಾರೆ. ಅವುಗಳೆಂದರೆ: ೧. ಪಾಲೇರಿ(ಹಾಲೇರಿ) ಭದ್ರಕಾಳಿ ೨. ಮಕ್ಕಂದೂರು ಭದ್ರಕಾಳಿ, ೩. ಗಾಳಿಬೀಡು ಭದ್ರಕಾಳಿ ೪. ಮೂವತ್ತೊಕ್ಕಲು ಭದ್ರಕಾಳಿ ೫. ಕಾಟಕೇರಿ ಭದ್ರಕಾಳಿ ೬. ಕೆದಕಲ್ ಭದ್ರಕಾಳಿ ೭. ಇಬ್ನಿವಳವಾಡಿ ಭದ್ರಕಾಳಿ.

**ಪಾಲೇರಿ ಭದ್ರಕಾಳಿ :**

ಕೊಡಗಿನಲ್ಲಿ ಆರಾಧಿಸಲ್ಪಡುವ ಭದ್ರಕಾಳಿಯರಲ್ಲಿ ಪಾಲೇರಿ ಭದ್ರಕಾಳಿ ಮೊದಲನೆಯವಳು. ಪಾಲೇರಿ(ಹಾಲೇರಿ) ಗ್ರಾಮದಲ್ಲಿ ನೆಲೆಸಿರುವುದರಿಂದ ಈ ಹೆಸರು ಬಂದಿದೆ. ಈ ದೇವಿಗೆ ತೆರೆಕಟ್ಟುವ ಆಚರಣೆ ನಡೆಯುವುದಿಲ್ಲ.

**ಮಕ್ಕಂದೂರು ಭದ್ರಕಾಳಿ :**

ಮಕ್ಕಂದೂರಿನ ಗ್ರಾಮದೇವತೆ ಭದ್ರಕಾಳಿ. ಎರಡು ವರ್ಷಗಳಿಗೊಮ್ಮೆ ಉತ್ಸವ ನಡೆಯುತ್ತದೆ. ಇಲ್ಲಿ ಭದ್ರಕಾಳಿಗೆ ತೆರೆಕಟ್ಟುವ ಆಚರಣೆ ಇರುವುದಿಲ್ಲ. ಆದರೆ ಭದ್ರಕಾಳಿ ದೇಗುಲದ ಸಮೀಪದಲ್ಲಿ ಇರುವ ಅಬ್ಬಿಧಾರೆ ವಿಷ್ಣುಮೂರ್ತಿಗೆ ತೆರೆ ಕಟ್ಟಲಾಗುತ್ತದೆ. ಇದನ್ನು ಬಿಳಿಗೇರಿ ಹಾಗೂ ಕಗೋಡ್ಲು ಗ್ರಾಮಗಳಲ್ಲಿ ನೆಲೆಸಿರುವ ಮಲೆಯರು ಕಟ್ಟುತ್ತಾರೆ. ಒಂದು ದಿನದ ಉತ್ಸವವಾಗಿ ಈ ಆಚರಣೆಯು ಜರುಗುತ್ತದೆ. ಭದ್ರಕಾಳಿ ದೇಗುಲದ ಸಮೀಪ ಬಲಭಾಗದಲ್ಲಿ ಇರುವ ಚೌಂಡಿ(ಚೌಡಿ)ಕಲ್ಲಿನ ಬಳಿ ತೆರೆಕಟ್ಟುವ ಆಚರಣೆಯ ಎಲ್ಲಾ ವಿಧಿವಿಧಾನಗಳು ನಡೆಯುತ್ತವೆ. ಸಾಮಾನ್ಯವಾಗಿ ವಿಷ್ಣುಮೂರ್ತಿ ತೆರೆಗಳಲ್ಲಿ ತೆರೆಮುಡಿ ಹೊತ್ತುಕೊಳ್ಳುವ ವಿಧಿ ಇರುವುದಿಲ್ಲ. ಆದರೆ ಅಬ್ಬಿಧಾರೆ ವಿಷ್ಣುಮೂರ್ತಿ ತೆರೆಯಲ್ಲಿ ಭದ್ರಕಾಳಿಯು ಪ್ರಮುಖ ದೈವವಾದುದರಿಂದ ತೆರೆಮುಡಿ ಹೊತ್ತುಕೊಳ್ಳುವ ಆಚರಣೆ ನಡೆಯುತ್ತದೆ.

**ಗಾಳಿಬೀಡು ಭದ್ರಕಾಳಿ :**

ಕೊಡಗಿನ ಏಳು ನೆಲೆಗಳಲ್ಲಿ ಇರುವ ಭದ್ರಕಾಳಿಯರಲ್ಲಿ ಗಾಳಿಬೀಡು ಭದ್ರಕಾಳಿ ಮೂರನೆಯವಳು. ಮಡಿಕೇರಿ ಸಮೀಪದ ಗಾಳಿಬೀಡಿನ ಗ್ರಾಮದೇವತೆ. ಈಕೆ ಹಾಲೇರಿ ವಂಶದ ಹೊರವಲೆ ಶಾಖೆಯ ಅರಸರಿಗೆ ರಾಜದೇವತೆಯಾಗಿದ್ದಳು. ಗಾಳಿಬೀಡು ಭದ್ರಕಾಳಿಗೆ ಭಗವತಿ(ಪೊವ್ವದಿ)ಯೊಡನೆ ಸಹಯೋಗವಿದೆ. "ಪೂರ್ವದಲ್ಲಿ ಈ ಭಗವತಿಯು ಮಡಿಕೇರಿಯ ಮೇಕೇರಿ ಈಶ್ವರ(ಗುಡ್ಡದ ಈಶ್ವರ) ದೇಗುಲದಲ್ಲಿ ಇತ್ತು. ಕರವಲೆ ಬಾಡಗ ಗ್ರಾಮದವರು ಆಕೆಯನ್ನು ತಮ್ಮಲ್ಲಿಗೆ ಕರೆದುಕೊಂಡು ಹೋದರು. ಆಗ ಅಲ್ಲಿನ ಭದ್ರಕಾಳಿಯು ಗಾಳಿಬೀಡಿಗೆ ಬಂದಳು"[೧೦] ಎಂಬ ಪ್ರತೀತಿ ಇದೆ. ಗಾಳಿಬೀಡಿನಲ್ಲಿರುವ ಭದ್ರಕಾಳಿಗೆ ಹನ್ನೆರಡು ವರ್ಷಗಳಿಗೊಮ್ಮೆ ತೆರೆಕಟ್ಟುವ ಆಚರಣೆ ಜರುಗುತ್ತದೆ. ಮಲೆಯರು ೧೮ ಅಡಿ ಎತ್ತರದ ತೆರೆಮುಡಿಯನ್ನು ಕಟ್ಟಿ ಭದ್ರಕಾಳಿಯ ಆರಾಧನೆ ಮಾಡುತ್ತಾರೆ. ಇದರೊಂದಿಗೆ ವಿಷ್ಣುಮೂರ್ತಿ ದೈವಕ್ಕೂ ತೆರೆಕಟ್ಟುವ ಆಚರಣೆ ನಡೆಯುತ್ತದೆ. ಆದರೆ ಇಲ್ಲಿನ ವಿಷ್ಣುಮೂರ್ತಿಗೆ ೧೮ ಅಡಿ ಎತ್ತರದ ತೆರೆಮುಡಿ ಇರುವುದಿಲ್ಲ. ದೇವಾಲಯದ ಮುಂಭಾಗದಲ್ಲಿರುವ ಮೈದಾನದಲ್ಲಿ ಚೌಂಡಿ ದೈವ, ಕಲ್ಯಾಟಜ್ಜಪ್ಪ ಹಾಗೂ ಅಯ್ಯಣ್ಣ ಬೀರ(ವೀರ)ನ ಕೋಟಗಳಿವೆ. "ಈ ವೀರರು ರಾಜರ ಕಾಲದಲ್ಲಿ ವೀರರಾಗಿ ಹೋರಾಡಿ ಸೇವೆ ಸಲ್ಲಿಸಿದವರು. ಜನಪದ ಅದನ್ನು ಸಾಂಸ್ಕೃತಿಕ ನೆಲೆಯಲ್ಲಿ ಜತನ ಮಾಡಿಕೊಂಡು ಬಂದಿದೆ."[೧೧] ಕೊಡವ, ಐರಿ, ಗೊಲ್ಲ, ಗೌಡ ಹಾಗೂ ಬಾಣಿಯ(ಕೊಡವ ಭಾಷಿಕ ಗಾಣಿಗರು) ಸಮುದಾಯದ ತಕ್ಕಮುಖ್ಯಸ್ಥರು ಸೇರಿ ಭದ್ರಕಾಳಿಯ ಹಬ್ಬ ಹಾಗೂ ತೆರೆಕಟ್ಟುವ ಆಚರಣೆಯನ್ನು ನಡೆಸುತ್ತಾರೆ.

**ಮೂವತ್ತೊಕ್ಕಲು ಭದ್ರಕಾಳಿ :**

ಮೂವತ್ತೊಕ್ಕಲು ಗ್ರಾಮದಲ್ಲಿರುವ ಭದ್ರಕಾಳಿಯು ಉದ್ಭವ ದೈವ ಎಂಬ

ನಂಬಿಕೆ ಜನಪದರಲ್ಲಿದೆ. ಮೂವತ್ತೊಕ್ಕಲು ಭದ್ರಕಾಳಿಯ ನೆಲೆಗೆ ಮುಕ್ಕಾಟಿರ ಒಕ್ಕ(ಕುಟುಂಬ)ಕ್ಕೆ ಸೇರಿದ ಹಸುವೊಂದು ಪ್ರತೀನಿತ್ಯ ಹೋಗಿ ಹಾಲು ಸುರಿಸುತ್ತಿತ್ತು. ಇದನ್ನು ತಿಳಿದ ಮನೆಯವರು ಭದ್ರಕಾಳಿ ದೇವಿಯನ್ನು ಪೂಜಿಸಲಾರಂಭಿಸಿದರು. ಅನಂತರ ಅದರ ಮಹಿಮೆಯನ್ನು ಅರಿತು ಊರಿನವರೆಲ್ಲರೂ ಆರಾಧಿಸತೊಡಗಿದರು. ಹಾಲೇರಿ ಅರಸರು ಮುಕ್ಕಾಟಿರ ಕುಟುಂಬದ ಈ ದೇವಿಯ ಶಕ್ತಿಯನ್ನು ಅರಿತು ರಾಜಮಾನ್ಯತೆ ನೀಡಿದರು. ಅಲ್ಲದೆ ಆ ಮನೆಯವರಿಗೆ ಬೆಳ್ಳಿ ಉಂಗುರ ನೀಡಿ ಗೌರವಿಸಿದರು ಎಂಬ ಪ್ರತೀತಿ ಇದೆ. ಬ್ರಾಹ್ಮಣ ಅರ್ಚಕರಿಂದ ಪೂಜೆ ನಡೆಯುವ ಈ ದೈವಕ್ಕೆ ತೆರೆಟ್ಟುವ ಆಚರಣೆಯಿಲ್ಲ. ಬದಲಾಗಿ ವಾರ್ಷಿಕ ಹಬ್ಬದಲ್ಲಿ ಊರಿನವರೆಲ್ಲಾ ಸೇರಿ ಸಾಂಪ್ರದಾಯಿಕ ದುಡಿಕೊಟ್ಟ್ ಪಾಟ್(ಹಾಡು) ನ ಮೂಲಕ ಅರಪು ತೆರೆ(ದೇವರ ಹೆಸರನ್ನು ಸಾಮೂಹಿಕವಾಗಿ ಕೂಗುವ ಸೇವೆ) ಯನ್ನು ಅರ್ಪಿಸುತ್ತಾರೆ. ಈ ಸಂದರ್ಭದಲ್ಲಿ ಭದ್ರಕಾಳಿ, ಪೊವ್ವದಿ, ಈಶ್ವರ, ಅಯ್ಯಪ್ಪ ಕೂ.. ಕೂ.. ಎಂದು ಸಾಮೂಹಿಕವಾಗಿ ಕೂಗುತ್ತಾರೆ. ಇದನ್ನು ದೇವಳ ಕಾಕುವೋ(ದೇವರನ್ನು ಕರೆಯುವುದು) ಎಂದೂ ಕರೆಯಲಾಗುತ್ತದೆ.

**ಕಾಟಕೇರಿ ಭದ್ರಕಾಳಿ :**

ಕಾಟಕೇರಿಯಲ್ಲಿ ನೆಲೆಸಿರುವ ಭದ್ರಕಾಳಿಗೆ ಎರಡು ವರ್ಷಗಳಿಗೊಮ್ಮೆ ಎಂಟು ದಿನಗಳ ಹಬ್ಬ ನಡೆಯುತ್ತದೆ. ಆದರೆ ಇಲ್ಲಿ ಯಾವ ದೈವಗಳಿಗೂ ತೆರೆಕಟ್ಟುವ ಆಚರಣೆ ಕಂಡುಬರುವುದಿಲ್ಲ.

**ಕೆದಕಲ್ ಭದ್ರಕಾಳಿ :**

ಕೆದಕಲ್ ಗ್ರಾಮದ ಭದ್ರಕಾಳಿ ನೆಲೆಯಲ್ಲಿ ಒಂದು ವರ್ಷ ಉತ್ಸವ ನಡೆದರೆ ಮತ್ತೊಂದು ವರ್ಷ ವಿಷ್ಣುಮೂರ್ತಿಯ ತೆರೆಕಟ್ಟುವ ಆಚರಣೆ ನಡೆಯುತ್ತದೆ. ಮಲಿಯರು ಈ ತೆರೆಯನ್ನು ಕಟ್ಟುತ್ತಾರೆ. ವಿಷ್ಣುಮೂರ್ತಿ ತೆರೆಯ ವಿಧಿವಿಧಾನಗಳೆಲ್ಲವನ್ನು ಇಲ್ಲಿ ಅನುಸರಿಸಲಾಗುತ್ತದೆ

**ಇಬ್ನಿವಳವಾಡಿ ಭದ್ರಕಾಳಿ :**

ಮಡಿಕೇರಿ ತಾಲೂಕಿನ ಇಬ್ನಿವಳವಾಡಿ ಗ್ರಾಮದಲ್ಲಿ ಇಬ್ಬರು ಭದ್ರಕಾಳಿ ದೇವಿಯರಿದ್ದಾರೆ. ಸಹೋದರಿಯರಾದ ಈ ದೈವಗಳಲ್ಲಿ ಒಂದು ವರ್ಷ ಅಕ್ಕನಿಗೆ ಮತ್ತೊಂದು ವರ್ಷ ತಂಗಿಗೆ ಹಬ್ಬದ ಆಚರಣೆ ನಡೆಯುತ್ತದೆ. ಹಬ್ಬದಲ್ಲಿ ಕೊಡಿಯಾಟ್,ಕೊಂಬಾಟ್, ಚೌರಿಯಾಟ್ ಎಂಬ ಕೊಡವ ಜನಪದ ನೃತ್ಯಗಳು ದೈವದ ಸೇವೆ ಎಂಬಂತೆ ನಡೆಯುತ್ತವೆ. ಪೂರ್ವದಲ್ಲಿ ಇಲ್ಲಿ ತೆರೆಮುಡಿ ಕಟ್ಟುವ ಆಚರಣೆ ಇತ್ತು ಎನ್ನಲಾಗುತ್ತದೆ. ಈ ಮೇಲಿನ ಏಳು ಭದ್ರಕಾಳಿ ನೆಲೆಗಳಲ್ಲದೆ ಕೊಡಗಿನ ವಿವಿಧ ಗ್ರಾಮಗಳಲ್ಲಿ ಭದ್ರಕಾಳಿಯ ಪುಟ್ಟ ಗುಡಿಗಳಿವೆ. ಇನ್ನೂ ಕೆಲವು ಗ್ರಾಮಗಳ ಭಗವತಿ ದೇವಾಲಯಗಳಲ್ಲಿ ಭದ್ರಕಾಳಿಗೆ ಪುಟ್ಟ ಗುಡಿಯಿರುತ್ತದೆ.

ಅಲ್ಲಿ ಭದ್ರಕಾಳಿಗೆ ತೆರೆಯನ್ನು ಕಟ್ಟಿ ಆರಾಧಿಸಲಾಗುತ್ತದೆ. ಅದನ್ನು 'ತೆರೆಮುಡಿ' ಎಂದೂ ಕರೆಯಲಾಗುತ್ತದೆ. ಪಣಿಕರು ಮತ್ತು ಬಣ್ಣರು ಭದ್ರಕಾಳಿ ತೆರೆಯನ್ನು ಕಟ್ಟುತ್ತಾರೆ. ಐನ್‌ಮನೆಗಳಲ್ಲಿ ನಡೆಯುವ ಒಕ್ಕತೆರೆಗಳಲ್ಲೂ ಭದ್ರಕಾಳಿ ತೆರೆಯ ಆಚರಣೆ ನಡೆಯುತ್ತದೆ.

**ನಾಪೋಕ್ಲು ಭದ್ರಕಾಳಿ ತೆರೆ**

ಮಡಿಕೇರಿ ತಾಲೂಕಿನ ನಾಪೋಕ್ಲು ನಾಡಿನಲ್ಲಿ ಭಗವತಿ ದೇವಿಯ ದೇವಾಲಯವಿದೆ. ಈ ದೇವಿಯನ್ನು 'ನಾಡು ಭಗವತಿ' ಎಂದು ಕರೆಯುತ್ತಾರೆ. ಮಾರ್ಚ್ ತಿಂಗಳಿನಲ್ಲಿ ಐದು ದಿನಗಳ ಕಾಲ ಭಗವತಿಯ ವಾರ್ಷಿಕ ಉತ್ಸವವು ನಡೆಯುತ್ತದೆ. ಈ ಸಂದರ್ಭದಲ್ಲಿ ಭಗವತಿ ದೇವಿಯ ಸಹಗಾಮಿಯಾಗಿ ಬರುವ ಭದ್ರಕಾಳಿಗೆ ತೆರೆಯನ್ನು ಕಟ್ಟುವ ಮೂಲಕ ಉತ್ಸವ ಚಾಲನೆಗೊಳ್ಳುತ್ತದೆ. ಇದನ್ನು 'ಭದ್ರಕಾಳಿ ತೆರೆಮುಡಿ' ಎಂದೂ ಕರೆಯುತ್ತಾರೆ. ತೆರೆಕಟ್ಟುವಂದು ರಾತ್ರಿ ಹನ್ನೊಂದರಿಂದ ಒಂದು ಘಂಟೆಯವರೆಗೆ ಸಂಜೆಯ ಬೆಳಕಿನ ಸೇವೆ ನಡೆಯುತ್ತದೆ. ಇದನ್ನು 'ಅಂದಿಬೊಳಕ್' ಎಂದು ಕರೆಯುತ್ತಾರೆ. ಅಂದಿಬೊಳಕ್ ಮುಗಿದ ನಂತರ ಭದ್ರಕಾಳಿ ದೇವಿಗೆ ತೆರೆಕಟ್ಟುವ ಆಚರಣೆಯು ನಡೆಯುತ್ತದೆ. ಗ್ರಾಮದ ಸಮೀಪದ ಹೊದವಾಡ ಎಂಬಲ್ಲಿ ನೆಲೆಸಿರುವ ಪಣಿಕರು ಈ ತೆರೆಯನ್ನು ಕಟ್ಟುತ್ತಾರೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ತೆರೆಕಾರನು ತಕ್ಕಮುಖ್ಯಸ್ಥರಿಂದ ಎಣ್ಣೆಯನ್ನು ಪಡೆದು ಸ್ನಾನದ ವಿಧಿಯನ್ನು ಮುಗಿಸಿ ಬಣ್ಣಗಾರಿಕೆಗೆ ಸಿದ್ಧನಾಗುತ್ತಾನೆ. ಮೊದಲು ಮುಖವರ್ಣಿಕೆಯ ಕೆಲಸ ನಡೆಯುತ್ತದೆ. ಮುಖಕ್ಕೆ ಕೆಂಪು ಬಣ್ಣವನ್ನು ಪ್ರಧಾನವಾಗಿ ಬಳಸಲಾಗುತ್ತದೆ. ಕಣ್ಣಿಗೆ ಕಾಡಿಗೆ, ತುಟಿಗೆ ಕೆಂಪು ಬಣ್ಣವನ್ನು ಹಚ್ಚಲಾಗುತ್ತದೆ. ಭದ್ರಕಾಳಿ ತೆರೆಯ ವೇಷಭೂಷಣಗಳು ಬಟ್ಟೆ, ಹಾಳೆ, ಲೋಹ ಮತ್ತು ಮರದಿಂದ ತಯಾರಿಸಲ್ಪಟ್ಟಿರುತ್ತವೆ. ಕೆಂಪುಬಣ್ಣದ ಷರಾಯಿ ಹಾಗೂ ಉದ್ದತೋಳಿನ ಅಂಗಿಯನ್ನು ತೆರೆಕಾರನು ಧರಿಸುತ್ತಾನೆ. ಅದರ ಮೇಲ್ಭಾಗಕ್ಕೆ ಬಿದಿರಿನಿಂದ ನಿರ್ಮಿಸಲಾದ 'ಕನ್ನಿಬಳೆ' ಎಂಬ ಚಕ್ರವನ್ನು ಧರಿಸುತ್ತಾರೆ. ಇದನ್ನು 'ಕೋಲ್‌ಂಗೈರ್' ಎಂಬ ಕೋಲು ಮತ್ತು ಹಗ್ಗದಿಂದ ಸೊಂಟಕ್ಕೆ ಬಿಗಿದು ಕಟ್ಟಲಾಗುತ್ತದೆ. ಕನ್ನಿಬಳೆಯನ್ನು 'ಅಡಕ್' ಎಂಬ ಮರದ ಚಿಕ್ಕ ಕಲಾತ್ಮಕ ಹಲಗೆಗಳನ್ನು ಇರಿಸಿ ಮುಚ್ಚಲಾಗುತ್ತದೆ. ಅದರ ಮೇಲೆ 'ಚೆರುಬೊಳಂಬ' ಎಂಬ ಲಂಗದಂತ ಉಡುಪು ಧರಿಸಲಾಗುತ್ತದೆ. ಕೆಂಪು ಬಣ್ಣದ ಈ ಉಡುಪಿನ ಮಧ್ಯಭಾಗಕ್ಕೆ ಕೆಂಪು, ಬಿಳಿ ಹಾಗೂ ಕಪ್ಪು ಬಣ್ಣದ ನೂಲಿನ ಕಲಾತ್ಮಕ ಕುಚ್ಚು ಇರುತ್ತದೆ. ಕೆಳಭಾಗಕ್ಕೆ ಬಿಳಿ ಹಾಗೂ ಕಪ್ಪು ಬಣ್ಣದ ಪಟ್ಟಿಗಳಿರುತ್ತವೆ. ತಲೆಗೆ 'ನೆತ್ತಿಪಟ್ಟ್' ಎಂಬ ನೆತ್ತಿಪಟ್ಟಿ, 'ತಲೆಪೂ' ಎಂಬ ಹೂವಿನ ದಂಡೆಯುನ್ನು ಕಟ್ಟಲಾಗುತ್ತದೆ. ಮರದಿಂದ

ತಯಾರಿಸಲಾದ 'ಮೂಕೊಟ್ಟಿ' ಎಂಬ ಚಿಕ್ಕ ಶಿರೋಭೂಷಣವನ್ನು ಧರಿಸಲಾಗುತ್ತದೆ. ಕಿವಿಗಳಿಗೆ 'ಚೆನ್ನರ್‌ಲ್' ಅಥವಾ 'ಚೆನ್ನಿಮುಲರ್' ಎಂಬ ಕಿವಿಯೋಲೆ, ಅದರ ಅಂಚಿಗೆ 'ವಾಲೆಕಾದ್', ಕೆಳಭಾಗಕ್ಕೆ 'ಕೊಂಬೋಲೆ ಕಾದ್' ಎಂಬ ಕರ್ಣಾಭರಣಗಳಿರುತ್ತವೆ. ಮುಂಡಿಯ ಕೆಳಭಾಗಕ್ಕೆ 'ಮಣಿಕೇರ್' ಅದರ ಕೆಳಗೆ 'ಪಟ್ಟ್ಂಬಾಡ'(ಪಟ್ಟಿಮಡ) ಎಂಬ ಕಾಲಿನ ಬಳೆ ಇರುತ್ತದೆ. ತೆರೆಕಾರನು 'ಚಲ್ಂಬು' ಧರಿಸುವ ವಿಧಿಯ ಮೂಲಕ ಪಾದಗಳಿಗೆ ಚಲ್ಂಬು ಧರಿಸುತ್ತಾನೆ. ಕೊರಳಿಗೆ ಎದೆ ಹಾಗೂ ಹೊಟ್ಟೆಯನ್ನು ಮುಚ್ಚುವಂತಹ ದೊಡ್ಡ ಗಾತ್ರದ 'ಕಯತ್‌ಕೆಟ್ಟ್' ಎಂಬ ಆಭರಣವನ್ನು ಧರಿಸಲಾಗುತ್ತದೆ. ಇದನ್ನು ಮರದಿಂದ ನಿರ್ಮಿಸಿರುತ್ತಾರೆ. ಕಿವಿಯವರೆಗೂ ಚಾಚಿದ ಲೋಹದ ಕೋರೆ ಇರುತ್ತದೆ.

**ತೆರೆಮುಡಿ :**

ತೆರೆಕಾರರು ಬಿದಿರನ್ನು ಬಳಸಿ ಹದಿನೆಂಟು ಮೊಳ ಉದ್ದದ ತೆರೆಮುಡಿಯನ್ನು ನಿರ್ಮಿಸುತ್ತಾರೆ. ಅದರ ಒಳಭಾಗಕ್ಕೆ ಕೂವಲೆ ಎಂಬ ಸ್ಥಳೀಯ ಜಾತಿಯ ಗಿಡದ ಎಲೆಗಳನ್ನು ಒಂದರ ಹಿಂದೆ ಒಂದರಂತೆ ಜೋಡಿಸುತ್ತಾರೆ. ಮುಡಿಯ ಮುಂಭಾಗ ಮತ್ತು ಹಿಂಭಾಗಕ್ಕೆ ಕೆಂಪು ವಸ್ತ್ರವನ್ನು ಹೊದಿಸಲಾಗುತ್ತದೆ. ಮೇಲ್ತುದಿಗೆ ಪಾಂಬಾಳೆ ಗಿಡದ ಗರಿಗಳ ಕುಚ್ಚನ್ನು ನಿರ್ಮಿಸಿ ಕಟ್ಟುತ್ತಾರೆ. ಇದನ್ನು 'ಚೌರಿ' ಎಂದು ಕರೆಯುತ್ತಾರೆ. ಅದರ ಕೆಳಭಾಗಕ್ಕೆ ಪಾಂಬಾಳೆ ಗರಿಗಳನ್ನು ಹೂವಿನ ಆಕಾರದಲ್ಲಿ ಕತ್ತರಿಸಿ ಅಲಂಕಾರ ಮಾಡುತ್ತಾರೆ. ಇದರ ಕೆಳಗೆ ಬುಡದವರೆಗೆ ಕೆಂಪುಬಟ್ಟೆ ಎದ್ದು ಕಾಣುವಂತಿರುತ್ತದೆ. ಕೆಳಭಾಗದಲ್ಲಿ ಹಾಳೆಗಳನ್ನು ಬಳಸಿ ನಿರ್ಮಿಸಲಾದ ಹಾವಿನ ಹೆಡೆಯಾಕೃತಿಯನ್ನು ಕಟ್ಟಲಾಗಿರುತ್ತದೆ. ತೆರೆಮುಡಿಯ ನಡುವೆ ಹಾಗೂ ಅಂಚಿನಲ್ಲಿ ಪಾಂಬಾಳೆ ಗರಿಗಳ ಕಿರು ಅಲಂಕಾರ ಇರುತ್ತದೆ. ಹೀಗೆ ಸಿಂಗರಿಸಲ್ಪಟ್ಟ ತೆರೆಮುಡಿಯನ್ನು ತೆರೆಕಾರನು ಹೊತ್ತುಕೊಳ್ಳುತ್ತಾನೆ. ದೇವಾಲಯದ ಆವರಣದಲ್ಲಿ ನರ್ತಿಸುತ್ತಾನೆ. ಇದನ್ನು ಭದ್ರಕಾಳಿಯ ಕುಣಿತ ಎನ್ನುತ್ತಾರೆ. ಅನಂತರ ತೆರೆಯು ಸೇರಿರುವ ಭಕ್ತರಿಗೆಲ್ಲಾ ಅನುವಾದ ನೀಡಿ ಹರಸುತ್ತದೆ.

**ಭದ್ರಕಾಳಿ ಮೊಗ(ಮುಖವಾಡ) ಕಟ್ಟುವ ಆಚರಣೆ :**



ಕೊಡಗಿನ ಕೆಲವು ಗ್ರಾಮಗಳಲ್ಲಿ ಭದ್ರಕಾಳಿಯನ್ನು ಮೊಗಕಟ್ಟುವ ಆಚರಣೆಯ ಮೂಲಕ ಆರಾಧಿಸಲಾಗುತ್ತದೆ. ಇದು ತೆರೆಕಟ್ಟುವ ಆಚರಣೆಯನ್ನೇ ಹೋಲುತ್ತದೆ. ಪಣಿಕರು ಈ

ಆಚರಣೆಯನ್ನು ನಡೆಸುತ್ತಾರೆ. ದಕ್ಷಿಣ ಕೊಡಗಿನ ಕೆಲವು ಗ್ರಾಮಗಳಲ್ಲಿ ವಾರ್ಷಿಕವಾಗಿ ಆಚರಿಸಲ್ಪಡುವ ಬೋಡ್‌ಹಬ್ಬದಲ್ಲಿ ಮೊಗಕಟ್ಟುವ ಆಚರಣೆಯು ನಡೆಯುತ್ತದೆ. ಕೊಡಗಿನಲ್ಲಿ ಆಚರಿಸಲ್ಪಡುವ ಗ್ರಾಮದೇವತೆಗಳ ವಾರ್ಷಿಕ ಹಬ್ಬಗಳಲ್ಲಿ ಬೋಡ್ ನಮ್ಮೆ(ಹಬ್ಬ) ಯು ಒಂದು. 'ಬೋಡ್' ಎಂಬ ಪದವು ಕೊಡವ ಭಾಷೆಯ 'ಬೊಗ್‌ಡ್'(ವಿನೋದ) ಎಂಬ ಪದದಿಂದ ನಿಷ್ಪನ್ನಗೊಂಡಿದೆ.



ವಿನೋದವೇ ಪ್ರಧಾನವಾಗಿರುವುದರಿಂದ 'ಬೊಗ್‌ಡ್‌ನಮ್ಮೆ' ಎಂಬ ಹೆಸರು ಬಂದಿದ್ದು; ಕ್ರಮೇಣ 'ಬೋಡ್ ನಮ್ಮೆ'ಯಾಗಿ ರೂಪಾಂತರಗೊಂಡಿದೆ. ಈ ಹಬ್ಬವು ಗ್ರಾಮದೇವತೆಗಳಾದ ಭದ್ರಕಾಳಿ ಹಾಗೂ ಅಯ್ಯಪ್ಪ ದೇವರ ಪ್ರೀತ್ಯರ್ಥವಾಗಿ ನಡೆಯುತ್ತದೆ. ಬೋಡ್ ಹಬ್ಬವು ಅಕ್ಟೋಬರ್ ತಿಂಗಳಿನಲ್ಲಿ ಪ್ರಾರಂಭವಾಗುತ್ತದೆ. ಪೊನ್ನಂಪೇಟೆ ಸಮೀಪದ ಕುಂದತ್‌ಬೊಟ್ಟ್ ಎಂಬ ಬೆಟ್ಟದ ಮೇಲಿರುವ ಬೊಟ್ಟ್‌ಲಪ್ಪ ದೇವಸ್ಥಾನದಲ್ಲಿ ಆರಂಭವಾಗಿ ಜೂನ್ ಒಂದರಂದು ಕಂಡಂಗಾಲ ಗ್ರಾಮದಲ್ಲಿರುವ ಪಾರಣಮಾನಿ ಎಂಬ ಸ್ಥಳದಲ್ಲಿ ಕೊನೆಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ "ಕುಂದತ್ ಬೊಟ್ಟ್‌ಲ್ ನೇಂದ ಕುದ್‌ರೆ ಪಾರಣಮಾನಿಲ್ ಅಳ್‌ಂಜ ಕುದ್‌ರೆ"[೧೨] (ಕುಂದತ್ ಬೊಟ್ಟ್ ಎಂಬಲ್ಲಿ ಎದ್ದ ಕುದುರೆ ಪಾರಣಮಾನಿಯಲ್ಲಿ ಕೊನೆಗೊಂಡಿತು) ಎಂಬ ಕೊಡವ ನಾಣ್ಣುಡಿಯೊಂದು ಪ್ರಚಲಿತವಾಗಿದೆ.

ಬೋಡ್‌ಹಬ್ಬದ ಸಂದರ್ಭದಲ್ಲಿ ಅಯ್ಯಪ್ಪ ದೈವದ ಪ್ರೀತ್ಯರ್ಥವಾಗಿ ಕುದುರೆಯ ಪ್ರತಿಕೃತಿಯನ್ನು ನಿರ್ಮಿಸುವ 'ಕುದುರೆ ಕಟ್ಟುವ' ಹಾಗೂ ಭದ್ರಕಾಳಿಯ ಮುಖವಾಡವನ್ನು ನಿರ್ಮಿಸುವ 'ಮೊಗ ಕಟ್ಟುವ' ಆಚರಣೆಯು ನಡೆಯುತ್ತದೆ. ಕೊಡವರು ಕುದ್‌ರೆ ಕೆಟ್ಟುವ ಆಚರಣೆಯನ್ನು ನಡೆಸಿದರೆ; ಮೊಗ ಕಟ್ಟುವ ಕ್ರಿಯೆಯನ್ನು ಪಣಿಕರು ನಡೆಸುತ್ತಾರೆ. ಈ ಎರಡೂ ವಿಧಿಗಳೂ ಏಕಕಾಲದಲ್ಲಿ ಜರುಗುತ್ತವೆ. ಬೆತ್ತದಿಂದ ತಯಾರಿಸಲ್ಪಟ್ಟ ಕುದುರೆಯ ಪ್ರತಿಕೃತಿಗೆ ಕುದ್‌ರೆಪಟ್ಟ್ ಎಂಬ ಕೆಂಪು ವಸ್ತ್ರವನ್ನು ಹೊದಿಸುತ್ತಾರೆ. ಅಡಿಕೆಯ ಹಾಳೆಯಿಂದ ಕುದುರೆಯ ಕಿವಿ, ನಾಲಿಗೆಯನ್ನು ತಯಾರಿಸಿ ಜೋಡಿಸಲಾಗುತ್ತದೆ. ನಿರ್ದಿಷ್ಟ ಕುಟುಂಬದ ವ್ಯಕ್ತಿ ಮೊದಲೇ ಪ್ರಾರ್ಥಿಸಿಕೊಂಡಂತೆ ಈ ಕುದುರೆಯನ್ನು ಹೊತ್ತು ಸಾಗುತ್ತಾನೆ. ಇದೇ ಸಂದರ್ಭದಲ್ಲಿ ಪಣಿಕ ಸಮುದಾಯದವರು ಭದ್ರಕಾಳಿ ದೇವಿಯ ಮೊಗವನ್ನು ಕಟ್ಟುತ್ತಾರೆ. ಸ್ಥಳೀಯ ಜನರು ಇವರನ್ನು 'ಬೇಲೆಕಾರರು'/ 'ತೆರೆಕಾರರು' ಎಂದು ಕರೆಯುತ್ತಾರೆ.

ಊರಿನ ತಕ್ಕಮುಖ್ಯಸ್ಥರ ಮನೆಗಳಲ್ಲಿ ಈ ಆಚರಣೆ ನಡೆಯುತ್ತದೆ. ನಿರ್ದಿಷ್ಟ ಮನೆಗಳಿಂದ ಒಂದೊಂದು ಮೊಗ ಹಾಗೂ ಕುದುರೆಯನ್ನು ಕಟ್ಟಿ ಸಿಂಗರಿಸಿ ಸಜ್ಜುಗೊಳಿಸಲಾಗುತ್ತದೆ. ಮಿಂದು ಶುಚೀರ್ಭೂತನಾಗಿ ಕೆಂಪು ಬಣ್ಣದ ಪಂಚೆ, ತಲೆಗೆ ಕೆಂಪು ಬಣ್ಣದ ವಸ್ತ್ರವನ್ನು ಸುತ್ತಿ ಬೇಲೆಕಾರ ಸಿದ್ಧನಾಗುತ್ತಾನೆ. ಐನ್‌ಮನೆಯ ನೆಲ್ಲಕ್ಕಿ ನಡುಬಾಡೆಯಲ್ಲಿ ಮೊಗದ ನಿರ್ಮಾಣ ಕಾರ್ಯದಲ್ಲಿ ತೊಡಗುತ್ತಾನೆ. 'ಮೊಗ' ಎಂಬುದು ಬೆತ್ತದಿಂದ ತಯಾರಿಸಲ್ಪಟ್ಟ ತ್ರಿಕೋನಾಕಾರದ ಪ್ರತಿಕೃತಿ. ಕೆಲವು ಗ್ರಾಮಗಳಲ್ಲಿ ಮೊಗವನ್ನು ಹೊಸದಾಗಿ ನಿರ್ಮಿಸಿದರೆ; ಕೆಲವೆಡೆಗಳಲ್ಲಿ ಹಲವು ವರ್ಷಗಳಿಂದ ಬಳಸಲಾದ ಮೊಗವನ್ನೇ ಬಳಸುತ್ತಾರೆ. ಮೊದಲು ಕೆಂಪು ಬಣ್ಣದ ಬಟ್ಟೆಯನ್ನು ಮೊಗಕ್ಕೆ ಹೊದಿಸಲಾಗುತ್ತದೆ. ಪಾಂಬಾಳೆಯ ಚಿಗುರೆಲೆಗಳನ್ನು ವಿವಿಧ ಆಕಾರಗಳಲ್ಲಿ ಕತ್ತರಿಸಿ ಅಲಂಕರಿಸಲಾಗುತ್ತದೆ. ಅದರ ಮೇಲ್ಭಾಗಕ್ಕೆ ವಿವಿಧ ಹೂವುಗಳನ್ನು ಇರಿಸಿ ಸಿಂಗರಿಸಲಾಗುತ್ತದೆ. ಹೀಗೆ ಸಿದ್ಧಗೊಳಿಸಲಾದ ಮೊಗವು ಪುಟ್ಟ ತೆರೆಮುಡಿಯಂತೆ ಕಾಣುತ್ತದೆ.

ಕೊಡಗಿನ ತೆರೆಕಟ್ಟುವ ಆಚರಣೆಯೊಂದಿಗೆ 'ತಿರುವಳ ಬಪ್ಪೊ'(ದೈವಾವೇಶ ಉಂಟಾಗುವುದು) ಪದ್ಧತಿಯು ನಿಕಟ ಸಂಬಂಧವನ್ನು ಹೊಂದಿದೆ. ವ್ಯಕ್ತಿಯೊಬ್ಬನ ಮೇಲೆ ದೈವ ಆವಾಹನೆಯಾಗುವುದನ್ನು ತಿರುವಳ ಬಪ್ಪೊ ಅಥವಾ ದೇವರು ಬರುವುದು ಎನ್ನುತ್ತಾರೆ. ಗ್ರಾಮದೇವತೆಗಳ ವಾರ್ಷಿಕ ಹಬ್ಬ ಹಾಗೂ ತೆರೆಕಟ್ಟುವ ಆಚರಣೆಯ ಸಂದರ್ಭಗಳಲ್ಲಿ ಕುಟುಂಬದ ಐನ್‌ಮನೆ ಮತ್ತು ದೇವಸ್ಥಾನಗಳಲ್ಲಿ ನಿರ್ದಿಷ್ಟ ವ್ಯಕ್ತಿಗಳ ಮೈಮೇಲೆ ದೈವಗಳು ಆವಾಹನೆಯಾಗುತ್ತವೆ. ಭಗವತಿ(ಪೊವ್ವದಿ), ಅಯ್ಯಪ್ಪ, ಸಾರ್ತಾವು, ಈಶ್ವರ, ಭದ್ರಕಾಳಿ, ಅಜ್ಜಪ್ಪ ಹಾಗೂ ಒಕ್ಕದ ಕಾರೋಣ ನಿರ್ದಿಷ್ಟ ವ್ಯಕ್ತಿಗಳ ಮೇಲೆ ಮೈತುಂಬಿ ಬರುತ್ತವೆ. ಈ ದೈವಗಳ ಪಾತ್ರಿಗಳನ್ನು ತಿರುವಳಕಾರ, ತಿರೋಳಕಾರ, ದೇವಬಪ್ಪವು, ತೋರಕಾರ ಎಂದು ಕರೆಯಲಾಗುತ್ತದೆ.

ಆಯಾಯ ಸಂದರ್ಭಗಳಲ್ಲಿ ಇವರು ಶುದ್ಧಮುದ್ರಿಕೆಯಲ್ಲಿದ್ದು ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ವಿಶೇಷ ಸಂದರ್ಭಗಳಲ್ಲಿ ದೇವಾಲಯ ಅಥವಾ ಐನ್‌ಮನೆಗಳಲ್ಲಿ ಕೊಡವ ಸಾಂಪ್ರದಾಯಿಕ ಉಡುಪು ಕುಪ್ಯಚೇಲೆ ಅಥವಾ ಕೆಂಪು ಪಂಚೆಯನ್ನು ಧರಿಸಿ ನಿಂತಿರುತ್ತಾರೆ. ದೇವರ ಪೂಜೆ ಹಾಗೂ ತೆರೆಕಟ್ಟುವ ಸಮಯದಲ್ಲಿ ದೈವಾವೇಶಕ್ಕೆ ಒಳಗಾಗುತ್ತಾರೆ. ಗಂಟೆ, ಜಾಗಟೆ, ಚಂಡೆಯ ನಾದ ತಿರುವಳ ಬರುವುದಕ್ಕೆ ಪೂರಕವಾಗಿರುತ್ತದೆ. ಜನರು ತಿರುವಳಕಾರರನ್ನು ದೇವರಂತೆ ಕಾಣುತ್ತಾರೆ. ತಮ್ಮ ಸಮಸ್ಯೆಗಳನ್ನು ಹೇಳಿಕೊಳ್ಳುತ್ತಾರೆ. ಆಶೀರ್ವಾದ ಪಡೆದುಕೊಳ್ಳುತ್ತಾರೆ. ಕೆಲವು ಕುಟುಂಬಗಳು ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ತಿರೋಳಕಾರರನ್ನು ಮನೆಗೆ ಆಹ್ವಾನಿಸುತ್ತಾರೆ. ಅಲ್ಲಿ ಆತನಿಗೆ

ದೈವಾವೇಶವಾಗಿ ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಾನೆ. ಇದನ್ನು 'ದೇವನಿಪ್ಪ್‌ಚಿಡುವೊ'(ದೇವರು ನಿಲ್ಲಿಸುವುದು) ಎನ್ನುತ್ತಾರೆ.

ಭದ್ರಕಾಳಿ ಮೊಗದ ಅಲಂಕಾರ ಪೂರ್ಣಗೊಳ್ಳುತ್ತಿದ್ದಂತೆಯೇ ತಕ್ಕ ಮುಖ್ಯಸ್ಥರ ಒಕ್ಕದ ಕಾರೋಣ ತಿರೋಳಕಾರನ ಮೈಮೇಲೆ ಆವಾಹನೆಯಾಗುತ್ತದೆ. ಮತ್ತೊಬ್ಬನ ತಿರೋಳಕಾರನ ಮೇಲೆ ಭದ್ರಕಾಳಿ ದೇವಿ ಆವಾಹನೆಯಾಗುತ್ತಾಳೆ. ತಿರುವಳಕಾರರು ಬೇಲೆಕಾರನಿಗೆ ನಿರ್ದೇಶನ ನೀಡುತ್ತಾರೆ. ಅಲಂಕೃತ ಮೊಗವನ್ನು ಕಾರೋಣ ಆವೇಶಗೊಂಡ ತಿರುವಳಕಾರನೇ ಎತ್ತಿ ಬೇಲೆಕಾರನ ತಲೆಯ ಮೇಲಿರಿಸುತ್ತಾನೆ. ಕುದುರೆ ಹಾಗು ಮೊಗವನ್ನು ಹೊತ್ತವರು, ತಿರುವಳಕಾರರು ಹಾಗೂ ವಿವಿಧ ವೇಷಧಾರಿಗಳು ಕೊಡವ ಸಾಂಪ್ರದಾಯಿಕ ಕೊಂಬುಕೊಟ್ಟ್ ವಾಲಗ(ವಾದ್ಯ) ಮತ್ತು ದೋಳ್‌ಪಾಟ್‌ನ ಹಿಮ್ಮೇಳಕ್ಕೆ ಅನುಗುಣವಾಗಿ ನರ್ತಿಸುತ್ತಾರೆ. ಭದ್ರಕಾಳಿ ದೇವಾಲಯದ ಸಮೀಪವಿರುವ ಅಂಬಲ (ಊರಿನ ಸಭೆ, ನ್ಯಾಯ ತೀರ್ಮಾನ, ಹಾಡು, ಕುಣಿತಗಳಿಗೆ ನಿಗಧಿಯಾದ ಪುಟ್ಟ ಕಟ್ಟಡ)ಕ್ಕೆ ಎಲ್ಲರೂ ತೆರಳುತ್ತಾರೆ. ಅಲ್ಲಿ ಎರಡೂ ಕಡೆಯಿಂದ ಆಗಮಿಸಿದ ಕುದುರೆ ಹಾಗು ಮೊಗ ಮುಖಾಮುಖಿ ಆಗುತ್ತಿದ್ದಂತೆ ಊರಿನವರು ಪರಸ್ಪರ ಆಲಂಗಿಸಿಕೊಂಡು ಕೊಂಬುಕೊಟ್ಟ್ ವಾಲಗಕ್ಕೆ ಸರಿಯಾಗಿ ಹೆಜ್ಜೆಹಾಕುತ್ತಾರೆ. ನಂತರ ಅಂಬಲದ ಸಮೀಪವಿರುವ ದೇವರಕೆರೆಯಿಂದ ಕೆಸರನ್ನು ತಂದು ಪರಸ್ಪರ ಬಳಿದುಕೊಂಡು ಎರಚಾಡುತ್ತ ಸಂಭ್ರಮಿಸುತ್ತಾರೆ. ಹೆಂಗಸರು ಪರ ಊರಿನವರು ಹಾಗು ನೆಂಟರಿಗೆ ಕೆಸರು ಎರಚುವುದು ನಿಷಿದ್ಧವಾಗಿರುತ್ತದೆ. ಅವರು ಮುಕ್ತವಾಗಿ ಕುಣಿಯಲು ಗುರುತಿಗಾಗಿ ಒಂದೊಂದು ಬೆತ್ತದ ಕೋಲುಗಳನ್ನು ನೀಡಲಾಗುತ್ತದೆ. ತಿರುವಳಕಾರರೂ ಊರಿನವರೊಂದಿಗೆ ಕುಣಿಯುತ್ತಾರೆ. ಅನಂತರ ಊರಿನ ಭದ್ರಕಾಳಿ ದೇವಸ್ಥಾನಕ್ಕೆ ಹೋಗಿ ಅಲ್ಲಿ ಮೂರು ಸುತ್ತು ಕುಣಿಯುತ್ತಾರೆ. ಹರಕೆ ಕಾಣಿಕೆಗಳನ್ನು ಹಾಕುವ ಮೂಲಕ ಆಚರಣೆಯು ಸಂಪನ್ನಗೊಳ್ಳುತ್ತದೆ.

**೩.೧.೧.೧೦ ನುಚ್ಚುಟೆ ತೆರೆ**

**ಅರ್ಥ :**

ನುಚ್ಚುಟೆ ಸ್ತ್ರೀ ದೈವ. ಈಕೆಯನ್ನು ನುಚ್ಚುಟ್ಟಿ, ನುಚ್ಚುಟ್ಟಮ್ಮ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಈಕೆ ಪತ್ತ್‌ಕೂಟ್ ಮೂರ್ತಿ ಅಥವಾ ಪತ್ತ್‌ಕೂಟ್ ಪಾತಾಳಮೂರ್ತಿ(ತೋತ, ಚಾಮುಂಡಿ(ಚೌಂಡಿ), ನುಚ್ಚುಟೆ, ಭೈರವ, ಮಂದಣಮೂರ್ತಿ, ಕರಿಬಾಳ(ಕರಪಾಳೆ/ ಕಾರುವಲ), ಕುಟ್ಟಿಚಾತ, ಪೊಟ್ಟಕುಳಿಯ, ವಿಷ್ಣುಮೂರ್ತಿ, ಈತ್‌ಕುಳಿಯ)ಗಳ ಪರಿವಾರದವಳು. ಹಾಗಾಗಿ ಈಕೆಯನ್ನು ಪರಿವಾರ ದೈವ ಎನ್ನುತ್ತಾರೆ. ಜನಪದರ ಪ್ರಕಾರ ಈಕೆ ಪಾರ್ವತಿಯ ಅಂಶದವಳು. ಮಲೆಯಾಳದಿಂದ ಕೊಡಗಿಗೆ ವೃದ್ಧ ಸೇವಕಿಯ ರೂಪದಲ್ಲಿ ಬಂದವಳು ಎಂಬ

ಪ್ರತೀತಿ ಇದೆ.

**ಬಣ್ಣಗಾರಿಕೆ ಹಾಗೂ ವೇಷಭೂಷಣಗಳು :**



ನುಚ್ಚುಟೆ ತೆರೆಯನ್ನು ಕಟ್ಟುವವರು ಮಲಿಯರು ಮತ್ತು ಪಣಿಕರು. ಐನ್‌ಮನೆಯ ಹಾಗೂ ದೇವಸ್ಥಾನದ ಒಳ ಆವರಣದಲ್ಲಿ ಕಟ್ಟುತ್ತಾರೆ. ಬಣ್ಣಗಾರಿಕೆಯಲ್ಲಿ ಕೆಂಪು ಬಣ್ಣವನ್ನು ಪ್ರಧಾನವಾಗಿ ಬಳಸುತ್ತಾರೆ. ಕೆನ್ನೆ, ಮೂಗಿನ ಮೇಲ್ಭಾಗ ಹಾಗೂ ನೆತ್ತಿಯ ಮೇಲೆ ಹಳದಿ ಬಣ್ಣವನ್ನು ಬಳಸಿ ವಿವಿಧ ಮುದ್ರೆಗಳನ್ನು ಬಿಡಿಸುತ್ತಾರೆ. ನುಚ್ಚುಟೆ ತೆರೆಯ ವೇಷ ಉಳಿದ ತೆರೆಗಳಿಗಿಂತ ಭಿನ್ನವಾಗಿರುತ್ತದೆ. ಮಲಿಯರು ಕಟ್ಟುವ ನುಚ್ಚುಟೆ ತೆರೆಯಲ್ಲಿ ಕೆಂಪು ವರ್ಣದ ಉಡುಪನ್ನು ಧರಿಸಲಾಗುತ್ತದೆ. ಆದರೆ ಪಣಿಕರು ಬಿಳಿಯ ವರ್ಣದ ಪಂಚೆಯನ್ನು ಕಟ್ಟಿಕೊಳ್ಳುತ್ತಾರೆ.

ತೆರೆಕಾರನು ಕೆಂಪು ಬಣ್ಣದ ಅಂಗಿ ಮತ್ತು ಷರಾಯಿಯನ್ನು ಧರಿಸುತ್ತಾನೆ. ಆತನ ಸಹಾಯಕರು ಸೊಂಟಕ್ಕೆ ಚೇಲೆ ಎಂಬ ಕೆಂಪು ಬಣ್ಣದ ವಸ್ತ್ರವನ್ನು ಸುತ್ತುತ್ತಾರೆ. ಅದರ ಮೇಲ್ಭಾಗಕ್ಕೆ ಕನ್ನಿಬಳೆ ಎಂಬ ವೃತ್ತಾಕಾರದ ಬಿದಿರಿನ ಚಕ್ರವನ್ನು ಹಾಕುತ್ತಾರೆ. ಕೋಲ್‌ಂಗೈರ್(ಕೋಲು ಮತ್ತು ಹಗ್ಗ)ನಿಂದ ಸೊಂಟಕ್ಕೆ ಬಿಗಿದು ಕಟ್ಟುತ್ತಾರೆ. ಕನ್ನಿಬಳೆಯನ್ನು ಮುಚ್ಚಲು ಅಡಕ್ ಎಂಬ ಮರದ ಹಲಗೆ ಇರುತ್ತದೆ. ಅದರ ಮೇಲೆ ನೆರಿಗೆ ಇರುವ ಲಂಗದಂತಹ ಉಡುಪು 'ಚೆರು ಬೊಳಂಬ' ಧರಿಸುತ್ತಾನೆ. ಕೆಂಪು ಬಣ್ಣದ ಈ ಉಡುಪಿನ ಕೆಳಭಾಗಕ್ಕೆ ಕಪ್ಪು ಮತ್ತು ಬಿಳಿಯ ಪಟ್ಟಿಗಳಿರುತ್ತವೆ. ಎದೆ ಹಾಗೂ ಬೆನ್ನಿನ ಭಾಗವನ್ನು ಹಾಗೆಯೇ ಬಿಡಲಾಗುತ್ತದೆ. ತೋಳುಗಳಿಗೆ ಜೂಲು ಜೂಲಾಗಿರುವ ಕೆಂಪು ವರ್ಣದ ಬಟ್ಟೆಯ ತೋಳುಗಳನ್ನು ಧರಿಸಲಾಗುತ್ತದೆ. ತೋಳಿನ ಮುಂಭಾಗಕ್ಕೆ 'ತಂಡೆಬಳೆ'(ಮರದ ಬಳೆ), ಅದರ ಮುಂಭಾಗಕ್ಕೆ 'ಬಿದಿರ್'(ಕಲಾತ್ಮಕ ಬಳೆ), ಮುಂಗೈಗೆ 'ಚೂಡಗ'(ಕಂಚಿನ ಕಲಾತ್ಮಕ ಕಡಗ) ಇರುತ್ತದೆ. ಕುತ್ತಿಗೆಯಲ್ಲಿ 'ಕಯತ್‌ಕಟ್ಟ್' ಎಂಬ ಮರದ ಪದಕ ಇರುತ್ತದೆ. ಕಿವಿಗೆ ವಾಲೆಕಾದ್ ಎಂಬ ಓಲೆ ಹಾಗೂ ಕೊಂಬೋಲೆ ಕಾದ್ ಎಂಬ ದೊಡ್ಡ ಕರ್ಣಾಭರಣವಿರುತ್ತದೆ. ನೆತ್ತಿಯ ಮೇಲ್ಭಾಗಕ್ಕೆ 'ನೆತ್ತಿಪಟ್ಟ್' ಅದರ ಮೇಲೆ 'ತಲೆಪೂ'ವನ್ನು ಧರಿಸಲಾಗುತ್ತದೆ. ತೆಂಗಿನ ಗರಿಗಳನ್ನು ಸಣ್ಣ ಎಳೆಗಳಾಗಿ ಸೀಳಿ

ದಾರದಲ್ಲಿ ಪೋಣಿಸಿ ತಲೆಯ ಸುತ್ತ ಕಟ್ಟುತ್ತಾರೆ. ಇದು ಮುಖ ಹಾಗೂ ಎದೆಯ ಭಾಗವನ್ನು ಮುಚ್ಚುವಂತಿರುತ್ತದೆ.

**ಕುಣಿತ ಮತ್ತು ಮಾತುಕತೆ :**

ಟ್‌ರ್ರ್..... ಎಂದು ಶಬ್ದ ಮಾಡುತ್ತಾ ಐನ್‌ಮನೆಯ ಮುಂದ್‌ನ ಸುತ್ತಲೂ ನುಚ್ಚುಟೆ ತೆರೆಯು ಕುಣಿಯುತ್ತದೆ. ಸ್ವಲ್ಪ ಹೊತ್ತು ಕುಣಿದ ನಂತರ ಸೇರಿರುವ ಜನರ ಬಳಿ ಹೋಗಿ "ನಾನು ಅಜ್ಜಿ ಮಲೆಯಾಳದಿಂದ ಬಂದಿದ್ದೇನೆ ಬನ್ನಿ" ಎನ್ನುತ್ತದೆ. ಪುರುಷರನ್ನು ಬರಸೆಳೆದು ಅಪ್ಪಿಕೊಳ್ಳುತ್ತದೆ. ಸೊಂಟಕ್ಕೆ ಕಟ್ಟಿರುವ 'ಓಲಿ'ಯಿಂದ ಒಂದು ಗರಿಯನ್ನು ಎಳೆದು ಅವರ ಕೈಗೆ ಕಟ್ಟುತ್ತದೆ. "ನನಗೆ ವಯಸ್ಸಾಗಿದೆ. ಕೇರಳದಲ್ಲಿರುವ ಕಾಳೆಗಾಟಿಗೆ ದೋಣಿಯಲ್ಲಿ ಹೋಗಬೇಕು. ಹಣ ಕೊಡಿ" ಎಂದು ಹಣವನ್ನು ಪಡೆದುಕೊಳ್ಳುತ್ತದೆ. ಎಲ್ಲರೊಂದಿಗೆ ವಿನೋದವಾಗಿ ವರ್ತಿಸುತ್ತಾ ಕುಣಿಯುತ್ತದೆ. ಹೀಗೆ ನುಚ್ಚುಟೆ ತೆರೆಯಲ್ಲಿ ಭಕ್ತಿಗಿಂತ ಹೆಚ್ಚಾಗಿ ವಿನೋದಭಾವವೇ ಪ್ರಧಾನವಾಗಿದೆ.

**೫.೧.೧.೧೧ ಕಾಳಿ ಪೊಲ್‌ತಿ ತೆರೆ**

**ಅರ್ಥ :**

ಕಾಳಿಪೊಲ್‌ತಿ ಮಲೆಯಾಳದಿಂದ ಕೊಡಗಿಗೆ ಬಂದ ತಳ ಸಮುದಾಯದ ವೃದ್ಧೆ. ಪಾರ್ವತಿಯ ಅಂಶದವಳು. ಈಕೆಯು ನುಚ್ಚುಟೆ ದೇವಿಯ ಇನ್ನೊಂದು ರೂಪ ಎಂಬ ನಂಬಿಕೆ ಜನಪದರಲ್ಲಿದೆ.

**ಆಚರಣೆ ಮತ್ತು ವೇಷಭೂಷಣಗಳು:**

ಕಾಳಿಪೊಲ್‌ತಿ ತೆರೆಯ ಆಚರಣೆಯು ಕುಟುಂಬದ ಐನ್‌ಮನೆಯ ನೆಲ್ಲಕ್ಕಿ ನಡುಬಾಡೆಯಲ್ಲಿ ನಡೆಯುತ್ತದೆ. ಈ ದೇವಿಯು ಪರಿವಾರ ದೈವವಾದುದರಿಂದ ಬಣ್ಣಗಾರಿಕೆ ಮತ್ತು ವಿಧಿವಿಧಾನಗಳು ಸರಳವಾಗಿರುತ್ತವೆ. ಕೆಲವೊಮ್ಮೆ ಪ್ರಮುಖ ದೈವದ ಬಣ್ಣಗಾರಿಕೆಯಲ್ಲೇ ಆಚರಣೆ ನಡೆಯುತ್ತದೆ. ತೆರೆಕಾರನು ಮುಖ, ಹಣೆ, ತೋಳು ಹಾಗೂ ಮುಂಗೈಗೆ ಗಂಧ ಮತ್ತು ಕುಂಕುಮದ ಬೊಟ್ಟು ಹಾಗೂ ಅಡ್ಡನಾಮಗಳನ್ನು ಹಾಕುತ್ತಾನೆ. ಬಿಳಿಯ ಬಣ್ಣದ ಸೀರೆ ಮತ್ತು ಉದ್ದ ತೋಳಿನ ರವಿಕೆ ಕಾಳಿಪೊಲ್‌ತಿ ತೆರೆಯ ವೇಷದಲ್ಲಿ ಪ್ರಮುಖವಾಗಿರುತ್ತದೆ. ತೆರೆಕಟ್ಟುವವನಿಗೆ ಸಹಾಯಕರು ಸಾಂಪ್ರದಾಯಿಕ ಕೊಡವ ಸೀರೆಯನ್ನು ಉಡಿಸುತ್ತಾರೆ. ತಲೆಗೆ ಬಿಳಿ ಬಣ್ಣದ ಚೌಕಳಿ ವಸ್ತ್ರವನ್ನು ಕಟ್ಟುತ್ತಾರೆ. ದೇವಿಯನ್ನು ಪ್ರಾರ್ಥಿಸಿ ಅಕ್ಕಿಹಾಕಿ ಹಣೆಗೆ ನೆತ್ತಿಪಟ್ಟಿಯನ್ನು ಕಟ್ಟಲಾಗುತ್ತದೆ. ತೆರೆಕಾರನು ಕಿವಿಗೆ ಚೆನ್ನೆರ್‌ಲ್ ಎಂಬ ಓಲೆ ಧರಿಸುತ್ತಾನೆ. ಅದರ ಕೆಳಭಾಗಕ್ಕೆ ಕೊಂಬೋಲೆ ಕಾದ್ ಎಂಬ ಕರ್ಣಾಭರಣವಿರುತ್ತದೆ. ಕೈಗೆ ಕೈಪೂ ಮತ್ತು ಜೂಡಗವನ್ನು ಧರಿಸುತ್ತಾನೆ. ತೆರೆಕಾರನ ಎಡಗೈಯಲ್ಲಿ ಬತ್ತ ತುಂಬಿರುವ ಚೌಕಾಕೃತಿಯ ಬಿದಿರಿನ ಬುಟ್ಟಿ ಇರುತ್ತದೆ.

ಇದನ್ನು 'ಕೆರ್ಂಜಿ' ಎಂದು ಕರೆಯುತ್ತಾರೆ. ಕೆಲವು ತೆರೆಗಳಲ್ಲಿ ಮೊರವನ್ನು ಬಳಸುವ ವಾಡಿಕೆಯಿದೆ. ಬಲಗೈಯಲ್ಲಿ ಕುಡುಗೋಲು ಇರುತ್ತದೆ.

**ಕುಣಿತ ಮತ್ತು ಮಾತುಕತೆ :**

ಕಾಳಿಪೊಲ್ತಿ ತೆರೆಯ ಕುಣಿತಕ್ಕೆ ಮದ್ದಳೆಯು ಹಿಮ್ಮೇಳವಿರುತ್ತದೆ. ಹಾಡುಗಾರರು ಮದ್ದಳೆಯನ್ನು ಬಾರಿಸುತ್ತಾ ತೆರೆಹಾಡನ್ನು ಹಾಡಲಾರಂಭಿಸುತ್ತಾರೆ. ತೆರೆಕಾರನು ಬಿದಿರಿನ ಬುಟ್ಟಿಯನ್ನು ನೆಲ್ಲಕ್ಕಿ ನಡುಬಾಡೆಯಲ್ಲಿ ಇಟ್ಟು ಒನಕೆಯಿಂದ ಬತ್ತವನ್ನು ಕುಟ್ಟುತ್ತಾ ಕುಣಿಯತೊಡಗುತ್ತಾನೆ. ಈ ಸಂದರ್ಭದಲ್ಲಿ ಒಕ್ಕದವರು ಅನ್ನ ಮತ್ತು ಕೋಳಿಸಾರಿನ ಬುತ್ತಿಯನ್ನು ಬಾಳೆಲೆಯಲ್ಲಿ ಕಟ್ಟಿ ಕಾಳಿಪೊಲ್ತಿ ತೆರೆಗೆ ನೀಡುತ್ತಾರೆ. ಇದನ್ನು 'ಕೂಪೊದಿ' ಎಂದು ಕರೆಯುತ್ತಾರೆ. ತೆರೆಯು ಇದನ್ನು ತೆಗೆದುಕೊಂಡು ಪಡಸಾಲೆಗೆ ಹೋಗುತ್ತದೆ. ಅಲ್ಲಿನ ಮೆಟ್ಟಿಲಿನಲ್ಲಿ ಕುಳಿತುಕೊಂಡು ಕುಟುಂಬದವರೆಲ್ಲರನ್ನು ಹತ್ತಿರ ಕರೆಯುತ್ತದೆ. ಅವರೊಂದಿಗೆ ಮಾತನಾಡುತ್ತಾ ಬುತ್ತಿಯಲ್ಲಿರುವ ಊಟವನ್ನು ಹಂಚಿ ಅಂಗಳಕ್ಕೆ ತೆರಳುತ್ತದೆ.

ಮರಳಿ ಬಂದು ನೆಲ್ಲಕ್ಕಿ ನಡುಬಾಡೆಯು ಹೊಸ್ತಿಲಲ್ಲಿ ನಿಂತುಕೊಂಡು "ಪಣಿಕ ರಾಮ ಗ್ಣಿಕ ರಾಮ ತಟ್ಟ್ ಮುಟ್ಟ್. ಕಟ್ಪೋಳೆ ದಾಟಿ ಕಡ್‌ಕೊಂಡುವಾ? ಕೋಳಿ ಕರಿಕ್ ಮಳು ಏರಿ ಪೋಚಿ, ತೊಪ್ಪು ಕರಿಕ್ ಉಪ್ಪೇರಿ ಪೋಚಿ." ಅರ್ಥಾತ್ ಪಣಿಕ ರಾಮನೇ ಅಶುದ್ಧಳಾಗಿದ್ದೇನೆ. ಹೊಸ್ತಿಲನ್ನು ದಾಟಿ ಬರಬೇಕೆ? ಕೋಳಿಸಾರಿಗೆ ಮೆಣಸು ಜಾಸ್ತಿಯಾಗಿತ್ತು. ಸೊಪ್ಪು ಸಾರಿಗೆ ಉಪ್ಪು ಜಾಸ್ತಿ. ಏನು ಮಾಡಲಿ? ಎಂದು ತನ್ನ ಸಹಾಯಕರನ್ನು ಪ್ರಶ್ನಿಸುತ್ತದೆ. ಆಗ ಅವರು ಹೀಗೆ ಉತ್ತರಿಸುತ್ತಾರೆ. "ದಮ್ಮಯ್ಯಾ ದಕ್ಕಯ್ಯಾ ಕಾಲ್ ಪುಡಿಪಿ. ಕಾಕಡಿ ನುಗ್ಗುವಿ. ತಟ್ಟತೆ ಮುಟ್ಟತೆ ದಾಟೊಂಡು." ಅಂದರೆ ದಮ್ಮಯ್ಯಾ ನಿನ್ನ ಕಾಲು ಹಿಡಿಯುತ್ತೇವೆ. ಕಾಲಡಿಗಾಗಿ ನುಗ್ಗುತ್ತೇವೆ. ದಯವಿಟ್ಟು ಯಾರನ್ನೂ ಮುಟ್ಟಿಸಿಕೊಳ್ಳದೆ ದಾಟಬೇಕು ಎಂದು ಬೇಡುತ್ತಾರೆ. ಹೀಗೆ ಕಾಡಿ ಬೇಡಿದ ನಂತರ ಕಾಳಿ ಪೊಲ್ತಿ ದೇವಿಯು ನೆಲ್ಲಕ್ಕಿ ನಡುಬಾಡೆಯ ಬಾಗಿಲಿಗೆ ಹೊಡೆದು ಹೊಸ್ತಿಲು ದಾಟಿ ಒಳಗೆ ಬರುತ್ತದೆ. ಎಲ್ಲರನ್ನು ಆಶೀರ್ವದಿಸುತ್ತದೆ. ಬಲಿ ನೀಡುವ ಸ್ಥಳ 'ಕಡಿಯಕಳ'ದಲ್ಲಿ ಕೋಳಿಯನ್ನು ಬಲಿ ನೀಡಿದ ನಂತರ ತೆರೆಯು ಮುಕ್ತಾಯವಾಗುತ್ತದೆ. ಕಾಳಿಪೊಲ್ತಿ ತೆರೆ ಆಚರಣೆಯನ್ನು ಗಮನಿಸಿದಾಗ ಇದೊಂದು ಕೃಷಿ ಸಂಬಂಧಿ ಆಚರಣೆಯಾಗಿದೆ. ಅದರೊಂದಿಗೆ ಇಲ್ಲಿ ನಡೆಯುವ ಸಂಭಾಷಣೆಗಳನ್ನು ಗಮನಿಸಿದಾಗ ಇದು ತಳ ಸಮುದಾಯದ ಹೆಣ್ಣಿನ ಪ್ರತಿಭಟನೆಯ ರೂಪಕದಂತೆಯೂ ಕಾಣಿಸುತ್ತದೆ.

**೫.೧.೧.೧೨ ಚೊಡಲ್‌ಚಿ(ಕಾರೋಣಚಿ) ತೆರೆ**

**ಅರ್ಥ :**

ಚೊಡಲ್‌ಚಿ ಎಂದರೆ ಕುಟುಂಬದ ಮೂಲ ಮಹಿಳೆ ಎಂದರ್ಥ.



ಕೊಡಗಿನ ಕೆಲವು ಕೊಡವ ಒಕ್ಕಗಳಲ್ಲಿ ಚೊಡಲ್‌ಚಿಯುನ್ನು ಆರಾಧಿಸುವ ಸಂಪ್ರದಾಯುವಿದೆ. ಚೊಡಲ್‌ಚಿಗೆ ಕಾರೋಣಚಿ, ತಾಯಿ, ಮೂಲತಾಯಿ, ಸೊಡಲ್‌ಚಿ ಎಂಬ ಹೆಸರುಗಳೂ ಇವೆ. ಹಲಸಿನ ಮರದಡಿಯಲ್ಲಿ ಚೊಡಲ್‌ಚಿಯ ನೆಲೆ ಇರುತ್ತದೆ. ಕೆಲವು ಒಕ್ಕಗಳಲ್ಲಿ ವಾರ್ಷಿಕವಾಗಿ ಚೊಡಲ್‌ಚಿಗೆ ಕೋಳಿ ಬಲಿ ನೀಡಲಾಗುತ್ತದೆ. ಕಾರೋಣನಂತೆ ಈಕೆ ಕುಟುಂಬದ ಯಾವುದಾದರು ಸ್ತ್ರೀಯ ಮೇಲೆ ಮೈದುಂಬಿ ಬರುವುದು ವಾಡಿಕೆ. ಕಾರೋಣಚಿಯನ್ನು ಸಂತೃಪ್ತಿ ಪಡಿಸಲು ಕಟ್ಟುವ ತೆರೆಯೇ ಕಾರೋಣಚಿ ತೆರೆ. ಇದನ್ನು ತಾಯಿ ತೆರೆ, ಚೊಡಲ್‌ಚಿ ತೆರೆ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ.

**ಆಚರಣೆ :**

ಚೊಡಲ್‌ಚಿ ತೆರೆಯನ್ನು ಬಣ್ಣ ಮತ್ತು ಪಣಿಕರು ಕಟ್ಟುತ್ತಾರೆ. ಈ ಆಚರಣೆಯು ಕುಟುಂಬದ ಐನ್‌ಮನೆಯಲ್ಲಿ ರಾತ್ರಿಯ ಹೊತ್ತು ನಡೆಯುತ್ತದೆ. ಕುಟುಂಬದ ಮೂಲಮಹಿಳೆಯನ್ನು ಸಂತೃಪ್ತಿಪಡಿಸುವುದು ಈ ಆಚರಣೆಯ ಮೂಲ ಉದ್ದೇಶವಾಗಿದೆ. ಇದರಿಂದ ಕುಟುಂಬದಲ್ಲಿ ಸಂಪತ್ಸಮೃದ್ಧಿಯಾಗುತ್ತದೆ ಎಂಬ ನಂಬಿಕೆ ಜನಪದರಲ್ಲಿದೆ.

**ವೇಷ ಭೂಷಣಗಳು :**

ಕಾರೋಣಚಿ ತೆರೆಯನ್ನು ಕುಟುಂಬದ ಇತರ ದೈವಗಳ ತೆರೆಗಳೊಂದಿಗೆ ಕಟ್ಟುತ್ತಾರೆ. ಆದುದರಿಂದ ಕೆಲವು ಕುಟುಂಬಗಳಲ್ಲಿ ಈ ಹಿಂದೆ ನಡೆದ ತೆರೆಯ ಬಣ್ಣಗಾರಿಕೆಯಲ್ಲೇ ಆಚರಣೆ ನಡೆಯುತ್ತದೆ. ಮುಖವರ್ಣಿಕೆಯಲ್ಲಿ ಹಳದಿಯನ್ನು ತಳಹದಿಯ ಬಣ್ಣವಾಗಿ ಬಳಸುತ್ತಾರೆ. ಕೆಂಪು ಬಣ್ಣದಿಂದ ಹಣೆ ಹಾಗೂ ಕಿವಿಯ ಸಮೀಪ ವಿವಿಧ ರೀತಿಯ ಮುದ್ರೆ ಮತ್ತು ರೇಖೆಗಳನ್ನು ಬಿಡಿಸುತ್ತಾರೆ. ಉಳಿದ ಭಾಗಕ್ಕೆ ಸಂಪೂರ್ಣವಾಗಿ ಹಳದಿ ಬಣ್ಣವನ್ನು ಹಚ್ಚುತ್ತಾರೆ. ತುಟಿಗೆ ಕೆಂಪು ಬಣ್ಣ ಹಾಗೂ ಕಣ್ಣಿಗೆ ಕಾಡಿಗೆಯನ್ನು ಹಚ್ಚುತ್ತಾರೆ. ಬಿಳಿಯ ಬಣ್ಣದ ಸೀರೆ ಮತ್ತು ತುಂಬು ತೋಳಿನ ರವಿಕೆ ಕಾರೋಣಚಿ ತೆರೆಯಲ್ಲಿ ಪ್ರಧಾನವಾದುದು. ತೆರೆಕಾರನಿಗೆ ಕೊಡವ ಶೈಲಿಯ ಸೀರೆಯನ್ನು ಆತನ ಸಹಾಯಕರು ಉಡಿಸುತ್ತಾರೆ. ತಲೆಗೆ ಬಿಳಿ ಬಣ್ಣದ ಚೌಕಳಿ ವಸ್ತ್ರವನ್ನು ಕಟ್ಟುತ್ತಾರೆ. ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿ

ಅದರ ಮೇಲೆ ತಲೆಪೂ ಎಂಬ ಹೂವಿನದಂಡೆ ಇರುತ್ತದೆ. ಕಿವಿಗೆ 'ಚೆನ್ನೆರ್‌ಲ್' ಎಂಬ ಕಿವಿಯೋಲೆ ಧರಿಸುತ್ತಾನೆ. ಅದರ ಅಂಚಿಗೆ 'ಕೊಂಬೋಲೆ ಕಾದ್' ಎಂಬ ಕರ್ಣಾಭರಣವಿರುತ್ತದೆ. ಕೈಗಳಿಗೆ ಕೈಪೂ ಮತ್ತು ಕಂಚಿನ ಚೂಡಗ ಎಂಬ ಕೈಕಡಗವನ್ನು ಧರಿಸುತ್ತಾನೆ. ಮೊಣಕಾಲಿನ ಕೆಳಭಾಗಕ್ಕೆ ಪಟ್ಟಿಮಡ ಹಾಗೂ ಅದರ ಮೇಲ್ಭಾಗಕ್ಕೆ 'ಮಣಿಕೇರ್' ಎಂಬ ಗೆಜ್ಜೆ ಇರುತ್ತದೆ. ಪಾದಗಳ ಮೇಲ್ಭಾಗಕ್ಕೆ ಚಲ್‌ಂಬು ಧರಿಸಲಾಗುತ್ತದೆ. ಚಂಡೆ ಅಥವಾ ಮದ್ದಳೆಯು ಬಡಿತ ಹೆಚ್ಚಾಗುತ್ತಿದ್ದಂತೆಯೇ ತೆರೆಕಾರನ ಮೈಮೇಲೆ ಚೊಡಲ್‌ಚಿ ತಾಯಿಯು ಮೈದುಂಬಿ ಬರುತ್ತಾಳೆ.

**ಕೂಪೊದಿ(ಬುತ್ತಿ) ಆಚರಣೆ ಮತ್ತು ಮಾತುಕತೆ :**

ಚೊಡಲ್‌ಚಿ ತೆರೆಯ ಎಡಗೈಯಲ್ಲಿ 'ಕೆರ್‌ಂಜಿ' ಎಂಬ ಚೌಕಾಕಾರದ ಬಿದಿರಿನ ಬುಟ್ಟಿ ಅಥವಾ ಮೊರ ಇರುತ್ತದೆ. ಅದರೊಳಗೆ ಬತ್ತವನ್ನು ತುಂಬಿಸಿರುತ್ತಾರೆ. ಅದರ ಮೇಲೆ ಬಾಳೆಲೆಯಲ್ಲಿ ಕಟ್ಟಿದ ಅನ್ನ ಮತ್ತು ಕೋಳಿಸಾರಿನ ಬುತ್ತಿಯಿರುತ್ತದೆ. ಬಲಗೈಯಲ್ಲಿ ಕುಡುಗೋಲು ಇರುತ್ತದೆ. ಮೈದುಂಬಿ ಬಂದ ಚೊಡಲ್‌ಚಿ ತಾಯಿಯು ಕೊಡವ ಭಾಷೆಯಲ್ಲಿ ಮಾತನಾಡಲಾರಂಭಿಸುತ್ತಾಳೆ. ಕುಟುಂಬದ ಸದಸ್ಯರನ್ನೆಲ್ಲಾ ಹತ್ತಿರ ಕರೆಯುತ್ತಾಳೆ. ಐನ್‌ಮನೆಯ ಪಡಸಾಲೆಯ ಮುಂದಿನ ಮೆಟ್ಟಿಲಿನಲ್ಲಿ ಕುಳಿತು ತನ್ನ ಸುತ್ತಲೂ ಕುಟುಂಬದ ಸದಸ್ಯರನ್ನು ಕೂರಿಸಿಕೊಂಡು ಮಾತನಾಡಿಸುತ್ತಾಳೆ. ಅವರ ಪ್ರಶ್ನೆಗಳಿಗೆ ಉತ್ತರಿಸುತ್ತಾ ತನ್ನ ಶಕ್ತಿಯನ್ನು ವರ್ಣಿಸುತ್ತಾಳೆ. ಬುತ್ತಿಯನ್ನು ಬಿಚ್ಚಿ ಅದರಲ್ಲಿರುವ ಮಾಂಸದ ತುಂಡುಗಳನ್ನು ಕುಡುಗೋಲಿನ ತುದಿಯಲ್ಲಿ ಚುಚ್ಚಿ ಪ್ರತಿಯೊಬ್ಬರಿಗೂ ನೀಡುತ್ತಾಳೆ. "ತಿನ್ನಿ ಕುಞ್ಞಿಯಳೇ"(ತಿನ್ನಿ ಮಕ್ಕಳೇ) ಎನ್ನುತ್ತಾಳೆ. ತನ್ನ ಮಕ್ಕಳ ಯೋಗಕ್ಷೇಮವನ್ನು ವಿಚಾರಿಸಿ ಎಲ್ಲರೂ ಒಗ್ಗಟ್ಟಿನಿಂದ ಬಾಳುವಂತೆ ಹರಸುತ್ತಾಳೆ. ಒಟ್ಟಿನಲ್ಲಿ ಚೊಡಲ್‌ಚಿ ತಾಯಿಯು ಒಕ್ಕ(ಕುಟುಂಬ)ದ ಹಿರಿಯ ಅಜ್ಜಿಯಂತೆ ತನ್ನ ಮಕ್ಕಳನ್ನು ಹರಸುತ್ತಾಳೆ.

ಹೀಗೆ ಕೊಡಗಿನ ವಿವಿಧ ಗ್ರಾಮಗಳಲ್ಲಿ ಸ್ತ್ರೀದೈವಗಳನ್ನು ಪ್ರಧಾನವಾಗಿ ತೆರೆಕಟ್ಟಿ ಆರಾಧಿಸಲಾಗುತ್ತದೆ. ಆಯಾಯ ಗ್ರಾಮದ, ಕುಟುಂಬದ ದೇವತೆಗಳಾದ ಇವುಗಳು ಮಾತೃ ದೇವತೆಗಳೂ ಹೌದು. ದುಷ್ಟರಿಗೆ ಶಿಕ್ಷೆ ಮತ್ತು ಶಿಷ್ಟರ ಸಂರಕ್ಷಣೆ ಈ ದೇವತೆಗಳ ಪ್ರಮುಖ ಲಕ್ಷಣ. ರಕ್ಷಣೆ ಮತ್ತು ಶಿಕ್ಷೆ ಒಂದೇ ಅಂಶವಾಗಿರುವಂತೆ ಸಮೃದ್ಧಿ ಮತ್ತು ನಾಶವು ಒಂದರ ಭಾಗವಾಗಿರುತ್ತದೆ. ಹಾಗಾಗಿ ಇಲ್ಲಿ ಒಬ್ಬಳೇ ದೇವಿ ವ್ಯತ್ಯಸ್ತ ರೂಪದಲ್ಲಿ ಕಾಣಿಸಿಕೊಳ್ಳುತ್ತಾಳೆ. ಈ ಹಿನ್ನೆಲೆಯಲ್ಲಿ ವಿವಿಧ ರೂಪ ಹಾಗು ಭಾವಗಳಲ್ಲಿರುವ ಮಾತೃದೇವತೆಗಳನ್ನು ತೆರೆ ಆಚರಣೆಯಲ್ಲಿ ಆರಾಧಿಸಲಾಗುತ್ತದೆ. ಒಂದು ಗ್ರಾಮದಲ್ಲಿ ಪುಲಿ ಚೌಂಡಿ, ಭದ್ರಕಾಳಿ ಇತ್ಯಾದಿ

ಉಗ್ರ ಸ್ವರೂಪದ ದೇವತೆಗಳನ್ನು ಆರಾಧಿಸಿದರೆ; ಮತ್ತೊಂದು ಗ್ರಾಮದಲ್ಲಿ ಸೌಮ್ಯ ಸ್ವರೂಪದ ಭಗವತಿ ದೇವಿಯ ಆರಾಧನೆಯನ್ನು ಕಾಣಬಹುದು. ರೂಪ ಹಾಗೂ ಸ್ವಭಾವ ಒಂದೇ ಆದರೂ, ಭಿನ್ನ ಹೆಸರುಗಳನ್ನು ಪಡೆದಿರುವ ಚೌಂಡಿ ಮತ್ತು ಭಗವತಿಯಂತಹ ಸ್ತ್ರೀದೇವತೆಗಳೂ ಪೂಜಿಸಲ್ಪಡುತ್ತವೆ. ಸಾಂಕ್ರಾಮಿಕ ರೋಗಗಳಿಂದ ರಕ್ಷಿಸುವ ಪುದಿಯೋದಿ ದೇವಿಯನ್ನು ತೆರೆಕಟ್ಟಿ ಆರಾಧಿಸಲಾಗುತ್ತದೆ. ಮರಣಾನಂತರ ದೇವತಾ ಸ್ವರೂಪವನ್ನು ಪಡೆದ ನುಚ್ಚುಟೆ, ಕಾಳಿಪೊಲ್‌ತಿ ಇತ್ಯಾದಿ ಸ್ತ್ರೀದೈವಗಳೂ ಇವೆ. ಕುಟುಂಬದ ಮೂಲಮಹಿಳೆ ಕಾರೋಣಚಿ ತೆರೆಯಲ್ಲಿ ಆರಾಧಿಸಲ್ಪಡುತ್ತಾಳೆ.

ತೆರೆಕಟ್ಟುವ ಆಚರಣೆಗಳಲ್ಲಿ ಶಕ್ತಿ, ಚಾಮುಂಡಿ ಕಲ್ಪನೆಗಳು ಮಿಳಿತಗೊಂಡಿವೆ. ಈ ಕಲ್ಪನೆಗಳು ಎರಡು ರೀತಿಯಲ್ಲಿ ಕಂಡುಬರುತ್ತವೆ. ಮೊದಲನೆಯದಾಗಿ ಮೇಲೆ ಉಲ್ಲೇಖಿಸಿದ ದೇವತೆಗಳು ತೆರೆದೈವಗಳಾಗಿ ಅವತರಿಸುತ್ತವೆ. ಉದಾ:- ಶಕ್ತಿಯ ಅವತಾರವಾದ ರಕ್ತಬೀಜಾಸುರ ಸಂಹಾರಿಣಿ ಪುಲಿ ಚೌಂಡಿಯಾಗಿ ಕಾಣಿಸಿಕೊಳ್ಳುತ್ತಾಳೆ. ಚಾಮುಂಡಿಯು ಚೌಂಡಿಯಾಗಿ ಪೂಜಿಸಲ್ಪಡುತ್ತಾಳೆ. ಎರಡನೆಯ ರೀತಿಯಲ್ಲಿ ಶಕ್ತಿ, ಚಾಮುಂಡಿ ಕಲ್ಪನೆಗಳು ಜನಪದ ಐತಿಹ್ಯಗಳನ್ನು ಬೆರೆಸಿಕೊಂಡು ಬಂದಿರುತ್ತವೆ. ನುಚ್ಚುಟೆ ಅಥವಾ ನುಚ್ಚುಟಮ್ಮೆ ಒಬ್ಬ ಸಾಮಾನ್ಯ ಮಹಿಳೆ. ಮರಣಾನಂತರ ಆಕೆ ದೈವವಾಗಿ ಪಾರ್ವತಿಯ ಅಂಶವಾದಳು ಎಂಬ ಪ್ರತೀತಿ ಜನಪದರಲ್ಲಿದೆ.

ಸಮೃದ್ಧಿ ಹಾಗೂ ಫಲವಂತಿಕೆಗಾಗಿ ನಡೆಸುವ ಪೂಜೆಯು ತೆರೆಕಟ್ಟುವ ಆಚರಣೆಯಲ್ಲಿ ಕಂಡುಬರುತ್ತದೆ. ನಿಸರ್ಗದ ಆರಾಧಕರಾಗಿರುವ ಕೊಡಗಿನ ಜನಪದರು ಕೃಷಿಯನ್ನು ಪ್ರಧಾನವಾಗಿ ನಂಬಿರುವವರು. ಇಲ್ಲಿ ಹೆಣ್ಣು ಮತ್ತು ಮಣ್ಣಿನ ಫಲವಂತಿಕೆಯ ಪೂಜೆ ನಡೆಯುತ್ತದೆ. ಈ ಎರಡು ಫಲವಂತಿಕೆಗಳು ಪರಸ್ಪರ ಸಂಬಂಧವನ್ನು ಹೊಂದಿದ್ದು; ಇವುಗಳ ಆಶಯವು ಒಂದೇ ಆಗಿದೆ. ತೆರೆ ಆಚರಣೆಯಲ್ಲಿ ಪೂಜಾದ್ರವ್ಯ ಹಾಗೂ ಪೂಜೆಯ ಪರಿಕರಗಳಾಗಿ ಬತ್ತವು ಬಳಕೆಯಾಗುತ್ತದೆ. ಅಕ್ಕಿಯನ್ನು ಅದರ ನಿಜರೂಪದಲ್ಲಿ, ಆಹಾರ ಪದಾರ್ಥವಾಗಿ ಹಾಗೂ ಸಾಂಕೇತಿಕವಾಗಿಯೂ ಬಳಸಲಾಗುತ್ತದೆ. ಅಕ್ಕಿಯನ್ನು ಗಣೋದಿಯಾಗಿ ಇರಿಸಲಾಗುತ್ತದೆ. ಬಣ್ಣಗಾರಿಕೆ, ಎಣ್ಣೆ ಕೊಡುವುದು, ನೆತ್ತಿಪಟ್ಟ್ ಕಟ್ಟುವುದು, ಚಲ್‌ಂಬು ಧರಿಸುವುದು ಹಾಗೂ ತೆರೆಮುಡಿ ಹೊತ್ತುಕೊಳ್ಳುವ ವಿಧಿಗಳಲ್ಲಿ ಅಕ್ಕಿಯನ್ನು ಅಕ್ಷತೆಯ ರೂಪದಲ್ಲಿ ಎಸೆಯಲಾಗುತ್ತದೆ. ಇದು ಸಮೃದ್ಧಿ ಹಾಗೂ ಫಲವಂತಿಕೆಯ ಪೂಜೆಗೆ ಸಂಬಂಧಿಸಿದ್ದಾಗಿದೆ. ಕುಳಿಯಮೆ ಚೌಂಡಿ, ಪಾಲ್‌ಪಾರ್ ಚೌಂಡಿ ಫಲವಂತಿಕೆಯ ದೇವತೆಗಳಾಗಿವೆ. ಮೂಲದಲ್ಲಿ ಈ ದೇವತೆಗಳು ಫಲವಂತಿಕೆಯ ಸಂಕೇತವಾದ ಹಾಲು ಒಸರುವ ಮರಗಳಡಿಯಲ್ಲಿ ನೆಲೆಸಿದ್ದವು.

ನಂತರದ ದಿನಗಳಲ್ಲಿ ಕೋಟ ಅಥವಾ ಗುಡಿಯ ನಿರ್ಮಾಣವಾಯಿತು. ಹೀಗೆ ವಿಭಿನ್ನ ರೀತಿಯ ಆರಾಧನೆಗಳ ಸಮನ್ವಯತೆಯನ್ನು ಸ್ತ್ರೀದೈವಗಳ ತೆರೆ ಆಚರಣೆಗಳಲ್ಲಿ ಕಾಣಬಹುದಾಗಿದೆ.

**೫.೧.೨ ಪುರುಷ ದೈವಗಳ ತೆರೆಗಳು**

ಪುರುಷ ದೈವಗಳ ಆರಾಧನೆ ಜಗತ್ತಿನೆಲ್ಲೆಡೆ ಅಸ್ತಿತ್ವದಲ್ಲಿದೆ. ಇದು ಹಿರಿಯರ ಆರಾಧನೆ ಅಥವಾ ವೀರಾರಾಧನೆಯ ರೂಪದಲ್ಲಿರುತ್ತದೆ. ಉಗಾಂಡ, ಜಪಾನ್, ಆಸ್ಟ್ರೇಲಿಯಾ ಹಾಗು ದ್ರಾವಿಡ ಪ್ರದೇಶಗಳಲ್ಲಿ ವಿಭಿನ್ನ ರೀತಿಯಲ್ಲಿ ಪಿತೃಗಳ ಆರಾಧನೆಯಿದೆ. ಜನಪದರ ಬದುಕಿನಲ್ಲಿ ಹೆಣ್ಣು ದೈವಗಳೇ ಪ್ರಮುಖವಾಗಿದ್ದರೂ ಪುರುಷ ದೈವಗಳ ಅಸ್ತಿತ್ವವು ಅಲ್ಲಲ್ಲಿ ಕಂಡುಬರುತ್ತದೆ. ದ್ರಾವಿಡ ಸಂಸ್ಕೃತಿಯಲ್ಲಿ ಸ್ತ್ರೀದೈವಗಳು ಮುಖ್ಯವಾದರೆ, ಆರ್ಯ ಸಂಸ್ಕೃತಿಯಲ್ಲಿ ಪುರುಷ ದೈವಗಳು ಪ್ರಧಾನವಾಗಿ ಪೂಜಿಸಲ್ಪಡುತ್ತವೆ. ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲಿ ಸ್ತ್ರೀ ದೈವಗಳಂತೆ ಪುರುಷ ದೈವಗಳೂ ಆರಾಧಿಸಲ್ಪಡುತ್ತವೆ. ಈ ದೈವಗಳು ವೀರತ್ವಕ್ಕೆ ಹೆಸರಾದವುಗಳಾಗಿವೆ. ಇವುಗಳಲ್ಲಿ ಕೆಲವು ಪುರಾಣಮೂಲದ ದೈವಗಳಾದರೆ; ಇನ್ನು ಕೆಲವು ದೈವಗಳು ಕುಟುಂಬದ ಪೂರ್ವಜರಾಗಿರುತ್ತವೆ. ಅಲ್ಲದೆ ಕುಟುಂಬ, ಗ್ರಾಮ ಮತ್ತು ನಾಡಿನ ರಕ್ಷಣೆಗಾಗಿ ಹೋರಾಡಿ ಮರಣಾನಂತರ ದೈವರೂಪಿಗಳಾದ ವೀರರು ಇದ್ದಾರೆ. ಅಂತಹ ಪುರುಷ ದೈವಗಳ ತೆರೆಗಳಲ್ಲಿ ಪ್ರಮುಖವಾದವುಗಳು ಹೀಗಿವೆ.

**೫.೧.೨.೧ ವಿಷ್ಣುಮೂರ್ತಿ ತೆರೆ**

**ಅರ್ಥ ಮತ್ತು ಹಿನ್ನೆಲೆ :**

ವಿಷ್ಣುಮೂರ್ತಿ ಪುರುಷ ದೈವ. ಮಹಾವಿಷ್ಣುವಿನ ನರಸಿಂಹ ಅವತಾರವನ್ನು ವಿಷ್ಣುಮೂರ್ತಿ ಎನ್ನುತ್ತಾರೆ. ಕೊಡಗಿನಲ್ಲಿ ವಿಷ್ಣುಮೂರ್ತಿಯನ್ನು ಕುಟುಂಬ ಮತ್ತು ಗ್ರಾಮದ ದೇವರಾಗಿ ಆರಾಧಿಸಲಾಗುತ್ತದೆ. ವಿಷ್ಣುಮೂರ್ತಿಯ ಹಿನ್ನೆಲೆಯನ್ನು ಕುರಿತು ಪುರಾಣ ಮೂಲದ ಕಥೆಯೊಂದು ಹೀಗಿದೆ. "ಪ್ರಹ್ಲಾದ ಮಹಾವಿಷ್ಣುವಿನ ಪರಮಭಕ್ತ. ಆತನ ತಂದೆ ಹಿರಣ್ಯಕಶಿಪು. ಮದಾಂಧನಾದ ಆತ ವಿಷ್ಣುದ್ವೇಷಿಯಾಗಿದ್ದನು. ವಿಷ್ಣುಭಕ್ತನಾದ ಮಗ ಪ್ರಹ್ಲಾದನನ್ನು ಹಿಂಸಿಸುತ್ತಿದ್ದನು. ತನ್ನ ಭಕ್ತನ ರಕ್ಷಣೆಗಾಗಿ ಮಹಾವಿಷ್ಣುವು ನರಸಿಂಹ ಅವತಾರವನ್ನು ತಾಳಿ ಕಂಬವನ್ನು ಒಡೆದು ಪ್ರತ್ಯಕ್ಷವಾಗುವನು. ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆದು ರಕ್ತಪಾನ ಮಾಡಿ ಕೊಲ್ಲುವನು. ಈ ರೌದ್ರಮೂರ್ತಿಯೇ ವಿಷ್ಣುಮೂರ್ತಿ ದೈವ"[೧೩] ಎಂಬ ಪ್ರತೀತಿ ಜನಪದರಲ್ಲಿದೆ. ವಿಷ್ಣುಮೂರ್ತಿಗೆ 'ಕೋಟ' ಎಂಬ ಪುಟ್ಟ ಗುಡಿಯಿರುತ್ತದೆ. ಇಲ್ಲಿ ನರಸಿಂಹನ ವಿಗ್ರಹವಾಗಲೀ, ಶಂಖ ಚಕ್ರ ಗದಾಧಾರಿಯಾದ ಮಹಾವಿಷ್ಣುವಿನ ಮೂರ್ತಿಯಾಗಲೀ ಇರುವುದಿಲ್ಲ. ಬದಲಿಗೆ ವಿಷ್ಣುಮೂರ್ತಿಯ ಆಯುಧವಾದ

ಸಣ್ಣ ಕತ್ತಿ ಹಾಗೂ ಮೊಗ(ಮುಖವಾಡ) ಇರುತ್ತದೆ. ಕೊಡಗಿನ ಬಹುತೇಕ ಗ್ರಾಮಗಳಲ್ಲಿ ವಿಷ್ಣುಮೂರ್ತಿ ದೈವಕ್ಕೆ ಆಯುಧ ಪ್ರತಿಷ್ಠೆಯಲ್ಲದೆ; ವಿಗ್ರಹ ಪ್ರತಿಷ್ಠೆ ಇಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ವಿಷ್ಣುವಿನ ಮೂರ್ತಿಯನ್ನು ಪ್ರತಿಷ್ಠಾಪಿಸಿ ಪುರೋಹಿತರಿಂದ ಪೂಜೆ ಮಾಡಿಸುವ ಪರಿಪಾಟ ಕೆಲವು ಗ್ರಾಮಗಳಲ್ಲಿ ಕಂಡುಬರುತ್ತಿದೆ.

**ಆಚರಣೆ :**

ಮಲಿಯರು ವಿಷ್ಣುಮೂರ್ತಿ ತೆರೆಯನ್ನು ಕಟ್ಟುವುದು ವಾಡಿಕೆ. ಕೊಡಗಿನ ಕೆಲವು ಗ್ರಾಮಗಳಲ್ಲಿ ಈ ತೆರೆಯು ವಾರ್ಷಿಕವಾಗಿ ನಿಶ್ಚಿತ ದಿನದಂದು ಜರುಗುತ್ತದೆ. ಕೆಲವೊಮ್ಮೆ ಒಂದು ಕುಟುಂಬ ಅಥವಾ ಗ್ರಾಮದವರ ವಿಶೇಷ ಹರಕೆಯಾಗಿಯೂ ಆಚರಿಸಲ್ಪಡುತ್ತದೆ. ವಿಷ್ಣುಮೂರ್ತಿಯು ಪ್ರಮುಖ ದೈವವಾದುದರಿಂದ ತೆರೆಕಟ್ಟುವ ಆಚರಣೆಗಳಲ್ಲಿ ವಿಷ್ಣುಮೂರ್ತಿ ತೆರೆಯನ್ನು ಮೊದಲು ಕಟ್ಟುತ್ತಾರೆ. ರಾತ್ರಿ ಹತ್ತು ಗಂಟೆಯಿಂದ ಈ ಆಚರಣೆ ಪ್ರಾರಂಭವಾಗುತ್ತದೆ. ಕ್ಲಿಷ್ಟಕರವಾದ ಹಲವು ವಿಧಿಗಳನ್ನು ಇದು ಒಳಗೊಂಡಿದ್ದು; ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ನಮ್ಮೆ ಕುರಿಪೊ(ದಿನ ನಿಗದಿಗೊಳಿಸುವುದು) :**

ವಿಷ್ಣುಮೂರ್ತಿ ತೆರೆಯ ಪೂರ್ವಭಾವಿಯಾಗಿ ದಿನ ನಿಗದಿಗೊಳಿಸುವ ಆಚರಣೆ ನಡೆಯುತ್ತದೆ. ಗ್ರಾಮ ಅಥವಾ ಕುಟುಂಬದ ತಕ್ಕ ಮುಖ್ಯಸ್ಥರು ಒಂದೆಡೆ ಸೇರಿ ತೆರೆ ಮತ್ತು ಉತ್ಸವದ ದಿನವನ್ನು ನಿಗಧಿಗೊಳಿಸುತ್ತಾರೆ. ಇದನ್ನು 'ನಮ್ಮೆ ಕುರಿಪೊ' ಎನ್ನುತ್ತಾರೆ.

**ವೀಳ್ಯ ನೀಡುವುದು :**

ತೆರೆಕಟ್ಟುವವನಿಗೆ ಅಧಿಕೃತ ಆಹ್ವಾನ ನೀಡುವ ವಿಧಿ ಇದು. ಗ್ರಾಮ ಅಥವಾ ಕುಟುಂಬದ ಮುಖ್ಯಸ್ಥರು ತೆರೆಕಟ್ಟುವವನ ಮನೆಗೆ ಹೋಗುತ್ತಾರೆ. ಅವನಿಗೆ ವೀಳ್ಯವನ್ನು ನೀಡಿ ನಿಗದಿತ ದಿನದಂದು ತೆರೆಯನ್ನು ಕಟ್ಟುವಂತೆ ಆಹ್ವಾನಿಸುತ್ತಾರೆ. ಇದನ್ನು ವೀಳ್ಯ ಕೊಡ್‌ಪೊ ಎನ್ನುತ್ತಾರೆ.

**ಮೇಲೇರಿ(ಕೆಂಡಸೇವೆ)ಗೆ ಕಟ್ಟಿಗೆ ಸಿದ್ಧಗೊಳಿಸುವುದು :**

'ಮೇಲೇರಿ' ಎಂದು ಕರೆಯಲ್ಪಡುವ ಕೆಂಡಸೇವೆ ವಿಷ್ಣುಮೂರ್ತಿ ತೆರೆಯಲ್ಲಿ ಪ್ರಮುಖವಾದುದು. ಆದುದರಿಂದ ತೆರೆಕಾರನಿಗೆ ವೀಳ್ಯ ನೀಡಿದ ನಂತರ ಮೇಲೇರಿ (ಕೆಂಡದ ರಾಶಿ)ಗೆ ಅಗತ್ಯವಾದ ಸೌದೆಯನ್ನು ಸಿದ್ಧಗೊಳಿಸಲಾಗುತ್ತದೆ. ಹಲಸು, ಮಾವು, ಆಲ ಇತ್ಯಾದಿ ಹಾಲು ಒಸರುವ ಮರಗಳನ್ನು ಕಡಿದು ಕಟ್ಟಿಗೆ ಮಾಡುತ್ತಾರೆ. ತೆರೆಕಟ್ಟುವ ಆಚರಣೆಯ ಮೊದಲ ದಿನದವರೆಗೂ ಕಟ್ಟಿಗೆಯ ಸಂಗ್ರಹ ನಡೆಯುತ್ತದೆ. ಪೂರ್ವದಲ್ಲಿ ೧೫ ರಿಂದ ೧೬ ಗಾಡಿಗಳಷ್ಟು ಕಟ್ಟಿಗೆಯನ್ನು ಶೇಖರಿಸುವುದು ವಾಡಿಕೆಯಾಗಿತ್ತು. ಹೀಗೆ ಶೇಖರಣೆಯಾದ ಸೌದೆಯನ್ನು ಮೇಲೇರಿ ನಡೆಯುವ

ಅಂಗಳದಲ್ಲಿ ರಾಶಿ ಹಾಕಲಾಗುತ್ತದೆ.

**ಕೊಲೆ ಕೆತ್ತುವೊ(ಗೊನೆ ಕಡಿಯುವುದು) :**

ತೆರೆಕಟ್ಟುವ ಆಚರಣೆಗೆ ಐದು, ಏಳು ಅಥವಾ ಒಂಬತ್ತು ದಿನಗಳ ಮುಂಚಿತವಾಗಿ ಬಾಳೆಗೊನೆ ಕಡಿಯುವ ಆಚರಣೆ ನಡೆಯುತ್ತದೆ. ಇದನ್ನು 'ಕೊಲೆ ಕೆತ್ತುವೊ' ಎನ್ನುತ್ತಾರೆ. ಕುಟುಂಬದಲ್ಲಿ ವಿಷ್ಣುಮೂರ್ತಿ ತೆರೆ ಆಚರಣೆ ನಡೆಯುವಾಗ ಆಯಾಯ ಕುಟುಂಬದ ಹಿರಿಯ ಮಿಂದು ಶುಚೀರ್ಭೂತನಾಗಿ ಬಾಳೆಗೊನೆ ಕಡಿಯುತ್ತಾನೆ. ಕಡಿದ ಗೊನೆಯನ್ನು ಐನ್‌ಮನೆಯ ಕನ್ನಿಕೋಂಬರೆ(ದೇವರಿಗೆ ನೈವೇದ್ಯ ಇಡುವ ಕೋಣೆ)ಯಲ್ಲಿ ಇರಿಸಲಾಗುತ್ತದೆ. ಗ್ರಾಮದ ತೆರೆಗಳಾದರೆ ಈ ವಿಧಿಯನ್ನು ಗ್ರಾಮದ ಮುಖ್ಯಸ್ಥರು ನಡೆಸುತ್ತಾರೆ. ಗೊನೆಯನ್ನು ವಿಷ್ಣುಮೂರ್ತಿಯ ಕೋಟದಲ್ಲಿ ಕಟ್ಟುತ್ತಾರೆ.

**ಭಂಡಾರ ಉಳ್‌ಪೊ(ಭಂಡಾರ ಇಳಿಸುವುದು) :**

ದೈವದ ಭಂಡಾರವನ್ನು ತಂದು ಶುದ್ಧಗೊಳಿಸುವ ವಿಧಿಯನ್ನು ಭಂಡಾರ ಉಳ್‌ಪೊ ಎನ್ನುತ್ತಾರೆ. ಮನೆಯಲ್ಲಾದರೆ ಭಂಡಾರವನ್ನು ಕನ್ನಿಕೋಂಬರೆಯಿಂದ ತಂದು ಆಚರಣೆಯನ್ನು ಮಾಡುವರು. ಭಂಡಾರದಲ್ಲಿ ದೈವದ ಆಯುಧಗಳು, ಆಭರಣಗಳು ಮತ್ತು ಮೊಗ(ಮುಖವಾಡ) ಇರುತ್ತದೆ. ದುಡಿ ವಾದ್ಯವನ್ನು ಬಾರಿಸುತ್ತಾ ಹಾಡುವ 'ದುಡಿ ಕೊಟ್ಟ್‌ಪಾಟ್' ನೊಂದಿಗೆ ಈ ವಿಧಿಯನ್ನು ನಡೆಸುತ್ತಾರೆ. ತಕ್ಕರು ಹಾಗು ಗ್ರಾಮಸ್ಥರು ಈ ಆಚರಣೆಯನ್ನು ಮಾಡುತ್ತಾರೆ.

**ವಿಷ್ಣುಮೂರ್ತಿ ತೆರೆಯ ಹಂತಗಳು :**

ವಿಷ್ಣುಮೂರ್ತಿ ದೈವವನ್ನು ಎರಡು ಹಂತಗಳಲ್ಲಿ ತೆರೆಕಟ್ಟಿ ಆರಾಧಿಸಲಾಗುತ್ತದೆ. ಅವುಗಳು ಹೀಗಿವೆ:

ಅ. ವಿಷ್ಣುಮೂರ್ತಿ ತೋತ ತೆರೆ

ಆ. ವಿಷ್ಣುಮೂರ್ತಿ ಮೇಲೇರಿ

ವಿಷ್ಣುಮೂರ್ತಿ ತೆರೆಯ ಆರಂಭಿಕ ಹಂತದಲ್ಲಿ ಕಟ್ಟುವ ತೆರೆಯನ್ನು ವಿಷ್ಣುಮೂರ್ತಿ ತೋತ ತೆರೆ ಎನ್ನುತ್ತಾರೆ. ಎರಡನೆಯ ಹಂತ ವಿಷ್ಣುಮೂರ್ತಿ ಮೇಲೇರಿ.

**ಅ. ವಿಷ್ಣುಮೂರ್ತಿ ತೋತ ತೆರೆ**

**ಅರ್ಥ ಮತ್ತು ಆಚರಣೆ :**

ವಿಷ್ಣುಮೂರ್ತಿಯ ಮೂಲ ರೂಪದ ತೆರೆಯನ್ನು ತೋತ ತೆರೆ ಎನ್ನುತ್ತಾರೆ. ಈ ಆಚರಣೆಯಲ್ಲಿ 'ತೋಟಂಪಾಟ್' ಎಂಬ ಸ್ತುತಿಗೀತೆಯನ್ನು ಹಾಡುವ ವಿಧಿ ಪ್ರಮುಖವಾದುದು. ಮಲೆಯಾಳಂ ಭಾಷೆಯ ಈ ಹಾಡು ವಿಷ್ಣುಮೂರ್ತಿಯ ಅವತಾರ ಲೀಲೆಗಳನ್ನು ವರ್ಣಿಸುತ್ತದೆ. ಈ ಹಿನ್ನೆಲೆಯಲ್ಲಿ ಮಲೆಯಾಳಂನ 'ತೋಟಂಪಾಟ್' ಕೊಡವಭಾಷಾ ಪರಿಸರದಲ್ಲಿ 'ತೋತ ತೆರೆ' ಎಂದು

ರೂಪಾಂತರಗೊಂಡಿದೆ. ರಾತ್ರಿ ಹತ್ತು ಗಂಟೆಗೆ ಈ ಆಚರಣೆಯು ಪ್ರಾರಂಭವಾಗುತ್ತದೆ. ಇದನ್ನು 'ವಿಷ್ಣುಮೂರ್ತಿ ಎಳಂಗೋಲ'(ವಿಷ್ಣುಮೂರ್ತಿಯ ಎಳೆಯ ರೂಪ) ಎಂದು ಕರೆಯುವ ವಾಡಿಕೆಯೂ ಇದೆ.

**ವೇಷಭೂಷಣಗಳು :**

ತೆರೆಕಟ್ಟುವಂದು ಅಪರಾಹ್ನ ತೆರೆಕಾರರು ಬರುತ್ತಾರೆ. ತೆರೆಕಟ್ಟುವವನು ಮುಖ್ಯಸ್ಥನಿಂದ ಎಣ್ಣೆಯನ್ನು ಪಡೆದುಕೊಂಡು ಸ್ನಾನವಾಡಿ ವೇಷ ಧರಿಸಲು ಸಿದ್ಧನಾಗುತ್ತಾನೆ. ವಿಷ್ಣುಮೂರ್ತಿ ತೋತ ತೆರೆಯ ವೇಷದಲ್ಲಿ ತೆಂಗಿನ ಗರಿಯ ಬಳಕೆ ಇಲ್ಲ. ಸೊಂಟದ ಮೇಲ್ಭಾಗಕ್ಕೆ ಉಡುಪು ಇರುವುದಿಲ್ಲ. ತೆರೆಕಾರನ ಸಹಾಯಕರು ಸೊಂಟಕ್ಕೆ ಕೆಂಪು ಅಥವಾ ಬಿಳಿಯ ಬಣ್ಣದ ಚೇಲೆ ಎಂಬ ವಸ್ತ್ರವನ್ನು ಸುತ್ತುತ್ತಾರೆ. ಕನ್ನಿಬಳೆ ಎಂಬ ಬಿದಿರಿನ ಬಳೆಯನ್ನು ಕೋಲು ಮತ್ತು ಹಗ್ಗದ ಸಹಾಯದಿಂದ ಸೊಂಟಕ್ಕೆ ಕಟ್ಟುತ್ತಾರೆ.



ಅದರ ಮೇಲೆ ಕೆಂಪು ಬಣ್ಣದ ಲಂಗದಂತಹ ಉಡುಪು ಚೆರುಬೊಳಂಬವನ್ನು ಧರಿಸಲಾಗುತ್ತದೆ. ಎರಡು ಬದಿಗೆ 'ಮುನ್ನಾಕ್' ಎಂಬ ವಸ್ತ್ರವನ್ನು ಇಳಿಬಿಡುತ್ತಾರೆ. ಉಡುಪು ಧರಿಸಿ ಸಿದ್ಧನಾದ ತೆರೆಕಾರನು ಗ್ರಾಮದ ಮುಖ್ಯಸ್ಥರು ಹಾಗೂ ಚಂಡೆ ಮೇಳದವರೊಂದಿಗೆ ವಿಷ್ಣುಮೂರ್ತಿ ಕೋಟದ ಮುಂಭಾಗಕ್ಕೆ ಬರುತ್ತಾನೆ. ಅಲ್ಲಿ ಪ್ರಾರ್ಥಿಸಿ ಅಕ್ಕಿ ಹಾಕಿ ಅನುಮತಿಯನ್ನು ಪಡೆದು ಬಣ್ಣಗಾರಿಕೆಗೆ ಸಿದ್ಧನಾಗುತ್ತಾನೆ. ತೋತ ತೆರೆಯಲ್ಲಿ ಸಾಧಾರಣವಾದ ಬಣ್ಣಗಾರಿಕೆ ಇರುತ್ತದೆ. ತೆರೆಕಾರನ ಸಹಾಯಕನು ಹಣೆಗೆ ಗಂಧದಿಂದ ಅಡ್ಡನಾಮವನ್ನು ಎಳೆದು ಅದರ ಮಧ್ಯಭಾಗಕ್ಕೆ ಕುಂಕುಮದ ಬೊಟ್ಟು ಹಾಕುತ್ತಾನೆ. ತೋಳು, ಮೊಣಕೈ ಹಾಗೂ ಎದೆಗೆ ಇದೇ ರೀತಿಯ ನಾಮವನ್ನು ಹಾಕಲಾಗುತ್ತದೆ. ಕಿವಿಯ ಸಮೀಪ ಗಂಧವನ್ನು ಅರ್ಧ ವರ್ತುಲಾಕಾರವಾಗಿ ಹಚ್ಚುತ್ತಾನೆ. ತುಟಿಗೆ ಕೆಂಪು ಬಣ್ಣವನ್ನು ಹಚ್ಚಲಾಗುತ್ತದೆ.

ವಿಷ್ಣುಮೂರ್ತಿಯನ್ನು ಪ್ರಾರ್ಥಿಸಿ ಅಕ್ಕಿಹಾಕಿ ತೆರೆಕಾರನ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ ಮೇಲ್ಭಾಗಕ್ಕೆ 'ತಲೆಪೂ' ಹಾಗೂ ಕೀರೀಟವನ್ನು ಹೋಲುವ 'ಪೂಕೊಟ್ಟ' ಇರುತ್ತದೆ. ತಲೆಯ ಹಿಂಭಾಗಕ್ಕೆ ಉದ್ದವಾದ ಕೆಂಪು ಬಣ್ಣದ ಚೌರಿಯನ್ನು ಧರಿಸುವುದು ತೋತತೆರೆಯ ವೇಷದ ವಿಶೇಷತೆಯಾಗಿದೆ. ಕಿವಿಯ ಕೆಳಭಾಗಕ್ಕೆ 'ಕೊಂಬೋಲೆಕಾದ್' ಎಂಬ ಕರ್ಣಾಭರಣವಿರುತ್ತದೆ.

ತೆರೆಕಾರನು ಕೈಗಳಿಗೆ 'ಕೈಪೂ','ತಂಡೆಬಳೆ' ಹಾಗೂ 'ಚೂಡಗ' ಎಂಬ ಆಭರಣಗಳನ್ನು ಧರಿಸಿರುತ್ತಾನೆ. ಕೊರಳಲ್ಲಿ 'ಪವ್ವಿಡ' ಹಾಗೂ 'ಬನಮಾಲೆ' ಎಂಬ ಹಾರಗಳಿರುತ್ತವೆ. ನರಸಿಂಹ ಅವತಾರದ ಹಿನ್ನೆಲೆಯನ್ನು ಹೊಂದಿರುವುದರಿಂದ ಆಚರಣೆಯಲ್ಲಿ ಅದರ ಪ್ರಭಾವ ಕಂಡುಬರುತ್ತದೆ. ಇದಕ್ಕೆ ಪೋಷಕವಾಗಿ ತೆರೆಕಾರನು ಕೈಬೆರಳುಗಳಿಗೆ ಬೆಳ್ಳಿಯ ಉಗುರುಗಳನ್ನು ಧರಿಸಿರುತ್ತಾನೆ.

**ತೆರೆಹಾಡು(ತೋಟಂಪಾಟ್) :**

ವಿಷ್ಣುಮೂರ್ತಿ ದೈವದ ಕಥಾನಕವನ್ನು ತೆರೆಹಾಡು ವರ್ಣಿಸುತ್ತದೆ. ಇದನ್ನು 'ತೋಟಂಪಾಟ್' ಅಂದರೆ ಸ್ತುತಿಗೀತೆ ಎನ್ನುತ್ತಾರೆ. ತೆರೆಕಾರನು ವೇಷಭೂಷಣಗಳನ್ನು ತೊಟ್ಟು ಸಿದ್ಧಗೊಂಡ ನಂತರ ಈ ಆಚರಣೆಯು ನಡೆಯುತ್ತದೆ. ಗ್ರಾಮದ ಮುಖ್ಯಸ್ಥ ಹಾಗೂ ಸೇರಿರುವ ಜನರಿಗೆ ತೆರೆಕಾರನು ಅಕ್ಕಿಯನ್ನು ನೀಡುತ್ತಾನೆ. ಮುಖ್ಯಸ್ಥನು ನಾಲ್ಕು ಮಾತುಗಳನ್ನಾಡಿ ದೇವರನ್ನು ಪ್ರಾರ್ಥಿಸುತ್ತಾನೆ. ಎಲ್ಲರೂ ಅಕ್ಕಿ ಹಾಕಿದ ನಂತರ ಚಂಡೆಯನ್ನು ನಾಲ್ಕು ಕಾಲಿನ ಪೀಠ 'ಪ್ಡ'ದ ಮೇಲೆ ಇರಿಸುತ್ತಾರೆ. ತೆರೆಕಾರನು ಚಂಡೆಯನ್ನು ಬಾರಿಸುತ್ತಾ ತೋಟಂಪಾಟ್ ಹಾಡಲಾರಂಭಿಸುತ್ತಾನೆ. ಆತನೊಂದಿಗೆ ಸಹಾಯಕರು ಹಾಗೂ ಚಂಡೆಮೇಳದವರು ದನಿಗೂಡಿಸುತ್ತಾ ಚಂಡೆ ಬಾರಿಸುತ್ತಾರೆ. ವಿಷ್ಣುವಿನ ವಿವಿಧ ಅವತಾರಗಳ ಕಥೆಯನ್ನು ನಿರೂಪಿಸುವ ಈ ತೆರೆಹಾಡಿನೊಂದಿಗೆ ಚಂಡೆಯ ಬಡಿತ ತೀವ್ರಗೊಳ್ಳುತ್ತದೆ. 'ತೋಟಂಪಾಟ್' ಸುಧೀರ್ಘವಾಗಿದ್ದು; ಹಾಡುವ ಅವಧಿ ಒಂದು ಗಂಟೆಯವರೆಗೂ ವ್ಯಾಪಿಸುತ್ತದೆ. ಆದರೆ ಪ್ರಸ್ತುತ ದಿನಗಳಲ್ಲಿ ಸಂದರ್ಭಕ್ಕೆ ತಕ್ಕಂತೆ ಬದಲಾವಣೆಗಳನ್ನು ಮಾಡಿಕೊಳ್ಳಲಾಗುತ್ತಿದೆ. ಹೀಗೆ ವಿಷ್ಣುಮೂರ್ತಿ ದೈವದ ತೋತತೆರೆ ಹಾಗೂ 'ತೋಟಂಪಾಟ್' ಹಾಡಿಗೆ ಅವಿನಾಭಾವ ಸಂಬಂಧವಿದೆ.

**ದೈವದ ಆವಾಹನೆ ಮತ್ತು ಕುಣಿತ :**

ತೆರೆಹಾಡು ಹಾಡು ಹಾಗೂ ಚಂಡೆಯ ಬಡಿತ ಹೆಚ್ಚಾಗುತ್ತಿದ್ದಂತೆಯೇ ತೆರೆಕಾರನ ಮೈಮೇಲೆ ದೈವದ ಆವಾಹನೆಯಾಗುತ್ತದೆ. ಈ ಸಂದರ್ಭದಲ್ಲಿ ತೆರೆಕಾರನು ವಿಷ್ಣುಮೂರ್ತಿಯೇ ಆಗಿರುತ್ತಾನೆ ಎಂಬ ನಂಬಿಕೆ ಜನಪದರಲ್ಲಿದೆ. ಚಂಡೆಯ ಬಡಿತಕ್ಕೆ ಸರಿಯಾಗಿ ಉಗ್ರ ನರಸಿಂಹನಂತೆ ಅಭಿನಯಿಸುತ್ತಾನೆ. ಕಂಬ ಒಡೆದು ಪ್ರತ್ಯಕ್ಷವಾಗುವ ಉಗ್ರ ನರಸಿಂಹ, ಹಿರಣ್ಯಕಶಿಪುವಿನ ವಧೆ ಹಾಗೂ ಪ್ರಹ್ಲಾದನನ್ನು ಸಮಾಧಾನ ಪಡಿಸುವ ಸನ್ನಿವೇಷವನ್ನು ಅತ್ಯಂತ ಮನೋಜ್ಞವಾಗಿ ಅಭಿನಯಿಸುತ್ತಾನೆ. ಕುಣಿತವು ಅತ್ಯಂತ ಲಯಬದ್ಧವಾಗಿ ಆಕರ್ಷಕವಾಗಿರುತ್ತದೆ. ಇಲ್ಲಿ ಮಾತಿಗೆ ಅವಕಾಶವಿಲ್ಲದೆ ನೃತ್ಯಾಭಿನಯಕ್ಕೆ ಹೆಚ್ಚು ಪ್ರಾಶಸ್ತ್ಯವಿರುತ್ತದೆ.

**ಮೇಲೇರಿಗೆ ಅಗ್ನಿಸ್ಪರ್ಶ :**

ತೆರೆಯ ಕುಣಿತದ ನಂತರ 'ಮೇಲೇರಿ'(ಬೆಂಕಿ ಕೊಂಡ)ಗೆ ಅಗ್ನಿಸ್ಪರ್ಶದ



ವಿಧಿ ನಡೆಯುತ್ತದೆ. ಇದನ್ನು ಕೋಟದ ಹೊರಗೆ ಅಂಗಳದಲ್ಲಿ ಆಚರಿಸುತ್ತಾರೆ. ತೆರೆಕಾರನು ಹಾಗೂ ಮುಖ್ಯಸ್ಥರು ಮೇಲೇರಿ ಆಚರಣೆಗೆ ನಿಗದಿಯಾದ ಸ್ಥಳಕ್ಕೆ ಬರುತ್ತಾರೆ. ಸಾಮಾನ್ಯವಾಗಿ ಕೋಟದ ಮುಂಭಾಗದಲ್ಲಿರುವ ಅಂಗಳದಲ್ಲಿ ಈ ಆಚರಣೆ ನಡೆಯುತ್ತದೆ. ಒಡೆದ ಸೌದೆಯ ಚೂರುಗಳನ್ನು ಜೋಡಿಸಿ ಅದರ ಮೇಲೆ ಎಣ್ಣೆಯಲ್ಲಿ ಅದ್ದಿರುವ ಬತ್ತಿ ಹಾಗೂ ಕರ್ಪೂರವನ್ನು ಇರಿಸುತ್ತಾರೆ. ಉರಿಯುತ್ತಿರುವ ಬತ್ತಿಯಿಂದ ಬೆಂಕಿ ಹೊತ್ತಿಸುತ್ತಾರೆ. ಆಚರಣೆಯಲ್ಲಿ ಭಾಗವಹಿಸಿದ ಪುರುಷರೆಲ್ಲರೂ ಅಂಗಳದಲ್ಲಿ ರಾಶಿ ಹಾಕಿರುವ ಸೌದೆಯನ್ನು ತಂದು ಜೋಡಿಸುತ್ತಾರೆ. ಕೆಲವು ನಿಮಿಷಗಳಲ್ಲಿ ಬೆಂಕಿ ಹೊತ್ತಿ ಉರಿಯಲಾರಂಭಿಸುತ್ತದೆ.

**ಅನುವಾದ(ಅನುಗ್ರಹ) :**

ಮೇಲೇರಿಗೆ ಅಗ್ನಿಸ್ಪರ್ಶದ ನಂತರ ವಿಷ್ಣುಮೂರ್ತಿ ತೋತ ತೆರೆಯು ಕೋಟಕ್ಕೆ ಹಿಂದಿರುಗುತ್ತದೆ. ನಾಲ್ಕು ಕಾಲಿನ ಪೀಠ ಪ್ೇಡದ ಮೇಲೆ ಕುಳಿತು ಭಕ್ತರನ್ನು ಅನುಗ್ರಹಿಸುತ್ತದೆ. ಇದನ್ನು ಅನುವಾದ ಪಡೆದುಕೊಳ್ಳುವುದು ಎನ್ನುತ್ತಾರೆ. ಭಾಗವಹಿಸಿದವರೆಲ್ಲರೂ ತೆರೆಯ ಬಳಿ ಹೋಗಿ ಅನುಗ್ರಹ ಪಡೆದುಕೊಳ್ಳುತ್ತಾರೆ. ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಪಡೆದುಕೊಳ್ಳುತ್ತಾರೆ. ಹರಕೆ ಹೊತ್ತುಕೊಂಡವರು ಕಾಣಿಕೆಯನ್ನು ಒಪ್ಪಿಸುತ್ತಾರೆ. ದೈವವು ಭಕ್ತರ ಬಾಯಿಗೆ ಅಕ್ಕಿಕಾಳನ್ನು ಹಾಕಿ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸುತ್ತದೆ. ಹೀಗೆ ಸುಮಾರು ಒಂದು ಗಂಟೆಯ ಹೊತ್ತು ವಿಷ್ಣುಮೂರ್ತಿ ತೋತತೆರೆಯು ನಡೆಯುತ್ತದೆ. ತೆರೆಬಾಂಗುವ ವಿಧಿಯ ಮೂಲಕ ತೆರೆ ಮುಕ್ತಾಯವಾಗುತ್ತದೆ.

**ಆ. ವಿಷ್ಣುಮೂರ್ತಿ ಮೇಲೇರಿ**

ವಿಷ್ಣುಮೂರ್ತಿ ತೆರೆಯ ಎರಡನೆಯ ಹಂತದ ಆಚರಣೆಯನ್ನು ವಿಷ್ಣುಮೂರ್ತಿ ಮೇಲೇರಿ ಎನ್ನುತ್ತಾರೆ. ಇಲ್ಲಿ ತೆರೆಕಾರನು ವಿಷ್ಣುಮೂರ್ತಿಯ ಪೂರ್ಣಪ್ರಮಾಣದ ವೇಷ ಧರಿಸಿ ಸಿದ್ಧನಾಗುತ್ತಾನೆ. ಈ ಸಂದರ್ಭದಲ್ಲಿ ಮೇಲೇರಿ ಆಚರಣೆಯು ನಡೆಯುತ್ತದೆ.

**ಅರ್ಥ ಮತ್ತು ಹಿನ್ನೆಲೆ:**

ವಿಷ್ಣುಮೂರ್ತಿ ತೆರೆಯಲ್ಲಿ ಮೇಲೇರಿ ಆಚರಣೆ ಪ್ರಧಾನವಾದುದು. ಮೇಲೇರಿ

ಅಂದರೆ ಬೆಂಕಿ ಕೊಂಡ ಅಥವಾ ದೊಡ್ಡ ಕೆಂಡದ ರಾಶಿ. ತೆರೆಕಟ್ಟುವವನು ಈ ಕೆಂಡದ ರಾಶಿಯ ಮೇಲೆ ಬೀಳುವ ಕಠಿಣ ಆಚರಣೆಯನ್ನು ಮಾಡುತ್ತಾನೆ. ಇದನ್ನು ಮೇಲೇರಿ ಬೀಳುವುದು ಎನ್ನುತ್ತಾರೆ. ಮೇಲೇರಿ ಆಚರಣೆಯ ಬಗ್ಗೆ ಜನಪದರಲ್ಲಿ ಹಲವು ಪ್ರತೀತಿಗಳಿವೆ. ಒಂದು ನಂಬಿಕೆಯ ಪ್ರಕಾರ ನರಸಿಂಹನ ಕೋಪಾವೇಶದಿಂದ ಪಾರಾಗಲು ಶಿವನು ತನ್ನ ಮೂರನೆಯ ಕಣ್ಣಿನಿಂದ ಈ ಬೆಂಕಿಯ ರಾಶಿಯನ್ನು ಸೃಷ್ಟಿಸಿದನು. ವಿಷ್ಣುಮೂರ್ತಿಯು ನರಸಿಂಹ ಅವತಾರದಲ್ಲಿ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆದು ರಕ್ತಪಾನ ಮಾಡಿದ್ದನು. ಈ ಮೈಲಿಗೆಯನ್ನು ಅಗ್ನಿಸ್ನಾನದಿಂದ ಪರಿಹರಿಸಿಕೊಂಡನು. ಇದರ ಸಂಕೇತವಾಗಿ ಮೇಲೇರಿ ಆಚರಣೆ ನಡೆಯುತ್ತದೆ.

ನರಸಿಂಹ ಅವತಾರದ ಸಂದರ್ಭದಲ್ಲಿ ಕುಹಕ ನಗೆ ಬೀರಿದ ಅಗ್ನಿಯನ್ನು ಮೆಟ್ಟಿ ಮರ್ದಿಸುವ ಸಂಕೇತವೇ ಮೇಲೇರಿ ಆಚರಣೆ ಎಂಬ ಪ್ರತೀತಿ ಜನಪದರಲ್ಲಿದೆ. "ಉಷಾ ಅನಿರುದ್ಧರ ಪ್ರಕರಣದಲ್ಲಿ ಬಾಣಾಸುರನಿಗೆ ಕೇತುಭಂಗವಾಯಿತು. ಅವನ ಕೋಟೆಯ ರಕ್ಷಣೆಗೆ ಶಿವನಿದ್ದ. ಮಾಹೇಶ್ವರ ಜ್ವರವನ್ನು ಶಿವ ನಿರ್ಮಿಸಿದ. ಇದಕ್ಕೆ ಪ್ರತಿಯಾಗಿ ಶ್ರೀಕೃಷ್ಣ ವೈಷ್ಣವ ಜ್ವರವನ್ನು ಉಂಟುಮಾಡಿದ! (ರೋಗಾಭಿಮಾನಿ ದೇವತೆಗಳ ಪ್ರಸ್ತಾವ ಹಲವು ಸಂಸ್ಕೃತಿಗಳಲ್ಲಿ ಕಂಡುಬರುತ್ತವೆ. ಸಿಂಹಳದಲ್ಲಿ ಹದಿನೆಂಟು ತರದ ಸನ್ನಿಗಳಿಗೆ ಬೇರೆ ಬೇರೆ ಯಕ್ಷರು ಕಾರಣವೆಂದು ನಂಬಿ ವಿಧ್ಯುಕ್ತವಾಗಿ ಪೂಜಿಸುವ ಪರಿಪಾಠವಿದೆ.) ಈ ಜ್ವರಗಳೆರಡು ಪರಸ್ಪರ ಸಂಘರ್ಷಗೊಂಡವು. ವೈಷ್ಣವ ಜ್ವರತಾಪದ ಸಂಕೇತವೇ 'ಮೇಲೇರಿ' ಎಂಬ ಕಲ್ಪನೆಯನ್ನು ಮಾಡಿದವರಿದ್ದಾರೆ. ಹಾಗೆಯೇ ದೈವದ ಶಕ್ತಿ ಪರೀಕ್ಷೆಗೋಸ್ಕರ ಬಲಾಢ್ಯರು ಏರ್ಪಡಿಸಿದ ವ್ಯವಸ್ಥೆಯ ಪ್ರತೀಕವಿದು ಎಂಬ ಕಥೆಯೂ ಇದೆ."[೧೪]

**ಆಚರಣೆ ಮತ್ತು ವೇಷಭೂಷಣಗಳು :**

ವಿಷ್ಣುಮೂರ್ತಿ ತೋತ ತೆರೆಯು ರಾತ್ರಿಯ ವೇಳೆ ನಡೆದರೆ; ಮರುದಿನ ಹಗಲು ವಿಷ್ಣುಮೂರ್ತಿ ಮೇಲೇರಿ ತೆರೆ ನಡೆಯುತ್ತದೆ. ತೋತ ತೆರೆಯನ್ನು ಕಟ್ಟಿದ ತೆರೆಕಾರನೇ ಈ ತೆರೆಯನ್ನು ಕಟ್ಟುತ್ತಾನೆ. ಬಣ್ಣಗಾರಿಕೆಯಲ್ಲಿ ಕೆಂಪು ಬಣ್ಣ ಪ್ರಮುಖವಾಗಿರುತ್ತದೆ. ತೆರೆಕಾರನ ಸಹಾಯಕರು ಆತನ ತುಟಿಗೆ ಕೆಂಪು ಬಣ್ಣವನ್ನು ಹಚ್ಚುತ್ತಾರೆ. ಮುಖದ ಮೇಲೆ ಶಂಖ ಮತ್ತು ಚಕ್ರದ ಆಕೃತಿಯ ವಿವಿಧ ಮುದ್ರೆ ಹಾಗೂ ಚುಕ್ಕಿಗಳನ್ನು ಬಿಡಿಸುತ್ತಾರೆ. ಕಣ್ಣಿನ ಸುತ್ತ ಹಾಗೂ ಹುಬ್ಬಿಗೆ ಕಪ್ಪುಬಣ್ಣವನ್ನು ಹಚ್ಚುತ್ತಾರೆ. ಮುಖವರ್ಣಿಕೆಯ ನಂತರ ವೇಷ ಭೂಷಣಗಳನ್ನು ಧರಿಸಲಾಗುತ್ತದೆ. ತೆರೆಕಾರನು ಕೆಂಪು ಬಣ್ಣದ ಷರಾಯಿ ಧರಿಸಿರುತ್ತಾನೆ. ಅದರ ಮೇಲೆ ಸೊಂಟಕ್ಕೆ ಕೆಂಪು ಬಣ್ಣದ ಬಟ್ಟೆಯನ್ನು ಸುತ್ತಲಾಗುತ್ತದೆ. ಬಾಳೆಯ ಕಂದನ್ನು ಪಟ್ಟಿಗಳಾಗಿ ಕತ್ತರಿಸಿ ಜಜ್ಜಿ ನಿರ್ಮಿಸಿದ ಲಂಗದಂತಹ ತೊಡುಗೆಯನ್ನು ತೆರೆಕಾರನ ಸೊಂಟದ

ಸುತ್ತ ಕಟ್ಟುತ್ತಾರೆ. ಅನಂತರ ತೆಂಗಿನ ಗರಿಗಳ 'ಓಲಿ' ಎಂಬ ಸ್ತಂಭಾಕೃತಿಯ ಉಡುಪನ್ನು ಸೊಂಟದ ಸುತ್ತ ಕಟ್ಟುತ್ತಾರೆ. ಇದು ಕಂಬದಿಂದ ನರಸಿಂಹನು ಪ್ರತ್ಯಕ್ಷನಾಗುವ ಪ್ರತೀಕವೆಂಬ ನಂಬಿಕೆಯಿದೆ. ದೇವರನ್ನು ಪ್ರಾರ್ಥಿಸಿ ಅಕ್ಕಿ ಹಾಕಿ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ ಮೇಲ್ಭಾಗಕ್ಕೆ ತಲೆಪೂ ಎಂಬ ಹೂವಿನದಂಡೆ ಇರುತ್ತದೆ. ಎಳೆಯ ತೆಂಗಿನ ಗರಿಗಳಿಂದ ನಿರ್ಮಿಸಲಾದ ಶಿರೋಭೂಷಣ 'ಕಾಂಡ'ವನ್ನು ಧರಿಸಿ ಅದರ ಮೇಲ್ಭಾಗಕ್ಕೆ ಕಿರೀಟದಂತಿರುವ 'ತಲೆಮಲ್ಲಿಗೆ'ಯನ್ನು ಕಟ್ಟುತ್ತಾರೆ. ಇದು ಕಲಾತ್ಮಕವಾಗಿದ್ದು ವಿಷ್ಣುಚಕ್ರದ ಸಂಕೇತವಾಗಿದೆ.

ಹೀಗೆ ಸಿದ್ಧಗೊಂಡ ತೆರೆಕಾರನು ಮುಖ್ಯಸ್ಥರು ಹಾಗೂ ಸಹಾಯಕರೊಂದಿಗೆ ಮೇಲೇರಿ ಆಚರಣೆಯ ಸ್ಥಳಕ್ಕೆ ಬರುತ್ತಾನೆ. ಮುಖ್ಯಸ್ಥನ ಕೈಹಿಡಿದುಕೊಂಡು ಕೆಂಡದ ರಾಶಿಗೆ ಪ್ರದಕ್ಷಿಣೆ ಬರುತ್ತಾನೆ. ಅದರ ಸಮೀಪದಲ್ಲೇ ಪ್ಂಡ ಎಂಬ ಪೀಠದಲ್ಲಿ ಕುಳಿತುಕೊಳ್ಳುತ್ತಾನೆ. ಸಹಾಯಕರು ಆತನ ಎದೆ, ಕೈ, ಕಾಲುಗಳಿಗೆ ಅಕ್ಕಿಪುಡಿ ಹಾಗೂ ಅರಿಸಿನ ಪುಡಿಯನ್ನು ಕಲಸಿ ಸವರುತ್ತಾರೆ. ಅನಂತರ ಸೊಂಟದ ಮೇಲ್ಭಾಗಕ್ಕೆ 'ಒಡೆ' ಎಂಬ ಸ್ತಂಭಾಕಾರದ ಉಡುಪನ್ನು ಕಟ್ಟಲಾಗುತ್ತದೆ. ಕೈಗಳ ಮುಂಭಾಗಕ್ಕೆ ಉಗುರನ್ನು ಹೋಲುವ 'ಕೈನಗರ'ವನ್ನು ಹಾಕುತ್ತಾರೆ. ತೋಳು ಹಾಗೂ ಮುಂಗೈಗೆ ನೆರಿಗೆಯ ರೂಪದಲ್ಲಿರುವ 'ಪುಂಡ್ಯ'ವನ್ನು ತೊಡಿಸುತ್ತಾರೆ. ಕಾಲಿನ ಮೇಲ್ಭಾಗಕ್ಕೆ ಮಣೀಕೇರ್ ಹಾಗೂ ಪಾದಗಳಿಗೆ ಚಲ್ಂಬುವನ್ನು ಧರಿಸಿದರೆ ವಿಷ್ಣುಮೂರ್ತಿ ದೈವದ ಪೂರ್ಣವೇಷ ಸಿದ್ಧಗೊಳ್ಳುತ್ತದೆ.

**ವಿಷ್ಣುಮೂರ್ತಿ ತೆರೆ ಮತ್ತು ಮೇಲೇರಿ ಆಚರಣೆ :**



ರಾತ್ರಿಯೆಲ್ಲಾ ಉರಿದ ಸೌದೆಗಳಿಂದ ಕೆಂಡದ ರಾಶಿ ಕನಲುತ್ತಿರುತ್ತದೆ. ನೆರೆದವರೆಲ್ಲರೂ ಪ್ರಾರ್ಥನೆ ಮಾಡಿ ಅಕ್ಕಿ ಹಾಕಿದೊಡನೆ ತೆರೆಕಾರನಿಗೆ ದೈವದ ಆವೇಶವಾಗಿ ಅಗ್ನಿಪ್ರವೇಶ ಮಾಡಲು ಧಾವಿಸುತ್ತಾನೆ. ಕೆಂಡದ ರಾಶಿಯ ಮೇಲೆ ಕವುಚಿ ಬಿದ್ದು ಮೇಲೇರಿ ಸೇವೆಯನ್ನು ನಡೆಸುತ್ತಾನೆ. ತೆರೆಕಾರನು ಕೆಂಡದ ಮೇಲೆರಗಿದಾಗ ಸಹಾಯಕರು ಆತ ಧರಿಸಿರುವ ಓಲಿಯನ್ನು ಹಿಡಿದು ಎಳೆದು

ಮೇಲೆತ್ತಿ ನಿಲ್ಲಿಸುತ್ತಾರೆ. ಹೀಗೆ ಅಷ್ಟದಿಕ್ಕುಗಳಿಂದಲೂ ಮೇಲೇರಿ ಬೀಳುವುದು ಆವರ್ತನೆಯಾಗುತ್ತದೆ. ವಿಷ್ಣುಮೂರ್ತಿಯು ನೂರ ಒಂದು ಬಾರಿ ಮೇಲೇರಿ ಬೀಳುತ್ತದೆ ಎಂಬುದು ಪ್ರತೀತಿ. ಮೇಲೇರಿ ಆಚರಣೆಯ ಬಳಿಕ ವಿಷ್ಣುಮೂರ್ತಿ ದೈವವು ಮೊಗ(ಮುಖವಾಡ)ವನ್ನು ಧರಿಸುತ್ತದೆ.

**ಅನುವಾದ(ಅನುಗ್ರಹ) :**

ವಿಷ್ಣುಮೂರ್ತಿ ದೈವವು ಪ್ೕಡ ಎಂಬ ವಿಶಿಷ್ಟ ಪೀಠದಲ್ಲಿ ಕುಳಿತುಕೊಂಡು ಅನುಗ್ರಹ ನೀಡುತ್ತದೆ. ಭಕ್ತಾದಿಗಳಿಂದ ಕಾಣಿಕೆ ಸಲ್ಲಿಕೆ ಮತ್ತು ಕಷ್ಟಗಳ ನಿವೇದನೆ ನಡೆಯುತ್ತದೆ. ದೈವವು ಅಕ್ಕಿಕಾಳನ್ನು ಪ್ರಸಾದ ರೂಪದಲ್ಲಿ ನೀಡುತ್ತದೆ. ರಕ್ತಬಲಿ ನೀಡಿದ ನಂತರ ತೆರೆಯು ಮುಕ್ತಾಯವಾಗುತ್ತದೆ.

**೫.೧.೨.೨ ಅಬ್ಬಿಧಾರೆ ವಿಷ್ಣುಮೂರ್ತಿ ತೆರೆ**

**ಅರ್ಥ ಮತ್ತು ಆಚರಣೆ:**

ಮಕ್ಕಂದೂರು ಭದ್ರಕಾಳಿ ದೇವಾಲಯದ ಸಮೀಪದಲ್ಲಿ ಅಬ್ಬಿಧಾರೆ ವಿಷ್ಣುಮೂರ್ತಿ ತೆರೆಯು ನಡೆಯುತ್ತದೆ. ಅಬ್ಬಿಧಾರೆ ಎಂಬುದು ಸ್ಥಳನಾಮವಾಗಿದ್ದು; ಈ ಹೆಸರು ಬಂದಿದೆ. ಬಿಳಿಗೇರಿ ಕಗ್ಗೋಡ್ಲು ಗ್ರಾಮಗಳಲ್ಲಿ ನೆಲೆಸಿರುವ ಮಲೆಯರು ಈ ತೆರೆಯನ್ನು ಕಟ್ಟುತ್ತಾರೆ. ಎರಡು ವರ್ಷಗಳಿಗೊಮ್ಮೆ ಗ್ರಾಮದಲ್ಲಿ ನಡೆಯುವ ಭದ್ರಕಾಳಿ ಉತ್ಸವದಲ್ಲಿ ಒಂದು ದಿನದ ಹಬ್ಬವಾಗಿ ಈ ಆಚರಣೆಯು ಜರುಗುತ್ತದೆ. ಭದ್ರಕಾಳಿ ದೇಗುಲದ ಸಮೀಪ ಬಲಭಾಗದಲ್ಲಿರುವ ಚೌಂಡಿ(ಚೌಡಿ)ಕಲ್ಲಿನ ಬಳಿ ತೆರೆಕಟ್ಟುವ ಆಚರಣೆಯ ಎಲ್ಲಾ ವಿಧಿವಿಧಾನಗಳು ನಡೆಯುತ್ತವೆ. ಊರಿನ ತಕ್ಕ ಮುಖ್ಯಸ್ಥರಿಂದ ಎಣ್ಣೆಯನ್ನು ಸ್ವೀಕರಿಸಿದ ತೆರೆಕಾರನು ಸ್ನಾನದ ವಿಧಿಯನ್ನು ಪೂರೈಸಿ ಬಣ್ಣಗಾರಿಕೆ ಹಾಗೂ ಅಲಂಕಾರಕ್ಕೆ ಸಿದ್ಧನಾಗುತ್ತಾನೆ. ಆತನ ಸಹಾಯಕರು ಶುದ್ಧೀಕರಿಸಿ ಮಂಡಲ ಬರೆದು ತಟ್ಟ್‌ತಡೆಯನ್ನು ನಿರ್ಮಿಸುತ್ತಾರೆ. ಅದರ ಮೇಲೆ ಕೋತ್ರಿ/ಕೋತಿರಿಯನ್ನು ಚುಚ್ಚಿ ಉರಿಸಲಾಗುತ್ತದೆ. ಅದರೊಂದಿಗೆ ಕುರ್ದಿ ನೀರು(ಅರಿಸಿನ ಹಾಗೂ ಸುಣ್ಣ ಮಿಶ್ರಿತ ನೀರು), ಭತ್ತದ ಅರಳು, ಅಕ್ಕಿ, ತೆಂಗಿನಕಾಯಿ, ಬಾಳೆಹಣ್ಣುಗಳನ್ನು ಬಾಳೆ ಎಲೆಯಲ್ಲಿ ಇರಿಸುತ್ತಾರೆ. ಅದರ ಸಮೀಪ ಒಡಿಕತ್ತಿಯನ್ನು ಇಡಲಾಗುತ್ತದೆ. ನಂತರ ತೆರೆಮುಡಿಯನ್ನು ನಿರ್ಮಿಸಲಾಗುತ್ತದೆ.

**ತೆರೆಮುಡಿ :**

ಸಾಮಾನ್ಯವಾಗಿ ವಿಷ್ಣುಮೂರ್ತಿ ತೆರೆಗಳಲ್ಲಿ ತೆರೆಮುಡಿ ಹೊತ್ತುಕೊಳ್ಳುವ ವಿಧಿ ಇರುವುದಿಲ್ಲ. ಆದರೆ ಅಬ್ಬಿಧಾರೆ ವಿಷ್ಣುಮೂರ್ತಿ ತೆರೆಯಲ್ಲಿ ಭದ್ರಕಾಳಿ ಪ್ರಮುಖ ದೈವವಾದುದರಿಂದ ಭದ್ರಕಾಳಿ ತೆರೆಯುಲ್ಲಿರುವಂತೆ ತೆರೆಮುಡಿ ಹೊತ್ತುಕೊಳ್ಳುವ ವಿಧಿ ನಡೆಯುತ್ತದೆ. ತೆರೆಕಾರರು ಬಿದಿರನ್ನು ಬಳಸಿ ಹದಿನೆಂಟು ಮೊಳ ಉದ್ದದ ತೆರೆಮುಡಿಯನ್ನು ನಿರ್ಮಿಸುತ್ತಾರೆ. ಮುಡಿಯ ಮುಂಭಾಗಕ್ಕೆ

ಕೆಂಪು ವಸ್ತ್ರ ಹಾಗೂ ಹಿಂಭಾಗಕ್ಕೆ ಬಿಳಿ ವಸ್ತ್ರವನ್ನು ಹೊದಿಸಲಾಗುತ್ತದೆ. ಮೇಲ್ತುದಿಗೆ ಪಾಂಬಾಳೆ ಗಿಡದ ಗರಿಗಳ ಕುಚ್ಚನ್ನು ಕಟ್ಟುತ್ತಾರೆ. ಇದನ್ನು ಚೌರಿ ಎನ್ನುವರು. ಅದರ ಕೆಳಭಾಗಕ್ಕೆ ಪಾಂಬಾಳೆ ಗರಿಗಳನ್ನು ಹೂವಿನ ಆಕಾರದಲ್ಲಿ ಕತ್ತರಿಸಿ ಅಲಂಕರಿಸುವರು. ಇದರ ಕೆಳಗೆ ಬುಡದವರೆಗೆ ಕೆಂಪುಬಟ್ಟೆ ಎದ್ದು ಕಾಣುವಂತಿರುತ್ತದೆ. ಇದರ ನಡುವೆ ಪಾಂಬಾಳೆ ಗರಿಗಳ ಕಿರು ಅಲಂಕಾರ ಇರುತ್ತದೆ. ಮುಡಿಯ ಮುಂಭಾಗಕ್ಕೆ ಅಡಕೆ ಹಾಳೆಯಲ್ಲಿ ವರಾಹದ ಮುಖವನ್ನು ಹೋಲುವ ವಿಷ್ಣುಮೂರ್ತಿ ಮೊಗವನ್ನು ನಿರ್ಮಿಸಿ ಹೊಂದಿಸುತ್ತಾರೆ. ಅದಕ್ಕೆ ಅರಿಸಿನ ಕುಂಕುಮ ಹಚ್ಚುತ್ತಾರೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ತೆರೆಕಾರನು ಚೌಂಡಿಕಲ್ಲಿನ ಬಳಿಯೇ ಕುಳಿತು ಬಣ್ಣಗಾರಿಕೆಯಲ್ಲಿ ತೊಡಗುತ್ತಾನೆ. ಮುಖಕ್ಕೆ ಹಳದಿ ಬಣ್ಣ, ಕಣ್ಣಿಗೆ ಕಾಡಿಗೆ, ತುಟಿಗೆ ಕೆಂಪು ಬಣ್ಣ ಹಚ್ಚಲಾಗುತ್ತದೆ. ಹಣೆ ಮತ್ತು ಕಣ್ಣಿನ ಸುತ್ತ ಕೆಂಪು ವರ್ಣದ ಚಿತ್ತಾರ ಬಿಡಿಸಲಾಗುತ್ತದೆ. ಕಿವಿಯವರೆಗೂ ಚಾಚಿದ ಲೋಹದ ಕೋರೆ ಹಾಗೂ ದೊಡ್ಡ ಮೀಸೆಗಳಿರುತ್ತವೆ. ಕಾಲಿಗೆ ಚಲ್‌ಂಬು, ಮಂಡಿಯ ಕೆಳಭಾಗಕ್ಕೆ ಮಣಿಕೇರ್ ಎಂಬ ಗೆಜ್ಜೆ ಇರುತ್ತದೆ. ಅದರ ಕೆಳಭಾಗದಲ್ಲಿ ಪಟ್ಟ್‌ಂಬಾಡ ಎಂಬ ಕಾಲ್ಕಡಗವನ್ನು ಕಟ್ಟಿರುತ್ತಾರೆ. ತೆರೆಮುಡಿಯ ಕೆಳಭಾಗದ ಕೋಲಿಗೆ ಆಧಾರವಾಗಿ ತೆರೆಕಾರನ ಸೊಂಟಕ್ಕೆ ಬಿದಿರಿನಿಂದ ಸಿದ್ಧಗೊಳಿಸಿದ ಕನ್ನಿಬಳೆ ಕಟ್ಟಿರುತ್ತಾರೆ. ಕನ್ನಿಬಳೆಯು ಸೊಂಟದಲ್ಲಿ ಭದ್ರವಾಗಿ ನಿಲ್ಲುವಂತೆ ಕೋಲ್‌ಂಗೈರ್(ಬಿದಿರಿನ ಕೋಲು ಹಾಗು ಹಗ್ಗ)ನಿಂದ ಬಿಗಿದು ಕಟ್ಟಲಾಗುತ್ತದೆ. ಕನ್ನಿಬಳೆಯ ಮೇಲೆ ಅಡ್‌ಕ್ ಇರಿಸಿ ಅದರ ಮೇಲ್ಭಾಗದಲ್ಲಿ ಚೆರು ಅಥವಾ ಚೆರುಬೊಳಂಬ ಎಂಬ ಕೆಂಪು ಬಣ್ಣದ ಉಡುಪು ಧರಿಸುತ್ತಾರೆ.

**ಭಾಗವಹಿಸುವವರು :**

ಮಕ್ಕಂದೂರು ಗ್ರಾಮದಲ್ಲಿರುವ ಕೊಡವ, ಗೌಡ, ಐರಿ, ಗೊಲ್ಲ ಹಾಗು ಮಡಿವಾಳ ಸಮುದಾಯಗಳ ಹದಿನೆಂಟು ಮಂದಿ ಮುಖ್ಯಸ್ಥರು ಈ ಆಚರಣೆಯಲ್ಲಿ ಪ್ರಮುಖವಾಗಿ ಭಾಗವಹಿಸುತ್ತಾರೆ. ಇವರು ಸಾಂಪ್ರದಾಯಿಕ ಬಿಳಿವರ್ಣದ ಕುಪ್ಪಚೇಲೆಯನ್ನು ತೊಟ್ಟಿರುತ್ತಾರೆ. ಉಳಿದಂತೆ ಗ್ರಾಮದ ಜನರೆಲ್ಲರೂ ಪ್ರೇಕ್ಷಕರಾಗಿ ಪಾಲ್ಗೊಳ್ಳುತ್ತಾರೆ.

**ತೆರೆಯ ಕುಣಿತ :**

ತೆರೆಮುಡಿಯ ಅಲಂಕಾರ ಸಂಪೂರ್ಣಗೊಳ್ಳುತ್ತಿದ್ದಂತೆ ಚಂಡೆಯನ್ನು ಬಾರಿಸುತ್ತಾ ತೆರೆಹಾಡು ಹಾಡಲಾಗುತ್ತದೆ. ಅಲಂಕೃತಗೊಂಡ ತೆರೆಮುಡಿಯನ್ನು ತೆರೆಕಾರನು ಹೊತ್ತುಕೊಳ್ಳುತ್ತಾನೆ. ಕೈಗಳಲ್ಲಿ ಪಾಂಬಾಳೆ ಹಾಗು ಒಡಿಕತ್ತಿಯನ್ನು

ಹಿಡಿದುಕೊಳ್ಳುತ್ತಾನೆ. ಚೌಂಡಿಕಲ್ಲಿನ ಮುಂದೆ ಇರಿಸಲಾದ ತಟ್ಟೆತಡೆಯ ಸುತ್ತಲೂ ಕುಣಿಯುತ್ತಾನೆ. ದೈವದ ಆವೇಶ ಬರುವ ತಿರುವಳಕಾರರು ಕಡತಲೆ ಎಂಬ ಕತ್ತಿಯನ್ನು ಹಿಡಿದು ತೆರೆಯೊಂದಿಗೆ ಆವೇಶಭರಿತವಾಗಿ ಕುಣಿಯುತ್ತಾರೆ. ನಂತರ ತೆರೆಯು ಎಲ್ಲಾ ತಕ್ಕ ಮುಖ್ಯಸ್ಥರನ್ನು ಕರೆದುಕೊಂಡು ಭದ್ರಕಾಳಿ ದೇಗುಲಕ್ಕೆ ಸಾಗುತ್ತದೆ. ದೇವಾಲಯದ ಸುತ್ತಲೂ ಮೂರು ಸುತ್ತು ತೆರೆಯ ಕುಣಿತ ನಡೆಯುತ್ತದೆ. ತೆರೆಯೊಂದಿಗೆ ತಕ್ಕ ಮುಖ್ಯಸ್ಥರು ಹಾಗು ಗ್ರಾಮದ ಜನರೆಲ್ಲರೂ ಕುಣಿಯುತ್ತಾರೆ. ಅಪರಾಹ್ನ ೨ ಗಂಟೆಯಿಂದ ೪ ಗಂಟೆಯವರೆಗೆ ತೆರೆಯ ಆಚರಣೆ ನಡೆಯುತ್ತದೆ. ಎತ್ತರವಾದ ತೆರೆಮುಡಿ, ಅದರ ಅಲಂಕಾರ, ತಿರುವಳಕಾರರ ಆವೇಶ ಇವುಗಳು ನೆರೆದಿರುವ ಜನಸಮೂಹಕ್ಕೆ ರುದ್ರಗಂಭೀರ ಭಾವವನ್ನು ಉಂಟುಮಾಡುತ್ತವೆ. ಹರಕೆ ಒಪ್ಪಿಸಿದವರಿಗೆ ತಿರುವಳಕಾರರು ಆಶೀರ್ವಾದ ಮಾಡುತ್ತಾರೆ. ಒಡಿಕತ್ತಿ ಹಿಡಿದು ನರ್ತಿಸಿದವರಿಗೆ ಹಾಗೂ ಆವೇಶ ಬಂದವರಿಗೆ ತೆರೆಯು ಅಕ್ಕಿಕಾಳನ್ನು ಹಾಕಿ ಆಶೀರ್ವಾದ ಮಾಡುತ್ತದೆ. ಸಾಮಾನ್ಯವಾಗಿ ವಿಷ್ಣುಮೂರ್ತಿ ತೆರೆಯು ಮೇಲೇರಿ ಆಚರಣೆಯ ನಂತರ ಮುಕ್ತಾಯಗೊಳ್ಳುತ್ತದೆ. ಆದರೆ ಅಬ್ಬಿಧಾರೆ ವಿಷ್ಣುಮೂರ್ತಿ ತೆರೆಯಲ್ಲಿ ಮೇಲೇರಿ ಬೀಳುವ ಪದ್ಧತಿಯಿಲ್ಲ. ತೆರೆಯು ಭದ್ರಕಾಳಿ ದೇಗುಲದಿಂದ ಮರಳುತ್ತದೆ.

ತೆರೆ ಮುಕ್ತಾಯವಾದ ನಂತರ ಚೌಂಡಿಕಲ್ಲಿನ ಬಳಿ ತೆರೆಮುಡಿಯನ್ನು ಬಿಚ್ಚಲಾಗುತ್ತದೆ. ಅನಂತರ ತೆರೆಕಾರರು ತಕ್ಕ ಮುಖ್ಯಸ್ಥರೊಡನೆ ಭದ್ರಕಾಳಿ ನೆಲೆಗೆ ತೆರಳುತ್ತಾರೆ. ಅಲ್ಲಿ ಹಂದಿ ಮತ್ತು ಕೋಳಿಯನ್ನು ಬಲಿ ನೀಡಲಾಗುತ್ತದೆ. ಕೊಡವ ಸಮುದಾಯಕ್ಕೆ ಸೇರಿದ ಸಬ್ಬುಡ ಮನೆತನದವರು ಈ ದೇಗುಲದ ದೇವತಕ್ಕರು(ಮುಖ್ಯಸ್ಥರು). ಇವರು ತೆರೆಮುಡಿ ಕಟ್ಟಿದ ಮಲೆಯರಿಗೆ ಹದಿನೆಂಟು ಒಕ್ಕಲಿನಿಂದ ಹದಿನೆಂಟು ರೂಪಾಯಿ, ಹದಿನೆಂಟು ಸೇರು ಅಕ್ಕಿಯನ್ನು ನೀಡುತ್ತಾರೆ. ಇದು ಹಿಂದಿನಿಂದಲೂ ಬಂದ ಪದ್ಧತಿಯಾಗಿದೆ.

**೫.೧.೨.೩ ಅಯ್ಯಪ್ಪ ತೆರೆ**

**ಅರ್ಥ ಮತ್ತು ಹಿನ್ನೆಲೆ :**

ಕೊಡಗಿನ ಪ್ರತೀ ಗ್ರಾಮುಗಳಲ್ಲೂ ಅಯ್ಯಪ್ಪನಿಗೆ ನೆಲೆ ಇರುತ್ತದೆ. ಕೊಡವ ಜನಪದ ಗೀತೆ ದೇಶಕೆಟ್ಟ್ ಪಾಟ್‌ನಲ್ಲಿ 'ಕೇರಿಕೋರ್ ಅಯ್ಯಪ್ಪ' ಅಂದರೆ ಕೇರಿಗೊಬ್ಬ ಅಯ್ಯಪ್ಪನ ನೆಲೆಯ ಪ್ರಸ್ತಾಪ ಬರುತ್ತದೆ. ಇಲ್ಲಿನ ಅಯ್ಯಪ್ಪ ಶಬರಿಮಲೆಯಲ್ಲಿ ನೆಲೆಸಿರುವ ಅಯ್ಯಪ್ಪನಲ್ಲ. ಕೊಡಗಿನ ಅಯ್ಯಪ್ಪ ದೇವಕಾಡುಗಳಲ್ಲಿ ಹಾಲು ಒಸರುವ ಮರದಡಿಯಲ್ಲಿ ನೆಲೆಸಿರುವವನು. ಈತನನ್ನು 'ಬೋಟೆಕಾರ (ಬೇಟೆಗಾರ)ಅಯ್ಯಪ್ಪ' ಎಂದೂ ಕರೆಯುತ್ತಾರೆ. ಬೇಟೆಗೆ ಹೊರಡುವ ಮುನ್ನ ಆತನನ್ನು ಪ್ರಾರ್ಥಿಸುವುದು ವಾಡಿಕೆ. ಅಯ್ಯಪ್ಪನ ನೆಲೆ ಇರುವ ಕಾಡನ್ನು 'ಅಯ್ಯಪ್ಪ ದೇವರ ಕಾಡು' ಎಂದು

ಕರೆಯಲಾಗುತ್ತದೆ. ಹಬ್ಬದ ದಿನವನ್ನು ಹೊರತುಪಡಿಸಿ ಉಳಿದ ದಿನಗಳಲ್ಲಿ ಈ ಕಾಡಿಗೆ ಪ್ರವೇಶ ನಿಷಿದ್ಧವಾಗಿರುತ್ತದೆ. ಕೆನ್ನಾಯಿಗಳು ಅಯ್ಯಪ್ಪನ ಸಹಚರರು. ಹಾಗಾಗಿ ಹಬ್ಬದ ಸಂದರ್ಭದಲ್ಲಿ ಮಣ್ಣಿನ ನಾಯಿಗಳನ್ನು ಹರಕೆ ಒಪ್ಪಿಸುವ ಆಚರಣೆ ಇದೆ.

**ಆಚರಣೆ ಮತ್ತು ವೇಷಭೂಷಣಗಳು :**



ಪಣಿಕರು ಮತ್ತು ಬಣ್ಣರು ತಮ್ಮ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಅಯ್ಯಪ್ಪ ತೆರೆಯನ್ನು ಕಟ್ಟುತ್ತಾರೆ. ಕುಟುಂಬ ಹಾಗೂ ಗ್ರಾಮಗಳು ನಡೆಸುವ ವಿವಿಧ ದೈವಗಳ ತೆರೆಗಳಲ್ಲಿ ಒಂದು ತೆರೆಯಾಗಿ ಅಯ್ಯಪ್ಪ ತೆರೆಯನ್ನು ಕಟ್ಟುತ್ತಾರೆ. ಬಣ್ಣಗಾರಿಕೆಯಲ್ಲಿ ಕೆಂಪು ತಳಹದಿಯ ಬಣ್ಣವಾಗಿರುತ್ತದೆ. ಹಣೆ, ಮೂಗಿನ ಅಂಚು, ಹಾಗೂ ಕೆನ್ನೆಯ ಸುತ್ತ ಹಳದಿ ಬಣ್ಣದ ಚಿತ್ತಾರ ಬಿಡಿಸುತ್ತಾರೆ. ಕಣ್ಣಿನ ಸುತ್ತಲೂ ಕಪ್ಪು ಬಣ್ಣವನ್ನು ಹಚ್ಚಲಾಗುತ್ತದೆ. ಕಪ್ಪು ಬಣ್ಣದ ಕರಿಂದಾಡಿ ಮೀಸೆ ಅಯ್ಯಪ್ಪ ತೆರೆಯಲ್ಲಿ ಪ್ರಮುಖವಾದುದು. ಉಡುಗೆ ತೊಡುಗೆಗಳೆಲ್ಲವನ್ನು ಮರ, ಲೋಹದ ತಗಡು ಹಾಗೂ ಕೆಂಪು ಬಟ್ಟೆಯನ್ನು ಬಳಸಿ ನಿರ್ಮಿಸಲಾಗಿರುತ್ತದೆ. ತೆರೆಕಾರನು ತೋಳುಗಳಿಗೆ ಕೆಂಪು ಬಣ್ಣದ ಬಟ್ಟೆ ಹಾಗೂ ಷರಾಯಿಯನ್ನು ಧರಿಸುತ್ತಾನೆ. ಸೊಂಟಕ್ಕೆ ಕೆಂಪು ಬಣ್ಣದ ಬಟ್ಟೆಯನ್ನು ಸುತ್ತಲಾಗುತ್ತದೆ. ಅದರ ಮೇಲೆ ಕನ್ನಿಬಳೆಯನ್ನು ಕೋಲ್‌ಂಗ್ಯೆರ್ ಸಹಾಯದಿಂದ ಕಟ್ಟಲಾಗುತ್ತದೆ. ಅದರ ಮೇಲ್ಭಾಗಕ್ಕೆ ಕೆಂಪು ಬಣ್ಣದ ಲಂಗದಂತಹ ಉಡುಪು ಚೆರುಬೊಳಂಬವನ್ನು ಧರಿಸಲಾಗುತ್ತದೆ. ದೈವವನ್ನು ಪ್ರಾರ್ಥಿಸಿ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ ಎರಡೂ ಬದಿಯಲ್ಲಿ ಕಿವಿಯ ಮೇಲ್ಭಾಗಕ್ಕೆ 'ಚೆನ್ನಲರ್' ಧರಿಸಲಾಗುತ್ತದೆ. ನೆತ್ತಿಪಟ್ಟ್‌ನ ಮೇಲ್ಭಾಗಕ್ಕೆ 'ತಲೆಪೂ' ಎಂಬ ಹೂವಿನ ದಂಡೆಯನ್ನು ಕಟ್ಟುತ್ತಾರೆ. ಅದರ ಮೇಲೆ 'ಪೂಕೊಟ್ಟಿ ಚೆಯ್ಯಾಕ್' ಎಂಬ ದೊಡ್ಡ ಶಿರೋಭೂಷಣವಿರುತ್ತದೆ. ಕೈ ಮತ್ತು ತೋಳುಗಳಿಗೆ ಮರದ ಬಳೆ, ಕೈಪೂ ಮತ್ತು ಕಂಚಿನ ಚೂಡಗವನ್ನು ತೊಡುತ್ತಾರೆ. ಕಾಲಿಗೆ ಪಟ್ಟ್‌ಮಡವನ್ನು ಧರಿಸುತ್ತಾರೆ.

**ಕುಣಿತ ಮತ್ತು ಅನುವಾದ (ಅನುಗ್ರಹ) :**

ವೇಷಭೂಷಣಗಳನ್ನು ಧರಿಸಿ ತೆರೆಕಾರನು ಸಿದ್ಧಗೊಳ್ಳುತ್ತಾನೆ. ತೆರೆಹಾಡು ಹಾಗೂ ಚಂಡೆಯ ಮೇಳ ತೀವ್ರವಾಗುತ್ತಿದ್ದಂತೆ ಅಯ್ಯಪ್ಪ ದೇವರ

ಆವಾಹನೆಯಾಗುತ್ತದೆ. ಎಡಗೈಯಲ್ಲಿ ಕಂಚಿನ ಬಿಲ್ಲು ಬಲಗೈಯಲ್ಲಿ ಬಾಣವನ್ನು ಹಿಡಿದು ಚಂಡೆಯ ತಾಳಕ್ಕೆ ತಕ್ಕಂತೆ ಕುಣಿಯುತ್ತಾನೆ. ನೆರೆದಿರುವ ಭಕ್ತರನ್ನು ಅನುಗ್ರಹಿಸುತ್ತಾನೆ. ಇದನ್ನು ಅನುವಾದ ಕೊಡುವುದು ಎನ್ನುತ್ತಾರೆ. ತಟ್ಟತಡೆಗೆ ಕೋಳಿ ಬಲಿ ನೀಡಿದ ನಂತರ ತೆರೆ ಆಚರಣೆಯು ಮುಕ್ತಾಯಗೊಳ್ಳುತ್ತದೆ

**೫.೧.೨.೪ ಕಾಟಿಲ್ ಅಯ್ಯಪ್ಪ ತೆರೆ :**

**ಅರ್ಥ ಮತ್ತು ಹಿನ್ನೆಲೆ:**



ಕದನೂರು ಗ್ರಾಮದಲ್ಲಿ ನೆಲೆಸಿರುವ ಅಯ್ಯಪ್ಪನನ್ನು ಕಾಟಿಲ್ ಅಯ್ಯಪ್ಪ ಎಂದು ಕರೆಯುತ್ತಾರೆ. ಕಾಟಿಲ್ ಎಂಬ ಸ್ಥಳದಲ್ಲಿ ನೆಲೆಸಿರುವುದರಿಂದ ಕಾಟಿಲ್ ಅಯ್ಯಪ್ಪ ಎಂದು ಕರೆಯಲಾಗುತ್ತದೆ. ಕದನೂರು ಭಗವತಿ ದೇವಿಯ ವಾರ್ಷಿಕೋತ್ಸವದ ಸಂದರ್ಭದಲ್ಲಿ ಕಾಟಿಲ್ ಅಯ್ಯಪ್ಪ ತೆರೆಯನ್ನು ಕಟ್ಟಲಾಗುತ್ತದೆ. ನಂದಿಮಂಡ ರಾಕ್ಷಸನನ್ನು ಸಂಹರಿಸಲು ಭಗವತಿ ದೇವಿಗೆ ಸಹಕರಿಸಿದವನು ಕಾಟಿಲ್ ಅಯ್ಯಪ್ಪ. ಹಾಗಾಗಿ ಕದನೂರು ಭಗವತಿಯನ್ನು ತೆರೆಕಟ್ಟಿ ಆರಾಧಿಸುವುದಕ್ಕೆ ಮುಂಚಿತವಾಗಿ ಕಾಟಿಲ್ ಅಯ್ಯಪ್ಪನಿಗೆ ತೆರೆಕಟ್ಟುವ ಆಚರಣೆ ನಡೆಯುತ್ತದೆ. ನಂದಿಮಂಡ ರಾಕ್ಷಸನೊಡನೆ ಯುದ್ಧ ನಡೆದ ಓರಣಮೊಟ್ಟೆ ಎಂಬ ಸ್ಥಳದಲ್ಲಿಯೇ ಈ ತೆರೆಯನ್ನು ಕಟ್ಟಲಾಗುತ್ತದೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ಬಣ್ಣಗಾರಿಕೆಯಲ್ಲಿ ಕೆಂಪು ಬಣ್ಣವು ಪ್ರಧಾನವಾಗಿದ್ದು ಕಣ್ಣಿನ ಸುತ್ತಲೂ ಕಪ್ಪು ಬಣ್ಣವನ್ನು ಹಚ್ಚಲಾಗುತ್ತದೆ. ಕಪ್ಪು ಬಣ್ಣದ ಕರಿಂದಾಡಿ ಮೀಸೆ ಈ ತೆರೆಯಲ್ಲಿ ಪ್ರಮುಖವಾದುದು. ಉಡುಗೆ ತೊಡುಗೆಗಳೆಲ್ಲವನ್ನು ಮರ, ಲೋಹದ ತಗಡು ಹಾಗೂ ಕೆಂಪು ಬಟ್ಟೆಯನ್ನು ಬಳಸಿ ನಿರ್ಮಿಸಲಾಗಿರುತ್ತದೆ. ತೆರೆಕಾರನು ತೋಳುಗಳಿಗೆ ಕೆಂಪು ಬಣ್ಣದ ಬಟ್ಟೆ ಹಾಗೂ ಷರಾಯಿಯನ್ನು ಧರಿಸುತ್ತಾನೆ. ಸೊಂಟಕ್ಕೆ ಕೆಂಪು ಬಣ್ಣದ ಬಟ್ಟೆಯನ್ನು ಸುತ್ತಿ ಕನ್ನಿಬಳೆ ಎಂಬ ಮರದ ಚಕ್ರವನ್ನು ಕೋಲ್‌ಂಗ್ಯೆರ್ ಸಹಾಯದಿಂದ ಕಟ್ಟಲಾಗುತ್ತದೆ. ಅದರ ಮೇಲೆ ಕೆಂಪು ಬಣ್ಣದ ಲಂಗದಂತಹ ಉಡುಪು ಚೆರುಬೊಳಂಬವನ್ನು ಧರಿಸಲಾಗುತ್ತದೆ. ಇದರ ಮೇಲ್ಭಾಗಕ್ಕೆ ಚೆಂಡ್‌ಬಳೆ ಎಂದು ಕರೆಯಲ್ಪಡುವ ವಸ್ತ್ರವನ್ನು ಇಳಿಬಿಡುತ್ತಾರೆ. ನೆತ್ತಿಯ ಮೇಲ್ಭಾಗಕ್ಕೆ

'ನೆತ್ತಿಪಟ್ಟ' ಎಂಬ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ ಎರಡೂ ಬದಿಯಲ್ಲಿ ಕಿವಿಯ ಮೇಲ್ಭಾಗಕ್ಕೆ 'ಚೆನ್ನೆಲರ್' ಧರಿಸಲಾಗುತ್ತದೆ. ನೆತ್ತಿಪಟ್ಟ್‌ನ ಮೇಲ್ಭಾಗಕ್ಕೆ 'ತಲೆಪೂ' ಧರಿಸಿ ಅದರ ಮೇಲೆ 'ಪೂಕೊಟ್ಟೆ ಚೆಂಬ್ಯಾಕ್' ಎಂಬ ಶಿರೋಭೂಷಣವನ್ನು ಧರಿಸಲಾಗುತ್ತದೆ. ಕೈ ಮತ್ತು ತೋಳುಗಳಿಗೆ ಮರದ ಬಳೆ ಮತ್ತು ಕಂಚಿನ ಚೂಡಗವನ್ನು ಧರಿಸುತ್ತಾರೆ. ಕಾಲಿಗೆ ಪಟ್ಟ್‌ಮಡವನ್ನು ಧರಿಸಿ ಪಾದಗಳ ಮೇಲ್ಭಾಗಕ್ಕೆ ಚಲ್‌ಂಬು ಧರಿಸಲಾಗುತ್ತದೆ.

**ಕುಣಿತ ಮತ್ತು ಅನುವಾದ (ಅನುಗ್ರಹ) :**

ವೇಷಭೂಷಣಗಳನ್ನು ಧರಿಸಿ ತೆರೆಕಾರನು ಸಿದ್ಧಗೊಳ್ಳುತ್ತಾನೆ. ತೆರೆಹಾಡು ಹಾಗೂ ಚಂಡೆಯ ಬಡಿತ ತೀವ್ರವಾಗುತ್ತಿದ್ದಂತೆ ದೈವು ಆವಾಹನೆಯಾಗುತ್ತದೆ. ಕೈಯಲ್ಲಿ ಒಡಿಕತ್ತಿಯನ್ನು ಹಿಡಿದು ಚಂಡೆಯ ತಾಳಕ್ಕೆ ತಕ್ಕಂತೆ ಕುಣಿಯುತ್ತದೆ. ನೆರೆದಿರುವ ಭಕ್ತರನ್ನು ಆಶೀರ್ವದಿಸುತ್ತದೆ. ಇದನ್ನು 'ಅನುವಾದ ಕೊಡ್‌ಪೊ' ಎನ್ನುತ್ತಾರೆ. ಭಗವತಿಯಿಂದ ಛೇಧಿಸಲ್ಪಟ್ಟ ನಂದಿಮುಂಡನ ಶಿರವು ಉರುಳಿದ ಸ್ಥಳಗಳು ಎನ್ನಲಾಗುವ ಕಾಣತಂಡ ಒಕ್ಕದ ಸ್ಥಳ, ಅಮ್ಮಣಿಚಂಡ ಐನ್‌ಮನೆಯ ಮುಂಭಾರ ಹಾಗೂ ದೇವಟಿ ಎಂಬ ಸ್ಥಳಗಳಗೆ ತೆರಳುತ್ತದೆ. ಅಲ್ಲಿ ನಿರ್ಮಿಸಲಾದ ಬೆಂಕಿಕೊಂಡದ ಸುತ್ತಲೂ ನರ್ತಿಸುತ್ತದೆ. ನೆರೆದಿರುವ ಭಕ್ತರೆಲ್ಲಾ ತೆರೆಯ ಮೇಲೆ ಅಕ್ಕಿ ಹಾಕುತ್ತಾರೆ. ತೆರೆಯು ಭಕ್ತರ ತಲೆಯ ಮೇಲೆ ಒಡಿಕತ್ತಿಯನ್ನು ಇರಿಸಿ ಆಶೀರ್ವದಿಸುತ್ತದೆ. ದೇವಟಿ ಎಂಬಲ್ಲಿ ಅಮ್ಮಣಿಚಂಡ ಒಕ್ಕದವರು 'ಚಪ್ಪಲೆಪುಟ್ಟ್' ಎಂಬ ವಿಶೇಷ ಖಾದ್ಯವನ್ನು ನೈವೇದ್ಯವಾಗಿ ತೆರೆಗೆ ಅರ್ಪಿಸುತ್ತಾರೆ.

ತೆರೆ ಆಚರಣೆಯ ಸಂದರ್ಭದಲ್ಲಿ ಗ್ರಾಮದ ಪ್ರತಿಯೊಂದು ಮನೆಯಲ್ಲಿ ಚಪ್ಪಲೆ ಪುಟ್ಟ್ ಎಂಬ ಸಿಹಿತಿನಿಸನ್ನು ಮಾಡುತ್ತಾರೆ. ಅಕ್ಕಿಹಿಟ್ಟು, ಬೆಲ್ಲ, ತೆಂಗಿನಕಾಯಿ ಹಾಗೂ ಎಳ್ಳಿನ ಮಿಶ್ರಣದಿಂದ ಇದನ್ನು ತಯಾರಿಸಲಾಗುತ್ತದೆ. ನರು/ ನೆರಂಜಿ ಮರ ಎಂಬ ಸ್ಥಳೀಯ ಮರದ ಎಲೆಗಳ ಮೇಲೆ ಈ ಮಿಶ್ರಣವನ್ನು ಹರಡಿ ಕಳಸಿಗೆಯಲ್ಲಿ ಬೇಯಿಸಲಾಗುತ್ತದೆ. ನಂದಿಮುಂಡನ ರಕ್ತವು ನೆಲಕ್ಕೆ ಬಿದ್ದಾಗ ಕಾಟಿಲ್ ಅಯ್ಯಪ್ಪನ ನಾಯಿಗಳು ಅದನ್ನು ನೆಕ್ಕಿ ಭಗವತಿಗೆ ಸಹಾಯ ಮಾಡಿದವು. ಅದರ ನೆನಪಿಗಾಗಿ ನಾಲಿಗೆ ಆಕಾರದಲ್ಲಿರುವ ಚಪ್ಪಲೆಪುಟ್ಟನ್ನು ತಯಾರಿಸಿ ನೈವೇದ್ಯವಾಗಿ ತೆರೆಗೆ ಅರ್ಪಿಸುವುದು ವಾಡಿಕೆ. ಗ್ರಾಮದಲ್ಲಿ ನೆಲೆಸಿರುವ ಪಾಲೇಕಂಡ ಹಾಗೂ ಅನ್ನರ್‌ಕಂಡ ಒಕ್ಕದವರು ನಿರ್ಮಿಸಿರುವ ಬೆಂಕಿಕೊಂಡದ ಸುತ್ತಲೂ ಕುಣಿಯುವ ತೆರೆಯು ನೆರೆದವರನ್ನು ಹರಸುತ್ತದೆ. ಮುಂದೆ ಕಾಣತಂಡ ಒಕ್ಕಕ್ಕೆ ಸೇರಿದ ಅಣಿಯರ ಪಂದ ಎಂಬಲ್ಲಿಗೆ ತೆರಳುತ್ತದೆ. ಅಲ್ಲಿ ನಿರ್ಮಿಸಲಾಗಿರುವ ಬೆಂಕಿಕೊಂಡದ ಸುತ್ತ ಕುಣಿಯುತ್ತದೆ. ನೆರೆದಿರುವ ಗ್ರಾಮದ ಜನರನ್ನು ತನ್ನೊಡನೆ ಸೇರಿಸಿಕೊಂಡು ಕುಣಿಯುತ್ತಾ ಸಂಭ್ರಮಿಸುತ್ತದೆ.

**೫.೧.೨.೫ ಮಾದೇರಪ್ಪ ತೆರೆ**

**ಅರ್ಥ ಮತ್ತು ವ್ಯಾಖ್ಯಾನ :**

ಮಾದೇರಪ್ಪ ವಿರಾಜಪೇಟೆ ತಾಲೂಕಿನ ಕೆದಮುಳ್ಳೂರು ಗ್ರಾಮದ ದೈವ. ಈತನನ್ನು ಶಿವನೆಂದು, ಬಯುತೂರಪ್ಪನ ಅಂಶವೆಂದೂ ನಂಬಿ ಆರಾಧಿಸುತ್ತಾರೆ. ಬಯುತೂರಪ್ಪ ಮಲೆಯಾಳದಲ್ಲಿ ನೆಲೆಸಿರುವ ದೈವ. ಈತನನ್ನು ಬೈತೂರಪ್ಪ ಆದಿ ಈಶ್ವರ ಎಂದೂ ಕರೆಯುತ್ತಾರೆ. ಕೊಡಗಿನ ಕೊಡವರು ಬಯುತೂರಪ್ಪನನ್ನು ಆರಾಧಿಸುತ್ತಾರೆ. ಕೊಡವರ ಒಕ್ಕದ ಮೂಲ ಪುರುಷ 'ಕಾರಣ'ನು ಕುಟುಂಬದ ಯಾವುದಾದರೂ ಪುರುಷನ ಮೈಮೇಲೆ ಆವಾಹನೆಯಾಗುವುದು ವಾಡಿಕೆ. 'ಕಾರಣ'ನು ಮೈಮೇಲೆ ಬಂದಾಗ ಆತ ಮೊಟ್ಟಮೊದಲು ಕೂಗುವುದು ಬಯತೂರಪ್ಪನನ್ನು. ಹೀಗೆ 'ಕಾರಣ' ನನ್ನು ಆವಾಹನೆ ಮಾಡಿಕೊಳ್ಳುವ ವ್ಯಕ್ತಿ ಹಾಗೂ ಆಯಾ 'ಒಕ್ಕ'ದ ಹಿರಿಯ ವರ್ಷಕೊಮ್ಮೆ ಬೈತೂರಪ್ಪನ ಉತ್ಸವ ನಡೆಯುವಾಗ ಆತನ ಸನ್ನಿಧಿಗೆ ತೆರಳುವ ಸಂಪ್ರದಾಯ ಪರಂಪರಾನುಗತವಾಗಿದೆ. ಕೊಡಗಿನಲ್ಲಿ ಆರಾಧಿಸಲ್ಪಡುವ ಹಲವು ದೈವಗಳು ಬೈತೂರಪ್ಪನ ಆದೇಶದಂತೆ ಕೊಡಗಿಗೆ ಬಂದು ನೆಲೆಸಿದವುಗಳು ಎಂಬುದಕ್ಕೆ ಜನಪದ ಗೀತೆಗಳು ಆಧಾರವನ್ನು ಒದಗಿಸುತ್ತವೆ.



**ಆಚರಣೆ :**

ಬೈತೂರಪ್ಪನ ಅಂಶವಾಗಿರುವ ಮಾದೇರಪ್ಪನಿಗೆ ಕೆದಮುಳ್ಳೂರಿನಲ್ಲಿ ದೇವಸ್ಥಾನವಿದೆ. ವಾರ್ಷಿಕವಾಗಿ ಗ್ರಾಮದಲ್ಲಿ ನಡೆಯುವ ಕುಳಿಯಮೆ ಚೌಂಡಿ ತೆರೆಯ ಸಂದರ್ಭದಲ್ಲಿ ಮಾದೇರಪ್ಪನಿಗೆ ತೆರೆಕಟ್ಟುವ ಆಚರಣೆ ನಡೆಯುತ್ತದೆ. ಮಾದೇರಪ್ಪ ತೆರೆಯನ್ನು ಕಟ್ಟುವವರು ಬಣ್ಣ ಸಮುದಾಯದವರು. ತೆರೆ ಕಟ್ಟುವ ಆಚರಣೆಯ ಎಲ್ಲಾ ವಿಧಿ ವಿಧಾನಗಳನ್ನು ಇಲ್ಲಿ ಅನುಸರಿಸಲಾಗುತ್ತದೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ತೆರೆಕಾರನು ತಕ್ಕಮುಖ್ಯಸ್ಥರಿಂದ ಎಣ್ಣೆಯನ್ನು ಪಡೆದುಕೊಂಡು ಸ್ನಾನದ ವಿಧಿಯನ್ನು ಮುಗಿಸಿ ಬಣ್ಣಗಾರಿಕೆಗೆ ಸಿದ್ಧನಾಗುತ್ತಾನೆ. ಮುಖವರ್ಣಿಕೆಯಲ್ಲಿ

ಕೆಂಪು, ಹಳದಿ ಮತ್ತು ಕಪ್ಪು ಬಣ್ಣವನ್ನು ಬಳಸಲಾಗುತ್ತದೆ. ಕೆಂಪು ಬಣ್ಣದ ಬಟ್ಟೆಯಿಂದ ನಿರ್ಮಿಸಲಾದ ಚೆರುಬೊಳಂಬವನ್ನು ತೆರೆಕಾರನು ಧರಿಸುತ್ತಾನೆ. ನೆತ್ತಿಗೆ ನೆತ್ತಿಪಟ್ಟ್ ಕಟ್ಟುವ ವಿಧಿ ನಡೆಯುತ್ತದೆ. ತಲೆಗೆ ತಲೆಪೂ, ಕಿವಿಗೆ ಚೆನ್ನೆರ್‌ಲ್, ವಾಲೆಕಾದ್ ಹಾಗೂ ಕೊಂಬೋಲೆ ಕಾದ್, ಹಣೆಗೆ ಚಂದ್ರಕಲೆ ಎಂಬ ಆಭರಣಗಳು ಇರುತ್ತವೆ. ಮಾದೇರಪ್ಪ ಶಿವನ ಸ್ವರೂಪದವನು. ಆದುದರಿಂದ ತೆರೆಕಾರನು ತಲೆಗೆ 'ನಾಗಡ' ಎಂಬ ಶಿರೋಭೂಷಣವನ್ನು ಧರಿಸುತ್ತಾನೆ. ಇದು ಮರದಿಂದ ನಿರ್ಮಿಸಲ್ಪಟ್ಟಿದ್ದು ಸುತ್ತಲೂ ಹಾವಿನ ಹೆಡೆಯ ಕೆತ್ತನೆ ಇರುತ್ತದೆ.

**ಆಯುಧಗಳು ಮತ್ತು ತೆರೆಯ ಕುಣಿತ :**

ತೆರೆ ಆಚರಣೆಗಳಲ್ಲಿ ಆಯುಧಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಇದೆ. ದೈವಗಳ ಆಯುಧಗಳಲ್ಲಿ ಖಡ್ಗ, ಕತ್ತಿ, ಕಡತಲೆ, ಗುರಾಣಿ, ಬೆತ್ತ, ಬಿಲ್ಲು, ಬಾಣ ಇತ್ಯಾದಿಗಳಿರುತ್ತವೆ. ಆಯುಧಗಳನ್ನು ಕೋಟ, ದೇವಸ್ಥಾನ ಅಥವಾ ಐನ್‌ಮನೆಗಳಲ್ಲಿ ಇರಿಸಿರುತ್ತಾರೆ. ಅವುಗಳನ್ನು ಶುದ್ಧ ಮುದ್ರಿಕೆಯಲ್ಲಿ ಹೊರತರಲಾಗುತ್ತದೆ. ಆಯುಧಗಳಿಗೆ ನಮಸ್ಕರಿಸಿ ತೆರೆಕಾರನು ಅವುಗಳನ್ನು ಕೈಗೆತ್ತಿಕೊಳ್ಳುತ್ತಾನೆ. ಆಚರಣೆಯ ವಿವಿಧ ಸ್ಥರಗಳಲ್ಲಿ ಆಯುಧಗಳು ತೆರೆಕಾರನ ಕೈಯಲ್ಲಿದ್ದು ಮತ್ತೆ ಹಿಂದಿರುಗುತ್ತವೆ. ಆಯುಧಗಳನ್ನು ಹಿಡಿದುಕೊಳ್ಳುವ ತೆರೆಕಾರನು ದೈವಾವೇಶಕ್ಕೆ ಒಳಗಾಗುತ್ತಾನೆ. ದೈವವು ಆವೇಶಗೊಂಡ ನಂತರ ಆಯುಧಗಳನ್ನು ಭಕ್ತರ ಕೈಗೆ ಮುಟ್ಟಿಸಿ, ತಲೆಯ ಮೇಲಿಟ್ಟು ಅನುಗ್ರಹಿಸುತ್ತದೆ. ಈ ಆಯುಧಗಳು ಅತ್ಯಂತ ಪವಿತ್ರವಾಗಿರುತ್ತವೆ ಎಂಬುದು ಜನಪದರ ನಂಬಿಕೆಯಾಗಿದೆ. ತೆರೆ ದೈವಗಳ ಅಲೌಕಿಕತೆ, ತೆರೆಕಾರನ ಆವೇಶ ಹಾಗೂ ದೈವಗಳ ಆಯುಧಗಳಿಗೂ ಸಾಂಸ್ಕೃತಿಕವಾದ ಸಂಬಂಧಗಳಿವೆ. ಮಾದೇರಪ್ಪ ದೈವದ ಬಲಗೈಯಲ್ಲಿ 'ತಾರಿ' ಎಂಬ ಚೂಪಾದ ಉದ್ದನೆಯ ಕತ್ತಿ ಹಾಗೂ ಎಡಗೈಯಲ್ಲಿ 'ಪರೆತಟ್ಟೆ' ಎನ್ನುವ ಲೋಹದ ಗುರಾಣಿ ಇರುತ್ತದೆ. ವೇಷಭೂಷಣಗಳನ್ನು ಧರಿಸಿ ಸಿದ್ಧಗೊಂಡ ತೆರೆಕಾರನು ಚಂಡೆಯ ಹಿಮ್ಮೇಳಕ್ಕೆ ಸರಿಯಾಗಿ ಕುಣಿಯುತ್ತಾನೆ. ತಾರಿಯನ್ನು ಝಳಪಿಸುತ್ತಾ ವೀರಾವೇಷದಿಂದ ವರ್ತಿಸುತ್ತಾನೆ. ಸೇರಿರುವ ಭಕ್ತಾದಿಗಳಿಗೆ ಮಾದೇರಪ್ಪನಾಗಿ ಅನುವಾದ ನೀಡುತ್ತಾನೆ. ಭಕ್ತರು ತಮ್ಮ ಹರಕೆ ಕಾಣಿಕೆಗಳನ್ನು ದೈವಕ್ಕೆ ಒಪ್ಪಿಸುತ್ತಾರೆ. ತೆರೆಬಾಂಗುವ ವಿಧಿಯ ಮೂಲಕ ತೆರೆಯು ಮುಕ್ತಾಯಗೊಳ್ಳುತ್ತದೆ.

**೫.೧.೨.೬ ಕಾಡ್ಲಯ್ಯಪ್ಪ ತೆರೆ**

**ಅರ್ಥ :**

ಕಾಡ್ಲಯ್ಯಪ್ಪ ಗೋಣಿಕೊಪ್ಪ ಸಮೀಪದ ಅರ್ವತೊಕ್ಲು ಗ್ರಾಮದ ದೈವ. ಇಲ್ಲಿನ ಅಯ್ಯಪ್ಪ 'ಕಾಡ್‌ಲ್' ಅಂದರೆ ಕಾಡಿನಲ್ಲಿ ನೆಲೆಸಿರುವುದರಿಂದ ಕಾಡ್ಲಯ್ಯಪ್ಪ

ಎನಿಸಿಕೊಂಡಿದ್ದಾನೆ. ಗ್ರಾಮದ ಕಾಡಿನೊಳಗೆ ತೆರೆದ ಮಾಡಿನ ಗುಡಿ ಕಾಡ್ಲಯ್ಯಪ್ಪನ ನೆಲೆಯಾಗಿದೆ. ಕಾಡ್ಲಯ್ಯಪ್ಪನ ವಾರ್ಷಿಕ ಉತ್ಸವದ ಸಂದರ್ಭದಲ್ಲಿ ತೆರೆಕಟ್ಟುವ ಆಚರಣೆ ನಡೆಯುತ್ತದೆ.

**ವಿಧಿ ನಿಷೇಧಗಳು :**

ಅರುವತೊಕ್ಲು ಗ್ರಾಮದಲ್ಲಿ ನೆಲೆಸಿರುವ ಪಣಿಕರು ಕಾಡ್ಲಯ್ಯಪ್ಪ ತೆರೆಯನ್ನು ಕಟ್ಟುತ್ತಾರೆ. ತೆರೆಕಟ್ಟುವ ಆಚರಣೆಗಳಲ್ಲಿ ನಡೆಸುವ ನಮ್ಮೆಕುರಿಪೊ, ವೀಳ್ಯ ಕೊಡ್‌ಪೊ, ಕೊಲೆ ಕೆತ್ತುವೊ, ಭಂಢಾರ ಉಳ್‌ಪೊ ವಿಧಿಗಳು ಇಲ್ಲಿಯೂ ಯಥಾವತ್ತಾಗಿ ಆಚರಿಸಲ್ಪಡುತ್ತವೆ. ಮಾರ್ಚ್ ತಿಂಗಳ ಎರಡನೆಯ ವಾರದಲ್ಲಿ ವಾರ್ಷಿಕ ಹಬ್ಬ ಮತ್ತು ತೆರೆಕಟ್ಟುವ ಆಚರಣೆ ನಡೆಯುತ್ತದೆ. ಹಬ್ಬದ ದಿನ ನಿಗಧಿಪಡಿಸುವ ವಿಧಿಯನ್ನು ನಮ್ಮೆ ಕುರಿಪೊ ಎನ್ನುತ್ತಾರೆ. ಇದು ೧೫ ದಿನಗಳಿಗೆ ಮುಂಚಿತವಾಗಿ ನಡೆಯುತ್ತದೆ. ಅಂದು ಊರಿನ ತಕ್ಕಮುಖ್ಯಸ್ಥರೆಲ್ಲರೂ ಸೇರುತ್ತಾರೆ. ಹಬ್ಬದ ದಿನವನ್ನು ನಿಗದಿಗೊಳಿಸುತ್ತಾರೆ. ಅದರೊಂದಿಗೆ 'ನಮ್ಮೆಕೆಟ್ಟ್' ಎಂದು ಕರೆಯಲಾಗುವ ಹಬ್ಬದ ಕಟ್ಟುಕಟ್ಟಳೆಯನ್ನು ವಿಧಿಸಲಾಗುತ್ತದೆ. ನಮ್ಮೆಕೆಟ್ಟ್ ಹಾಕಿದ ನಂತರ ಊರಿನ ವ್ಯಾಪ್ತಿಯಲ್ಲಿ ಯಾವುದೇ ಮರ ಗಿಡಗಳನ್ನು ಕಡಿಯುವಂತಿಲ್ಲ. ಮನೆಯಲ್ಲಿ ಮಾಂಸಾಹಾರವನ್ನು ಸೇವಿಸುವಂತಿಲ್ಲ ಎಂಬ ವಿಧಿನಿಷೇಧಗಳಿವೆ. ಊರಿನವರು ಇವುಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಹಬ್ಬದ ಮೊದಲನೆಯ ದಿನದಂದು ತಕ್ಕಮುಖ್ಯಸ್ಥರಾದ ಕಾಡ್ಯಮಾಡ ಒಕ್ಕದ ಐನ್‌ಮನೆಯಲ್ಲಿ ಎಲ್ಲರೂ ಸೇರುತ್ತಾರೆ. ದೇವರನ್ನು ಪ್ರಾರ್ಥಿಸಿ ಅಕ್ಕಿಹಾಕಿ ಭಂಡಾರ ಇಳಿಸುವ ಕಾರ್ಯ ನಡೆಯುತ್ತದೆ. ಇದೇ ಸಂದರ್ಭದಲ್ಲಿ 'ಬೊಳ್ಳಿ ಬಯವ' ಎಂದು ಕರೆಯಲ್ಪಡುವ ಬೆಳ್ಳಿಯ ಬಸವನ ಮೂರ್ತಿಯನ್ನು ಹೊತ್ತುಕೊಂಡು ಗ್ರಾಮದ ಮನೆಮನೆಗಳಿಗೆ ತೆರಳಲಾಗುತ್ತದೆ. ಹಬ್ಬಕ್ಕೆ ವಿಧಿಸಲಾದ ಕಟ್ಟುಕಟ್ಟಳೆಗಳನ್ನು ಮುರಿಯುವ ವಿಧಿ ನಡೆಯುತ್ತದೆ. ಹಬ್ಬದ ಆಚರಣೆ ನಡೆಯುವ ದಿನದಂದು ಎರಡು ಸುತ್ತಿನ ಗುಂಡು ಹೊಡೆಯುತ್ತಾರೆ. ಇದನ್ನು 'ಕದಿನಿ ಕುತ್ತಿ ಬೊಡಿ' ಎಂದು ಕರೆಯಲಾಗುತ್ತದೆ. ಆ ಮೂಲಕ ಊರಿನವರಿಗೆ ಹಬ್ಬದ ಕಟ್ಟು ಕಟ್ಟಳೆಗಳನ್ನು ಬಿಚ್ಚುವ ಸೂಚನೆಯನ್ನು ನೀಡಲಾಗುತ್ತದೆ. ಈ ಸಂದರ್ಭದಲ್ಲಿ ಹೊಸ ವರ್ಷದಲ್ಲಿ ಬೆಳೆದ ಭತ್ತದ ಅಕ್ಕಿ, ಹಾಲು, ಬೆಲ್ಲ, ಹಾಗೂ ತೆಂಗಿನಕಾಯಿಯನ್ನು ಸೇರಿಸಿ ನೈವೇದ್ಯ ಅರ್ಪಿಸುತ್ತಾರೆ. ಇದನ್ನು ಆಗಮಿಸಿದ ಎಲ್ಲರಿಗೂ ಪ್ರಸಾದವನ್ನಾಗಿ ವಿತರಿಸಲಾಗುತ್ತದೆ.

**ಆಚರಣೆ :**

ಕಾಡ್ಲಯ್ಯಪ್ಪ ವಾರ್ಷಿಕೋತ್ಸವದ ಎರಡನೆಯ ದಿನದಂದು ತೆರೆಕಟ್ಟುವ ಆಚರಣೆ ನಡೆಯುತ್ತದೆ. ಅಂದು ಮುಂಜಾನೆ ಐದು ಗಂಟೆಗೆ ಪಣಿಕ ಸಮುದಾಯದ ತೆರೆಕಾರನ ಮೇಲೆ ಕಾಡ್ಲಯ್ಯಪ್ಪ ದೇವರು ಮೈದುಂಬಿ ಬರುತ್ತಾನೆ. ಅನಂತರ ತೆರೆ



ಕಟ್ಟುವ ಆಚರಣೆ ನಡೆಯುತ್ತದೆ. ಗ್ರಾಮದ ಜನರು ಹೆಚ್ಚಿನ ಸಂಖ್ಯೆಯಲ್ಲಿ ಬಂದು ಸೇರಿರುತ್ತಾರೆ. ಕಾಡ್ಲಯ್ಯಪ್ಪ ತೆರೆಯಲ್ಲಿ ಯಾವುದೇ ರೀತಿಯ ವಿಶೇಷ ಬಣ್ಣಗಾರಿಕೆ ಇರುವುದಿಲ್ಲ. ತೋಳು ಹಾಗೂ ಮುಂಗೈಗೆ ಗಂಧ ಹಾಗೂ ಕುಂಕುಮದ ಅಡ್ಡನಾಮುಗಳಿರುತ್ತವೆ. ತೆರೆಕಾರನು ಬಿಳಿಯ ಬಣ್ಣದ ಪಂಚೆಯನ್ನು ಉಟ್ಟುಕೊಳ್ಳುತ್ತಾನೆ. ತಲೆಗೆ ಬಿಳಿಯ ಬಣ್ಣದ ಬಟ್ಟೆಯನ್ನು ಕಟ್ಟಿಕೊಳ್ಳುತ್ತಾನೆ. ಕೊರಳಿಗೆ ಪಾಂಬಾಳೆ ಎಂಬ ಕತ್ತಾಳೆ ಜಾತಿಯ ಗಿಡದ ಎಳೆಯ ಹಾಳೆಗಳನ್ನು ಬಳಸಿ ನಿರ್ಮಿಸಿದ ಹಾರವಿರುತ್ತದೆ. ಪಾಂಬಾಳೆಯಿಂದಲೇ ನಿರ್ಮಿಸಿದ 'ಕೈಪೂ'ವನ್ನು ಮುಂಗೈ ಹಾಗೂ ತೋಳುಗಳಿಗೆ ಕಟ್ಟುತ್ತಾರೆ.

**ಮದ್ದಳೆ ಮೇಳ ಹಾಗೂ ತೆರೆಹಾಡು :**

ಕಾಡ್ಲಯ್ಯಪ್ಪ ತೆರೆಯಲ್ಲಿ ತೆರೆಕಾರರು ಮದ್ದಳೆ ಎಂಬ ವಾದ್ಯ ಪರಿಕರವನ್ನು ಬಳಸುತ್ತಾರೆ. ಮದ್ದಳೆಯನ್ನು ಕೈಯಿಂದ ಬಾರಿಸುತ್ತಾ ಇಬ್ಬರು ಹಾಡುಗಾರರು ತೆರೆಹಾಡನ್ನು ಹಾಡುತ್ತಾರೆ. ಕಾಡ್ಲಯ್ಯಪ್ಪ ದೇವರ ಮಹಿಮೆ ಹಾಗೂ ಗ್ರಾಮದಲ್ಲಿ ಬಂದು ನೆಲೆಸಿದ ವಿವರಗಳನ್ನು ತೆರೆಹಾಡು ವರ್ಣಿಸುತ್ತದೆ. ಹಾಡು ಮುಗಿಯುತ್ತಿದ್ದಂತೆಯೇ ಕಾಡ್ಲಯ್ಯಪ್ಪ ದೇವರು ತೆರೆಕಾರನ ಮೇಲೆ ಆವಾಹನೆಯಾಗುತ್ತದೆ. ಮದ್ದಳೆಯ ನಾದಕ್ಕೆ ತಕ್ಕಂತೆ ಕುಣಿಯುತ್ತಾ ಭಕ್ತಾದಿಗಳನ್ನು ಹರಸುತ್ತದೆ.

**ಬೆಂಕಿ ಕೊಂಡ ಹಾಯುವುದು ಮತ್ತು ತೆರೆಯ ಮುಕ್ತಾಯ :**

ದೇವಾಲಯದ ಸಮೀಪ ಬೆಂಕಿ ಕೊಂಡವು ಸಿದ್ಧವಾಗಿರುತ್ತದೆ. ಮೊದಲು ತೆರೆಕಾರನು ಬೆಂಕಿಕೊಂಡವನ್ನು ಹಾಯುವ ವಿಧಿ ನಡೆಯುತ್ತದೆ. ನಂತರ ತಕ್ಕಮುಖ್ಯಸ್ಥರು ಹಾಗೂ ಒಕ್ಕದ ಹಿರಿಯ ವ್ಯಕ್ತಿಯೊಬ್ಬರ ಕೈಹಿಡಿದುಕೊಂಡು ಬೆಂಕಿ ಕೊಂಡವನ್ನು ಹಾಯುತ್ತಾನೆ. ತೆರೆ ಬಾಂಗುವೊ ವಿಧಿಯೊಂದಿಗೆ ಕಾಡ್ಲಯ್ಯಪ್ಪ ತೆರೆಯು ಮುಕ್ತಾಯಗೊಳ್ಳುತ್ತದೆ.

**೫.೧.೨.೭ ಪೊಲವಂದೆರೆ**

**ಅರ್ಥ ಮತ್ತು ವ್ಯಾಖ್ಯಾನ :**

ದಕ್ಷಿಣ ಕೊಡಗಿನ ಕೆಲವು ಗ್ರಾಮಗಳಲ್ಲಿ ಪೊಲವಪ್ಪ ದೈವವನ್ನು ತೆರೆಕಟ್ಟುವ ಆಚರಣೆಯ ಮೂಲಕ ಆರಾಧಿಸುವ ಸಂಪ್ರದಾಯವಿದೆ. ಪೊಲವಪ್ಪ ದೇವರು

ಅಯ್ಯಪ್ಪನ ಪ್ರತಿರೂಪ. ಪೊಲವಪ್ಪನಿಗೆ ಕಟ್ಟುವ ತೆರೆಯೇ ಪೊಲವಂದೆರೆ. ಇದನ್ನು ಪೊಲಂದೆರೆ ಎಂದೂ ಕರೆಯುತ್ತಾರೆ. ಪೊನ್ನಂಪೇಟೆ ಸಮೀಪದ ಹಳ್ಳಿಗಟ್ಟ್ ಹಾಗೂ ಕುಟ್ಟಂದಿ ಗ್ರಾಮಗಳಲ್ಲಿ ಪೊಲವಂದರೆಯ ಆಚರಣೆ ನಡೆಯುತ್ತದೆ. ಇಲ್ಲಿ ಗ್ರಾಮದೇವತೆಗಳಾದ ಅಯ್ಯಪ್ಪ ಹಾಗೂ ಭದ್ರಕಾಳಿಯ ಸಂತೃಪ್ತಿಗಾಗಿ ಆಚರಿಸಲ್ಪಡುವ ಬೋಡ್‌ಹಬ್ಬ ಮತ್ತು ಗ್ರಾಮದೇವರ ವಾರ್ಷಿಕೋತ್ಸವದಲ್ಲಿ ಪೊಲವಂದೆರೆಯನ್ನು ಕಟ್ಟುತ್ತಾರೆ. ಪೊಲವಂದೆರೆ ಕಟ್ಟುವುದರ ಮೂಲಕ ಹಬ್ಬಕ್ಕೆ ಚಾಲನೆ ನೀಡಲಾಗುತ್ತದೆ.

**ಆಚರಣೆ ಮತ್ತು ವೇಷಭೂಷಣಗಳು :**

ಪೊಲವಂದೆರೆ ಪಣಿಕ ಸಮುದಾಯದವರಿಗೆ ಮೀಸಲಾದ ತೆರೆ. ಊರಿನ ತಕ್ಕಮುಖ್ಯಸ್ಥರ ಮನೆಯಲ್ಲಿ ಇದರ ಆಚರಣೆಗಳು ನಡೆಯುತ್ತವೆ. ತೆರೆಕಾರನು ಗ್ರಾಮದ ತಕ್ಕಮುಖ್ಯಸ್ಥನಿಂದ ಎಣ್ಣೆಯನ್ನು ಪಡೆದುಕೊಂಡು ತಲೆ ಮತ್ತು ಮೈಗೆ ಹಚ್ಚಿಕೊಳ್ಳುತ್ತಾನೆ. ಸ್ನಾನಮಾಡಿ ಬಿಳಿ ಅಥವಾ ಕೆಂಪು ಬಣ್ಣದ ಪಂಚೆಯನ್ನು ಉಟ್ಟುಕೊಳ್ಳುತ್ತಾನೆ. ಪೊಲವಂದೆರೆಯಲ್ಲಿ ಸರಳವಾದ ಬಣ್ಣಗಾರಿಕೆ ಇರುತ್ತದೆ. ತೆರೆಕಾರನು ಹಣೆ, ತೋಳು ಹಾಗೂ ಮುಂಗೈಗೆ ಗಂಧ ಹಾಗೂ ಕುಂಕುಮದ ಅಡ್ಡನಾಮಗಳನ್ನು ಬಳಿದುಕೊಳ್ಳುತ್ತಾನೆ. ತಲೆಗೆ ಬಿಳಿಯ ಬಣ್ಣದ ಬಟ್ಟೆಯನ್ನು ಕಟ್ಟಿಕೊಳ್ಳುತ್ತಾನೆ. ಕೊರಳಿಗೆ ಪಾಂಬಾಳೆ ಗಿಡದ ಎಳೆಯ ಹಾಳೆಗಳಿಂದ ನಿರ್ಮಿಸಿದ ಹಾರವನ್ನು ಸಹಾಯಕರು ಹಾಕುತ್ತಾರೆ. ಪಾಂಬಾಳೆಯಿಂದಲೇ ನಿರ್ಮಿಸಿದ 'ಕೈಪೂ'ವನ್ನು ಮುಂಗೈ ಹಾಗೂ ತೋಳುಗಳಿಗೆ ಕಟ್ಟುತ್ತಾರೆ. ತೆರೆಕಾರನ ಸಹಾಯಕರಿಬ್ಬರು ಮದ್ದಳೆ ಬಾರಿಸುತ್ತಾ ತೆರೆಹಾಡನ್ನು ಹಾಡುತ್ತಾರೆ. ಪೊಲವಪ್ಪನನ್ನು ಆವಾಹಿಸಿಕೊಂಡು ಮದ್ದಳೆಯ ಹಿಮ್ಮೇಳಕ್ಕೆ ಸರಿಯಾಗಿ ನರ್ತಿಸುತ್ತಾನೆ. ಇಲ್ಲಿ ಯಾವುದೇ ರೀತಿಯ ತೆರೆಮುಡಿಗಳು ಇರುವುದಿಲ್ಲ. ಪೊಲವಪ್ಪನ ವಾಹನ ಕೆನ್ನಾಯಿ. ಅದನ್ನು ಬೋಟೆಕಾರ ಎನ್ನುತ್ತಾರೆ. ಅದರ ಸಂಕೇತವಾಗಿ ಬಿದಿರಿನಿಂದ ಕೆನ್ನಾಯಿಯ ಪುಟ್ಟ ಪ್ರತಿಕೃತಿಯನ್ನು ನಿರ್ಮಿಸಲಾಗುತ್ತದೆ. ಅದನ್ನು ತೆರೆಕಾರನು ತೋಳಿನಲ್ಲಿ ಧರಿಸಿಕೊಂಡು ನರ್ತಿಸುವನು. ಆಚರಣೆಯಲ್ಲಿ ಭಾಗವಹಿಸಿದವರನ್ನು ಹರಸುವನು.

**ಅವಲಕ್ಕಿ ನೈವೇದ್ಯ(ಅವುಲ್‌ಇಡುವೊ) :**

ಪೊಲವಂದೆರೆಯ ನಂತರ ಅಯ್ಯಪ್ಪನಿಗೆ ಅವಲಕ್ಕಿ ನೈವೇದ್ಯ ಅರ್ಪಿಸುವ 'ಅವುಲ್ ಇಡುವೊ' ವಿಧಿ ನಡೆಯುತ್ತದೆ. ಊರಿನ ಇಬ್ಬರು ತಕ್ಕಮುಖ್ಯಸ್ಥರು ಪಣಿಕರೊಂದಿಗೆ ಈ ಆಚರಣೆಯನ್ನು ನಡೆಸುತ್ತಾರೆ. ಇವರು ಕಟ್ಟುನಿಟ್ಟಾದ ಉಪವಾಸವನ್ನು ಪಾಲಿಸುತ್ತಾರೆ. ಗ್ರಾಮದ ದೇವರ ಕೆರೆಯಲ್ಲಿ ಸ್ನಾನಮಾಡಿ ದೇವರ ಭಂಡಾರ ಪೆಟ್ಟಿಗೆಯನ್ನು ಶುದ್ಧಗೊಳಿಸುತ್ತಾರೆ. ಊರಿನ ಕೆರೆಯ ಬಳಿ

ಒಲೆಹಾಕಿ ಹೊಸ ಮಡಿಕೆಯೊಂದರಲ್ಲಿ ಭತ್ತವನ್ನು ಬೇಯಿಸಿ ಹದಗೊಳಿಸಲಾಗುತ್ತದೆ. ಅದನ್ನು ಕುಟ್ಟಿ ಅವಲಕ್ಕಿಯನ್ನು ತಯಾರಿಸಿ ನೈವೇದ್ಯ ಅರ್ಪಿಸುತ್ತಾರೆ. ಈ ಅವಲಕ್ಕಿಗೆ ಬಾಳೆಹಣ್ಣಿನ ಚೂರುಗಳನ್ನು ಮಿಶ್ರಮಾಡಿ 'ಅವುಲ್ ಪ್ರಸಾದ' ಎಂದು ಸ್ವೀಕರಿಸುತ್ತಾರೆ. ಇದರೊಂದಿಗೆ ಪೊಲವಂದೆರೆ ಮುಕ್ತಾಯವಾಗುತ್ತದೆ.

**೫.೧.೨.೮ ಆಯಿರಬಿಲ್ಲಪನ ಪೊಲವಂದೆರೆ**

**ಅರ್ಥ ಮತ್ತು ಹಿನ್ನೆಲೆ :**

ಆಯಿರಬಿಲ್ಲಪ್ಪನನ್ನು ಕಿರುಗೂರು ಗ್ರಾಮದಲ್ಲಿ ನೆಲೆಸಿರುವ ಕೊಡವ ಭಾಷಿಕ ಪೆಗ್ಗಡೆ ಸಮುದಾಯದ ಏಳು ಕುಟುಂಬಗಳು(ಕೊರಕುಟ್ಟಿರ, ಪೊಕ್ಕಳಿಚಂಡ, ಪಾನಿಕುಟ್ಟಿರ, ಕಾಕೇರ, ಚಾರಿಮಂಡ, ಚೂರಿರ, ವಾಣಂಡ) ಆರಾಧಿಸುತ್ತವೆ. ಆಯಿರ ಎಂದರೆ ಸಾವಿರ; ಬಿಲ್ಲಪ್ಪ ಎಂದರೆ ಬಿಲ್ಲನ್ನು ಹೊಂದಿರುವವನು ಎಂಬ ಅರ್ಥವಿದೆ. ಆಯಿರಬಿಲ್ಲಪ್ಪ ಅಯ್ಯಪ್ಪನ ಪ್ರತಿರೂಪ. ಹಾಲು ಒಸರುವ ಮರದಡಿಯಲ್ಲಿ ನೆಟ್ಟಿರುವ ಶೂಲಗಳು, ಉದ್ದವಾದ ತೂರಬೆತ್ತ(ಕಿರುಬಿದಿರಿನ ಬೆತ್ತ) ಹಾಗೂ ಕಡತಲೆ ಆಯಿರಬಿಲ್ಲಪ್ಪನ ಸಂಕೇತವಾಗಿದೆ.

**ಆಚರಣೆ :**

ಪಣಿಕರು ಆಯಿರಬಿಲ್ಲಪ್ಪನಿಗೆ ಪೊಲವಂದೆರೆಯನ್ನು ಕಟ್ಟುತ್ತಾರೆ. ಇದನ್ನು ಪೊಲವನತೆರೆ ಎಂತಲೂ ಕರೆಯುತ್ತಾರೆ. ತೆರೆಕಾರನು ಕುಟುಂಬದ ಮುಖ್ಯಸ್ಥನಿಂದ ಎಣ್ಣೆಯನ್ನು ಪಡೆದು ಸ್ನಾನಮಾಡುತ್ತಾನೆ. ಸೊಂಟಕ್ಕೆ ಬಿಳಿಯ ಪಂಚೆ ಹಾಗೂ ತಲೆಗೆ ಬಿಳಿಯ ಬಟ್ಟೆಯನ್ನು ಕಟ್ಟಿಕೊಳ್ಳುತ್ತಾನೆ. ಹಣೆ, ತೋಳು ಹಾಗೂ ಮುಂಗೈಗೆ ಗಂಧ ಹಾಗೂ ಕುಂಕುಮದ ಅಡ್ಡನಾಮಗಳನ್ನು ಬಳಿಯುತ್ತಾನೆ. ಆತನ ಸಹಾಯಕರು ಪಾಂಬಾಳೆ ಗಿಡದ ಎಳೆಯ ಹಾಳೆಗಳಿಂದ ನಿರ್ಮಿಸಿದ 'ಕೈಪೂ'ವನ್ನು ಮುಂಗೈ ಹಾಗೂ ತೋಳುಗಳಿಗೆ ಕಟ್ಟುತ್ತಾರೆ. ಕೊರಳಿಗೆ ಪಾಂಬಾಳೆಯಿಂದಲೇ ನಿರ್ಮಿಸಿದ ಹಾರವನ್ನು ಹಾಕುತ್ತಾರೆ. ಪ್ರಾರ್ಥಿಸಿ ಅಕ್ಕಿ ಹಾಕಿ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿ ಹಾಗೂ ಕಾಲಿಗೆ ಚಲ್ಂಬುವನ್ನು ಧರಿಸುತ್ತಾನೆ.

**ಮೊಗ/ಮುಡಿ ಹೊತ್ತುಕೊಳ್ಳವುದು :**

ಆಯಿರಬಿಲ್ಲಪ್ಪನ ಪೊಲವಂದೆರೆಯಲ್ಲಿ ತೆರೆಕಾರನು ಮೊಗ ಹೊತ್ತುಕೊಳ್ಳುವ ಆಚರಣೆಯನ್ನು ಮಾಡುತ್ತಾನೆ. ಇಲ್ಲಿ ಮೊಗ ಅಂದರೆ ಕಂಚಿನ ಮುಖವಾಡವಲ್ಲ. ಅದೊಂದು ಬಿದಿರಿನ ಆಕೃತಿ. ಇದನ್ನು ಮುಡಿ ಎಂದೂ ಕರೆಯುತ್ತಾರೆ. ಮೊಗವನ್ನು ಹಸಿ ಬಿದಿರಿನಿಂದ ನಿರ್ಮಿಸಲಾಗುತ್ತದೆ. ಇದು ವೃತ್ತಾಕಾರದಲ್ಲಿರುತ್ತದೆ. ಕೆಲವು ಗ್ರಾಮಗಳಲ್ಲಿ ಮುಡಿಯನ್ನು ತ್ರಿಕೋನಕಾರದಲ್ಲಿ ನಿರ್ಮಿಸುತ್ತಾರೆ. ಅದರ ಮೇಲ್ಭಾಗಕ್ಕೆ ಕೆಂಪು ಬಟ್ಟೆಯ ಹೊದಿಕೆ ಇರುತ್ತದೆ. ಪಾಂಬಳೆ ಹಾಳೆಗಳನ್ನು ವಿವಿಧ ನಮೂನೆಗಳಲ್ಲಿ ಕತ್ತರಿಸಿ ಮೊಗವನ್ನು ಅಲಂಕರಿಸುತ್ತಾರೆ. ತೆರೆಕಾರನ ಸಹಾಯಕರು ತೆರೆಪಾಟ್

ಹಾಡುತ್ತಾ ಮದ್ದಳೆ ಬಾರಿಸಲಾರಂಭಿಸುತ್ತಾರೆ. ಅಲಂಕೃತ ಮೊಗವನ್ನು ತೆರೆಕಾರನು ಹೊತ್ತುಕೊಳ್ಳುತ್ತಾನೆ. ಆಯಿರಬಿಲ್ಲಪ್ಪ ದೈವವು ಮೈದುಂಬಿ ಬಂದು ಮದ್ದಳೆಯ ತಾಳಕ್ಕೆ ಸರಿಯಾಗಿ ಆವೇಶಭರಿತವಾಗಿ ಕುಣಿಯಲಾರಂಭಿಸುತ್ತದೆ. ಕೆಲವು ಹೊತ್ತು ಕುಣಿದ ನಂತರ ಭಕ್ತರಿಗೆ ಅನುವಾದ ನೀಡುವ ಮೂಲಕ ಅನುಗ್ರಹಿಸುತ್ತದೆ. ಅವರೊಂದಿಗೆ ಮಾತನಾಡುತ್ತಾ ಕಾಣಿಕೆ ಸ್ವೀಕರಿಸಿ ಹರಸುತ್ತದೆ. ಕೋಳಿಬಲಿಯ ಮೂಲಕ ತೆರೆಯು ಮುಕ್ತಾಯಗೊಳ್ಳುತ್ತದೆ.

**೫.೧.೨.೯ ಸಾರ್ತಾವು ತೆರೆ**

**ಅರ್ಥ ಮತ್ತು ಐತಿಹ್ಯ :**



ಸಾರ್ತಾವು ಕೊಡಗಿನ ಕೆಲವು ನಾಡುಗಳಲ್ಲಿ ಪೂಜಿಸಲ್ಪಡುವ ಪುರುಷ ದೈವ. ಕಡಿಯತ್‌ನಾಡಿನಲ್ಲಿ ಮಲೆ ಸಾರ್ತಾವು, ಪಾಡಿ ನಾಲ್‌ನಾಡಿನಲ್ಲಿ ಮಕ್ಕಿ ಸಾರ್ತಾವು, ಎಡೆನಾಲ್‌ನಾಡಿನಲ್ಲಿ ಪೆರುವಾಳ್ ಸಾರ್ತಾವು ಇತ್ಯಾದಿ ಹೆಸರುಗಳಿಂದ ಸಾರ್ತಾವು ದೈವವನ್ನು ಆರಾಧಿಸುವುದು ವಾಡಿಕೆ. ಸಾರ್ತಾವುವನ್ನು ಶಾಸ್ತಾವು ಎಂತಲೂ ಕರೆಯುತ್ತಾರೆ. ಸಾರ್ತಾವು ದೈವವನ್ನು ಕುರಿತ ಕಥೆಯೊಂದು ಹೀಗಿದೆ. ಹಿಂದೆ ಗೋಕರ್ಣ ದೇಶದ ಗೋಕರ್ಣ ಗಿರಿಯಲ್ಲಿ ಮೃಗೇಶ್ವರನೆಂಬ ರಾಕ್ಷಸ ವಾಸಿಸುತ್ತಿದ್ದನು. ತನಗೆ ಅಗ್ನಿಯ ಹಸ್ತ ಬೇಕೆಂದು ಶಿವನನ್ನು ಕುರಿತು ಒಂಟಿಕಾಲಿನಲ್ಲಿ ನಿಂತು ತಪಸ್ಸು ಮಾಡಿದನು. ತಪಸ್ಸಿಗೆ ಒಲಿದ ಶಿವನು ಪ್ರತ್ಯಕ್ಷನಾಗಿ ಅಗ್ನಿಹಸ್ತದ ವರವನ್ನು ನೀಡಿದನು. ಸಂತೋಷಗೊಂಡ ಮೃಗೇಶ್ವರನು ವರವನ್ನು ಪರೀಕ್ಷಿಸಲೆಂದು ಶಿವನ ತಲೆಯ ಮೇಲೆ ಕೈ ಇಡಲು ಹೋಗುವನು. ಹೆದರಿದ ಶಿವನು ದಟ್ಟ ಕಾಡಿನ ನಡುವೆಯಿದ್ದ ದೊಡ್ಡ ಮರದ ಪೊಟರೆಯೊಳಗೆ ಅವಿತುಕೊಂಡನು. ಪೊಟರೆಯೊಳಗಿದ್ದ ಶಿವನು ಬಿಸಿಲ ತಾಪವನ್ನು ತಾಳಿಕೊಳ್ಳಲಾಗದೆ ತೊಳಲಾಡತೊಡಗಿದನು. ಇದನ್ನು ಅರಿತ ವಿಷ್ಣು ಶಿವನ ಬಳಿ ಬಂದನು. ಅಷ್ಟರಲ್ಲಿ ಅಲ್ಲಿಯೇ ಇದ್ದ ಮೃಗೇಶ್ವರ ಆತನ ತಲೆಯ ಮೇಲೂ ಕೈಯಿರಿಸಲು ಮುಂದಾದನು. ಅಪಾಯ ಅರಿತ ವಿಷ್ಣು ಮೋಹಿನಿ ರೂಪ ಧರಿಸುವನು. ಮೋಹಿನಿಯ ಸೌಂದರ್ಯಕ್ಕೆ ಮರುಳಾದ ಮೃಗೇಶ್ವರ ತನ್ನನ್ನು

ಮದುವೆಯಾಗುವಂತೆ ಒತ್ತಾಯಿಸುವನು. ಸಮ್ಮತಿಸಿದ ಮೋಹಿನಿ "ನಾನು ನರ್ತಿಸುವಂತೆ ನೀನೂ ನರ್ತಿಸಬೇಕು" ಎಂಬ ಷರತ್ತು ಹಾಕಿದಳು. ಇದನ್ನು ಸಂತೋಷದಿಂದ ಒಪ್ಪಿಕೊಂಡ ಮೃಗೇಶ್ವರ ಮೋಹಿನಿಯಂತೆ ನರ್ತಿಸತೊಡಗಿದನು. ಮೋಹಿನಿಯು ನರ್ತಿಸುತ್ತಾ ತನ್ನ ಕೈಯನ್ನು ತಲೆಯ ಮೇಲಿರಿಸುವಳು. ಆಕೆಯನ್ನು ಅನುಕರಿಸಿದ ಮೃಗೇಶ್ವರ ಅಗ್ನಿಹಸ್ತದ ಪ್ರಭಾವದಿಂದ ಉರಿದು ಬೂದಿಯಾದನು. ಬಳಿಕ ವಿಷ್ಣುವು ತನ್ನ ನಿಜರೂಪ ಧರಿಸಿ ಶಿವನ ಬಳಿ ಬಂದು ನಡೆದ ವಿಚಾರವನ್ನು ವರ್ಣಿಸುವನು. ಆಗ ಶಿವನು "ಮೋಹಿನಿ ರೂಪದಲ್ಲಿ ಮೃಗೇಶ್ವರನೊಂದಿಗೆ ನರ್ತಿಸಿದಂತೆ ನನ್ನ ಮುಂದೆ ನರ್ತಿಸು" ಎಂದನು. ಶಿವನ ಕೋರಿಕೆಯಂತೆ ವಿಷ್ಣುವು ಮೋಹಿನಿ ರೂಪ ಧರಿಸಿ ನರ್ತಿಸಿದನು. ಮೋಹಿನಿಯ ಸೌಂದರ್ಯಕ್ಕೆ ಮನಸೋತ ಶಿವನು ಒಂದಾದನು. ಗರ್ಭವತಿಯಾದ ಮೋಹಿನಿ ಗಂಡು ಮಗುವಿಗೆ ಜನ್ಮ ನೀಡಿದಳು. ಮಗುವಿಗೆ ಸಾರ್ತಾವು ಎಂಬ ಹೆಸರಿಟ್ಟು ಪೋಷಿಸಿದರು. ಬೆಳೆದು ನಿಂತ ಸಾರ್ತಾವುವನ್ನು ಭೂಲೋಕದಲ್ಲಿ ನೆಲೆಸು ಎಂದು ಹರಸಿ ಕಳುಹಿಸಿದರು.

ಬಲಶಾಲಿಯಾದ ಸಾರ್ತಾವು ಏಳುಲೋಕವನ್ನು ಗೆದ್ದು ಬ್ರಹ್ಮಲೋಕದಿಂದ ಬ್ರಹ್ಮನನ್ನು ಪದಚ್ಯುತಗೊಳಿಸಿದನು. ಬ್ರಹ್ಮಪಟ್ಟದಲ್ಲಿ ಕುಳಿತು ಸೃಷ್ಟಿಕಾರ್ಯವನ್ನು ಮಾಡಿದನು. ಹುಟ್ಟಿದ ಜನರ್‍ಯಾರೂ ಸಾಯಬಾರದು ಎಂದನು. ಇದರಿಂದ ದೇವತೆಗಳು ದಿಗಿಲುಗೊಂಡರು. ಸಾರ್ತಾವುವಿಗೆ ತಿಳಿಹೇಳಲು ನಾರದನನ್ನು ಕಳುಹಿಸಿದರು. ಬ್ರಹ್ಮಲೋಕಕ್ಕೆ ತೆರಳಿದ ನಾರದನು ಸಾರ್ತಾವುವನ್ನು ಕುರಿತು "ಹದಿನಾಲ್ಕು ಲೋಕದಲ್ಲಿ ನಿನ್ನನ್ನು ಮೀರಿಸುವವರು ಯಾರೂ ಇಲ್ಲ. ನಿನ್ನ ತಂದೆ ಸಾಕ್ಷಾತ್ ಶಿವ. ತಾಯಿ ವಿಷ್ಣು. ಹೀಗಿರುವಾಗ ನಿನ್ನನ್ನು ಮೀರಿಸುವವರು ಯಾರು? ನೀನಿರುವಲ್ಲಿ ಹುಟ್ಟಿದವರು ಸಾಯುವುದಿಲ್ಲ." ಎಂದು ಹೊಗಳುವನು. ಇದರಿಂದ ಸಾರ್ತಾವುವಿಗೆ ಬಹಳ ಸಂತೋಷವಾಯಿತು. ಅಷ್ಟರಲ್ಲಿ ನಾರದನು "ಹಾಗಾದರೆ ನಿನಗೆ ಪಾರ್ವತಿ ಮತ್ತು ಲಕ್ಷ್ಮಿದೇವಿಯರು ಸಂಬಂಧದ ಪ್ರಕಾರ ಏನಾಗಬೇಕು ಹೇಳು?" ಎನ್ನುವನು. ನಾರದನ ಪ್ರಶ್ನೆಗೆ ಉತ್ತರಿಸಲಾಗದ ಸಾರ್ತಾವು ಸೋಲೊಪ್ಪಿಕೊಂಡು ಬ್ರಹ್ಮ ಪಟ್ಟವನ್ನು ತ್ಯಜಿಸಿದನು. ಭೂಲೋಕಕ್ಕೆ ಬಂದು ನಾರದನ ಪ್ರಶ್ನೆಗೆ ಉತ್ತರವನ್ನು ಯೋಚಿಸುತ್ತಾ ದಟ್ಟವಾದ ಕಾಡಿನಲ್ಲಿ ನೆಲೆಸಿದನು.

ಹೀಗೆ ಹರಿ ಮತ್ತು ಹರನ ಪುತ್ರನಾದ ಸಾರ್ತಾವು ಭೂಲೋಕದಲ್ಲಿ ನೆಲೆನಿಂತನು. ಪಾಡಿನಾಲ್ ನಾಡಿನಲ್ಲಿ ನೆಲೆಸಿರುವ ಮಕ್ಕಿ ಸಾರ್ತಾವುವಿನ ಉಗಮವೂ ಈ ಐತಿಹ್ಯವನ್ನೇ ಹೋಲುತ್ತದೆ. ಆದರೆ ಮುಕ್ಕಿ ಸಾರ್ತಾವು ದೈವಕ್ಕೆ ಯಾವುದೇ ರೀತಿಯ ತೆರೆಕಟ್ಟುವ ಆಚರಣೆಗಳಿಲ್ಲ. ಅಲ್ಲಿ ಸಾರ್ತಾವುವಿನ ನೆಲೆಗೆ ಒಳಪಟ್ಟ ಅಂಜಿಕೂಟ್(ಐದುಕೂಟ) ಮೂರ್ತಿಗಳು, ವಿಷ್ಣುಮೂರ್ತಿ ಹಾಗೂ ಅಜ್ಜಪ್ಪನಿಗೆ

ತೆರೆಕಟ್ಟುವ ಆಚರಣೆ ನಡೆಯುತ್ತದೆ.

**ಆಚರಣೆ :**

ಸಾರ್ತಾವು ಕೊಡಗಿನ ಕೆಲವು ಗ್ರಾಮಗಳ ಗ್ರಾಮದೈವ. ಈ ಗ್ರಾಮಗಳಲ್ಲಿ ಸಾರ್ತಾವು ತೆರೆಯು ವಾರ್ಷಿಕ ಉತ್ಸವದಂತೆ ನಡೆಯುತ್ತವೆ. ಸಾರ್ತಾವು ತೆರೆಯನ್ನು ಪಣಿಕರು ಕಟ್ಟುವರು. ತೆರೆಕಟ್ಟುವ ಆಚರಣೆಗಳ ಪೂರ್ವಭಾವಿ ಹಾಗೂ ಆರಂಭಿಕ ವಿಧಿಗಳಾದ ಹಬ್ಬದ ದಿನ ನಿಗದಿಗೊಳಿಸುವುದು, ವೀಳ್ಯ ಕೊಡುವುದು ಹಾಗೂ ಭಂಡಾರ ಇಳಿಸುವ ಆಚರಣೆಗಳನ್ನು ಸಾರ್ತಾವು ತೆರೆಯಲ್ಲೂ ಮಾಡುತ್ತಾರೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ತೆರೆಕಾರನು ಮುಖ್ಯಸ್ಥನಿಂದ ಎಣ್ಣೆಯನ್ನು ಪಡೆದು ಸ್ನಾನ ಮಾಡುವನು. ಕೆಂಪುಬಣ್ಣದ ಅಂಗಿ ಮತ್ತು ಷರಾಯಿಯನ್ನು ಧರಿಸುವನು. ಪ್ರಾರ್ಥಿಸಿ ಬಣ್ಣಗಾರಿಕೆಯಲ್ಲಿ ತೊಡಗುವನು. ಮುಖವರ್ಣಿಕೆಯಲ್ಲಿ ಹಳದಿ ಬಣ್ಣವನ್ನು ತಳಹದಿಯಾಗಿ ಬಳಸಲಾಗುತ್ತದೆ. ಅದರ ಮೇಲೆ ಕೆಂಪು ಬಣ್ಣದ ಮುದ್ರೆ ಹಾಗೂ ಚುಕ್ಕೆಗಳಿರುತ್ತವೆ. ಕಣ್ಣು, ಕಣ್ಣಿನ ಸುತ್ತ ಹಾಗೂ ಹುಬ್ಬಿನ ಮೇಲ್ಭಾಗಕ್ಕೆ ಕಪ್ಪು ಬಣ್ಣವನ್ನು ಹಚ್ಚುತ್ತಾರೆ. ತುಟಿಗೆ ಕೆಂಪು ಬಣ್ಣ, ಮೂಗಿನ ಮೇಲ್ಭಾಗದಲ್ಲಿ ಆಂಗ್ಲಭಾಷೆಯ 'ಯು' ಅಕ್ಷರದ ಆಕಾರದಲ್ಲಿ ಕೆಂಪು ಗುರುತು ಇರುತ್ತದೆ. ಬಣ್ಣಗಾರಿಕೆಯ ನಂತರ ತೆರೆಕಾರನಿಗೆ ಲಂಗದಂತಹ ಉಡುಪು ಚೆರುಬೊಳಂಬವನ್ನು ಸಹಾಯಕರು ತೊಡಿಸುತ್ತಾರೆ. ಇದನ್ನು ಬಿಳಿಯ ಬೊಟ್ಟುಗಳಿಂದ ಕೂಡಿದ ಕೆಂಪು ಬಟ್ಟೆಯಿಂದ ತಯಾರಿಸಿರುತ್ತಾರೆ. ಕಿವಿಗೆ ವಾಲೆಕಾದ್ ಹಾಗೂ ಕೊಂಬೋಲೆ ಕಾದ್ ಎಂಬ ಆಭರಣಗಳು, ಕುತ್ತಿಗೆಗೆ ಕಯತ್‌ಕೆಟ್ಟ್ ಎಂಬ ಮರದ ಪದಕವನ್ನು ತೊಡಿಸುತ್ತಾರೆ. ದೈವವನ್ನು ಪ್ರಾರ್ಥಿಸಿ ಅಕ್ಕಿಹಾಕಿ ತೆರೆಕಾರನ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ ಮೇಲೆ ತಲೆಪೂ ಹಾಗೂ ಹಾವಿನ ಹೆಡೆಯಾಕೃತಿಯ 'ನಾಗಡ' ಎಂಬ ಶಿರೋಭೂಷಣ ಇರುತ್ತದೆ. ತೆರೆಕಾರನಿಗೆ ಉದ್ದವಾದ ಗಡ್ಡ ಮತ್ತು ಮೀಸೆಗಳನ್ನು ಕಟ್ಟುತ್ತಾರೆ. ಕೈಗಳಿಗೆ ಮರದ ಬಳೆ, ಕೈಪೂ ಹಾಗೂ ಚೂಡಗವನ್ನು ತೊಡಿಸುತ್ತಾರೆ. ಕಾಲಿಗೆ ಚಲ್ಂಬು ಧರಿಸಿದ ನಂತರ ಮಂಡಿಯ ಕೆಳಭಾಗಕ್ಕೆ ಮಣಿಕೇರ್ ಕಟ್ಟುತ್ತಾರೆ. ಅದರ ಕೆಳಭಾಗಕ್ಕೆ ಪಟ್ಟ್ಂಬಡವನ್ನು ತೊಡಿಸುತ್ತಾರೆ. ವೇಷಭೂಷಣವನ್ನು ಧರಿಸಿ ತೆರೆಕಾರನು ಸಿದ್ಧಗೊಳ್ಳುತ್ತಾನೆ. ಸಾರ್ತಾವು ದೈವದ ಆಯುಧಗಳಾದ ಕಡ್ತಲೆಯನ್ನು ಬಲಗೈಯಲ್ಲಿ ಹಾಗೂ ಬಿಲ್ಲುಬಾಣಗಳನ್ನು ಎಡಗೈಯಲ್ಲಿ ಹಿಡಿದುಕೊಳ್ಳುತ್ತಾನೆ. ಚಂಡೆಯ ಬಡಿತ ಹಾಗೂ ತೆರೆಹಾಡು ತಾರಕಕ್ಕೆ ಏರುತ್ತಿದ್ದಂತೆ ದೈವವು ಮೈದುಂಬಿ ಕುಣಿಯಲಾರಂಭಿಸುತ್ತದೆ. ಹೀಗೆ ಕುಣಿಯುತ್ತಾ ಭಕ್ತಾದಿಗಳನ್ನು ಹರಸುತ್ತದೆ. ಅನಂತರ ತೆರೆಮುಡಿ ಹೊತ್ತುಕೊಳ್ಳುವ ಆಚರಣೆ ನಡೆಯುತ್ತದೆ.

**ತೆರೆಮುಡಿ:**

ಸಾರ್ತಾವು ತೆರೆಯುಲ್ಲೂ ತೆರೆಮುಡಿ ಹೊತ್ತುಕೊಳ್ಳುವ ವಿಧಿ ಪ್ರಮುಖವಾಗಿರುತ್ತದೆ. ಉದ್ದವಾದ ಬಿದಿರನ್ನು ಬಳಸಿ ತೆರೆಮುಡಿಯುನ್ನು ನಿರ್ಮಿಸುತ್ತಾರೆ. ಬುಡಭಾಗದಲ್ಲಿ ಸುಮಾರು ಮೂರು ಅಡಿ ಅಗಲವಿರುತ್ತದೆ. ತುದಿಭಾಗ ಚೂಪಾಗಿ ಚಪ್ಪಟೆ ಶಂಕುವಿನಾಕಾರದಲ್ಲಿರುತ್ತದೆ. ಅದರ ಒಳಭಾಗಕ್ಕೆ ಕೂವಲೆ ಎಂಬ ಸ್ಥಳೀಯ ಜಾತಿಯ ಗಿಡದ ಎಲೆಗಳನ್ನು ಜೋಡಿಸಲಾಗುತ್ತದೆ. ತೆರೆಮುಡಿಯ ಮುಂಭಾಗಕ್ಕೆ ಕೆಂಪು ವಸ್ತ್ರವನ್ನು ಹೊದಿಸುತ್ತಾರೆ. ಮೇಲ್ತುದಿಗೆ ಪಾಂಬಾಳೆಯಿಂದ ನಿರ್ಮಿಸಿದ ಚೌರಿಯುನ್ನು ಕಟ್ಟುತ್ತಾರೆ. ಕೆಳಭಾಗವನ್ನು ಹೂವಿನಿಂದ ಅಲಂಕರಿಸುತ್ತಾರೆ. ಅದರ ಕೆಳಗೆ ಬುಡದವರೆಗೆ ಕೆಂಪುಬಟ್ಟೆ ಎದ್ದು ಕಾಣುವಂತಿರುತ್ತದೆ. ನಡುವೆ ಪಾಂಬಾಳೆಯ ಕಿರು ಅಲಂಕಾರವಿರುತ್ತದೆ. ಮುಡಿಯ ಮುಂಭಾಗವನ್ನು ಹೂವಿನಮಾಲೆಗಳಿಂದ ಅಲಂಕರಿಸುತ್ತಾರೆ. ಹೀಗೆ ಸಿದ್ಧಗೊಂಡ ತೆರೆಮುಡಿಯನ್ನು ತೆರೆಕಾರನು ಹೊತ್ತುಕೊಳ್ಳುತ್ತಾನೆ. ಚಂಡೆಯ ನಾದಕ್ಕೆ ಸರಿಯಾಗಿ ನರ್ತಿಸುತ್ತಾನೆ. ಬಳಿಕ ಎಲ್ಲರೂ ಸಾರ್ತಾವು ತೆರೆಯು ಬಳಿ ತೆರಳಿ ದೈವದ ಅನುಗ್ರಹವನ್ನು ಪಡೆದುಕೊಳ್ಳುತ್ತಾರೆ.

**೫.೧.೨.೧೦ ನಂದಿಮಂಡ ತೆರೆ**

**ಅರ್ಥ ಮತ್ತು ಹಿನ್ನೆಲೆ :**



ನಂದಿಮಂಡ ತೆರೆಯನ್ನು ಕದನೂರು ಗ್ರಾಮದವರು ಮಾತ್ರ ಆಚರಿಸುವರು. ಗ್ರಾಮದೇವತೆ ಕದನೂರು ಭಗವತಿಯು ವಾರ್ಷಿಕೋತ್ಸವ ಸಂದರ್ಭದಲ್ಲಿ ಈ ಆಚರಣೆ ನಡೆಯುತ್ತದೆ. ಸ್ಥಳೀಯ ಐತಿಹ್ಯದ ಪ್ರಕಾರ ನಂದಿಮಂಡ ಒಬ್ಬ ರಾಕ್ಷಸ. ಈತ ಕದನೂರು ಭಗವತಿಯ ಶತ್ರು. ಕೊಡವ ಭಾಷೆಯಲ್ಲಿ 'ಮಂಡ' ಅಂದರೆ ಗೂಳಿ ಎಂದು ಅರ್ಥ. ಈತನು ಗೂಳಿಯ ರೂಪ ಧರಿಸಿದ್ದರಿಂದ ಈ ಹೆಸರು ಬಂದಿದೆ. ಈ ಹಿನ್ನೆಲೆಯುಲ್ಲಿ ಭಗವತಿ ತೆರೆಯೊಂದಿಗೆ ನಂದಿಮಂಡ ತೆರೆಯು ಏಕಕಾಲದಲ್ಲಿ ನಡೆಯುತ್ತದೆ.

**ಆಚರಣೆ :**

ಗ್ರಾಮದಲ್ಲಿನ ಮಲಿಯರು ನಂದಿಮಂಡ ತೆರೆಯನ್ನು ಕಟ್ಟುತ್ತಾರೆ. ಸರಳವಾದ ವೇಷಭೂಷಣಗಳೊಂದಿಗೆ ಆಚರಣೆ ನಡೆಯುತ್ತದೆ. ತೆರೆಕಾರನು ಬಿಳಿಯ ಬಣ್ಣದ



ಚಡ್ಡಿಯನ್ನು ಧರಿಸುತ್ತಾನೆ. ಮುಖ, ಕೈ, ಕಾಲು, ಬೆನ್ನು ಹಾಗೂ ಹೊಟ್ಟೆಗೆ ಹಳದಿ ಬಣ್ಣವನ್ನು ಹಚ್ಚಿಕೊಳ್ಳುತ್ತಾನೆ. ತಲೆಯ ಮೇಲೆ ಮರದಿಂದ ತಯಾರಿಸಲಾದ ಎತ್ತಿನ ಮುಖವಾಡವನ್ನು ಕಟ್ಟಿಕೊಳ್ಳುತ್ತಾನೆ. ಕದನೂರು ಭಗವತಿ ದೇವಾಲಯದ ಆವರಣದಲ್ಲಿ ಈ ಆಚರಣೆಯು ನಡೆಯುತ್ತದೆ. ನಂದಿಮಂಡ ತೆರೆಯನ್ನು ತೆರೆಮುಡಿ ಹೊತ್ತ ಕದನೂರು ಭಗವತಿ ತೆರೆಯು ಬೆನ್ನಟ್ಟಿಕೊಂಡು ಹೋಗುತ್ತದೆ. ನಂದಿಮಂಡ ತೆರೆಯು ತಪ್ಪಿಸಿಕೊಳ್ಳುತ್ತದೆ. ಹೀಗೆ ಹದಿನೇಳು ಬಾರಿ ಪುನರಾವರ್ತನೆಯಾಗುತ್ತದೆ. ಹದಿನೆಂಟನೇ ಸಲ ಭಗವತಿಯು ತನ್ನ ಆಯುಧದಿಂದ ನಂದಿಮಂಡನ ಶಿರವನ್ನು ಛೇಧಿಸುವ ಅಣಕು ಪ್ರದರ್ಶನ ನಡೆಯುತ್ತದೆ. ನಂದಿಮಂಡ ತೆರೆಯು ಕೆಳಗೆ ಬೀಳುವುದರ ಮೂಲಕ ತೆರೆ ಮುಕ್ತಾಯವಾಗುತ್ತದೆ. ಸೇರಿರುವ ಭಕ್ತರೆಲ್ಲಾ ಭಗವತಿ ತೆರೆಗೆ ಕಾಣಿಕೆ ಸಲ್ಲಿಸಿ ಆಶೀರ್ವಾದವನ್ನು ಪಡೆದುಕೊಳ್ಳುತ್ತಾರೆ.

**೫.೧.೨.೧೧ ಮಂದಣಮೂರ್ತಿ ತೆರೆ**

**ಅರ್ಥ ಮತ್ತು ಆಚರಣೆ :**



ಮಂದಣಮೂರ್ತಿ ಕೊಡವ ಒಕ್ಕ(ಕುಟುಂಬ)ಗಳ ರಕ್ಷಕ. ಈ ದೈವಕ್ಕೆ ಮಂದಣ್ಣಮೂರ್ತಿ, ಮಂದ್ರಾಮೂರ್ತಿ ಎಂಬ ನಾಮಾಂತರಗಳಿವೆ. ಕೊಡವ ಕುಟುಂಬಗಳು ನಡೆಸುವ ಒಕ್ಕತೆರೆಗಳಲ್ಲಿ ಮೊದಲು ಮಂದಣಮೂರ್ತಿಗೆ ತೆರೆಕಟ್ಟುವ ಆಚರಣೆಯನ್ನು ಮಾಡುತ್ತಾರೆ. ಮಲಿಯರು ಮತ್ತು ಪಣಿಕರು ಮಂದಣಮೂರ್ತಿ ತೆರೆಯನ್ನು ಕಟ್ಟುವುದು ವಾಡಿಕೆ. ಐನ್‌ಮನೆ(ಕುಟುಂಬದ ಮೂಲಮನೆ)ಯ ನೆಲ್ಲಕ್ಕಿ ನಡುಬಾಡೆಯಲ್ಲಿ ರಾತ್ರಿ ೯ ಗಂಟೆಗೆ ಈ ಆಚರಣೆಯು ಪ್ರಾರಂಭವಾಗುತ್ತದೆ. ಇದು ಹಲವು ವಿಧಿವಿಧಾನಗಳನ್ನು ಒಳಗೊಂಡಿರುತ್ತದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ನಮ್ಮೆ ಕುರಿಪೊ (ದಿನ ನಿಗದಿಗೊಳಿಸುವುದು) :**

ಇದು ಮಂದಣಮೂರ್ತಿ ತೆರೆಯ ಆರಂಭಿಕ ವಿಧಿಯಾಗಿದೆ. ಕುಟುಂಬದ ಪಟ್ಟೆದಾರ(ಹಿರಿಯ) ಹಾಗೂ ಸದಸ್ಯರು ಐನ್‌ಮನೆಯಲ್ಲಿ ಸೇರಿ ಚರ್ಚಿಸುತ್ತಾರೆ. ತೆರೆಕಟ್ಟುವ ಆಚರಣೆಯ ದಿನವನ್ನು ನಿಗದಿಗೊಳಿಸುತ್ತಾರೆ.

**ವೀಳ್ಯ ಕೊಡ್‌ಪೊ (ವೀಳ್ಯ ಕೊಡುವುದು) :**

ತೆರೆಕಟ್ಟುವವನನ್ನು ಆಹ್ವಾನಿಸುವ ವಿಧಿಯನ್ನು ವೀಳ್ಯ ಕೊಡ್‌ಪೊ ಎನ್ನುತ್ತಾರೆ. ಕುಟುಂಬದ ಹಿರಿಯರು ತೆರೆಕಾರನ ಮನೆಗೆ ಹೋಗುತ್ತಾರೆ. ಆತನ ಮನೆಯ ನೆಲ್ಲಕ್ಕಿ ನಡುಬಾಡೆಯಲ್ಲಿ ಉರಿಯುತ್ತಿರುವ ದೀಪದ ಮುಂದೆ ನಿಂತು ದೇವರನ್ನು ಪ್ರಾರ್ಥಿಸುವರು. ಅನಂತರ ಮೂರು ವೀಳ್ಯದೆಲೆಯ ಮೇಲೆ ಮೂರು ಅಡಿಕೆಯನ್ನು ಇಟ್ಟು ಅದನ್ನು ತೆರೆಕಾರನಿಗೆ ಕೊಡುವರು. ನಿಗದಿತ ದಿನದಂದು ತೆರೆಕಟ್ಟುವ ಆಚರಣೆಯನ್ನು ಸುಸೂತ್ರವಾಗಿ ನಡೆಸಿಕೊಡುವಂತೆ ಆಹ್ವಾನಿಸುವರು. ತೆರೆಕಾರನಿಗೆ ಕುಟುಂಬದವರು ನೀಡುವ ಅಧಿಕೃತ ಅನುಮತಿ ಇದಾಗಿದೆ.

**ಕೊಲೆ ಕೆತ್ತುವೊ( ಗೊನೆ ಕಡಿಯುವುದು) :**

ತೆರೆಕಟ್ಟುವ ಆಚರಣೆಗೆ ಅವಶ್ಯಕವಾದ ಬಾಳೆಗೊನೆಯನ್ನು ಕಡಿಯುವ ವಿಧಿಯನ್ನು ಕೊಲೆ ಕೆತ್ತುವೊ ಎನ್ನುತ್ತಾರೆ. ತೆರೆ ಆಚರಣೆಗೆ ಐದು, ಏಳು ಅಥವಾ ಒಂಬತ್ತು ದಿನಗಳ ಮುಂಚಿತವಾಗಿ ಈ ಆಚರಣೆ ನಡೆಯುತ್ತದೆ. ಕುಟುಂಬದ ಹಿರಿಯ ಮಿಂದು ಶುಚೀಭೂರ್ತನಾಗಿ ಬಾಳೆಗೊನೆ ಕಡಿಯುತ್ತಾನೆ. ಕಡಿದ ಬಾಳೆಗೊನೆಯನ್ನು ಐನ್‌ಮನೆಯ ಕನ್ನಿಕೋಂಬರೆ(ದೇವರಿಗೆ ನೈವೇದ್ಯ ಇಡುವ ಕೋಣೆ)ಯಲ್ಲಿ ಇರಿಸಲಾಗುತ್ತದೆ.

**ಎಣ್ಣೆ ಕೊಡ್‌ಪೊ(ಎಣ್ಣೆ ನೀಡುವುದು) ಮತ್ತು ಸ್ನಾನದ ವಿಧಿ :**

ಈ ವಿಧಿಯಲ್ಲಿ ಕುಟುಂಬದ ಹಿರಿಯನು ತೆರೆಕಾರನಿಗೆ ಎಣ್ಣೆಯನ್ನು ನೀಡುತ್ತಾನೆ. ತೆರೆಕಾರನು ತಕ್ಕ ಮುಖ್ಯಸ್ಥನಿಗೆ ನಮಸ್ಕರಿಸಿ "ಎಣ್ಣೆಯನ್ನು ಪಡೆದುಕೊಳ್ಳುವೆ" ಎಂದು ಮೂರು ಬಾರಿ ಹೇಳಿ ಪಡೆದುಕೊಳ್ಳುತ್ತಾನೆ. ಈ ವಿಧಿಯ ನಂತರ ತೆರೆಯ ಸಮಸ್ತ ಜವಾಬ್ದಾರಿ ತೆರೆಕಾರನದಾಗಿರುತ್ತದೆ. ಪಡೆದುಕೊಂಡ ಎಣ್ಣೆಯನ್ನು ತಲೆ ಮತ್ತು ದೇಹಕ್ಕೆ ಹಚ್ಚಿಕೊಂಡು ಸ್ನಾನಕ್ಕೆ ತೆರಳುತ್ತಾನೆ. ಸ್ನಾನ ಮುಗಿಸಿದ ನಂತರ ಐನ್‌ಮನೆಯ ನೆಲ್ಲಕ್ಕಿ ನಡುಬಾಡೆಗೆ ಬರುತ್ತಾನೆ.

**ಅರಿಂದಿರಿ(ಅಕ್ಕಿ ಮತ್ತು ಬತ್ತಿ) ಆಚರಣೆ :**

ಅರಿಂದಿರಿ ಎಂದರೆ ಅಕ್ಕಿ ಮತ್ತು ಬತ್ತಿ. ಇವುಗಳನ್ನು ತೆರೆಕಾರನು ಕುಟುಂಬದ ಹಿರಿಯನಿಂದ ಪಡೆದುಕೊಳ್ಳುತ್ತಾನೆ. ಬಾಳೆಲೆಯ ಮೇಲೆ ಅಕ್ಕಿ ಮತ್ತು ತೆಂಗಿನ ಕಾಯಿಯನ್ನು ಇಡುತ್ತಾರೆ. ಅದರ ಮುಂಭಾಗದಲ್ಲಿ ಬತ್ತಿಯನ್ನಿಟ್ಟು ಹೊತ್ತಿಸಿ

ತೆರೆಕಾರನಿಗೆ ನೀಡಲಾಗುತ್ತದೆ.

**ತಟ್ಟ್‌ತಡೆ(ಬಾಳೆಯ ಕಂದಿನಿಂದ ಮಾಡಿದ ಚೌಕಾಕೃತಿ) :**

ತೆರೆಕಾರನು ಸ್ನಾನ ಮುಗಿಸಿ ಬರುವಷ್ಟರಲ್ಲಿ ಆತನ ಸಹಾಯಕರು ನೆಲವನ್ನು ಶುದ್ಧೀಕರಿಸಿ ತಟ್ಟ್‌ತಡೆಯನ್ನು ನಿರ್ಮಿಸಿರುತ್ತಾರೆ. ಇದನ್ನು ಬಾಳೆ ಕಂದುಗಳನ್ನು ಸೀಳಿ ಚೌಕಾಕಾರವಾಗಿ ಮಾಡಿರುತ್ತಾರೆ. ಒಂದು ಇಂಚು ಅಗಲ ಮತ್ತು ಎರಡು ಅಡಿ ಉದ್ದದ ಪಟ್ಟಿಗಳನ್ನು ಕತ್ತರಿಸಿಕೊಳ್ಳುವರು. ಈ ಪಟ್ಟಿಗಳನ್ನು ಒಂದರ ಮೇಲೆ ಒಂದರಂತೆ ಚೌಕಾಕಾರವಾಗಿ ಜೋಡಿಸುವರು. ಚೌಕಾಕೃತಿಯ ಮಧ್ಯಭಾಗದಲ್ಲಿ ಪಟ್ಟಿಗಳನ್ನು ಸಂಕಲನ ಚಿಹ್ನೆಯ ಮಾದರಿಯಲ್ಲಿರಿಸಿ ವಿಭಾಗಿಸಲಾಗುತ್ತದೆ. ಆಯಾ ತೆರೆಗಳಿಗೆ ಅನುಗುಣವಾಗಿ ನಾಲ್ಕು, ಆರು, ಹನ್ನೆರಡು ಹೀಗೆ ವಿಭಾಗಗಳಿರುತ್ತವೆ. ಇದರ ಮೇಲ್ಭಾಗಕ್ಕೆ ಬಿದಿರಿನ ಕೋಲನ್ನು ಚುಚ್ಚುತ್ತಾರೆ. ಈ ಬಿದಿರಿನ ಕೋಲಿಗೆ ಬಟ್ಟೆಯನ್ನು ಸುತ್ತಿ ಅದಕ್ಕೆ ಎಣ್ಣೆಯನ್ನು ಅದ್ದಿ ಉರಿಸುವರು. ಇದನ್ನು ಕೋತಿರಿ ಅಥವಾ ಕೋತ್ರಿ ಎನ್ನುತ್ತಾರೆ. ಈ ಚೌಕಾಕೃತಿಯನ್ನು ಬಾಳೆ ಎಲೆಯ ಮೇಲೆ ಇರಿಸುವರು. ಮೊದಲ ಎರಡು ವಿಭಾಗಕ್ಕೆ ಭತ್ತದ ಅರಳು ಮತ್ತು ಅಕ್ಕಿಯನ್ನು ತುಂಬಿಸುವರು. ಎರಡನೆಯ ವಿಭಾಗದಲ್ಲಿ ತೆಂಗಿನಕಾಯಿಯನ್ನು ಗಣಪತಿಗೆ ಗಣೋದಿ ಇಡುವರು. ಅದರ ಮತ್ತೊಂದು ಭಾಗದಲ್ಲಿ ಮೇಲ್ಭಾಗದ ಚಿಪ್ಪು ತೆಗೆದ ತೆಂಗಿನಕಾಯಿಯನ್ನು ಇರಿಸುವರು. ಇದರ ನೀರನ್ನು ತೆರೆಯು ತೀರ್ಥವೆಂದು ಸೇವಿಸಿ ಭಕ್ತರಿಗೂ ನೀಡುತ್ತದೆ. ಮತ್ತೆರಡು ವಿಭಾಗಗಳಲ್ಲಿ ತೆಂಗಿನ ಹೋಳುಗಳನ್ನು ಇರಿಸುತ್ತಾರೆ. ತಟ್ಟ್‌ತಡೆಯ ಸಮೀಪ ಮೊರದಲ್ಲಿ ಭತ್ತದ ಅರಳನ್ನು ಇಡುತ್ತಾರೆ. ಅದರ ಮೇಲ್ಭಾಗದಲ್ಲಿ ಭತ್ತ ತುಂಬಿರುವ ಪಾನಿ(ಎರಡು ಸೇರಿನ ಅಳತೆಯ ಮಾಪಕ) ಇರುತ್ತದೆ. ಪಾನಿಯ ಮೇಲೆ ಅಕ್ಕಿ ತುಂಬಿರುವ ಮಾನ(ಅರ್ಧ ಸೇರಿನ ಅಳತೆಯ ಮಾಪಕ)ವನ್ನು ಇಡುತ್ತಾರೆ. ಮಾನದ ಮೇಲೆ ತೆಂಗಿನಕಾಯಿಯನ್ನು ಇಟ್ಟು ಎರಡು ಕೋತಿರಿಯನ್ನು ಉರಿಸುವರು. ಅರಶಿನ ಮತ್ತು ಸುಣ್ಣ ಮಿಶ್ರಿತ ನೀರನ್ನು ಪಾತ್ರೆಯೊಂದಕ್ಕೆ ತುಂಬಿಸುವರು. ಕೆಂಪು ವರ್ಣದ ಈ ನೀರನ್ನು ಕುರ್ದಿನೀರು ಎನ್ನುತ್ತಾರೆ. ಇದು ರಕ್ತದ ಸಂಕೇತವಾಗಿದೆ.

**ನಾಲ್ಮೊಳಿ ತಕ್ಕ್(ಆರಂಭಿಕ ಪ್ರಾರ್ಥನಾ ನುಡಿ) :**

ಅಕ್ಕಿ ಮತ್ತು ಬತ್ತಿಯನ್ನು ಪಡೆದುಕೊಂಡ ನಂತರ ತೆರೆಕಾರರು, ಕುಟುಂಬದ ಹಿರಿಯ, ಕುಟುಂಬದ ಸದಸ್ಯರು ಹಾಗೂ ಬಂಧುಗಳು ನೆಲ್ಲಕ್ಕಿ ನಡುಬಾಡೆಯಲ್ಲಿ ಸೇರುತ್ತಾರೆ. ಕುಟುಂಬದ ಹಿರಿಯನು ಎಲ್ಲರಿಗೂ ಅಕ್ಕಿಯನ್ನು ನೀಡಿ ಸರ್ವರ ಪರವಾಗಿ "ನಡೆಯುತ್ತಿರುವ ಈ ಕಾರ್ಯವನ್ನು ಕುಟುಂಬದ ಕಾರೋಣ ಹಾಗೂ ಮಂದಣಮೂರ್ತಿಯು ತೃಪ್ತಿಯಿಂದ ಸ್ವೀಕರಿಸಬೇಕು. ಅರಿತೋ ಅರಿಯದೆಯೋ ತಪ್ಪುಗಳಾಗಿದ್ದರೆ ಕ್ಷಮಿಸಿ ಮಂದಣಮೂರ್ತಿಯು ನಮ್ಮೆಲ್ಲರನ್ನು ಕಾಪಾಡಲಿ"

ಎಂದು ಪ್ರಾರ್ಥಿಸುತ್ತಾನೆ. ಈತನ ನಂತರ ತೆರೆಕಾರನು ಪ್ರಾರ್ಥಿಸುತ್ತಾನೆ. ಎಲ್ಲರೂ ಉರಿಯುತ್ತಿರುವ ದೀಪಕ್ಕೆ ಅಕ್ಕಿಯನ್ನು ಹಾಕುತ್ತಾರೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ತೆರೆಕಾರನ ಸಹಾಯಕರು ಬಣ್ಣಗಾರಿಕೆಯ ಕೆಲಸವನ್ನು ಮಾಡುತ್ತಾರೆ. ಇದನ್ನು 'ತೆರೆಕುರಿಪೊ' ಎನ್ನುತ್ತಾರೆ. ಮಂದಣಮೂರ್ತಿ ತೆರೆಯು ಮುಖವರ್ಣಿಕೆಯಲ್ಲಿ ಅರಸಿನ ಬಣ್ಣವನ್ನು ತಳಹದಿಯಾಗಿ ಬಳಸುತ್ತಾರೆ. ಹುಬ್ಬಿನ ಕೆಳಭಾಗ ಹಾಗೂ ಕಣ್ಣಿನ ಸುತ್ತ ಕಪ್ಪು ಬಣ್ಣವನ್ನು ಹಚ್ಚಲಾಗುತ್ತದೆ. ಹಣೆಯಲ್ಲಿ ಕೆಂಪು ಬಣ್ಣದ ತಿಲಕವನ್ನು ಹಚ್ಚಿ ಮುದ್ರೆಯನ್ನು ಬಿಡಿಸುತ್ತಾರೆ. ಮೂಗಿನಿಂದ ಕಿವಿಯವರೆಗೆ ಗಲ್ಲದ ಮೇಲೆ ಹಾದುಹೋಗುವಂತೆ ವಿಸ್ತಾರವಾದ ರೇಖೆಗಳನ್ನು ಎಳೆಯುತ್ತಾರೆ. ಬಣ್ಣಗಾರಿಕೆಯ ನಂತರ ತೆರೆಕಾರನು ವೇಷ ಭೂಷಣಗಳನ್ನು ಧರಿಸುತ್ತಾನೆ. ಕೆಂಪು ಬಣ್ಣದ ಉದ್ದ ತೋಳಿನ ಅಂಗಿ ಮತ್ತು ಷರಾಯಿಯನ್ನು ಧರಿಸಿದ ತೆರೆಕಾರನ ಸೊಂಟಕ್ಕೆ ಕನ್ನಿಬಳೆಯನ್ನು ಬಿಗಿದು ಕಟ್ಟಲಾಗುತ್ತದೆ. ಅದರ ಮೇಲ್ಭಾಗವನ್ನು ಅಡಕ್‌ನಿಂದ ಮುಚ್ಚಲಾಗುತ್ತದೆ. ಅದರ ಮೇಲೆ ಬಟ್ಟೆ ಹಾಗೂ ಬಿದಿರಿನ ಪಟ್ಟಿಗಳನ್ನು ಬಳಸಿ ತಯಾರಿಸಲಾದ 'ಚೆರು' ಅಥವಾ 'ಚೆರು ಬೊಳಂಬ'ವನ್ನು ಧರಿಸುತ್ತಾರೆ. ಕೆಂಪು ಬಣ್ಣದ ಈ ಉಡುಪು ಲಂಗದಂತಿರುತ್ತದೆ. ಕೆಳಭಾಗಕ್ಕೆ ಕೆಂಪು, ಕಪ್ಪು ಹಾಗು ಬಿಳಿ ಬಣ್ಣದ ಪಟ್ಟಿಗಳಿರುತ್ತವೆ. ಚೆರುವಿನ ಮೇಲ್ಭಾಗಕ್ಕೆ ಚೆಂಡ್‌ಬಳೆ ಎಂಬ ಕಲಾತ್ಮಕ ವಸ್ತ್ರವನ್ನು ಇಳಿಬಿಟ್ಟರೆ ಮಂದಣಮೂರ್ತಿಯ ವೇಷ ಪೂರ್ಣಗೊಳ್ಳುತ್ತದೆ.

**ಚೊಡಲ್‌ಚಿಕ್ ಕೊಡ್‌ಪೊ (ಚೊಡಲ್‌ಚಿಗೆ ಬಲಿ ನೀಡುವುದು) :**

ಚೊಡಲ್‌ಚಿ ಎಂದರೆ ಹೆರಿಗೆಯ ಸಂದರ್ಭದಲ್ಲಿ ಮರಣಿಸಿದ ಕುಟುಂಬದ ಮೂಲ ಮಹಿಳೆ. ಕೆಲವು ಕೊಡವ ಕುಟುಂಬಗಳಲ್ಲಿ ಚೊಡಲ್‌ಚಿಗೆ ನೆಲೆ ಇರುತ್ತದೆ. ಹಲಸಿನ ಮರದಡಿಯಲ್ಲಿರುವ ಪುಟ್ಟ ಕಲ್ಲು ಈಕೆಯ ಸ್ಥಾನ. ಚೊಡಲ್‌ಚಿ ಸಣ್ಣ ಮಕ್ಕಳನ್ನು ಕಾಯಿಲೆಗಳಿಂದ ರಕ್ಷಿಸುತ್ತಾಳೆ ಎಂಬ ನಂಬಿಕೆ ಜನಪದರಲ್ಲಿದೆ. ಮಗುವಿಗೆ ಒಂದು ತಿಂಗಳು ತುಂಬುವ ಮುನ್ನ ಚೊಡಲ್‌ಚಿಗೆ ಕೋಳಿ ಅರ್ಪಿಸುವುದು ವಾಡಿಕೆ. ಮಂದಣಮೂರ್ತಿ ತೆರೆ ಆಚರಣೆ ನಡೆಸುವ ಎಲ್ಲಾ ಕುಟುಂಬಗಳಲ್ಲಿ ಚೋಡಲ್‌ಚಿಗೆ ಬಲಿ ನೀಡುವ ಪದ್ಧತಿ ಇಲ್ಲ. ಕೇವಲ ಚೊಡಲ್‌ಚಿಯ ನೆಲೆ ಇರುವ ಕುಟುಂಬಗಳಲ್ಲಿ ಮಂದಣ ಮೂರ್ತಿ ತೆರೆಕಟ್ಟುವಾಗ ಈ ವಿಧಿಯನ್ನು ನಡೆಸುತ್ತಾರೆ. ವೇಷಭೂಷಣಗಳನ್ನು ಧರಿಸಿ ಸಿದ್ಧನಾದ ತೆರೆಕಾರನು ಕುಟುಂಬ ದವರೊಂದಿಗೆ ಚೊಡಲ್‌ಚಿಯ ನೆಲೆಗೆ ಹೋಗುತ್ತಾನೆ. ಅಲ್ಲಿ ಕೋತಿರಿಯನ್ನು ಹೊತ್ತಿಸಲಾಗುತ್ತದೆ. ಸುಣ್ಣ ಮತ್ತು ಅರಿಸಿನ ಮಿಶ್ರಿತ ಕುರ್ದಿನೀರನ್ನು ಬಲಿ ನೀಡುವ ಕೋಳಿಗೆ ಚಿಮುಕಿಸುತ್ತಾರೆ. ಅದರ ಕುತ್ತಿಗೆಯನ್ನು ಕತ್ತರಿಸಿ ತಟ್ಟ್‌ತಡೆಗೆ ಬಲಿ

ನೀಡುತ್ತಾರೆ. ಈ ಆಚರಣೆಯಲ್ಲಿ ಮಹಿಳೆಯರು ಭಾಗವಹಿಸುವಂತಿಲ್ಲ.

**ನೆತ್ತಿಪಟ್ಟ್(ನೆತ್ತಿಪಟ್ಟಿ)ಧರಿಸುವುದು :**

ನೆಲ್ಲಕ್ಕಿ ನಡುಬಾಡೆಯ ಬಲಭಾಗದಲ್ಲಿ ಬಾಳೆಕಂದಿನ ಚೌಕಾಕೃತಿ ತಟ್ಟ್‌ತಡೆಯನ್ನು ಇರಿಸಿರುತ್ತಾರೆ. ಅದರ ಹತ್ತಿರ ನಾಲ್ಕು ಕಾಲಿನ 'ಪ್‌ಡ' ಎಂಬ ಪೀಠದಲ್ಲಿ ತೆರೆಕಾರನು ಕುಳಿತುಕೊಳ್ಳುತ್ತಾನೆ. ದೈವವನ್ನು ಪ್ರಾರ್ಥಿಸಿ ಅಕ್ಕಿ ಹಾಕಿ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುತ್ತಾನೆ. ನೆತ್ತಿಪಟ್ಟಿಯನ್ನು ತಲಪಾಳಿ ಅಂತಲೂ ಕರೆಯುವರು. ಆ ಮೂಲಕ ತೆರೆಕಾರನು ಮಂದಣಮೂರ್ತಿಯ ಶಕ್ತಿಯನ್ನು ತನ್ನೊಳಗೆ ಆವಾಹಿಸಿಕೊಳ್ಳುತ್ತಾನೆ. ಇದರೊಂದಿಗೆ ಚಂಡೆಯ ಬಡಿತ ಹಾಗೂ ತೆರೆಪಾಟ್ ಪ್ರಾರಂಭಗೊಳ್ಳುತ್ತದೆ.

**ಚಲ್‌ಂಬು ಧರಿಸುವುದು :**

ನೆತ್ತಿಪಟ್ಟಿ ಧರಿಸಿದ ನಂತರ ಚಲ್‌ಂಬು ಧರಿಸುವ ಆಚರಣೆ ನಡೆಯುತ್ತದೆ. ತೆರೆಕಾರನು ಬಾಳೆಲೆಯ ಮೇಲೆ ಇರಿಸಿರುವ ಚಲ್‌ಂಬುಗಳನ್ನು ಎತ್ತಿಕೊಳ್ಳುತ್ತಾನೆ. ಎರಡೂ ಕೈಯಲ್ಲಿ ಹಿಡಿದುಕೊಂಡು ಕುಲುಕುತ್ತಾ ಧರಿಸಲು ಅನುಮತಿ ಕೇಳುತ್ತಾನೆ. ಕುಟುಂಬದ ಹಿರಿಯ ಹಾಗೂ ಕುಟುಂಬದವರು ಒಪ್ಪಿಗೆ ಸೂಚಿಸಿದ ನಂತರ ಕಾಲುಗಳಿಗೆ ಧರಿಸುತ್ತಾನೆ. ಅಷ್ಟರಲ್ಲಿ ತೆರೆಹಾಡು ಮತ್ತು ಚಂಡೆಯ ಬಡಿತ ತೀವ್ರವಾಗುವುದು. ಅದಕ್ಕೆ ಅನುಗುಣವಾಗಿ ತೆರೆಕಾರನು ಪ್‌ಡದಿಂದ ಒಮ್ಮೆಲೆ ಎದ್ದು ಕುಣಿಯಲಾರಂಭಿಸುವನು.

**ಕುಣಿತ ಮತ್ತು ಅನುವಾದ(ಅನುಗ್ರಹ) :**

ಮಂದಣಮೂರ್ತಿ ತೆರೆಯು ತನ್ನ ಆಯುಧವಾದ ಬೆತ್ತ ಮತ್ತು ಗಂಟೆಯನ್ನು ಕೈಯಲ್ಲಿ ಹಿಡಿದುಕೊಳ್ಳುತ್ತದೆ. ಚಂಡೆಯ ಹಿಮ್ಮೇಳಕ್ಕೆ ಅನುಗುಣವಾಗಿ ನೆಲ್ಲಕ್ಕಿ ನಡುಬಾಡೆಯಲ್ಲಿರುವ ಮುಂದ್(ಒಳತೊಟ್ಟಿ)ನ ಸುತ್ತಲೂ ಕುಣಿಯುತ್ತದೆ. ಚಂಡೆಯ ಬಡಿತ ತೀವ್ರವಾದಂತೆ ಕುಣಿತದ ಗತಿಯು ತೀವ್ರವಾಗುತ್ತದೆ. ಹೀಗೆ ಆವೇಶಭರಿತವಾಗಿ ಮೂರು ಸುತ್ತು ಕುಣಿಯುತ್ತದೆ. ಅನಂತರ ನೆರೆದಿರುವ ಭಕ್ತರಿಗೆ ಅಭಯದ ಮಾತುಗಳನ್ನಾಡಿ ಆಶೀರ್ವದಿಸುತ್ತದೆ. ತಟ್ಟ್‌ತಡೆಗೆ ಕೋಳಿಬಲಿಯನ್ನು ಅರ್ಪಿಸಿ 'ತೆರೆಬಾಂಗುವೊ' ವಿಧಿಯ ಮೂಲಕ ತೆರೆಯು ಮುಕ್ತಾಯಗೊಳ್ಳುತ್ತದೆ.

**೫.೧.೨.೧೨ ಕುಳಿಯಂದೆರೆ**

**ಅರ್ಥ ಮತ್ತು ಹಿನ್ನೆಲೆ :**

ಕುಳಿಯ ಕುಟುಂಬದ ಭೂಮಿಯನ್ನು ರಕ್ಷಿಸುವ ದೈವ. ಈತನನ್ನು ಗುಳಿಗ, ಗುಳಿಕ ಎಂತಲೂ ಕರೆಯುತ್ತಾರೆ. ಕುಳಿಯ ಶನಿಯ ಮಗನೆಂಬುದು ಜನಪದರ ನಂಬಿಕೆ. ಹಾಲು ಒಸರುವ ಮರದಡಿಯಲ್ಲಿ ನೆಲೆಸಿರುತ್ತಾನೆ. ಕುಳಿಯ ತನ್ನ ವ್ಯಾಪ್ತಿಯ ಭೂಮಿಯೊಂದಿಗೆ ಆಯಾಯ ಕುಟುಂಬದ ಜಾನುವಾರುಗಳನ್ನೂ

ರಕ್ಷಿಸುತ್ತಾನೆ. ಹಲಸು, ಬಸರಿ ಮತ್ತು ಗೋಣಿ ಮರದ ಕೆಳಗೆ ಕಲ್ಲಿನ ರೂಪದಲ್ಲಿ ಈತನನ್ನು ಪೂಜಿಸಲಾಗುತ್ತದೆ. ಕುಳಿಯನು ಓಣಂ ಹಬ್ಬದ ಸಂದರ್ಭದಲ್ಲಿ ಮಲೆಯಾಳದಿಂದ ಏಳಕ್ಕಿ(ಏಳು ಅಕ್ಕಿಕಾಳು)ಗಳನ್ನು ಕೊಡಗಿಗೆ ತಂದು ಮಾಂಗುಳಿಯ(ಮಹಾ ಕುಳಿಯ) ಎನಿಸಿಕೊಂಡನು. ಈ ಹಿನ್ನೆಲೆಯಲ್ಲಿ ಪುತ್ತರಿ ಹಬ್ಬಕ್ಕೆ 'ಏಳಕ್ಕಿ ಪುತ್ತರಿ' ಎಂಬ ಹೆಸರು ಬಂದಿತು ಎಂಬ ಪ್ರತೀತಿಯಿದೆ.



ಕುಳಿಯ ದೈವವನ್ನು ಕೊಡಗಿನಲ್ಲಿ ಬೇರೆ ಬೇರೆ ಹೆಸರಿನಲ್ಲಿ ಕರೆಯುವರು. ಅವುಗಳೆಂದರೆ ಭೂಮಿಕುಳಿಯ, ಪಾಕುಳಿಯ, ರಾವುಕುಳಿಯ, ಸಂಚಾರಿ ಕುಳಿಯ, ಈತ್ಂಗುಳಿಯ, ತೀಕುಳಿಯ, ತೆಕ್ಕ್ಂಗುಳಿಯ, ಬಡ್ಕ್ಂಗುಳಿಯ, ಸಂಸಾರ ಕುಳಿಯ ಇತ್ಯಾದಿ. ಈತನ ಹೆಸರಿನಲ್ಲಿ ಆಯಾಯ ಸ್ಥಳಗಳಿಗೆ ಅನುಗುಣವಾಗಿ ಹೆಸರು, ಗುಣ ವಿಶೇಷಗಳು ಹಾಗೂ ಪೌರಾಣಿಕ ಹಿನ್ನೆಲೆ ಇದೆ. ಇವರಲ್ಲಿ ಪಾಕುಳಿಯ ಸಸ್ಯಾಹಾರಿ. ಅಮ್ಮಕೊಡವರಲ್ಲಿ ಇವನಿಗೆ ಪೂಜೆ ಸಲ್ಲುತ್ತದೆ. ಭೂಮಿಯ ರಕ್ಷಕ ಭೂಮಿ ಕುಳಿಯ. ಈತನಿಗೆ ವಾರ್ಷಿಕವಾಗಿ ಎಲ್ಲಾ ಒಕ್ಕಗಳು ಕುಳಿಯಂಗ್ ಕೊಡ್‌ಪ(ಕುಳಿಯನಿಗೆ ಬಲಿ ಕೊಡುವುದು) ಆಚರಣೆಯನ್ನು ಮಾಡುತ್ತಾರೆ. ಇದು ಮಿಥುನ ಮಾಸ ಅಂದರೆ ಜೂನ್ ತಿಂಗಳಿನಲ್ಲಿ ನಡೆಯುತ್ತದೆ. ಕೋಳಿ ಮತ್ತು ಚೊಳ್ಳೆಕಳ್ಳ (ಹಲಸಿನ ಮರದ ಎಲೆಯಲ್ಲಿ ಮಾಡಿದ ದೊನ್ನೆಯಲ್ಲಿ ಕಳ್ಳು) ಕುಳಿಯನಿಗೆ ಪ್ರಿಯವಾದುದು. ಕುಟುಂಬದ ಪುರುಷರೆಲ್ಲರೂ ನಿಗದಿತ ದಿನದಂದು ಸೇರುತ್ತಾರೆ. ಕುಳಿಯನ ನೆಲೆಗೆ ಹೋಗಿ ತಟ್ಟ್‌ತಡೆಯನ್ನು ಮಾಡಿ ಅಲ್ಲಿಗೆ ಕೋಳಿಯನ್ನು ಅರ್ಪಿಸುತ್ತಾರೆ. ಚೊಳ್ಳೆ ಎಂದು ಕರೆಯಲ್ಪಡುವ ಹಲಸಿನ ಎಲೆಯ ಚಿಕ್ಕ ದೊನ್ನೆಯಲ್ಲಿ ಕಳ್ಳನ್ನು ನೀಡುತ್ತಾರೆ. ಕೋತಿರಿಯನ್ನು ಉರಿಸಿ ಪೂಜೆ ಸಲ್ಲಿಸಲಾಗುತ್ತದೆ.

**ಆಚರಣೆ ಮತ್ತು ವೇಷಭೂಷಣಗಳು :**

ಕುಳಿಯ ತೆರೆಯನ್ನು ಒಕ್ಕಗಳು ನಡೆಸುವ ಒಕ್ಕತೆರೆಗಳು ಹಾಗೂ ಗ್ರಾಮದ

ತೆರೆಗಳಲ್ಲಿ ಆಚರಿಸುತ್ತಾರೆ. ಸಾಮಾನ್ಯವಾಗಿ ಕುಳಿಯ ತೆರೆಯನ್ನು ಕೊನೆಯದಾಗಿ ಕಟ್ಟುತ್ತಾರೆ. ಕುಳಿಯ ಪರಿವಾರ ದೈವ. ಆದುದರಿಂದ ಈಗಾಗಲೇ ನಡೆದಿರುವ ಪ್ರಮುಖ ತೆರೆಯ ವೇಷಕ್ಕೆ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡು ತೆರೆಯನ್ನು ಕಟ್ಟುತ್ತಾರೆ. ಇಲ್ಲಿ ತೆರೆಕಾರನು ಮೊಗ(ಮುಖವಾಡ) ಧರಿಸುವುದರಿಂದ ಬಣ್ಣಗಾರಿಕೆಯ ಕಾರ್ಯ ಇರುವುದಿಲ್ಲ. ಕೆಂಪು ಬಣ್ಣದ ಷರಾಯಿಯ ಮೇಲೆ ತೆಂಗಿನ ಎಳೆಯ ಗರಿಗಳಿಂದ ನಿರ್ಮಿಸಲಾದ 'ಒಲಿ'ಯನ್ನು ತೆರೆಕಾರನ ಸೊಂಟಕ್ಕೆ ಕಟ್ಟುತ್ತಾರೆ. ಮುಖಕ್ಕೆ ಅಡಿಕೆ ಹಾಳೆಯಿಂದ ನಿರ್ಮಿಸಲಾದ ಮುಖವಾಡವನ್ನು ಧರಿಸುತ್ತಾನೆ. ತಲೆಗೆ ತೆಂಗಿನ ಎಳೆಯ ಗರಿಗಳ ಶಿರೋಭೂಷಣವನ್ನು ಕಟ್ಟುತ್ತಾರೆ. ಎಳೆಯ ತೆಂಗಿನ ಗರಿಗಳನ್ನು ಸೀಳಿ ನಿರ್ಮಿಸಲಾದ ಉದ್ದನೆಯ ಚೌರಿಯನ್ನು ತಲೆಯ ಹಿಂಭಾಗಕ್ಕೆ ಕಟ್ಟಲಾಗುತ್ತದೆ. ತೆರೆಕಾರನು ಕುಳಿಯನ ಆಯುಧವಾದ ತೆಂಗಿನ ಕೊತ್ತಳಿಗೆಯ ಕೋಲನ್ನು ಹಿಡಿದುಕೊಳ್ಳುತ್ತಾನೆ. ವೇಷ ಧರಿಸಿದ ತೆರೆಕಾರನು ಕುಟುಂಬದ ಹಿರಿಯನಿಂದ ಕನ್ನಡಿ ಹಾಗು ಕೋತಿರಿಯನ್ನು ಪಡೆದುಕೊಳ್ಳುವನು. ಅದನ್ನು ಎಡಗೈ ಬಲಗೈಯಾಗಿ ನೀಡುವಂತೆ ಹೇಳಿ ತಾನೂ ಕೂಡ ಎಡಗೈ ಬಲಗೈಯಾಗಿ ಸ್ವೀಕರಿಸುವನು. ಕೋತಿರಿಯ ಬೆಳಕಿನಲ್ಲಿ ಅಲಂಕಾರವನ್ನು ನೋಡಿ ಸಂತೃಪ್ತಿ ವ್ಯಕ್ತಪಡಿಸುವನು. ಚಂಡೆಯ ವಾದನ ತಾರಕಕ್ಕೆ ಏರುತ್ತಿದ್ದಂತೆಯೇ ಆವೇಶಗೊಳ್ಳುವ ಕುಳಿಯ ದೈವವು ತಟ್ಟ್‌ತಡೆಯ ಸುತ್ತಲೂ ಕುಣಿಯತೊಡಗುತ್ತದೆ. ಹೀಗೆ ಸ್ವಲ್ಪ ಹೊತ್ತು ತೆರೆಯ ಕುಣಿತ ನಡೆಯುತ್ತದೆ. ಅನಂತರ ಭಕ್ತಾದಿಗಳ ಬಳಿ ಹೋಗಿ ಅವರಿಂದ ಕಾಣಿಕೆಯುನ್ನು ಪಡೆದುಕೊಳ್ಳುತ್ತದೆ.ಇಲ್ಲಿ ಭಕ್ತಿಗಿಂತ ವಿನೋದಭಾವ ಪ್ರಮುಖವಾಗಿರುತ್ತದೆ. ಕೋಳಿಬಲಿಯೊಂದಿಗೆ ತೆರೆಯು ಮುಕ್ತಾಯಗೊಳ್ಳುತ್ತದೆ.

**೫.೧.೨.೧೩. ಈತ್‌ಂಗುಳಿಯ ತೆರೆ**

**ಅರ್ಥ ಮತ್ತು ಆಚರಣೆ :**

ಈತ್‌ಂಗುಳಿಯ ಫಲವಂತಿಕೆಯ ದೈವ. ಈತನನ್ನು ಈತ್ ಕುಳಿಯ ಎಂದೂ ಕರೆಯುತ್ತಾರೆ. ಕೊಡವ ಭಾಷೆಯಲ್ಲಿ 'ಈತ್' ಅಂದರೆ ಹೆರಿಗೆ ಎಂದರ್ಥ. ಈತ್ ಕುಳಿಯನನ್ನು ಪೂಜಿಸುವುದರಿಂದ ಸಂತಾನ ಸಮೃದ್ಧಿಯಾಗುತ್ತದೆ ಎಂಬ ನಂಬಿಕೆ ಜನಪದರಲ್ಲಿದೆ. ಮಲಿಯರು ಈತ್‌ಂಗುಳಿಯ ತೆರೆಯನ್ನು ಕಟ್ಟುತ್ತಾರೆ. ಮೂಲತಃ ಕುಳಿಯ ಮಾತೃತ್ವದ ಸಂಕೇತವಾದ ಭೂಮಿಯ ರಕ್ಷಕ. ಅದರಲ್ಲೂ ಈತ್ ಕುಳಿಯ ದೈವವು ಮಾತೃತ್ವ ಹಾಗೂ ಫಲವಂತಿಕೆಯ ಸಂಕೇತವಾಗಿ ಆರಾಧಿಸಲ್ಪಡುತ್ತದೆ. ಈತ್‌ಂಗುಳಿಯ ತೆರೆಯುನ್ನು ಐನ್‌ಮನೆಯ ನೆಲ್ಲಕ್ಕಿ ನಡುಬಾಡೆಯಲ್ಲಿ ಆಚರಿಸುತ್ತಾರೆ. ಕುಳಿಯನಂತೆ ಈತ್‌ಂಗುಳಿಯನೂ ಪರಿವಾರ ದೈವ. ಆದುದರಿಂದ ಕುಳಿಯ ತೆರೆಯಂತೆಯೇ ಈಗಾಗಲೇ ನಡೆದಿರುವ ಪ್ರಮುಖ

ತೆರೆಯ ವೇಷಕ್ಕೆ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳುತ್ತಾರೆ. ತೆರೆಯ ಮುಖವರ್ಣಿಕೆಯಲ್ಲಿ ಅರಸಿನ, ಕೆಂಪು ಹಾಗೂ ಕಪ್ಪು ಬಣ್ಣವನ್ನು ಬಳಸುತ್ತಾರೆ. ಹುಬ್ಬಿನ ಕೆಳಭಾಗ ಹಾಗೂ ಕಣ್ಣಿನ ಸುತ್ತ ಕಪ್ಪು ಬಣ್ಣವನ್ನು ಹಚ್ಚಲಾಗುತ್ತದೆ. ಕೆಂಪು ಬಣ್ಣದ ಉದ್ದ ತೋಳಿನ ಅಂಗಿ ಮತ್ತು ಷರಾಯಿಯನ್ನು ಧರಿಸಿದ ತೆರೆಕಾರನ ಸೊಂಟಕ್ಕೆ ಕನ್ನಿಬಳೆಯನ್ನು ಬಿಗಿದು ಕಟ್ಟಲಾಗುತ್ತದೆ. ಅದರ ಮೇಲ್ಭಾಗವನ್ನು ಅಡಕ್‌ನಿಂದ ಮುಚ್ಚಲಾಗುತ್ತದೆ. ಅದರ ಮೇಲೆ ಬಟ್ಟೆ ಹಾಗೂ ಬಿದಿರಿನ ಪಟ್ಟಿಗಳನ್ನು ಬಳಸಿ ತಯಾರಿಸಲಾದ 'ಚೆರು' ಅಥವಾ 'ಚೆರು ಬೊಳಂಬ'ವನ್ನು ಧರಿಸುತ್ತಾರೆ. ಕೆಂಪು ಬಣ್ಣದ ಈ ಉಡುಪು ಲಂಗದಂತಿರುತ್ತದೆ. ತೆರೆಕಾರನು ದೈವವನ್ನು ಪ್ರಾರ್ಥಿಸಿ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುತ್ತಾನೆ. ಕಿವಿಯ ಅಂಚಿಗೆ ವಾಲೆಕಾದ್ ಹಾಗೂ ಕೆಳಭಾಗಕ್ಕೆ ಕೊಂಬೋಲೆಕಾದ್ ಎಂಬ ಆಭರಣವಿರುತ್ತದೆ. ಕುತ್ತಿಗೆಗೆ ಕಯತ್‌ಕೆಟ್ಟ್ ಎಂಬ ಪದಕವಿರುತ್ತದೆ. ತೆರೆಕಾರನು ಕೈ ಮತ್ತು ತೋಳುಗಳಿಗೆ ಮರದ ಬಳೆ ಮತ್ತು ಕಂಚಿನ ಚೂಡಗವೆಂಬ ಕಡಗವನ್ನು ತೊಡುತ್ತಾನೆ. ಕಾಲಿಗೆ ಪಟ್ಟ್‌ಮಡ ಹಾಗೂ ಪಾದಗಳ ಮೇಲ್ಭಾಗಕ್ಕೆ ಚಲ್‌ಂಬು ಧರಿಸುತ್ತಾನೆ. ಅಡಿಕೆಹಾಳೆಯ ಮುಖವಾಡವನ್ನು ಧರಿಸಿ ಕುಟುಂಬದ ಹಿರಿಯನಿಗೆ ಕನ್ನಡಿ ಹಾಗು ಕೋತಿರಿಯನ್ನು ನೀಡುವಂತೆ ಹೇಳುತ್ತಾನೆ. ಅದನ್ನು ಎಡಗೈ ಬಲಗೈಯಾಗಿ ನೀಡುವಂತೆ ಹೇಳಿ ತಾನೂ ಕೂಡ ಎಡಗೈ ಬಲಗೈಯಾಗಿ ಸ್ವೀಕರಿಸುತ್ತಾನೆ. ಕೋತಿರಿಯ ಬೆಳಕಿನಲ್ಲಿ ಅಲಂಕಾರವನ್ನು ನೋಡಿ ಸಂತೃಪ್ತಿ ವ್ಯಕ್ತಪಡಿಸುತ್ತಾನೆ.



**ಪ್ರಸವದ ಅಣುಕು ಪ್ರದರ್ಶನ :**

ವೇಷ ಧರಿಸಿ ಸಿದ್ಧನಾದ ತೆರೆಕಾರನು ನೆಲ್ಲಕ್ಕಿ ನಡುಬಾಡೆಗೆ ಬರುತ್ತಾನೆ. ಅಕ್ಕಿ ಹಾಕಿ ಪ್ರಾರ್ಥಿಸುವ ವಿಧಿ ನಡೆಯುತ್ತದೆ. ಚಂಡೆಯ ಬಡಿತ ಹಾಗು ತೆರೆಪಾಟ್ ಆರಂಭವಾಗುತ್ತಿದ್ದಂತೆಯೇ ಈತ್ ಕುಳಿಯ ದೈವವು ಮೈದುಂಬಿ ಬರುತ್ತದೆ. ಕುಣಿಯುತ್ತಾ ನೆರೆದಿರುವ ಪುರುಷರ ಬಳಿ ಹೋಗಿ ಅವರನ್ನು ಬರಸೆಳೆದು ಅಪ್ಪಿಕೊಳ್ಳುತ್ತದೆ. ಕೆಲವರು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆದರೂ ಬಿಡದೆ ತನ್ನ ಕಾರ್ಯವನ್ನು ಸಾಧಿಸುತ್ತದೆ. ಕೆಲವು ನಿಮಿಷಗಳ ಕಾಲ ಇದು ಪುನರಾವರ್ತನೆಯಾಗುತ್ತದೆ. ಅನಂತರ ತೆರೆಕಾರನ ಸಹಾಯಕರು ಹುಲ್ಲಿನಿಂದ

ನಿರ್ಮಿಸಿದ ಮಗುವಿನ ಪ್ರತಿಕೃತಿಯನ್ನು ತೆರೆಕಾರನ ಹೊಟ್ಟೆಯ ಭಾಗಕ್ಕೆ ತುರುಕುತ್ತಾರೆ. ದೊಡ್ಡ ಹೊಟ್ಟೆಯನ್ನು ಹೊತ್ತ ಈತ್ ಕುಳಿಯ ತೆರೆಯು ತುಂಬು ಗರ್ಭಿಣಿಯ ಹಾವಭಾವವನ್ನು ಪ್ರದರ್ಶಿಸುತ್ತದೆ. ಕೆಲವು ಹೊತ್ತಿನಲ್ಲಿ ಪ್ರಸವದ ಅಣುಕು ಪ್ರದರ್ಶನ ನಡೆಯುತ್ತದೆ. "ಅಯ್ಯೋ! ನೋವು" ಎಂದು ಕಿರುಚುವ ಈತ್ ಕುಳಿಯ, ಸಮಾಧಾನ ಪಡಿಸುವ ಸೂಲಗಿತ್ತಿ ಮತ್ತು ಪ್ರೇಕ್ಷಕರು. ಇವರ ನಡುವೆ ಸಂಭಾಷಣೆ ನಡೆಯುತ್ತದೆ. ಅಲ್ಲಲ್ಲಿ ಅಶ್ಲೀಲ ಮಾತುಗಳೂ ಇಣುಕು ಹಾಕುತ್ತವೆ.

ಹೆರಿಗೆಯ ನಂತರ ಈತ್ ಕುಳಿಯ ತೆರೆಯು ಮಗುವಿಗೆ ಹಾಲೂಡಿಸುತ್ತದೆ. ನೆರೆದಿರುವ ಗಂಡಸರಲ್ಲಿ ಮಗುವಿನ ತಂದೆ ಯಾರಾಗಿರಬಹುದು ಎಂದು ಹುಡುಕುತ್ತದೆ. ಎಣ್ಣೆ ಹಚ್ಚುತ್ತಾ, ಊಟಮಾಡಿಸುತ್ತಾ ಮಗುವನ್ನು ಪೋಷಿಸುತ್ತದೆ. ನಡೆಯಲಾರಂಭಿಸಿದ ಮಗುವನ್ನು ಆಟವಾಡಿಸುತ್ತಾ ಮರ ಹತ್ತುವುದನ್ನು ಕಲಿಸುತ್ತದೆ. ಈ ಸಂದರ್ಭದಲ್ಲಿ ಆಯತಪ್ಪಿದ ಮಗು ಕೆಳಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತದೆ. ಮಗುವನ್ನು ಕಳೆದುಕೊಂಡ ಈತ್ ಕುಳಿಯ ಕುಂಞಿಯೇ.. ಕುಂಞಿಯೇ... (ಮಗುವೇ..ಮಗುವೇ...) ಎಂದು ಗೋಳಾಡುವ ದೃಶ್ಯ ಮನಕಲಕುವಂತಹದು. ನೆರೆದಿರುವವರೆಲ್ಲರೂ ಈತ್ ಕುಳಿಯನನ್ನು ಸಂತೈಸುತ್ತಾರೆ. ತೆರೆಕಾರನ ಸಹಾಯಕರು ಮಗುವನ್ನು ಅಂತ್ಯಸಂಸ್ಕಾರ ಮಾಡಲು ತೆಗೆದುಕೊಂಡು ಹೋಗುತ್ತಾರೆ. ಅಲ್ಲಿಯವರೆಗೆ ಹೆಣ್ಣಾಗಿದ್ದ ಈತ್‌ಕುಳಿಯ ಮುಂದೆ ಪುರುಷ ದೈವವಾಗಿ ಕುಳಿಯನಾಗುತ್ತದೆ. ಇದಕ್ಕೆ ಪೂರಕವಾಗಿ ಮನೆಯವರಿಂದ ಕೋವಿಯನ್ನು ಪಡೆದುಕೊಂಡು ಅಂಗಳದಲ್ಲಿ ಕೊಡಿಬಾಳೆ ಎಲೆಯ(ಬಾಳೆಲೆಯ ತುದಿಭಾಗ) ಮೇಲೆ ಇರಿಸಲಾಗಿರುವ ತೆಂಗಿನಕಾಯಿಗೆ ಗುಂಡು ಹೊಡೆಯುತ್ತದೆ. ತರ್ಪ್ಪತಡೆಗೆ ರಕ್ತತರ್ಪಣ ನೀಡುವ ಮೂಲಕ ತೆರೆ ಮುಕಾಯ್ತುಗೊಳ್ಳುತ್ತದೆ. ದೃಶ್ಯಕಾವ್ಯದಂತೆ ಕಾಣುವ ಈತ್‌ಕುಳಿಯ ತೆರೆಯಲ್ಲಿ ತೆರೆಕಾರನ ಅಭಿನಯ ಪ್ರೇಕ್ಷಕರ ಮನಮುಟ್ಟುವಂತಹದ್ದು. ಇಲ್ಲಿ ಭಕ್ತಿಯ ಪರವಶತೆಗಿಂತ ಹಾಸ್ಯ, ವಿನೋದ, ಅಭಿನಯಗಳಿಗೆ ಮಹತ್ವ ಹೆಚ್ಚಾಗಿದೆ. ಆರಾಧನೆಗಿಂತ ಅಭಿನಯವೇ ಮೇಲುಗೈ ಸಾಧಿಸಿದೆ. ಬಣ್ಣ, ವೇಷಭೂಷಣ, ಮಾತು, ಹಾಡು, ಕುಣಿತ,ಅಭಿನಯಗಳನ್ನು ಒಳಗೊಂಡು ಧಾರ್ಮಿಕ ಜನಪದ ರಂಗಭೂಮಿಯಂತೆ ಕಾಣಿಸುತ್ತದೆ.

ಪ್ರಾರಂಭದಲ್ಲಿ ಹೆಣ್ಣಾಗಿ ಕಾಣಿಸಿಕೊಳ್ಳುವ ಈತ್‌ಕುಳಿಯ ದೈವವು ನಂತರ ಪುರುಷನಾಗಿ ಕುಳಿಯನಾಗುವುದು ದೈವಗಳ ಅಭೇದ ಕಲ್ಪನೆಗೆ ಸಾಕ್ಷಿಯಾಗಿದೆ. ಭೂಮಿಯ ರಕ್ಷಕನಾಗಿ ಭೂಮಿಕುಳಿಯ ಎನಿಸಿಕೊಳ್ಳುವ ಕುಳಿಯ ಮಾತೃತ್ವದ ಸಂಕೇತವೂ ಆಗುತ್ತಾನೆ. ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಯ ಸಸ್ಯಧಾರಣೆ ಇವೆರಡರಲ್ಲಿ ಸಾಮ್ಯತೆಯನ್ನು ಕಂಡುಕೊಂಡ ಆದಿಮಾನವ ಹೆಣ್ಣು ಮತ್ತು ಭೂಮಿಯನ್ನು ಪೂಜ್ಯ ವಸ್ತುವೆಂದು ಭಾವಿಸಿದ್ದಾನೆ. ಇಂತಹ ಭೂಮಿತಾಯಿಯನ್ನು

ರಕ್ಷಿಸುವ ಕುಳಿಯ ದೈವವು ಫಲವಂತಿಕೆಯ ಸಂಕೇತವಾಗಿಯೂ; ಪ್ರಕೃತಿ ಪುರುಷ ಏಕೀಭವಿಸಿರುವ ಶಕ್ತಿಯಾಗಿಯೂ ಕೊಡಗಿನಲ್ಲಿ ಆರಾಧಿಸಲ್ಪಡುತ್ತದೆ. "ಯಾವುದೇ ಸಮುದಾಯದ ಸಮಷ್ಟಿ ಅರ್ಥದ ಭಾವನೆಗಳು ಆಚರಣೆಗಳಲ್ಲಿ ಬಿಂಬಿತವಾಗಿರುತ್ತವೆ. ಇವುಗಳನ್ನು ವಿನ್ಯಾಸಗೊಳಿಸಲು ನಂಬಿಕೆಯ ಕ್ರಮವಿರುತ್ತದೆ. ಆಚರಣೆಗಳಲ್ಲಿ ಮನಸ್ಸು ಸಂವಹನ ಮಾಡಿತ್ತಿರುತ್ತದೆಯೇ ವಿನಃ ಶಾಬ್ದಿಕ ಲಯವಲ್ಲ."[೧೫] ಜಾತಿ ಪ್ರಧಾನವಾದ ಭಾರತದ ಗ್ರಾಮೀಣ ಸಂದರ್ಭದೊಳಗೆ ಪುರುಷ ಪ್ರಭುತ್ವದ ವಿಕಾರವನ್ನು ಧಿಕ್ಕರಿಸುವ ಎಷ್ಟೋ ವಿವರಗಳು ಜಾನಪದದಲ್ಲಿದೆ. ಈ ಹಿನ್ನೆಲೆಯಲ್ಲಿ ಈತ್‌ಕುಳಿಯ ತೆರೆಯು ತಳಸಮುದಾಯದ ಹೆಣ್ಣಿನ ಸಂಕಷ್ಟದ ತೋಡಿಕೊಳ್ಳುವಿಕೆಯಂತೆಯೂ ಗೋಚರಿಸುತ್ತದೆ. ಮೂಲತಃ ಪುರುಷ ದೈವವಾದ ಕುಳಿಯ ಇಲ್ಲಿ ಹೆಣ್ಣಾಗಿ ಗರ್ಭ ಧರಿಸುತ್ತದೆ. ಮಗುವಿಗೆ ಜನ್ಮ ನೀಡಿದ ನಂತರ ಸೇರಿರುವ ಪುರುಷರಲ್ಲಿ ಮಗುವಿನ ಜನ್ಮಕ್ಕೆ ಕಾರಣನಾದವನನ್ನು ಹುಡುಕುತ್ತದೆ. ಈ ಎಲ್ಲಾ ವರ್ತನೆಗಳು ಸ್ತ್ರೀಯು ಸಮಾಜದಲ್ಲಿ ಬೇರೂರಿರುವ ಊಳಿಗಮಾನ್ಯ ಪ್ರಭುತ್ವವನ್ನು, ಪುರುಷ ಪ್ರಧಾನ ಸಂಸ್ಕೃತಿಯ ವಕ್ರತೆಯನ್ನು ಅಲ್ಲಗಳೆಯುತ್ತಾ ತನ್ನ ಸಂಕಷ್ಟವನ್ನು ತೋಡಿಕೊಳ್ಳುವ ಸಂಕೇತದಂತೆ ಕಾಣುತ್ತವೆ.

**೫.೧.೨.೧೪ ತೀಕುಳಿಯ ತೆರೆ**

**ಅರ್ಥ :**

ಕೊಡವ ಭಾಷೆಯಲ್ಲಿ ತೀ ಅಂದರೆ ಬೆಂಕಿ. ತೀಕುಳಿಯ ಅಂದರೆ ಅಗ್ನಿಕುಳಿಯ ಎಂದರ್ಥ. ತೀಕುಳಿಯನ ಆಹಾರ ಬೆಂಕಿ. ಇವನು ರಾತ್ರಿಯ ಹೊತ್ತು ಕೈಯಲ್ಲಿ ಪಂಜನ್ನು ಹಿಡಿದು ಬೆಂಕಿ ಉಗುಳುತ್ತಾ ತನ್ನ ಪರಿಧಿಯೊಳಗೆ ತಿರುಗಾಡುತ್ತಾನೆ ಎಂಬುದು ಜನಪದರ ನಂಬಿಕೆ.

**ಆಚರಣೆ :**

ತೀಕುಳಿಯ ತೆರೆ ಐನ್‌ಮನೆಯ ಅಂಗಳದಲ್ಲಿ ಜರುಗುತ್ತದೆ. ತೆರೆಕಾರನ ವೇಷಭೂಷಣಗಳು ಈತ್ ಕುಳಿಯ ತೆರೆಯನ್ನೇ ಹೋಲುತ್ತದೆ. ತೆಂಗಿನ ಎಳೆಯ ಗರಿಗಳಿಂದ ನಿರ್ಮಿಸಲಾದ 'ಓಲಿ'ಯನ್ನು ತೆರೆಕಾರನ ಸಹಾಯಕರು ಸೊಂಟಕ್ಕೆ ಕಟ್ಟುತ್ತಾರೆ. ತಲೆಗೆ ತೆಂಗಿನ ಎಳೆಯ ಗರಿಗಳ ಶಿರೋಭೂಷಣವನ್ನು ಕಟ್ಟುತ್ತಾರೆ. ಎಳೆಯ ತೆಂಗಿನ ಗರಿಗಳನ್ನು ಸೀಳಿ ನಿರ್ಮಿಸಲಾದ ಉದ್ದನೆಯ ಚೌರಿಯನ್ನು ತಲೆಯ ಹಿಂಭಾಗಕ್ಕೆ ಕಟ್ಟಲಾಗುತ್ತದೆ. ತೆರೆಕಾರನು ಅಡಿಕೆ ಹಾಳೆಯಿಂದ ನಿರ್ಮಿಸಲಾದ ಮುಖವಾಡವನ್ನು ಧರಿಸುವನು. ಇದನ್ನು ಕುಳಿಯನ ಮೊಗ ಎಂದು ಕರೆಯುವುದು ರೂಢಿ. ಕುಳಿಯನ ಆಯುಧವಾದ ತೆಂಗಿನ ಕೊತ್ತಳಿಗೆಯ ಕೋಲನ್ನು ಹಿಡಿದುಕೊಳ್ಳುತ್ತಾನೆ. ಹೀಗೆ ವೇಷ ಧರಿಸಿದ ತೆರೆಕಾರನು ಕುಟುಂಬದ ಹಿರಿಯನಿಂದ ಕನ್ನಡಿ ಹಾಗು ಕೋತಿರಿಯನ್ನು ಪಡೆದುಕೊಳ್ಳುತ್ತಾನೆ. ಅದನ್ನು

ಎಡಗೈ ಬಲಗೈಯಾಗಿ ನೀಡುವಂತೆ ಹೇಳಿ ತಾನೂ ಕೂಡ ಎಡಗೈ ಬಲಗೈಯಾಗಿ ಸ್ವೀಕರಿಸುತ್ತಾನೆ. ನಾಲ್ಕು ಕಾಲಿನ ಪೀಠ ಪ್'ಡದಲ್ಲಿ ಕುಳಿತು ಕೋತಿರಿಯ ಬೆಳಕಿನಲ್ಲಿ ಅಲಂಕಾರವನ್ನು ನೋಡಿ ಸಂತೃಪ್ತಿ ವ್ಯಕ್ತಪಡಿಸುತ್ತಾನೆ. ಚಂಡೆಯ ವಾದನ ತಾರಕಕ್ಕೆ ಏರುತ್ತಿದ್ದಂತೆಯೇ ತೀಕುಳಿಯ ದೈವವು ತೆರೆಕಾರನ ಮೇಲೆ ಮೈದುಂಬಿ ಬರುತ್ತದೆ. ಆವೇಷದಿಂದ ತಟ್ಪ್ ತಡೆಯ ಸುತ್ತಲೂ ಕುಣಿಯತೊಡಗುತ್ತದೆ. ಹೀಗೆ ಕುಣಿಯುತ್ತಾ ಸೇರಿರುವ ಭಕ್ತರ ಬಳಿ ಹೋಗುತ್ತದೆ. ಅವರನ್ನು ಹರಸಿ ಕಾಣಿಕೆಯನ್ನು ಪಡೆದುಕೊಳ್ಳುತ್ತದೆ. ಕೋಳಿಬಲಿಯೊಂದಿಗೆ ತೆರೆ ಮುಕ್ತಾಯಗೊಳ್ಳುತ್ತದೆ. ಕೆಲವು ಗ್ರಾಮಗಳಲ್ಲಿ ನಡೆಯುವ ತೀಕುಳಿಯ ತೆರೆಯಲ್ಲಿ ಬೆಂಕಿ ಕೊಂಡದ ಮೇಲೆ ಬೀಳುವ ಮೇಲೇರಿ ಆಚರಣೆಯನ್ನು ಸಾಂಕೇತಿಕವಾಗಿ ಮಾಡುತ್ತಾರೆ.

**೫.೧.೨.೧೫ ಜಪಕುಳಿಯ ತೆರೆ**

**ಅರ್ಥ ಮತ್ತು ಹಿನ್ನೆಲೆ :**

ಹೆಸರೇ ಸೂಚಿಸುವಂತೆ ಈ ದೈವವು ಜಪಕ್ಕೆ ಒಲಿದು ಕೊಡಗಿಗೆ ಬಂದುದಾಗಿದೆ. ಹಿಂದೆ ಪಣಿಕ ಸಮುದಾಯದ ವ್ಯಕ್ತಿಯೊಬ್ಬ ಮಲೆಯಾಳಕ್ಕೆ ಹೋಗಿದ್ದನು. ಅಲ್ಲಿದ್ದ ಕುಳಿಯನನ್ನು ಜಪದ ಮೂಲಕ ಒಲಿಸಿ ಕೊಡಗಿಗೆ ಕರೆತಂದನು ಎಂಬ ಪ್ರತೀತಿ ಜನಪದರಲ್ಲಿದೆ. ಜಪಕುಳಿಯ ತೆರೆ ಪಣಿಕರಿಗೆ ಮೀಸಲಾದುದು. ವಿರಾಜಪೇಟೆ ತಾಲೂಕಿನ ಗೋಣಿಕೊಪ್ಪ ಸಮೀಪದ ಅರುವತೊಕ್ಲು ಗ್ರಾಮದಲ್ಲಿ ನೆಲೆಸಿರುವ ಪಣಿಕರು ಜಪಕುಳಿಯ ತೆರೆಯನ್ನು ಆಚರಣೆ ಮಾಡುತ್ತಾರೆ.




**ಆಚರಣೆ :**

ಜಪ ಕುಳಿಯ ತೆರೆಯ ಆಚರಣೆಯನ್ನು ಜನಪದರು ಹಗಲು ಹೊತ್ತಿನಲ್ಲಿ ಆಚರಿಸುತ್ತಾರೆ. ಈ ಆಚರಣೆಯು ಬೆಳಿಗ್ಗೆ ಹತ್ತು ಗಂಟೆಯಿಂದ ಸಂಜೆ ನಾಲ್ಕು ಗಂಟೆಯವರೆಗೂ ನಡೆಯುತ್ತದೆ. ಜಪಕುಳಿಯ ತೆರೆಯನ್ನು ಕಟ್ಟಿಸುವವರು ಮತ್ತು ಕಟ್ಟುವವರೂ ಪಣಿಕರೇ ಆಗಿರುತ್ತಾರೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ತೆರೆಕಾರನು ಸ್ನಾನಮಾಡಿ ನೆಲ್ಲಕ್ಕಿ ನಡುಬಾಡೆಯ ಸಮೀಪದ ಕೋಣೆಗೆ ಬರುತ್ತಾನೆ. ಅಲ್ಲಿ ಬಣ್ಣಗಾರಿಕೆ ಮತ್ತು ವೇಷಭೂಷಣಗಳನ್ನು ಧರಿಸಲಾಗುತ್ತದೆ. ಜಪ ಕುಳಿಯ ತೆರೆಯಲ್ಲಿ ಕೆಂಪು ಬಣ್ಣದ ವೇಷಭೂಷಣಗಳ ಬಳಕೆ ಇಲ್ಲ. ತೆರೆಕಾರನು ಬಿಳಿಯ ಬಣ್ಣದ ಪಂಚೆಯನ್ನು ಕಟ್ಟುತ್ತಾನೆ. ತಲೆಗೆ ಬಿಳಿಯ ಬಣ್ಣದ ವಸ್ತ್ರವಿರುತ್ತದೆ. 'ಚೆಕ್ಕವಸ್ತ್ರ' ಎಂಬ ರೇಷ್ಮೆಯ ಚೌಕಳಿವಸ್ತ್ರವನ್ನು ಎದೆಯ ಮುಂಭಾಗ ಮುಚ್ಚುವಂತೆ ತೆರೆಕಾರನ ಕೊರಳಿಗೆ ಕಟ್ಟುತ್ತಾರೆ. ಇದು ಕೆಂಪು ಬಣ್ಣದಲ್ಲಿರುತ್ತದೆ. ಬಣ್ಣಗಾರಿಕೆ ಸರಳವಾಗಿರುತ್ತದೆ. ತೆರೆಕಾರನು ಹಣೆ, ತೋಳು ಹಾಗೂ ಮುಂಗೈಗೆ ಗಂಧ ಹಾಗೂ ಕುಂಕುಮದ ಅಡ್ಡನಾಮಗಳನ್ನು ಹಚ್ಚಿಕೊಳ್ಳುತ್ತಾನೆ. ಪಾಂಬಾಳೆ ಗರಿಗಳಿಂದ ನಿರ್ಮಿಸಿದ 'ಕೈಪೂ'ವನ್ನು ತೋಳು ಹಾಗೂ ಮಣಿಕಟ್ಟಿಗೆ ಕಟ್ಟಲಾಗುತ್ತದೆ. ಮಂಡಿಯ ಕೆಳಭಾಗಕ್ಕೆ ಮಣಿಕೇರ್ ಎಂಬ ಗೆಜ್ಜೆಯನ್ನು ಕಟ್ಟುತ್ತಾರೆ. ದೇವರನ್ನು ಪ್ರಾರ್ಥಿಸಿ ತೆರೆಕಾರನು ಪಾದಗಳಿಗೆ 'ಚಲ್ಂಬು' ಧರಿಸುತ್ತಾನೆ. ಕುಳಿಯನ ಆಯುಧವಾದ ಬಿದಿರಿನ ಉದ್ದನೆಯ ಕೋಲನ್ನು ಎಡಗೈಯಲ್ಲಿ ಹಿಡಿದುಕೊಳ್ಳುತ್ತಾನೆ.

ಹೀಗೆ ಸಿದ್ಧಗೊಳ್ಳುವ ತೆರೆಕಾರನು ನೆಲ್ಲಕ್ಕಿ ನಡುಬಾಡೆಯಲ್ಲಿ ಪ್ಡದ ಮೇಲೆ ಕುಳಿತುಕೊಳ್ಳುತ್ತಾನೆ. ದೈವವನ್ನು ಪ್ರಾರ್ಥಿಸಿ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟವನ್ನು ಕಟ್ಟುತ್ತಾರೆ. ಅಡಿಕೆಹಾಳೆಯಿಂದ ನಿರ್ಮಿಸಿದ ಜಪಕುಳಿಯ ಮೊಗ(ಮುಖವಾಡ) ವನ್ನು ತೆರೆಕಾರನಿಗೆ ತೊಡಿಸಲಾಗುತ್ತದೆ. ತೆರೆಕಾರನ ಸಹಾಯಕರು ಮದ್ದಳೆ ಬಾರಿಸುತ್ತಾ ತೆರೆಪಾಟ್ ಹಾಡುತ್ತಾರೆ. ಮದ್ದಳೆಯ ಬಡಿತ ತೀವ್ರವಾಗುತ್ತಿದ್ದಂತೆಯೇ ತೆರೆಕಾರನ ಮೇಲೆ ಜಪಕುಳಿಯ ದೈವವು ಆವಾಹನೆಯಾಗುತ್ತದೆ. ಪ್ಡದಿಂದ ಎದ್ದು ಜಿಗಿಯುತ್ತಾ ಕೈಕಾಲುಗಳನ್ನು ಒದರುತ್ತಾ ಮತ್ತೆ ಕುಳಿತುಕೊಳ್ಳುತ್ತಾ ಆವೇಷದಿಂದ ವರ್ತಿಸುತ್ತಾನೆ. ಕುಟುಂಬದ ಸದಸ್ಯರು ಜಪಕುಳಿಯನಿಗೆ ಹೂವಿನ ಹಾರವನ್ನು ಹಾಕಿ ಅನುಗ್ರಹ ಪಡೆದುಕೊಳ್ಳುತ್ತಾರೆ.

ಅನಂತರ ತೆರೆಕಾರನು ಕುಟುಂಬದವರೊಂದಿಗೆ ಕುಳಿಯನ ನೆಲೆಯಿರುವ ಮರದ ಬಳಿ ಹೋಗುತ್ತಾನೆ. ಅಲ್ಲಿಗೆ ಗ್ರಾಮದ ಜನರು, ನೆಂಟರಿಷ್ಟರು ಬಂದು ಸೇರಿರುತ್ತಾರೆ. ನೆರೆದಿರುವ ಎಲ್ಲರಿಗೂ ಜಪಕುಳಿಯ ದೈವವು ಅನುವಾದ ನೀಡಿ ಹರಸುತ್ತದೆ. ಸಮಸ್ಯೆಗಳಿದ್ದವರು ಪರಿಹಾರವನ್ನು ಪಡೆದುಕೊಳ್ಳುತ್ತಾರೆ. ತಟ್ಟತಡೆಗೆ ರಕ್ತತರ್ಪಣ ನೀಡಿದ ನಂತರ ತೆರೆಬಾಂಗುವ ವಿಧಿಯು ಜರುಗುತ್ತದೆ. ಕುಳಿಯನನ್ನು ಮಂತ್ರದೇವತೆಯೆಂದೂ ಕರೆಯಲಾಗುತ್ತದೆ. ಈತ ಹದಿನೆಂಟು ಪ್ರಸಿದ್ಧ ಮಂತ್ರವಾದಿಗಳ ಊರಿನಲ್ಲಿ ನೆಲೆಸಿದ್ದವನು ಎಂಬ ನಂಬಿಕೆ ಇದೆ. ಕುಳಿಯನು ತನ್ನ ನೆಲೆ ಇರುವ ಹಲಸು, ಆಲ ಇತ್ಯಾದಿ ವೃಕ್ಷಗಳ ಬಳಿ ಹೆಚ್ಚು ಓಡಾಡುತ್ತಾನೆ. ಸಂಧ್ಯಾಕಾಲದಲ್ಲಿ ತನ್ನ ಪರಿಧಿಯ ಭೂಮಿಯಲ್ಲಿ ಸಂಚರಿಸುತ್ತಾನೆ. ಈ ಅವಧಿಯಲ್ಲಿ

ಇದಿರಿಗೆ ಸಿಲುಕಿಕೊಂಡವರು ಮರಣಿಸುವರು ಎಂಬ ನಂಬಿಕೆ ಜನಪದರಲ್ಲಿದೆ. ಪೂರ್ವದಲ್ಲಿ ಹೃದಯಾಘಾತಕ್ಕೆ ಒಳಗಾಗಿ ಮರಣಹೊಂದಿದರೆ ಅದನ್ನು 'ಕುಳಿಯನ ಪೆಟ್ಟು' ಎಂದು ಪ್ರಬಲವಾಗಿ ನಂಬುತಿದ್ದುದು ಇದೆ. ಹೀಗೆ ರಕ್ಷಕ ಹಾಗೂ ಭಕ್ಷಕ ಗುಣವನ್ನು ಹೊಂದಿರುವ ಕುಳಿಯ ಪ್ರಕೃತಿಯಿಂದ ಒಡಮೂಡಿದ ದೈವವಾಗಿದೆ.

**೫.೧.೨.೧೬ ಕುಟ್ಟಿಚಾತ ತೆರೆ**

**ಅರ್ಥ :**

ಕುಟ್ಟಿಚಾತ ಕೊಡಗಿನ ಕೆಲವೇ ಗ್ರಾಮಗಳಲ್ಲಿ ಆರಾಧಿಸಲ್ಪಡುವ ದೈವ. ಈತನಿಗೆ ಹಾಲು ಒಸರುವ ಮರದಡಿಯಲ್ಲಿ ನೆಲೆಯಿರುತ್ತದೆ. ಕುಟ್ಟಿಚಾತ ದೈವವನ್ನು ಬೇರೆ ಬೇರೆ ಹೆಸರಿನಲ್ಲಿ ಕರೆಯುವರು. ಅವುಗಳೆಂದರೆ ಚಾತುಕುಟ್ಟಿ, ಶಾಸ್ತಪ್ಪನ್, ಪೂ ಕುಟ್ಟಿಚಾತ(ಹೂವು ಧರಿಸಿರುವ ಕುಟ್ಟಿಚಾತ), ಕರಿಂಗುಟ್ಟಿಚಾತ(ಕಪ್ಪು ಮೈ ಬಣ್ಣದ ಕುಟ್ಟಿಚಾತ) ಮತ್ತು ತೀ ಕುಟ್ಟಿಚಾತ(ಬೆಂಕಿಯ ಕುಟ್ಟಿಚಾತ), ಮಣಿ ಕುಟ್ಟಿಚಾತ, ಉಚ್ಚ ಕುಟ್ಟಿಚಾತ, ಶೈವ ಕುಟ್ಟಿಚಾತ, ಅಂತಿ ಕುಟ್ಟಿಚಾತ, ಮಂತ್ರ ಕುಟ್ಟಿಚಾತ ಇತ್ಯಾದಿ. ಈ ಹೆಸರುಗಳಲ್ಲಿ ಆಯಾಯ ಸ್ಥಳಗಳಿಗೆ ಅನುಗುಣವಾಗಿ ಹೆಸರು, ಗುಣ ವಿಶೇಷಗಳು ಹಾಗೂ ಪೌರಾಣಿಕ ಹಿನ್ನೆಲೆ ಇದೆ. ಕಂಸವಧೆಗಾಗಿ ಶ್ರೀಕೃಷ್ಣ ಧರಿಸಿದ ರೂಪವೇ ಕುಟ್ಟಿಚಾತ ಎನ್ನುವ ನಂಬಿಕೆಯೂ ಇದೆ. ಸಾಮಾನ್ಯವಾಗಿ ತೆರೆಕಟ್ಟುವ ಆಚರಣೆಯಲ್ಲಿ ಪರಿವಾರ ದೈವದ ತೆರೆಯಾಗಿ ಕುಟ್ಟಿಚಾತ ತೆರೆಯನ್ನು ಕಟ್ಟಲಾಗುತ್ತದೆ. ಆದರೆ ವಿರಾಜಪೇಟೆ ತಾಲೂಕಿನ ಕಿರುಗೂರು ಗ್ರಾಮದಲ್ಲಿ ಮಾತ್ರ ಕುಟ್ಟಿಚಾತನನ್ನು ಪ್ರಮುಖ ದೈವವಾಗಿ ಆರಾಧಿಸಲಾಗುತ್ತದೆ.

**ಹಿನ್ನೆಲೆ :**

ಕೆಲವು ಐತಿಹ್ಯಗಳ ಪ್ರಕಾರ ಕುಟ್ಟಿಚಾತ ಶಿವನ ಪುತ್ರ. ಇನ್ನು ಕೆಲವು ಐತಿಹ್ಯಗಳಲ್ಲಿ ಈತ ಶಿವ ಮತ್ತು ವಿಷ್ಣುವಿನ ಮಗ. ಕುಟ್ಟಿಚಾತನ ಕುರಿತು ಐತಿಹ್ಯವೊಂದು ಹೀಗಿದೆ. "ಹಿಂದೆ ಶಿವ ಪಾರ್ವತಿಯರು ಗುಡ್ಡಗಾಡು ಪ್ರದೇಶವೊಂದರಲ್ಲಿ ವಾಸಿಸುತ್ತಿದ್ದರು. ಈ ದಂಪತಿಗಳಿಗೆ ಇಬ್ಬರು ಮಕ್ಕಳು ಜನಿಸಿದರು. ಹಿರಿಯವನು ಕಾರುವಲ. ಕಿರಿಯವನು ಕುಟ್ಟಿಚಾತನ್. ಕುಟ್ಟಿಚಾತನ್ ಹುಟ್ಟುವಾಗಲೇ ನೆತ್ತಿಯ ಮೇಲೆ ಹೂವಿತ್ತು. ಕಪ್ಪು ಮೈಬಣ್ಣ, ಹಣೆಯಲ್ಲಿ ಮೂರನೆಯ ಕಣ್ಣು ಹಾಗೂ ದೇಹವಿಡೀ ಬಿಳಿ ಪಟ್ಟೆಯನ್ನು ಹೊಂದಿದ್ದನು. ಅದೇ ಪ್ರದೇಶದಲ್ಲಿ ಬ್ರಾಹ್ಮಣ ದಂಪತಿಗಳು ವಾಸಿಸುತ್ತಿದ್ದರು. ಮಕ್ಕಳಿಲ್ಲದ ಅವರು ಉಪವಾಸ ವ್ರತ ಕೈಗೊಂಡು ಶಿವನನ್ನು ಪ್ರಾರ್ಥಿಸಿದರು. ಬ್ರಾಹ್ಮಣ ದಂಪತಿಗಳ ಪ್ರಾರ್ಥನೆಗೆ ಒಲಿದ ಶಿವನು ಕುಟ್ಟಿಚಾತನನ್ನು ಅವರಿಗೆ ನೀಡಿದನು. ಪುಟ್ಟ ಬಾಲಕ ಕುಟ್ಟಿಚಾತ ಬಹಳ ತುಂಟನಾಗಿದ್ದ. ಹಿರಿಯರ ಮಾತನ್ನು ಕೇಳುತ್ತಿರಲಿಲ್ಲ. ಕೊಟ್ಟಿಗೆಯಲ್ಲಿನ

ಹಸುಗಳ ಕೊರಳನ್ನು ಕತ್ತರಿಸಿ ರಕ್ತವನ್ನು ಕುಡಿಯಲಾರಂಭಿಸಿದನು. ಈ ಉಪಟಳವನ್ನು ಸಹಿಸಲಾಗದೆ ಬ್ರಾಹ್ಮಣ ದಂಪತಿಗಳು ಕುಟ್ಟಿಚಾತನನ್ನು ಕೊಂದು ಹಾಕಿದರು. ಮರಣಾನಂತರವು ಆತನ ಉಪಟಳ ನಿಲ್ಲಲಿಲ್ಲ. ಮನೆಯಲ್ಲಿ ಆತನ ಮಾತು ಪ್ರತಿಧ್ವನಿಸತೊಡಗಿತು. ಇದನ್ನು ಪರಿಹರಿಸಲೆಂದು ಬ್ರಾಹ್ಮಣ ದಂಪತಿಗಳು ಹೋಮ ಹವನಗಳನ್ನು ಏರ್ಪಡಿಸಿದರು. ಅಷ್ಟರಲ್ಲಿ ಹೋಮಕುಂಡದ ಬೆಂಕಿಯಿಂದ ಹಲವು ಕುಟ್ಟಿಚಾತರು ಉದ್ಭವಿಸಿ ಕುಣಿಯುತ್ತಾ ಮನೆಯನ್ನು ಧ್ವಂಸಗೊಳಿಸಲಾರಂಭಿಸಿದರು. ಕುಟ್ಟಿಚಾತನ ಶಕ್ತಿಯನ್ನು ಅರಿತ ಬ್ರಾಹ್ಮಣ ದಂಪತಿಗಳು ಆತನಿಗೆ 'ಸ್ಥಾನ'ಎಂಬ ನೆಲೆಯನ್ನು ನಿರ್ಮಿಸಿ ಪೂಜಿಸಲಾರಂಭಿಸಿದರು."[೧೬]

ಕುಟ್ಟಿಚಾತನನ್ನು ಮಂತ್ರಮೂರ್ತಿಯಾಗಿ, ಮಾಂತ್ರಿಕ ಶಕ್ತಿಯ ಅಧಿಪತಿಯಾಗಿ ಆರಾಧಿಸುವ ಸಂಪ್ರದಾಯವೂ ಇದೆ. ಇದಕ್ಕೆ ಹಿನ್ನೆಲೆಯಾಗಿ ದಂತಕಥೆಯೊಂದು ಹೀಗಿದೆ. "ಕುಟ್ಟಿಚಾತ ಕೇರಳದ ಕಾಳೆಗಾಟ್ ಎಂಬ ಸ್ಥಳದಲ್ಲಿದ್ದ ನಂಬೂದರಿ ಬ್ರಾಹ್ಮಣನ ಪುತ್ರ. ಮಗನ ಮಾಂಸಾಹಾರಿ ಪ್ರವೃತ್ತಿ ಹಾಗೂ ಅವಿಧೇಯ ವರ್ತನೆಯಿಂದ ಬೇಸತ್ತ ನಂಬೂದರಿ ಆತನನ್ನು ಕೊಲ್ಲುವನು. ಶವವನ್ನು ೩೯ ಚೂರುಗಳಾಗಿ ಕತ್ತರಿಸಿ ಬೆಂಕಿ ಕುಂಡಗಳಿಗೆ ಎಸೆಯುವನು. ಆಗ ಅದರಲ್ಲಿ ದೊಡ್ಡ ಚೂರೊಂದು ಆವೇಶಗೊಂಡು ವರ್ತಿಸಲಾರಂಭಿಸಿತು. ಇದನ್ನು ಕಣ್ಣೂರಿನ ಚಾಲಾ ಎಂಬಲ್ಲಿ ನೆಲೆಸಿದ್ದ ಮಲೆಯ ಸಮುದಾಯದ ಹಿರಿಯ ತೆರೆಕಾರ ಪೆರುಮಲೆಯನು ಶಾಂತಗೊಳಿಸಿದನು."

ಪುರಾಣ ಕಥೆಯೊಂದು ಕುಟ್ಟಿಚಾತನ ಬುಡಕಟ್ಟು ಮೂಲವನ್ನು ಹೀಗೆ ನಿರೂಪಿಸುತ್ತದೆ. ಒಮ್ಮೆ ಶಿವನು ಬೇಟೆಗೆಂದು ಕಾಡಿಗೆ ಹೋದನು. ದಾರಿಯಲ್ಲಿ ಇಂಪಾದ ಹಾಡೊಂದು ಕೇಳಿಸಿತು. ಹಿಂಬಾಲಿಸಿ ನೋಡಿದಾಗ ಅದು ಬುಡಕಟ್ಟು ಸಮುದಾಯದ ಹೆಣ್ಣೊಬ್ಬಳ ಧ್ವನಿಯಾಗಿತ್ತು. ಮನಸೋತ ಶಿವನು ಆಕೆಯನ್ನು ಕೂಡುವ ಇಂಗಿತವನ್ನು ವ್ಯಕ್ತಪಡಿಸಿದನು. ಭಯಗೊಂಡ ಆಕೆ ತನ್ನ ಇಷ್ಟದೈವ ಪಾರ್ವತಿಯನ್ನು ಪ್ರಾರ್ಥಿಸಿದಳು. ವಿಚಾರವನ್ನು ತಿಳಿದ ಪಾರ್ವತಿ ಆಕೆಗೆ ಧೈರ್ಯ ತುಂಬಿದಳು. ಅದು ನಿನ್ನ ಕರ್ತವ್ಯ ಎಂದು ಹೇಳಿ ಈಕೆಯ ಪೂರ್ವಜನ್ಮದ ವೃತ್ತಾಂತವನ್ನು ವಿವರಿಸುವಳು. ಹಿಂದಿನ ಜನ್ಮದಲ್ಲಿ ಪಾರ್ವತಿಯ ಸೇವಕಿಯಾಗಿದ್ದ ಆಕೆ ಒಮ್ಮೆ ಗಣಪತಿಗೆ ಹಾಲೂಡಿಸುತ್ತಿದ್ದಳು. ಇದರಿಂದ ಕೋಪಗೊಂಡ ಪಾರ್ವತಿ "ಮುಂದಿನ ಜನ್ಮದಲ್ಲಿ ನೀನು ಚಾಂಡಾಳ ಕುಟುಂಬದಲ್ಲಿ ಜನಿಸುವಂತಾಗಲಿ" ಎಂದು ಶಪಿಸಿದಳು. ಭಯಗೊಂಡ ಹೆಣ್ಣು ಮಗಳು ಪಾರ್ವತಿಯನ್ನು ಕ್ಷಮೆ ಕೋರಿದಳು. ಸಮಾಧಾನಗೊಂಡ ಪಾರ್ವತಿ "ಮುಂದಿನ ಜನ್ಮದಲ್ಲಿ ನೀನು ಶಿವನ ಪುತ್ರನಿಗೆ ಹಾಲೂಡಿಸುವಂತಾಗಲಿ" ಎಂದು ಹರಸಿದಳು. ಹೀಗೆ ಪೂರ್ವ

ವೃತ್ತಾಂತವನ್ನು ತಿಳಿಸಿದ ಪಾರ್ವತಿ ಧೈರ್ಯ ತುಂಬಿ ಕಳುಹಿಸಿದಳು. ತಾನೇ ಆ ಬುಡಕಟ್ಟು ಹೆಣ್ಣಿನ ವೇಷ ಧರಿಸಿ ಶಿವನ ಬಳಿ ತೆರಳಿದಳು. ಅವರಿಗೆ ೩೧೬ ಮಕ್ಕಳು ಜನಿಸಿದರು. ಇವರಲ್ಲಿ ಮೊದಲನೆಯವನು ಕರಿಂಕುಟ್ಟಿ ಚಾತನ್, ಕೊನೆಯವನು ವಿಷ್ಣುಮಾಯ. ಪಾರ್ವತಿ ಕರಿಂಕುಟ್ಟಿಚಾತನ ರಕ್ಷಣೆಗೆ ಗೂಳಿಯನ್ನು; ವಿಷ್ಣುಮಾಯನಿಗೆ ಕೋಣವನ್ನು ಕೊಟ್ಟು ಇಬ್ಬರನ್ನು ತನ್ನ ಭಕ್ತಳಾದ ಬುಡಕಟ್ಟು ಹೆಣ್ಣಿಗೆ ನೀಡಿದಳು.

ಶಿವ ಪಾರ್ವತಿಯರಿಂದ ವಿಶೇಷ ಶಕ್ತಿಯನ್ನು ಪಡೆದಿದ್ದ ಮಕ್ಕಳು ಹಲವು ಪವಾಡಗಳನ್ನು ಮಾಡುತ್ತಾ ಬೆಳೆದರು. ಅವರ ಏಳನೇ ಹುಟ್ಟುಹಬ್ಬದ ಸಂದರ್ಭದಲ್ಲಿ ನಾರದನು ಬಂದು ಜನ್ಮರಹಸ್ಯವನ್ನು ವಿವರಿಸಿದನು. ಆತನ ಸಲಹೆಯಂತೆ ಮಕ್ಕಳು ಮಾತಾಪಿತರನ್ನು ಭೇಟಿಯಾಗಲು ಕೈಲಾಸಕ್ಕೆ ಹೋದರು. ಅಲ್ಲಿ ಅವರನ್ನು ನಂದಿಕೇಶನು ತಡೆದನು. ಆಗ ಮಕ್ಕಳಿಬ್ಬರೂ ಮಹಾವಿಷ್ಣುವಿನ ರೂಪತಾಳಿ ಕೈಲಾಸವನ್ನು ಪ್ರವೇಶಿಸಿ ಶಿವನ ಆಶೀರ್ವಾದ ಪಡೆದರು. ಮಕ್ಕಳ ಆಗಮನದಿಂದ ಶಿವನಿಗೆ ಸಂತೋಷವಾಯಿತು. ವಿಷ್ಣುವಿನ ರೂಪ ತಾಳಿ ಕೈಲಾಸ ಪ್ರವೇಶಿಸಿದರಿಂದ ಅವರಿಗೆ ವಿಷ್ಣುಮಾಯ ಎಂಬ ಹೆಸರಿಟ್ಟನು. ಸಮರಕಲೆಯನ್ನು ಕಲಿಸಿ ದೇವತೆಗಳನ್ನು ಕಾಡುತ್ತಿದ್ದ ಜಲಂಧರನೆಂಬ ಅಸುರನನ್ನು ಕೊಲ್ಲುವಂತೆ ಸೂಚಿಸಿದನು.

ಯುದ್ಧದಲ್ಲಿ ಕುಟ್ಟಿಚಾತನು ವಿಷ್ಣುವಿನ ಆಯುಧವಾದ ಸುದರ್ಶನ ಚಕ್ರದ ರೂಪತಾಳಿ ಜಲಂಧರನನ್ನು ಬೆನ್ನಟ್ಟಿದನು. ಪ್ರಾಣಭೀತಿಯಿಂದ ಜಲಂಧರನು ಸಮುದ್ರದಲ್ಲಿ ಅಡಗಿಕೊಂಡನು. ಸುದರ್ಶನ ಚಕ್ರದ ಶಾಖದಿಂದ ಸಮುದ್ರದ ನೀರು ಕುದಿಯುತೊಡಗಿತು. ಉರಿಯುನ್ನು ತಾಳಲಾಗದೆ ಜಲಂಧರನು ಹೊರಬಂದಾಗ ಕುಟ್ಟಿಚಾತನು ಅವನನ್ನು ಕೊಂದನು. ಇದರಿಂದ ಸಂತಸಗೊಂಡ ದೇವತೆಗಳು ಕುಟ್ಟಿಚಾತನನ್ನು ದೇವಲೋಕಕ್ಕೆ ಆಹ್ವಾನಿಸಿ ಅಲ್ಲಿಯೇ ಇರುವಂತೆ ಹೇಳಿದರು. ಅವರ ಕೋರಿಕೆಯನ್ನು ನಿರಾಕರಿಸಿದ ಕುಟ್ಟಿಚಾತ ತನ್ನ ಬುಡಕಟ್ಟಿನ ಜನರೊಂದಿಗೆ ಇರುವ ಇಂಗಿತ ವ್ಯಕ್ತಪಡಿಸಿ ಅಲ್ಲಿಂದ ತೆರಳಿದನು. ಇನ್ನು ಕೆಲವು ಪುರಾಣಗಳು ಕುಟ್ಟಿಚಾತನ ಸಾಹಸಗಳನ್ನು ವರ್ಣಿಸುತ್ತವೆ. ಬೃಗಾಸುರ ಎಂಬ ರಾಕ್ಷಸ ಕುಟ್ಟಿಚಾತನ ತಾಯಿಯ ಸೌಂದರ್ಯಕ್ಕೆ ಮನಸೋತು ಮದುವೆಯಾಗುವಂತೆ ಒತ್ತಾಯಿಸುವನು. ವಿಚಾರ ಅರಿತ ಕುಟ್ಟಿಚಾತನು ಕರಿಂಕುಟ್ಟಿಚಾತನ ಒಡಗೂಡಿ ಬೃಗಾಸುರನೊಡನೆ ಹೋರಾಡುವನು. ಯುದ್ಧದಲ್ಲಿ ಕುಟ್ಟಿಚಾತನ ಬೆರಳು ಗಾಯಗೊಂಡಿತು. ಗಾಯದ ರಕ್ತದಿಂದ ೪೦೦ ಕುಟ್ಟಿಚಾತರು ಹುಟ್ಟಿದರು. ಬೃಗಾಸುರ ಪ್ರಯೋಗಿಸಿದ ೧೦ ಬ್ರಹ್ಮಾಸ್ತ್ರಗಳನ್ನು ನುಂಗಿದ ಕುಟ್ಟಿಚಾತರು ಮರಣಹೊಂದಿದರು. ಉಳಿದ ೩೯೦ ಮಂದಿ ಕುಟ್ಟಿಚಾತರು ಬೃಗಾಸುರನ

ಸೈನ್ಯವನ್ನು ನಿರ್ನಾಮಗೊಳಿಸಿದರು. ಹೀಗೆ ಕುಟ್ಟಿಚಾತನ ಜನ್ಮವೃತ್ತಾಂತಗಳಲ್ಲಿ ಶೈವ ಹಾಗೂ ವೈಷ್ಣವ ಪಂಥಗಳ ಪ್ರಭಾವವನ್ನೂ ಗಮನಿಸಬಹುದು.

**ಆಚರಣೆ ಹಾಗೂ ವೇಷಭೂಷಣಗಳು**

ತೆರೆಕಟ್ಟುವ ಆಚರಣೆಯಲ್ಲಿ ಅನುಸರಿಸುವ ವಿಧಿವಿಧಾನಗಳೇ ಕುಟ್ಟಿಚಾತ ತೆರೆಯಲ್ಲಿ ಅನುಸರಿಸಲ್ಪಡುತ್ತವೆ. ಕುಟ್ಟಿಚಾತ ತೆರೆಯು ಪರಿವಾರ ದೈವದ ತೆರೆಯಾಗಿ ಆಚರಿಸಲ್ಪಡುವುದರಿಂದ ಇಲ್ಲಿ ವಿಶೇಷವಾದ ವಿಧಿಗಳು ಕಂಡುಬರುವುದಿಲ್ಲ. ಬಣ್ಣಗಾರಿಕೆಯಲ್ಲಿ ಕೆಂಪು ಬಣ್ಣವನ್ನು ಪ್ರಧಾನವಾಗಿ ಬಳಸುತ್ತಾರೆ. ಎದೆಯ ಭಾಗಕ್ಕೂ ಕೆಂಪು ಬಣ್ಣವನ್ನು ಬಳಿದು ಅದರ ಮೇಲೆ ಕಪ್ಪು ಬಣ್ಣದಿಂದ ಗುಣಾಕಾರ ಚಿಹ್ನೆಯಂತೆ ಪಟ್ಟಿಯನ್ನು ಎಳೆಯುತ್ತಾರೆ. ಕುಟ್ಟಿಚಾತ ತೆರೆಯಲ್ಲಿಯೂ ಕೆಂಪು ಬಣ್ಣದ ಉಡುಪು ಪ್ರಮುಖವಾಗಿರುತ್ತದೆ. ತೆರೆಕಾರನು ಕೆಂಪು ಬಣ್ಣದ



ಷರಾಯಿಯನ್ನು ಧರಿಸಿರುತ್ತಾನೆ. ಸಹಾಯಕರು ಆತನ ಸೊಂಟದ ಸುತ್ತಲೂ ಚೇಲೆ ಎಂಬ ಕೆಂಪು ಬಣ್ಣದ ವಸ್ತ್ರವನ್ನು ಸುತ್ತುತ್ತಾರೆ. ನಂತರ ಕನ್ನಿಬಳೆ ಎಂಬ ಬಿದಿರಿನ ಬಳೆಯನ್ನು ಕೋಲು ಮತ್ತು ಹಗ್ಗದಿಂದ ಸೊಂಟಕ್ಕೆ ಬಿಗಿದು ಕಟ್ಟಲಾಗುತ್ತದೆ. ಅದರ ಮೇಲ್ಭಾಗಕ್ಕೆ ಅಡ್‌ಕ್ ಎಂಬ ಮರದ ಕಲಾತ್ಮಕ ಹಲಗೆಯನ್ನು ಇರಿಸುತ್ತಾರೆ. ಅದರ ಮೇಲೆ ಚೆರುಬೊಳಂಬ ಎಂಬ ಲಂಗದಂತಹ ಉಡುಪು ಧರಿಸಿ ಚೆಂಡ್‌ಬಳೆ ಎಂಬ ವಸ್ತ್ರವನ್ನು ಇಳಿಬಿಡಲಾಗುತ್ತದೆ.

ಎದೆ ಹಾಗೂ ಬೆನ್ನಿನ ಭಾಗವನ್ನು ಹಾಗೆಯೇ ಬಿಟ್ಟು ತೋಳುಗಳಿಗೆ ಜೂಲು ಜೂಲಾಗಿರುವ ಕೆಂಪು ವರ್ಣದ ಬಟ್ಟೆಯ ತೋಳುಗಳನ್ನು ಧರಿಸಲಾಗುತ್ತದೆ. ತೋಳಿನ ಮುಂಭಾಗಕ್ಕೆ ತಂಡೆಬಳೆ(ಮರದ ಬಳೆ), ಅದರ ಮುಂಭಾಗಕ್ಕೆ ಬಿದಿರ್(ಕಲಾತ್ಮಕ ಬಳೆ), ಮುಂಗೈಗೆ ಚೂಡಗ(ಕಂಚಿನ ಕಲಾತ್ಮಕ ಕಡಗ) ಇರುತ್ತದೆ. ಕುತ್ತಿಗೆಯಲ್ಲಿ ಕಯತ್‌ಕಟ್ಟ್ ಎಂಬ ಮರದ ಪದಕ ಇರುತ್ತದೆ. ಕಿವಿಗೆ ವಾಲೆಕಾದ್ ಹಾಗೂ ಕೊಂಬೋಲೆ ಕಾದ್ ಎಂಬ ಆಭರಣವನ್ನು ಧರಿಸಲಾಗುತ್ತದೆ. ದೈವವನ್ನು ಪ್ರಾರ್ಥಿಸಿ ತೆರೆಕಾರನು ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುವನು. ಅದರ ಮೇಲೆ ತಲೆಪೂ ಎಂಬ ಹೂವಿನದಂಡೆಯನ್ನು ಕಟ್ಟಿ ಪೂಕೊಟ್ಟಿ ಎಂಬ ಶಿರೋಭೂಷಣವನ್ನು ಧರಿಸುವನು. ಮರದಿಂದ

ನಿರ್ಮಿಸಿರುವ ಪೂಕೊಟ್ಟಿಯು ದೊಡ್ಡ ಕಿರೀಟದಂತಿದ್ದು; ತೆರೆಯ ಮುಖಕ್ಕೆ ವಿಸ್ತಾರತೆಯನ್ನು ತಂದುಕೊಡುತ್ತದೆ. ತೆರೆಕಾರನು ಬೊಳ್ಳತ್ತಾಡಿ ಮೀಸೆ ಎಂದು ಕರೆಯಲ್ಪಡುವ ಬಿಳಿಯ ಗಡ್ಡಮೀಸೆಯನ್ನು ಧರಿಸುತ್ತಾನೆ. ಇದು ಕುಟ್ಟಿಚಾತ ತೆರೆಗೆ ಮೀಸಲಾದುದು. ಹಣೆಗೆ ಬೆಳ್ಳಿಯ ಚಂದ್ರಕಲೆ ಹಾಗೂ ನೆತ್ತಿಬೊಟ್ಟನ್ನು ಹಾಕಿ ಕಣ್ಣಿಗೆ ಪೊಯ್ಕಣ್ಣ್(ಬೆಳ್ಳಿಯ ಕಣ್ಣು) ಧರಿಸಿದರೆ ಕುಟ್ಟಿಚಾತ ತೆರೆಯ ವೇಷ ಪೂರ್ಣಗೊಳ್ಳುತ್ತದೆ. ಚಂಡೆಯ ಹಿಮ್ಮೇಳದೊಂದಿಗೆ ತೆರೆಹಾಡು ಹಾಡುತ್ತಿದ್ದಂತೆಯೇ ತೆರೆಕಾರನು ಕುಟ್ಟಿಚಾತ ದೈವದ ಆವೇಶವನ್ನು ಮೈದುಂಬಿಕೊಳ್ಳುವನು. ವೀರಾವೇಶದಿಂದ ಕುಣಿಯಲಾರಂಭಿಸುವನು. ಸ್ವಲ್ಪ ಹೊತ್ತು ಕುಣಿದ ನಂತರ ಪ್ಡೇದಲ್ಲಿ ಕುಳಿತು ಕುಟ್ಟಿಚಾತ ದೈವವಾಗಿ ಜನರೊಂದಿಗೆ ಮಾತನಾಡುವನು. ತನ್ನ ಸಾಹಸವನ್ನು ವರ್ಣಿಸುವನು. ಭಕ್ತಾದಿಗಳು ತಮ್ಮ ಹರಕೆ ಮತ್ತು ಕಾಣಿಕೆಗಳನ್ನು ಕುಟ್ಟಿಚಾತನಿಗೆ ಒಪ್ಪಿಸುತ್ತಾರೆ. ತಮ್ಮ ಸಂಕಷ್ಟಗಳನ್ನು ಹೇಳಿಕೊಳ್ಳುತ್ತಾರೆ. ದೈವವು ಪರಿಹಾರವನ್ನು ಸೂಚಿಸಿ ಅನುಗ್ರಹಿಸುತ್ತದೆ. ದೈವವು ಅನುವಾದ ನೀಡಿದ ನಂತರ ಕೋಳಿಬಲಿ ನೀಡಲಾಗುತ್ತದೆ. ಅದರೊಂದಿಗೆ ಕುಟ್ಟಿಚಾತ ತೆರೆಯು ಮುಕ್ತಾಯಗೊಳ್ಳುತ್ತದೆ.

**೫.೧.೨.೧೭ ಕರ್ತಣಿ ಮಾಚಯ್ಯ ತೆರೆ**

**ಅರ್ಥ ಮತ್ತು ಹಿನ್ನೆಲೆ :**

ಕರ್ತಣಿ ಮಾಚಯ್ಯ ಅಕಾಲಮರಣಕ್ಕೆ ಈಡಾದ ಜನಪದವೀರ. ಪಯ್ಯಾವೂರ್ ದೇವಾಲಯಕ್ಕೆ ಎತ್ತಿನ ಹೇರಿನೊಂದಿಗೆ ಹೊರಟ ಈತನನ್ನು ದಾರಿಯಲ್ಲಿ ಎರಡು ಎತ್ತುಗಳು ತಿವಿದು ಸಾಯಿಸಿಬಿಡುತ್ತವೆ. ಹೀಗೆ ದೇವರಸೇವೆಗೆ ಹೊರಟು ದುರಂತ ಸಾವಿಗೀಡಾದ ಈತನ ಸ್ಮರಣಾರ್ಥ ಕರ್ತಣಿ ಮಾಚಯ್ಯ ತೆರೆಯನ್ನು ಕಟ್ಟಲಾಗುತ್ತದೆ.

**ಆಚರಣೆ :**

ಕರ್ತಣಿ ಮಾಚಯ್ಯ ತೆರೆಯನ್ನು ಕಕ್ಕಬೆ ಗ್ರಾಮದ ಕಂಬೇಯಂಡ ಕುಟುಂಬದವರು ಕಟ್ಟಿಸುತ್ತಾರೆ. ಕುಟುಂಬದ ಐನ್‌ಮನೆಯಲ್ಲಿ ನಡೆಯುವ ಒಕ್ಕತೆರೆಯಲ್ಲಿ ಒಂದು ತೆರೆಯಾಗಿ ಇದರ ಆಚರಣೆ ನಡೆಯುತ್ತದೆ. ಜನಪದರು ಈ ತೆರೆಯನ್ನು ಹಗಲು ಹೊತ್ತಿನಲ್ಲಿ ಆಚರಿಸುವರು.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ತೆರೆಕಾರನು ಸ್ನಾನಮಾಡಿ ಕೆಂಪುಬಣ್ಣದ ಷರಾಯಿ ಹಾಗೂ ತೋಳುಗಳಿಗೆ ಕೆಂಪು ಬಣ್ಣದ ಬಟ್ಟೆಯನ್ನು ಧರಿಸುತ್ತಾನೆ. ಆತನ ಸಹಾಯಕರು ಬಣ್ಣಗಾರಿಕೆಯ ಕೆಲಸವನ್ನು ಮಾಡುವರು. ಮುಖವರ್ಣಿಕೆಯಲ್ಲಿ ಕೆಂಪು ಬಣ್ಣವನ್ನು ಪ್ರಮುಖವಾಗಿ ಬಳಸಲಾಗುತ್ತದೆ. ಹುಬ್ಬಿನ ಕೆಳಭಾಗ ಹಾಗೂ ಕಣ್ಣಿನ ಸುತ್ತ ಕಪ್ಪು ಬಣ್ಣವನ್ನು

ಹಚ್ಚುವರು. ಹಣೆಯಲ್ಲಿ ಕೆಂಪು ಬಣ್ಣದ ತಿಲಕ ಹಾಗು ಮುದ್ರೆಯನ್ನು ಬಿಡಿಸುತ್ತಾರೆ. ಮೂಗಿನಿಂದ ಕಿವಿಯವರೆಗೆ ಗಲ್ಲದ ಮೇಲೆ ಹಾದುಹೋಗುವಂತೆ ವಿಸ್ತಾರವಾದ ರೇಖೆಗಳನ್ನು ಎಳೆಯುತ್ತಾರೆ. ಕರ್ತಣಿ ಮಾಚಯ್ಯ ತೆರೆಯ ವೇಷದಲ್ಲಿ ತೆಂಗಿನ ಗರಿಯ ಬಳಕೆ ಇರುವುದಿಲ್ಲ. ಮರ, ಲೋಹದ ತಗಡು ಹಾಗೂ ಕೆಂಪು ಬಟ್ಟೆಯನ್ನು ಬಳಸಿ ನಿರ್ಮಿಸಿರುತ್ತಾರೆ. ಸೊಂಟಕ್ಕೆ ಚೇಲೆ ಎಂಬ ಕೆಂಪು ಬಟ್ಟೆಯನ್ನು ಸುತ್ತಿ ಬಿದಿರಿನ ಕನ್ನಿಬಳೆಯನ್ನು ಕಟ್ಟುತ್ತಾರೆ. ಅದರ ಮೇಲೆ ಚೆರುಬೊಳಂಬವನ್ನು ಧರಿಸಿ ಮೇಲ್ಭಾಗಕ್ಕೆ ಚೆಂಡ್‌ಬಳೆ ಎಂಬ ವಸ್ತ್ರವನ್ನು ಇಳಿಬಿಡುವರು.

ತೆರೆಕಾರನು ದೈವವನ್ನು ಪ್ರಾರ್ಥಿಸಿ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುವನು. ಆತನ ಸಹಾಯಕರು ತಲೆಗೆ ತಲೆಪೂ ಎಂಬ ಹೂವಿನ ದಂಡೆಯನ್ನು ಕಟ್ಟಿ ಪೂಕೊಟ್ಟಿ ಚೆಯ್ಯಾಕ್ ಎಂಬ ಶಿರೋಭೂಷಣವನ್ನು ತೊಡಿಸುತ್ತಾರೆ. ಕಿವಿಯ ಮೇಲ್ಭಾಗಕ್ಕೆ ಚೆನ್ನೆಲರ್ ಎಂಬ ಕರ್ಣಾಭರಣವಿರುತ್ತದೆ. ಕೈ ಮತ್ತು ತೋಳುಗಳಿಗೆ ಮರದ ಬಳೆ ಮತ್ತು ಚೂಡಗ ಎಂಬ ಕಂಚಿನ ಕಡಗ ಇರುತ್ತದೆ. ಕಾಲಿಗೆ ಪಟ್‌ಮಡವನ್ನು ಧರಿಸಿದ ತೆರೆಕಾರನು ಪಾದಗಳ ಮೇಲ್ಭಾಗಕ್ಕೆ ಚಲ್‌ಂಬುವನ್ನು ತೊಡುತ್ತಾನೆ. ಮುಖದಲ್ಲಿ ಕಪ್ಪುಬಣ್ಣದ ಕೃತಕ ಗಡ್ಡ ಮೀಸೆಗಳಿರುತ್ತವೆ. ಇದನ್ನು 'ಕರಿಂದಾಡಿ ಮೀಸೆ' ಎಂದು ಕರೆಯುತ್ತಾರೆ.

**ತೆರೆಹಾಡು ಮತ್ತು ಕುಣಿತ :**

ವೇಷಭೂಷಣಗಳನ್ನು ಧರಿಸಿ ಸಿದ್ಧಗೊಳ್ಳುವ ತೆರೆಕಾರನು ಪ್‌ಡದ ಮೇಲೆ ಕುಳಿತುಕೊಳ್ಳುತ್ತಾನೆ. ಆತನ ಜೊತೆಗಾರರು ಚಂಡೆಯನ್ನು ಬಾರಿಸುತ್ತಾ ತೆರೆಹಾಡು ಹಾಡಲಾರಂಭಿಸುತ್ತಾರೆ. ಚಂಡೆಯ ಹಿಮ್ಮೇಳದೊಂದಿಗೆ ಕೊಡವ ಭಾಷೆಯಲ್ಲಿರುವ ಈ ಹಾಡನ್ನು ತೆರೆಕಾರನೂ ಹಾಡುತ್ತಾನೆ.

"ಏದ್ ಊರ್ ಏದ್ ನಾಡ್ ಚಂಜಾದಿಯಳೇ,
ಪಾಡಿ ನೋಟಿ ಕಾಂಬಕ ಚಂಜಾದಿಯಳೇ"

"ಯಾವ ಊರು ಯಾವ ನಾಡು ಸ್ನೇಹಿತರೇ. ಹಾಡಿ ನೋಡುವಾಗ ಸ್ನೇಹಿತರೇ" ಎಂದು ಮುಂದುವರೆಯುವ ತೆರೆಹಾಡು ಜನಪದ ವೀರನ ಹುಟ್ಟು ಹಾಗೂ ಬದುಕನ್ನು ವಿವರಿಸುತ್ತದೆ. ಪಯ್ಯಾವೂರಿಗೆ ಎತ್ತಿನಹೇರಿನೊಂದಿಗೆ ಹೋಗಿದ್ದ ಆತನನ್ನು ಎರಡು ಎತ್ತುಗಳು ತಿವಿದು ಕೊಂದ ಕಥೆಯನ್ನು ವರ್ಣಿಸುತ್ತದೆ. ಹಾಡು ಮುಗಿಯುತ್ತಿದ್ದಂತೆಯೇ ಕರ್ತಣಿ ಮಾಚಯ್ಯ ತೆರೆಕಾರನ ಮೇಲೆ ಮೈದುಂಬಿ ಬರುತ್ತಾನೆ. ಆವೇಶಭರಿತನಾದ ತೆರೆಕಾರನಿಗೆ ಒಕ್ಕದವರು ಕೊಡವ ಸಾಂಪ್ರದಾಯಿಕ ಆಯುಧ ಒಡಿಕತ್ತಿ ಹಾಗು ಪರೆಯ ಎಂಬ ಗುರಾಣಿಯನ್ನು ನೀಡುತ್ತಾರೆ. ತೆರೆಯು ಒಡಿಕತ್ತಿಯನ್ನು ಝುಳಪಿಸುತ್ತಾ ಕುಣಿಯುತ್ತದೆ. ಕೈಯನ್ನು ಕತ್ತರಿಸಿಕೊಂಡು ತನ್ನ ಶಕ್ತಿಯನ್ನು ಪ್ರದರ್ಶಿಸುತ್ತದೆ. ಅಷ್ಟರಲ್ಲಿ ತೆರೆಕಾರರು ಒಣಹುಲ್ಲಿನಿಂದ ಎತ್ತಿನ ಎರಡು

ಪ್ರತಿಕೃತಿಗಳನ್ನು ನಿರ್ಮಿಸಿರುತ್ತಾರೆ. ಇದರಲ್ಲಿ ಒಂದನ್ನು ಗ್ರಾಮದವರು ಹಿಡಿದುಕೊಳ್ಳುತ್ತಾರೆ. ಮತ್ತೊಂದನ್ನು ಕಂಬೇಯಂಡ ಕುಟುಂಬದವರು ಹಿಡಿದುಕೊಳ್ಳುತ್ತಾರೆ. ಕರ್ತಣಿ ಮಾಚಯ್ಯ ತೆರೆಯನ್ನು ತಿವಿಯಲು ಹವಣಿಸುತ್ತಾರೆ. ಕೆಲವು ಹೊತ್ತು ಈ ಅಣಕು ಪ್ರದರ್ಶನ ನಡೆಯುತ್ತದೆ. ಒಡಿಕತ್ತಿಯಲ್ಲಿ ಕೋಳಿಯನ್ನು ಕತ್ತರಿಸಿ ತಟ್ಪತಡೆಗೆ ಅರ್ಪಿಸಿದ ನಂತರ ತೆರೆ ಮುಕ್ತಾಯಗೊಳ್ಳುತ್ತದೆ.

**೫.೧.೨.೧೮ ಕಾಕೋಟಚ್ಚ\ಕಾಲಭೈರವ ತೆರೆ**

**ಅರ್ಥ :**



ಕೊಡಗಿನ ವಿರಾಜಪೇಟೆಯಿಂದ ಮಡಿಕೇರಿಗೆ ತೆರಳುವ ಮುಖ್ಯಮಾರ್ಗದಲ್ಲಿ ಕಾಕೋಟ್‌ಪರಂಬು ಎಂಬ ಮೈದಾನವಿದೆ. ಇಲ್ಲಿನ ದೇವರು ಕಾಕೋಟಚ್ಚ. ಈತನನ್ನು ಕಾಲಭೈರವ ಅಂತಲೂ ಕರೆಯುತ್ತಾರೆ. ಡಿಸೆಂಬರ್ ತಿಂಗಳಿನಲ್ಲಿ ಮೂರು ದಿನಗಳ ಕಾಲ ಕಾಕೋಟಚ್ಚ ದೇವರ ವಾರ್ಷಿಕ ಉತ್ಸವ ನಡೆಯುತ್ತದೆ. ಉತ್ಸವದ ಕೊನೆಯ ದಿನದಂದು ಕಾಲಭೈರವ ತೆರೆಯನ್ನು ಕಟ್ಟಲಾಗುತ್ತದೆ. ಗ್ರಾಮದವರೆಲ್ಲರೂ ಈ ಆಚರಣೆಯಲ್ಲಿ ಭಾಗವಹಿಸುತ್ತಾರೆ. ಕಾಕೋಟಚ್ಚ ತೆರೆಯೊಂದಿಗೆ ಚೌಂಡಿತೆರೆಯ ಆಚರಣೆಯೂ ಏಕಕಾಲದಲ್ಲಿ ನಡೆಯುತ್ತದೆ. ಇದರೊಂದಿಗೆ ಬೋಡ್‌ಹಬ್ಬಗಳಲ್ಲಿ ನಡೆಸುವ ಕುದುರೆ ಹೊತ್ತುಕೊಳ್ಳುವ ಆಚರಣೆಯನ್ನೂ ಮಾಡುತ್ತಾರೆ.

**ಹಿನ್ನೆಲೆ :**

ಕಾಕೋಟಚ್ಚನನ್ನು ಕೊಂಬ ಮೀಸೆ(ಗಿರಿಜಾಮೀಸೆ)ಅಚ್ಚಯ್ಯ, ಕಾಲಭೈರವ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. 'ಇಬ್ಬ ಮಕ್ಕ ದೇಬುವಡ ಪಾಟ್' ಎಂಬ ಕೊಡವ ಜನಪದಗೀತೆ ಕಾಕೋಟಚ್ಚನ ಜನ್ಮ ವೃತ್ತಾಂತವನ್ನು ಹೀಗೆ ನಿರೂಪಿಸುತ್ತದೆ. "ಏಳು ಕಡಲಾಚೆ ಹಾಗೂ ಏಳು ಕಡಲೀಚೆ ಮಧ್ಯಭಾಗದಲ್ಲಿ ಹಾಲಿನ ಕಡಲಿತ್ತು. ಅಲೆಯ ಹೊಡೆತಕ್ಕೆ ಅಲ್ಲಿದ್ದ ಬಿಳಿ ಕಲ್ಲು ಹಾಸಿನ ಮೇಲೆ ಬಿಳಿ ಮರಳು, ಸಣ್ಣ ಮರಳು, ಅತೀಸಣ್ಣ ಮರಳು ಹಾಗೂ ನುಣುಪಾದ ಮರಳು ಶೇಖರಣೆಗೊಂಡಿತು. ಕಾಲಕಳೆದಂತೆ ಅದರ ಮೇಲೆ ಹಾವಸೆ ಬೆಳೆದು ಏಳು ಕವಲಿನ ಹುತ್ತವೊಂದು ಹುಟ್ಟಿತು. ಹುತ್ತದಲ್ಲಿ ಬೆಳೆದ ಅರಳಿ ಮರದ ಬುಡದಲ್ಲಿ ಸೋರೆಕಾಯಿ ಗಿಡವೊಂದು

ಬೆಳೆದು ಹಬ್ಬಿತು. ಮಕರ ಮಾಸದ ಇಬ್ಬನಿಗೆ ಹೂವಾಗಿ ಕಾಯಿಬಿಟ್ಟಿತು. ಬಲಿತ ಸೋರೆಕಾಯಿ ಕುಂಭಮಾಸದ ರಣಬಿಸಿಲಿಗೆ ಒಣಗಿತು. ಒಂದು ದಿನ ಕಾಳಿಕಮಲೆ ಯಿಂದ ಬಿರುಗಾಳಿ ಬೀಸಿತು. ಗಾಳಿಯ ಹೊಡೆತಕ್ಕೆ ಸಿಲುಕಿ ಒಣಗಿದ ಸೋರೆಕಾಯಿ ಒಡೆದು ಅದರೊಳಗಿಂದ ಇಬ್ಬರು ದೇವಮಕ್ಕಳು ಹುಟ್ಟಿದರು. ಹಿರಿಯವನು ಕೊಂಬ ಮೀಸೆ(ಗಿರಿಜಾ ಮೀಸೆ) ಅಚ್ಚಯ್ಯ, ಕಿರಿಯವಳು ಮುತ್ತ್‌ಕೊಡೆ(ಮುತ್ತಿನ ಕೊಡೆಯ) ಅಕ್ಕವ್ವ. ಕಾಲ ಕಳೆದಂತೆ ಬೆಳೆದು ನಿಂತ ತಂಗಿ ಮುತ್ತ್‌ಕೊಡೆ ಅಕ್ಕವ್ವ ಅಣ್ಣನನ್ನು ಕುರಿತು "ಅಣ್ಣ ಇಲ್ಲಿ ಎಲ್ಲಿ ನೋಡಿದರೂ ಭೂಮಿ ಕಾಣಿಸುತ್ತಿಲ್ಲ. ನೆಲೆಸಲು ದೇವನೆಲೆ ಸಿಗುತ್ತಿಲ್ಲ. ನಾವಿಲ್ಲಿ ಬಾಳುವುದಾದರೂ ಹೇಗೆ?" ಎಂದಳು. ಆಕೆಯ ಮಾತಿಗೆ ಅಣ್ಣನು "ಸಹೋದರಿಯೇ ನಿನ್ನನ್ನು ನಾನು ಭೂಮಿಗೆ ಇಳಿಸುತ್ತೇನೆ. ಗಂಧ ಪುಷ್ಪಗಳು ಹಾಗೂ ದೇವನೆಲೆ ಸಿಗುವಂತೆ ಮಾಡುತ್ತೇನೆ. ಅಣ್ಣನಾದ ನಾನು ತಂದೆಯ ಸಮಾನನಲ್ಲವೇ" ಎಂದು ಸಮಾಧಾನಪಡಿಸಿದನು. ಅಷ್ಟರಲ್ಲಿ ಆಲದ ಮರದ ತುಂಬಾ ಹಣ್ಣುಗಳು ತುಂಬಿಕೊಂಡವು. ಈ ಹಣ್ಣುಗಳನ್ನು ತಿನ್ನಲು ಕೆಂಬಕ್ಕಿ ಕ್‌ರ್‌ಕೊಟ್ಟ(ಗಿಡುಗ)ವೊಂದು ಹಾರಿಬಂದಿತು. ಇದನ್ನು ಕಂಡ ಅಚ್ಚಯ್ಯ ಹಕ್ಕಿಯನ್ನು ಕುರಿತು "ನೀನು ನಮ್ಮನ್ನು ಕಡಲು ದಾಟಿಸಿ ಭೂಮಿಗೆ ಇಳಿಸಿದರೆ ನಿನಗೊಂದು ವರ ನೀಡುತ್ತೇನೆ" ಎಂದನು.

ಆತನ ಮಾತಿಗೆ ಒಪ್ಪಿದ ಗಿಡುಗವು ಕೊಂಬ ಮೀಸೆ ಅಚ್ಚಯ್ಯನನ್ನು ತನ್ನ ಬೆನ್ನಿನ ಮೇಲೆ ಕೂರಿಸಿಕೊಂಡಿತು. ಮುತ್ತ್ ಕೊಡೆ ಅಕ್ಕವ್ವನನ್ನು ಕೊಕ್ಕಿನಲ್ಲಿ ಕಚ್ಚಿ ಹಿಡಿದುಕೊಂಡಿತು. ತನ್ನ ಚಿನ್ನದ ರೆಕ್ಕೆಯನ್ನಗಲಿಸಿ ಹಾರುತ್ತಾ ಮಾಣಿಕ ಮಲೆನಾಡನ್ನು ತಲುಪಿತು. ಅಲ್ಲಿಯ ಕಣ್ಣೂರು ಕಡಲಿನ ದಡದಲ್ಲಿರುವ ಮುಕ್ಕುವಡ ಕೇರಿಯ ತೆಂಗಿನ ಮರದ ಮೇಲೆ ಇಳಿಸಿತು. ಅಚ್ಚಯ್ಯ ಮತ್ತು ಅಕ್ಕವ್ವನಿಗೆ ಅಲ್ಲಿನ ಮೀನು ವಾಸನೆಯನ್ನು ಸಹಿಸಲಾಗಲಿಲ್ಲ. ತಮ್ಮನ್ನು ಭೂಮಿಗೆ ಇಳಿಸುವಂತೆ ಗಿಡುಗನಿಗೆ ಹೇಳಿದರು. ಗಿಡುಗವು ಇಬ್ಬರನ್ನು ಭೂಮಿಗೆ ಇಳಿಸಿತು. ಸಂತಸಗೊಂಡ ಅಚ್ಚಯ್ಯ "ಇಂದಿನವರೆಗೆ ನೀನು ಹಣ್ಣು ಹಂಪಲು ತಿನ್ನುವ ಕೆಂಬಕ್ಕಿಯಾಗಿದ್ದೆ. ಇಂದಿನಿಂದ ನೀನು ಕೋಳಿ ಮರಿಗಳನ್ನು ತಿನ್ನುವಂತಾಗು" ಎಂದು ಹರಸಿದನು. ಅಂದಿನಿಂದ ಶಾಕಾಹಾರಿ ಗಿಡುಗವು ಮಾಂಸಾಹಾರಿಯಾಯಿತು ಎಂಬುದು ಪ್ರತೀತಿ.

ಅಲ್ಲಿಂದ ನೆಲೆಯರಸಿ ಹೊರಟ ದೇವಮಕ್ಕಳು ಕಾಞರಾಟ್ ಊರಿಗೆ ತಲುಪಿದರು. ಅಲ್ಲಿನ ದೇವರು ಕಾಞರಾಟಪ್ಪ ಇವರನ್ನು ಭೇಟಿಯಾಗಿ ನೆಲೆ ನೀಡುತ್ತೇನೆ ಎಂದನು. ಆಗ ಅಚ್ಚಯ್ಯ "ನನ್ನ ಸಹೋದರಿಗೆ ಹೊನ್ನಿನ ಮಾಲೆಯಂತಹ ಕೊಡಗಿನಲ್ಲಿಯೇ ನೆಲೆಸಬೇಕೆಂಬ ಮಹದಾಸೆ ಇದೆ. ಹಾಗಾಗಿ ನಾವು ಇಲ್ಲಿ ನೆಲೆಸಲು ಸಾಧ್ಯವಿಲ್ಲ."ಎಂದನು. ಮುಂದೆ ತೆರಳಿದ ಇವರನ್ನು ಬೆಂದ್ರುಕೋಲ್ ಊರಿನ ಬೆಂದ್ರುಕೋಲಪ್ಪ, ತಳಿಬರಂಬು ಊರಿನ ತಳಿಪರಂಬ್

ಅಪ್ಪ, ತಿರ್‌ಚಂಬರ ಊರಿನ ತಿರ್‌ಚಂಬರಪ್ಪ ಹಾಗೂ ಬಯತೂರಿನ ಬಯತೂರಪ್ಪ ಭೇಟಿ ಮಾಡಿ ತಮ್ಮ ಊರಿನಲ್ಲಿ ನೆಲೆಸಬೇಕು ಎಂದರು. ಎಲ್ಲರ ಕೋರಿಕೆಯನ್ನು ತಿರಸ್ಕರಿಸಿ ಮುಂದೆ ಸಾಗಿ ಬಣ್ಣಾಯಿ ಕಡು ಎಂಬ ಕಾಲುದಾರಿಯನ್ನು ತಲುಪಿದರು. ತೇರಟೆ ಹೊಳೆಯನ್ನು ದಾಟಿ ಪೊನ್ನುಡುಂಬೆ ಮಾರ್ಗವಾಗಿ ಕೊಡಗಿನ ಕೋಡತೊರ ಕಂಡಿಯನ್ನು ಪ್ರವೇಶಿಸಿದರು. ಅಲ್ಲಿಂದ ಕಬ್ಬೆಪೊಟ್ಟೆ ಎಂಬ ದಿಣ್ಣೆಯನ್ನೇರಿ ನಾಲ್ಕು ದಿಕ್ಕುಗಳನ್ನು ವೀಕ್ಷಿಸಿದರು.

ಕೊಡಗಿನ ಸೌಂದರ್ಯಕ್ಕೆ ಮನಸೋತ ಮುತ್ತ್ ಕೊಡೆ ಅಕ್ಕವ್ವ "ಅಣ್ಣನೇ ನನ್ನ ಮನದಾಸೆಯಂತೆ ಕೊಡಗಿಗೆ ತಲುಪಿದ್ದೇವೆ. ಇನ್ನು ನಮಗೆ ಗಂಧ, ಪುಷ್ಪ, ನೆಲೆ ಇಲ್ಲದಿದ್ದರೂ ಚಿಂತೆಯಿಲ್ಲ. ನಾವು ಇಲ್ಲಿಯೇ ನೆಲೆಸೋಣ"ಎಂದಳು. ನಾಲ್ಕು ದಿಕ್ಕುಗಳನ್ನು ನೋಡಿ ಇಗ್ಗ್‌ತಪ್ಪ ದೇವರು ನೆಲೆಸಿರುವ ಪಾಡಿತೊರ ಕಂಡಿಗೆ ಹೋಗಲು ತೀರ್ಮಾನಿಸಿದರು. ಅದರಂತೆ ಕಡಿಯತ್‌ನಾಡಿನ ಚೇಲೋರ ಗ್ರಾಮದ ಕಾಡಿನ ಮಾರ್ಗವಾಗಿ ಪ್ರಯಾಣಿಸಿದರು. ಮಾರ್ಗಮಧ್ಯದಲ್ಲಿ ಸಹೋದರಿ ಅಕ್ಕವ್ವ ಅಣ್ಣನನ್ನು ಕುರಿತು "ನಾವು ಹೀಗೆ ಇಬ್ಬರೇ ಪ್ರಯಾಣಿಸಿದರೆ ನಮ್ಮನ್ನು ಕಂಡ ಮನುಷ್ಯರು ಅಣ್ಣ ತಂಗಿ ಎನ್ನುವುದಿಲ್ಲ. ಬದಲಾಗಿ ದೇವ ದೇವಿ(ಪತಿ ಪತ್ನಿ) ಎಂದುಕೊಳ್ಳುವರು. ಹಾಗಾಗಿ ನಮ್ಮ ಜೊತೆಗೊಬ್ಬ ವ್ಯಕ್ತಿ ಇರಬೇಕು" ಎನ್ನುವಳು. ನಾಲ್ಕು ಹೆಜ್ಜೆ ಸರಿಯುವಷ್ಟರಲ್ಲಿ ಆ ಊರಿನ ಬಾಚಮ್ಮಂಡ ಒಕ್ಕದ ಕೆಲಸದಾಳು ಕಾರಿಕೊಟ್ಟ ಚಾಂಡಾಳ ಕಿರು ಬಿದಿರನ್ನು ಕಡಿಯುತ್ತಿರುವುದು ಕಾಣಿಸಿತು. ಕೊಂಬ ಮೀಸೆ ಅಚ್ಚಯ್ಯ ಆತನನ್ನು ಕುರಿತು "ಅಯ್ಯಾ ಮಾನವನೇ ನಮಗೆ ದಾರಿ ತಿಳಿಯುತ್ತಿಲ್ಲ. ನೀನು ಸರಿದಾರಿಯನ್ನು ತೋರಿಸಿದರೆ ತಿನ್ನಲು ತಾಂಬೂಲ ನೀಡುತ್ತೇನೆ" ಎಂದನು. ಸಂತಸಗೊಂಡ ಕಾರಿಕೊಟ್ಟ ಚಾಂಡಾಲ ಕೈಜೋಡಿಸಿ ನಿಂತುಕೊಂಡನು. ಕೊಂಬ ಮೀಸೆ ಅಚ್ಚಯ್ಯ ಆತನಿಗೆ ತಾಂಬೂಲ ನೀಡಿದನು. ತನ್ನ ಮಾಯಾಶಕ್ತಿಯಿಂದ ಆತನನ್ನು ದೇವನೆಲೆಗೆ ಸೇರಿಸಿ ಕಾರ್ಯಪ್ಪ ಎಂಬ ಹೆಸರಿಟ್ಟನು.

ಮೂವರು ಮುಂದೆ ಸಾಗಿ ಕರಡ ಗ್ರಾಮದ ಬೇಲಿಯಾಣೆ ಮಂದ್, ಮೂವಾಯಿರ ನಾಡಿನ ಪೆಬ್ಬಟಾಣೆ ಮಂದ್‌ಗಳಲ್ಲಿ ನಿಂತು ಸೂಕ್ತ ಸ್ಥಳವನ್ನು ಹುಡುಕಿದರು. ಯಾವುದು ಸರಿಯಾಗಲಿಲ್ಲ. ಮುಂದೆ ಪಾಲೂರು ಗ್ರಾಮವನ್ನು ತಲುಪಿದಾಗ ಪಾಲೂರಪ್ಪ ದೇವನು ಭೇಟಿಯಾಗಿ ನೆಲೆಸುವಂತೆ ಹೇಳಿದನು. ಅದನ್ನೂ ತಿರಸ್ಕರಿಸಿ ಪುನಃ ಕಡಿಯತ್‌ನಾಡಿಗೆ ಹಿಂದಿರುಗಿದರು. ಮುಂದುವರೆದು ಅಯ್ಯಾಯಿರ ನಾಡಿನ ನಾಲ್ಕೇರಿ ಗ್ರಾಮವನ್ನು ತಲುಪಿದರು. ಅಲ್ಲಿನ ಪಾಂಡ್‌ಮಾಟ್ ಕೇರಿಯ ಜೊಟ್ಟೆಕಾಡ್ ಬಾಣೆಯಲ್ಲಿ ಸಾವಿರಾರು ದನಗಳು ಮೇಯುತ್ತಿದ್ದವು. ಅವುಗಳ ನಡುವೆ ಅಲ್ಲಟಿರ ಒಕ್ಕದ ಹಸುವೊಂದು ಮೇಯುತ್ತಿತ್ತು. ಅದನ್ನು

ಕಂಡು ಅಲ್ಲಿ ನೆಲೆಸಲು ತೀರ್ಮಾನಿಸಿದರು. ಆದರೆ ಅಲ್ಲಿ ಸ್ಥಳಾವಕಾಶ ಇರಲಿಲ್ಲ. ಆದುದರಿಂದ ಅದರ ಮುಂಭಾಗದಲ್ಲಿರುವ ಕಾಕೋಟ್‌ಪರಂಬು ಮೈದಾನದಲ್ಲಿ ನೆಲೆಸಲು ತೀರ್ಮಾನಿಸಿದರು. ಈ ವಿಚಾರವನ್ನು ಊರಿನವರಿಗೆ ತಿಳಿಸಲು ಮುಂದಾದರು. ದನಗಳನ್ನು ಮೇಯಿಸುತ್ತಾ ಆಡುತ್ತಿದ್ದ ಅಮ್ಮಂಡಿರ ಕುಟುಂಬದ ಮಕ್ಕಳ ಮೇಲೆ ಕೊಂಬ ಮೀಸೆ ಅಚ್ಚಯ್ಯ ಮೈದುಂಬಿ ಬಂದನು. ಮಕ್ಕಳ ಜೊತೆಯಲ್ಲಿದ ಚಾಂಡಾಳನ ಮೈಮೇಲೆ ಕಾರ್ಯಪ್ಪ ಆವಾಹನೆಯಾದನು. ಎಲ್ಲರೂ ಪರಸ್ಪರ ಅನುವಾದ ನೀಡುತ್ತಾ ಕುಣಿಯತೊಡಗಿದರು. ಗಾಬರಿಗೊಂಡ ದನಗಳು ಒಂದೇ ಸಮನೆ ಅರಚತೊಡಗಿದವು. ಅದೇ ಮಾರ್ಗವಾಗಿ ಬರುತ್ತಿದ್ದ ಚೆಪ್ಪಚ್ಚಂಡ ಪೂವಣ್ಣ ಈ ದೃಶ್ಯವನ್ನು ನೋಡಿದನು. ಭಯಗೊಂಡ ಆತ ಅಮ್ಮಂಡಿರ ಒಕ್ಕದ ಐಪಣ್ಣನಿಗೆ ವಿಚಾರವನ್ನು ತಿಳಿಸಿದನು. ಅಲ್ಲಿಗೆ ಬಂದ ಐಪಣ್ಣನು "ಇದೇನಿದು ಮಹಾಮಾಯೆ ನನಗೇನು ಅರಿಯದು. ವಿಚಾರ ಏನಿದ್ದರೂ ನಾಳೆ ಬಗೆಹರಿಸುತ್ತೇನೆ" ಎಂದು ಬೇಡಿಕೊಂಡನು. ಅಷ್ಟರಲ್ಲಿ ದೇವರುಗಳು ಮಕ್ಕಳ ಮೈಬಿಟ್ಟು ದೂರವಾದರು. ಎಲ್ಲರೂ ದನಗಳೊಂದಿಗೆ ಮನೆಗೆ ಮರಳಿದರು.

ಮರುದಿನ ದನಗಳನ್ನು ಮೇಯಿಸುತ್ತಾ ಕಾಕೋಟ್‌ಪರಂಬು ಮೈದಾನಕ್ಕೆ ಬಂದ ಮಕ್ಕಳ ಮೇಲೆ ಮತ್ತೊಮ್ಮೆ ದೇವರುಗಳು ಮೈದುಂಬಿ ಬಂದರು. ಮಕ್ಕಳು ಆವೇಶಗೊಂಡು ಕುಣಿಯತೊಡಗಿದವು. ವಿಚಾರ ಅರಿತ ಐಪಣ್ಣ ನಾಲ್ಕೇರಿ ಗ್ರಾಮದವರನ್ನು ಕಾಕೋಟ್‌ಪರಂಬುವಿಗೆ ಕರೆತಂದನು. ಎಲ್ಲರೂ ಅಡ್ಡಬಿದ್ದು ಬೇಡಿಕೊಂಡರು. ಆಗ ಕೊಂಬಮೀಸೆ ಅಚ್ಚಯ್ಯ ವಿಚಾರವನ್ನು ತಿಳಿಸಿದನು. ತಮಗೆ ನೆಲೆಸಲು ಸ್ಥಳ ಹಾಗೂ ಗಂಧ ಪುಷ್ಪಗಳು ಬೇಕು ಎಂದನು. ಊರಿನವರು ಮಣ್ಣು ಒಡ್ಡರನ್ನು ಕರೆಸಿ ಕೆರೆಯನ್ನು ತೋಡಿಸಿದರು. ಕೊಂಬ ಮೀಸೆ ಅಚ್ಚಯ್ಯ ನಿಗೆ ರತ್ನಪೀಠವನ್ನು ನಿರ್ಮಿಸಿದರು. ಅಲ್ಲಿಂದ ಹತ್ತು ಹೆಜ್ಜೆ ಬಲಕ್ಕೆ ಹಾಗು ನಾಲ್ಕು ಹೆಜ್ಜೆ ಹಿಂದಕ್ಕೆ ಕಗ್ಗಲ್ಲಿನ ಮಾಳಿಗೆಯನ್ನು ಕಾರ್ಯಪ್ಪನಿಗೆ ನಿರ್ಮಿಸಿದರು. ಕೊಂಬ ಮೀಸೆ ಅಚ್ಚಯ್ಯನ ಸ್ಥಾನದ ಬಲಭಾಗದಲ್ಲಿ ಸ್ವಲ್ಪ ಹಿಂದೆ ಅಕ್ಕಮ್ಮನಿಗೆ ಗುಡಿಯನ್ನು ನಿರ್ಮಿಸಿದರು. ಸಂತಸಗೊಂಡ ಕೊಂಬ ಮೀಸೆ ಅಚ್ಚಯ್ಯ ಧನುರ್ಮಾಸದ ಆರಂಭದಲ್ಲಿ ತನಗೆ ಹಬ್ಬ ನಡೆಸಬೇಕೆಂದು ಗ್ರಾಮದವರಿಗೆ ಹೇಳುವನು. ಅಮ್ಮಂಡಿರ ಐಪಣ್ಣನಿಗೆ ಭಂಡಾರ ತಕ್ಕ(ಮುಖ್ಯಸ್ಥ)ನ ಸ್ಥಾನವನ್ನು ನೀಡಿದನು." ಹೀಗೆ ಕೊಂಬ ಮೀಸೆ ಅಚ್ಚಯ್ಯ ಕಾಕೋಟ್ ಪರಂಬುವಿನಲ್ಲಿ ನೆಲೆಸಿ ಕಾಕೋಟಚ್ಚಯ್ಯನಾದನು. ಕಾಲಕ್ರಮೇಣ ಕಾಕೋಟಚ್ಚಯ್ಯ ಕಾಕೋಟಚ್ಚ ಎನಿಸಿಕೊಂಡನು. ನಂತರದ ದಿನಗಳಲ್ಲಿ ಕಾಲಭೈರವ ಎಂಬ ಹೆಸರನ್ನೂ ಪಡೆದುಕೊಂಡನು.

**ಆಚರಣೆ:**

ಜನಪದರು ಕಾಕೋಟ್ ಪರಂಬು ಕಾಲಭೈರವ ಉತ್ಸವದ ಸಂದರ್ಭದಲ್ಲಿ

ಕಾಕೋಟಚ್ಚ ತೆರೆಯನ್ನು ಕಟ್ಟಿಸುತ್ತಾರೆ. ಇದನ್ನು ಕಾಲಭೈರವ ತೆರೆ ಎಂದೂ ಕರೆಯುತ್ತಾರೆ. ಬಣ್ಣರು ಈ ತೆರೆಗಳನ್ನು ಕಟ್ಟುವರು. ತೆರೆಕಟ್ಟುವಂದು ದೇವಸ್ಥಾನದ ತಕ್ಕಮುಖ್ಯಸ್ಥರ ಮನೆಗೆ ತೆರೆಕಾರರು ಬರುತ್ತಾರೆ. ಕಾಕೋಟಚ್ಚ ತೆರೆ ಕಟ್ಟುವವನು ಸ್ನಾನ ಮಾಡಿ ಪ್ರಾರ್ಥಿಸಿ ತೆರೆ ಆಚರಣೆಗೆ ಸಿದ್ಧನಾಗುತ್ತಾನೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ಕಾಕೋಟಚ್ಚ ತೆರೆಯ ಮುಖವರ್ಣಿಕೆಯಲ್ಲಿ ಅರಿಸಿನ ಹಾಗೂ ಕೆಂಪು ಬಣ್ಣವನ್ನು ಪ್ರಧಾನವಾಗಿ ಬಳಸಲಾಗುತ್ತದೆ. ಹುಬ್ಬಿನ ಮೇಲ್ಭಾಗ ಹಾಗೂ ಕಣ್ಣಿನ ಕೆಳಭಾಗದಲ್ಲಿ ಹಳದಿ ಬಣ್ಣದಿಂದ ವಕ್ರರೇಖೆ ಹಾಗೂ ಮುದ್ರೆಗಳನ್ನು ಬಿಡಿಸುತ್ತಾರೆ. ತುಟಿಗೆ ಕೆಂಪು ಬಣ್ಣವನ್ನು ಕಣ್ಣಿನ ಸುತ್ತ ಕಪ್ಪು ಬಣ್ಣವನ್ನೂ ಹಚ್ಚುತ್ತಾರೆ.

**ವೇಷಭೂಷಣಗಳು :**

ಕಾಕೋಟಚ್ಚ ತೆರೆಯಲ್ಲಿ ಮರ, ಲೋಹದ ತಗಡು ಹಾಗೂ ಕೆಂಪು ಬಟ್ಟೆಯಿಂದ ನಿರ್ಮಿಸಿದ ಉಡುಗೆ ತೊಡುಗೆಗಳ ಬಳಕೆ ಹೆಚ್ಚು. ತೆರೆಕಾರನು ಷರಾಯಿಯನ್ನು ತೊಟ್ಟು ತೋಳುಗಳಿಗೆ ಕೆಂಪು ಬಣ್ಣದ ಬಟ್ಟೆಯನ್ನು ಧರಿಸುವನು. ಸಹಾಯಕರು ಆತನ ಸೊಂಟಕ್ಕೆ ಕೆಂಪು ಬಣ್ಣದ ಬಟ್ಟೆಯನ್ನು ಸುತ್ತಿ ಚೆರುಬೊಳಂಬವನ್ನು ತೊಡಿಸುತ್ತಾರೆ. ಅದರ ಮೇಲ್ಭಾಗಕ್ಕೆ ಚೆಂಡ್‌ಬಳೆ ಎಂಬ ವಸ್ತ್ರವನ್ನು ಇಳಿಬಿಡುತ್ತಾರೆ. ದೇವರನ್ನು ಪ್ರಾರ್ಥಿಸಿ ಅಕ್ಕಿ ಹಾಕಿ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುತ್ತಾರೆ. ಅದರ ಎರಡೂ ಬದಿಯಲ್ಲಿ ಕಿವಿಯ ಮೇಲ್ಭಾಗಕ್ಕೆ ಚೆನ್ನೆಲರ್ ಎಂಬ ಕರ್ಣಾಭರಣ ತೊಡಿಸುತ್ತಾರೆ. ಕಪ್ಪು ಬಣ್ಣದ ಕರಿಂದಾಡಿ ಮೀಸೆಯನ್ನು ಕಟ್ಟುತ್ತಾರೆ. ನೆತ್ತಿಪಟ್ಟಿಯ ಮೇಲ್ಭಾಗಕ್ಕೆ ತಲೆಪೂ ಧರಿಸಿ ಅದರ ಮೇಲೆ ಪೂಕೊಟ್ಟಿ ಚೆಯ್ಯಾಕ್ ಎಂಬ ದೊಡ್ಡ ಶಿರೋಭೂಷಣವನ್ನು ತೆರೆಕಾರನು ತೊಡುತ್ತಾನೆ. ಕೈ ಮತ್ತು ತೋಳುಗಳಿಗೆ ಮರದ ಬಳೆ ಮತ್ತು ಕಂಚಿನ ಚೂಡಗವೆಂಬ ಕಡಗ ಇರುತ್ತದೆ. ಕಾಲಿಗೆ ಪಟ್ಟ್‌ಮಡವನ್ನು ಧರಿಸಿ ಪಾದಗಳ ಮೇಲ್ಭಾಗಕ್ಕೆ ಚಲ್ಂಬು ಧರಿಸಲಾಗುತ್ತದೆ. ಎಡಗೈಯಲ್ಲಿ ಮರದಿಂದ ನಿರ್ಮಿಸಿದ ಕಲಾತ್ಮಕ



ಗುರಾಣಿ ಹಾಗೂ ಬಲಗೈಯಲ್ಲಿ ಒಡಿಕತ್ತಿ ಎಂಬ ದೊಡ್ಡ ಕತ್ತಿ ಇರುತ್ತದೆ. ಹೀಗೆ ಕಾಕೋಟಚ್ಚ ತೆರೆಯು ಸಿದ್ಧಗೊಳ್ಳುತ್ತದೆ. ಅದರೊಂದಿಗೆ ಚೌಂಡಿ ತೆರೆಯೂ ಏಕಕಾಲದಲ್ಲಿ ಸಿದ್ಧಗೊಳ್ಳುತ್ತದೆ. ಚಂಡೆಯ ಬಡಿತ ಹೆಚ್ಚಾಗುತ್ತಿದ್ದಂತೆಯೇ ತೆರೆಕಾರರ ಮೇಲೆ ದೈವಗಳು ಮೈದುಂಬಿ ಬರುತ್ತವೆ. ಕಾಕೋಟ್ ಪರಂಬು ಮೈದಾನದಲ್ಲಿರುವ ಆಲದ ಮರದ ಬಳಿಗೆ ಬಂದು ಚಂಡೆಯ ಹಿಮ್ಮೇಳಕ್ಕೆ ಕುಣಿಯುತ್ತವೆ. ರಸ್ತೆಯಲ್ಲಿ ಹೋಗುವ ವಾಹನಗಳನ್ನು ನಿಲ್ಲಿಸಿ ಕಾಣಿಕೆಯನ್ನು ಪಡೆಯುತ್ತವೆ.

ಅಷ್ಟರಲ್ಲಿ ಸಮೀಪದ ದೇವಾಲಯದಿಂದ ಬ್ರಾಹ್ಮಣನು ದೇವರ ಉತ್ಸವ ಮೂರ್ತಿಯನ್ನು ತಲೆಯ ಮೇಲೆ ಹೊತ್ತು ಆಲದ ಮರದ ಬಳಿ ಬರುವನು. ಚಂಡೆಯ ನಾದಕ್ಕೆ ತಕ್ಕಂತೆ ನರ್ತಿಸುತ್ತಾ ಆಲದ ಮರದ ಸುತ್ತ ಹನ್ನೊಂದು ಬಾರಿ ಪ್ರದಕ್ಷಿಣೆ ಹಾಕುವನು. ಬೋಡ್ ಹಬ್ಬಗಳಲ್ಲಿ ನಡೆಯುವ ಕುದ್'ರೆ ಎಡ್‌ಪೊ(ಹೊತ್ತುಕೊಳ್ಳುವ) ಆಚರಣೆಯೂ ಈ ಸಂದರ್ಭದಲ್ಲಿ ನಡೆಯುತ್ತದೆ. ಬಿದಿರಿನಿಂದ ಕುದುರೆಯ ಪ್ರತಿಕೃತಿಯನ್ನು ತಯಾರಿಸಿ ಅದಕ್ಕೆ ಕೆಂಪುಬಣ್ಣದ ಬಟ್ಟೆಯನ್ನು ಹೊದಿಸುವರು. ನಿಗದಿತ ಕುಟುಂಬದ ವ್ಯಕ್ತಿಯು ಈ ಕುದುರೆಯನ್ನು ಹೊತ್ತುಕೊಳ್ಳುವನು. ಈತ ಕಟ್ಟುನಿಟ್ಟಿನ ವ್ರತಾಚರಣೆಯನ್ನು ಪಾಲಿಸಬೇಕಾಗುತ್ತದೆ. ಮದುಮಗನು ಧರಿಸುವ ಬಿಳಿಯ ಕುಪ್ಯಚೇಲೆಯನ್ನು ಧರಿಸಿರುತ್ತಾನೆ. ಕುದುರೆಯ ಆಕೃತಿಯ ಹೊಟ್ಟೆಯ ಭಾಗಕ್ಕೆ ಮೈತೂರಿಸಿ ಎತ್ತಿಕೊಳ್ಳುತ್ತಾನೆ. ಕೊಂಬುಕೊಟ್ಟ್ ವಾಲಗ ಎಂಬ ವಾದ್ಯಮೇಳಕ್ಕೆ ಸರಿಯಾಗಿ ಹೆಜ್ಜೆ ಹಾಕುತ್ತಾನೆ. ಕೀಲು ಕುದುರೆಯಂತೆ ಹಿಮ್ಮುಖ ಹಾಗೂ ಮುಮ್ಮುಖವಾಗಿ ಚಲಿಸುತ್ತಾ ಕುಣಿಯುತ್ತಾನೆ. ಕುಣಿತದ ನಂತರ ಕಾಕೋಟಚ್ಚ ಹಾಗೂ ಚೌಂಡಿ ತಾಯಿ ಭಕ್ತಾದಿಗಳಿಗೆ ಅನುವಾದ ನೀಡಿ ಹರಸುವರು.

**೫.೧.೨.೧೯ ಕೇತ್ರಪ್ಪ ತೆರೆ**

**ಅರ್ಥ ಮತ್ತು ಹಿನ್ನೆಲೆ :**

ಕೇತ್ರಪ್ಪ ಕೊಡಗಿನ ಬೇಂಗ್‌ನಾಡಿನ ಚೇರಂಬಾಣೆ ಬೇಂಗೂರು ಗ್ರಾಮದ ಗ್ರಾಮದೇವರು. ಕೇತ್ರಪ್ಪನಿಗೆ ಕೇತ್‌ರಪ್ಪ, ಕ್ಷೇತ್ರಪಾಲ ಎಂಬ ಹೆಸರುಗಳಿವೆ. ಕೊಡವ ಜನಪದಗೀತೆ ಕೇತ್ರಪ್ಪಂಡ ಪಾಟ್ ಈತನ ಜನ್ಮ ವೃತ್ತಾಂತವನ್ನು ಹೀಗೆ ವಿವರಿಸುತ್ತದೆ. ಬೇಂಗೂರು ಗ್ರಾಮದ ಮುಖ್ಯಸ್ಥ ಕಲ್ಮಾಡಂಡ ಅಯ್ಯಣ್ಣ. ಈತನು ತನ್ನ ಊರಿನ ಯುವಕರೊಂದಿಗೆ ಬತ್ತ ವ್ಯಾಪಾರಕೆಂದು ಮಾಣಿಕ ಮಲೆನಾಡ್(ಮಲೆಯಾಳ)ಕ್ಕೆ ಮೂವತ್ತಾರು ಎತ್ತುಗಳ ಹೇರಿನಲ್ಲಿ ಹೋಗುವನು. ವ್ಯಾಪಾರ ಮುಗಿಸಿ ಮರಳುತ್ತಿದ್ದ ಅಯ್ಯಣ್ಣನಿಗೆ ಮಾರ್ಗದಲ್ಲಿ ಬಾಯಾರಿಕೆಯಾಗಿ ಸಮೀಪದ ಮಾಡಾಯಿ ಹೊಳೆಯಲ್ಲಿ ನೀರು ಕುಡಿದನು. ಅಷ್ಟರಲ್ಲಿ ಅಯ್ಯಣ್ಣನ ಮೇಲೆ ದೈವವು ಮೈದುಂಬಿ ಬಂದು ಮಾತನಾಡಲಾರಂಭಿಸಿದನು. "ನಾನು

ಕೇತ್ರಪ್ಪ ನಿನ್ನ ಊರಿನ ಬಾಲಕರನ್ನು ಕಂಡು ಬಹಳ ಸಂತೋಷವಾಗಿದೆ. ನಾನು ನಿಮ್ಮೊಡನೆ ಬಂದು ನೆಲೆಸಲು ತೀರ್ಮಾನಿಸಿದ್ದೇನೆ" ಎಂದನು. ಯುವಕರೆಲ್ಲರೂ ಕೇತ್ರಪ್ಪನ ಮಾತಿಗೆ ಒಪ್ಪಿ ಮುಂದೆ ಸಾಗಿದರು.

ನೀಲಿತೊರ ಕಂಡಿ ಎಂಬಲ್ಲಿ ಪತ್ತ್‌ಕೂಟ್ ಪಾತಾಳ ದೈವಗಳು ಕೇತ್ರಪ್ಪನನ್ನು ಭೇಟಿಯಾದರು. ತಾವು ಸಹಾಯಕರಾಗಿ ಬರುತ್ತೇವೆಂದು ಗುಂಪನ್ನು ಸೇರಿಕೊಂಡರು. ಬೆಂಬುವ ತುಳುನಾಡಿನ ಪುತ್ತೂರಿನಲ್ಲಿ ಬೊಳ್ಳಿತಂಡ್ ಪೂದತ್ತನು ಈ ಗುಂಪಿಗೆ ಸೇರಿಕೊಂಡನು. ಮುಂದೆ ಸಾಗುತ್ತಿದ್ದಂತೆ ಕೇತ್ರಪ್ಪ ದೈವಾವೇಶಗೊಂಡಿದ್ದ ಅಯ್ಯಣ್ಣನಿಗೆ ಬಾಯಾರಿಕೆಯಾಯಿತು. ನೀರು ತರಲು ಹೋದ ಜೊತೆಗಾರರು ಬಾರದಿದ್ದಾಗ ಅಯ್ಯಣ್ಣ ಅವರನ್ನು ಹುಡುಕುತ್ತಾ ಹೊರಟನು. ಆಗ ಸಮೀಪದ ಈಚಲು ಮರದಲ್ಲಿ ಕಟ್ಟಿರುವ ಮಡಿಕೆಯಲ್ಲಿ ನೊರೆ ಹೆಂಡ ಉಕ್ಕಿ ಹರಿಯುತ್ತಿರುವುದು ಕಾಣಿಸಿತು. ಅಷ್ಟರಲ್ಲಿ ಜೊತೆಯಲ್ಲಿದ್ದವರಿಗೆಲ್ಲ ಮಂಕು ಆವರಿಸಿತು. ಏಣಿಯನ್ನು ಹತ್ತಿದ ಕೇತ್ರಪ್ಪ ಈಚಲು ಹೆಂಡವನ್ನು ಕುಡಿದು ಸಂತೋಷದಿಂದ ಇಳಿಯುತ್ತಿದ್ದನು. ಎಚ್ಚೆತ್ತ ಜೊತೆಗಾರರು ಈ ದೃಶ್ಯವನ್ನು ಕಂಡು ಬೇಸರದಿಂದ "ಗಂಧ ಪುಷ್ಪವನ್ನು ತ್ಯಜಿಸಿ ಈಚಲು ಹೆಂಡವನ್ನು ಕುಡಿದು ನೀವು ನಮಗೆ ಮೋಸ ಮಾಡಿದಿರಿ" ಎಂದರು. ಅದಕ್ಕೆ ಕೇತ್ರಪ್ಪ ಹೀಗೆ ಉತ್ತರಿಸುವನು.

"ಇಂದಾಕಣೆ ಮಾಲೋರೆ
ಚಾಂದ್ ಪೂವ್ ನಾಕಿಂಜ
ಇಂದ್‌ತೊಟ್ಟ್ ಮಿಂಞಕ್
ನೀಲ ಬೊಳ್ಳೆ ಕಳ್ಳಾಡ್
ಪೂವ ಕೋಳಿ ಬೇಂಗಿರೋ"

"ಮಾನವರೇ ಇಂದಿನವರೆಗೆ ನನಗೆ ಗಂಧ ಪುಷ್ಪಗಳನ್ನು ಅರ್ಪಿಸುತಿದ್ದಿರಿ. ಇನ್ನು ಮುಂದೆ ಈಚಲು ಹೆಂಡ ಮತ್ತು ಕೂಗುವ ಕೋಳಿಯನ್ನು ಅರ್ಪಿಸಿ" ಎಂದನು. ನಂತರ ತನ್ನ ಬಿಲ್ಲಿನಿಂದ ಬಾಣವನ್ನು ಪ್ರಯೋಗಿಸಿದನು. ಬಾಣವು ಕುಯಿನಾಲ್ ಮಲೆ ಎಂಬಲ್ಲಿ ನಾಟಿತು. ಅಲ್ಲಿ ತನ್ನೊಡನೆ ಬಂದ ಪೂದತ್ತನನ್ನು ನೆಲೆ ನಿಲ್ಲಿಸಿದನು.

ಮುಂದೆ ಸಾಗಿದ ಕೇತ್ರಪ್ಪ ಪಟ್ಟೋಳಿ ಪೆರು ಎಂಬಲ್ಲಿ ಪತ್ತ್‌ಕೂಟ್ ಪಾತಾಳನನ್ನು ನೆಲೆಗೊಳಿಸಿದನು. ಅಲ್ಲಿ ವಾರ್ಷಿಕವಾಗಿ ಅಗ್ಗಿ ಬಾಯಿ ಸಾದಮ್ಮೆ ಎಂದು ಕರೆಯಲ್ಪಡುವ ಚೌಂಡಿಗೆ ಮೇಲೇರಿ ಸೇವೆ ಮಾಡಬೇಕೆಂದು ಊರಿನ ಮುಖಂಡನಿಗೆ ತಿಳಿಸಿದನು. ಮುಂದೆ ಹೊರಟ ಕೇತ್ರಪ್ಪನನ್ನು ಕಾರುಂದ ಸಮೀಪದ ಮೂತೇಟ್ ಎಂಬಲ್ಲಿ ಚೌಂಡಿ ಕಾಡಿನ ಅಗ್ಗಿಬಾಯಿ ಸಾದಮ್ಮೆ ಚೌಂಡಿಯು ಭೇಟಿಯಾಗಿ ತಾನೂ ಬರುತ್ತೇನೆಂದು ಗುಂಪನ್ನು ಸೇರಿಕೊಳ್ಳುವಳು. ಮುಂದೆ

ಸಾಗುತ್ತಾ ಬೇಂಗ್‌ನಾಡು ತಲುಪಿದನು. ಪೊನ್ನರೆಯಂಡೋಡೆ ಎಂಬಲ್ಲಿ ಸೂಕ್ತ ಸ್ಥಳವನ್ನು ಗುರುತಿಸಿ ತನಗೆ ಹಾಗೂ ಅಗ್ಗಿಬಾಯಿ ಸಾದಮ್ಮೆಗೆ ಕೋಟಗಳನ್ನು ನಿರ್ಮಿಸುವಂತೆ ಊರಿನವರಿಗೆ ಹೇಳಿದನು. ಎರಡು ವರ್ಷಗಳಿಗೊಮ್ಮೆ ಉತ್ಸವ ಹಾಗೂ ಮೇಲೇರಿಯನ್ನು ನಡೆಸುವಂತೆ ಸೂಚಿಸಿದನು." ಹೀಗೆ ಮಲೆಯಾಳದ ಕೇತ್ರಪ್ಪ ಕೊಡಗಿನಲ್ಲಿ ನೆಲೆಸಿದನು.

**ಆಚರಣೆ ಮತ್ತು ಬಣ್ಣಗಾರಿಕೆ :**

ಚೇರಂಬಾಣೆ ಬೇಂಗೂರಿನ ದೈವ ಕೇತ್ರಪ್ಪನಿಗೆ ಎರಡು ವರ್ಷಗಳಿಗೊಮ್ಮೆ ಉತ್ಸವ ನಡೆಯುತ್ತದೆ. ಸಾಮಾನ್ಯವಾಗಿ ಮಾರ್ಚ್ ತಿಂಗಳ ೩೧ ಹಾಗೂ ಏಪ್ರಿಲ್ ೧ ರಂದು ಜರುಗುವ ಈ ಉತ್ಸವದಲ್ಲಿ ಏಪ್ರಿಲ್ ೧ ರಂದು ಕೇತ್ರಪ್ಪನಿಗೆ ತೆರೆಕಟ್ಟುವ ಆಚರಣೆ ನಡೆಯುತ್ತದೆ. ಕಲ್ಮಾಡಂಡ ಒಕ್ಕದವರು ದೇವತಕ್ಕರಾಗಿ, ಅರೆಯಂಡ ಮತ್ತು ತಟ್ಟಂಡ ಒಕ್ಕದವರು ಭಂಡಾರ ತಕ್ಕರಾಗಿ ಕಾರ್ಯ ನಿರ್ವಹಿಸುತ್ತಾರೆ. ಕೇತ್ರಪ್ಪ ತೆರೆಯನ್ನು ಕಟ್ಟುವವರು ಪಣಿಕರು. ತೆರೆಕಾರನು ತಕ್ಕಮುಖ್ಯಸ್ಥರ ಸಮ್ಮುಖದಲ್ಲಿ ಪ್ರಾರ್ಥಿಸಿ ಅಕ್ಕಿಹಾಕಿ ಬಣ್ಣಗಾರಿಕೆಗೆ ಸಿದ್ಧನಾಗುತ್ತಾನೆ. ಕೆಂಪು ಬಣ್ಣದ ಅಂಗಿ ಮತ್ತು ಷರಾಯಿಯನ್ನು ತೊಟ್ಟ ತೆರೆಕಾರನಿಗೆ ಆತನ ಸಹಾಯಕರು ಬಣ್ಣಗಾರಿಕೆಯ ಕೆಲಸವನ್ನು ಮಾಡುತ್ತಾರೆ. ಅರಿಸಿನ ಹಾಗೂ ಕೆಂಪು ಬಣ್ಣವು ಬಣ್ಣಗಾರಿಕೆಯಲ್ಲಿ ಪ್ರಧಾನವಾಗಿರುತ್ತದೆ. ಕಣ್ಣಿನ ಸುತ್ತಲೂ ಕಪ್ಪು ಬಣ್ಣ, ಕೆನ್ನೆ ಮತ್ತು ಹುಬ್ಬಿನ ಮೇಲ್ಭಾಗಕ್ಕೆ ಹಳದಿ ಬಣ್ಣದ ವಿವಿಧ ಚಿತ್ತಾರಗಳಿರುತ್ತವೆ. ಬಣ್ಣಗಾರಿಕೆಯ ನಂತರ ಉಡುಗೆ ತೊಡುಗೆಗಳನ್ನು ಧರಿಸಲಾಗುತ್ತದೆ.

**ವೇಷಭೂಷಣಗಳು:**

ಕೇತ್ರಪ್ಪ ತೆರೆಯ ವೇಷಭೂಷಣಗಳಲ್ಲಿ ಕೆಂಪು ಬಣ್ಣ ಪ್ರಧಾನವಾದುದು. ಕೆಂಪು ಬಣ್ಣದ ಬಟ್ಟೆ, ಮರ, ಲೋಹದ ತಗಡುಗಳನ್ನು ಇಲ್ಲಿ ಪ್ರಮುಖವಾಗಿ ಬಳಸಲಾಗುತ್ತದೆ. ಮುಖವರ್ಣಿಕೆಯ ನಂತರ ಸೊಂಟಕ್ಕೆ ಚೇಲೆ ಎಂಬ ಕೆಂಪು ಬಣ್ಣದ ಬಟ್ಟೆಯನ್ನು ಸುತ್ತಲಾಗುತ್ತದೆ. ಕನ್ನಿಬಳೆಯನ್ನು ಕಟ್ಟಿ ಅದರ ಮೇಲೆ ಅಡ್‌ಕ್ ಇರಿಸಲಾಗುತ್ತದೆ. ಅದರ ಮೇಲೆ ಚೆರುಬೊಳಂಬವನ್ನು ಧರಿಸಿ ಮಧ್ಯಭಾಗಕ್ಕೆ ಮುನ್ನಾಕ್ ಹಾಗೂ ಮೇಲ್ಭಾಗಕ್ಕೆ ಚೆಂಡ್‌ಬಳೆ ಎಂಬ ವಸ್ತ್ರವನ್ನು ಇಳಿಬಿಡಲಾಗುತ್ತದೆ. ತಲೆಗೆ ಕೆಂಪು ಬಣ್ಣದ ವಸ್ತ್ರವನ್ನು ಕಟ್ಟಿದ ನಂತರ ನೆತ್ತಿಯ ಮೇಲ್ಭಾಗಕ್ಕೆ ನೆತ್ತಿಪಟ್ಟ್ ಕಟ್ಟಲಾಗುತ್ತದೆ. ನೆತ್ತಿಪಟ್ಟ್‌ನ ಮೇಲ್ಭಾಗಕ್ಕೆ ತಲೆಪೂ ಇರುತ್ತದೆ. ಕಿವಿಯ ಮೇಲ್ಭಾಗಕ್ಕೆ ಚೆನ್ನೆಲರ್ ಧರಿಸಲಾಗುತ್ತದೆ. ಕಪ್ಪು ಬಣ್ಣದ 'ತೂಕ್‌ತಾಡಿ ಮೀಸೆ' (ಉದ್ದನೆಯ ಗಡ್ಡ ಹಾಗೂ ಕಪ್ಪು ಮೀಸೆ)ಯನ್ನು ತೆರೆಕಾರನು ಧರಿಸುತ್ತಾನೆ. ಇದು ಕೇತ್ರಪ್ಪ ತೆರೆಯ ವೇಷದಲ್ಲಿ ಪ್ರಮುಖವಾದುದು. ಕೈ ಮತ್ತು ತೋಳುಗಳಲ್ಲಿ ಮರದ ಬಳೆ, ಕೈಪೂ ಮತ್ತು ಕಂಚಿನ ಚೂಡಗ ಇರುತ್ತದೆ. ಮೊಣಕಾಲಿನ ಕೆಳಭಾಗಕ್ಕೆ ಪಟ್ಟಿಮಡ

ಹಾಗೂ ಅದರ ಮೇಲ್ಭಾಗಕ್ಕೆ ಮಣಿಕೇರ್ ಕಟ್ಟಲಾಗುತ್ತದೆ. ಕುತ್ತಿಗೆಗೆ ಪವ್ವೀಡ ಎಂಬ ಮಣಿಹಾರವಿರುತ್ತದೆ. ಚಲ್‌ಂಬು ಧರಿಸುವ ವಿಧಿಯ ಮೂಲಕ ಪ್ರಾರ್ಥಿಸಿ ಪಾದಗಳ ಮೇಲ್ಭಾಗಕ್ಕೆ ಚಲ್‌ಂಬು ಧರಿಸಲಾಗುತ್ತದೆ.

**ದೈವದ ಆವಾಹನೆ ಮತ್ತು ಕುಣಿತ :**

ಬಣ್ಣಗಾರಿಕೆಯ ನಂತರ ವೇಷಭೂಷಣಗಳನ್ನು ಧರಿಸಿದ ತೆರೆಕಾರನು ಪ್‌ೀಡದ ಮೇಲೆ ಕುಳಿತುಕೊಳ್ಳುತ್ತಾನೆ. ಚಂಡೆಯ ಹಿಮ್ಮೇಳದೊಂದಿಗೆ ಆತನ ಸಹಾಯಕರು ಹಾಡುವ ತೆರೆಹಾಡನ್ನು ಕೇಳಿಸಿಕೊಳ್ಳುತ್ತಾ ಕೇತ್ರಪ್ಪನನ್ನು ಆವಾಹಿಸಿಕೊಳ್ಳುತ್ತಾನೆ. ಪ್‌ೀಡದಿಂದ ಜಿಗಿದು ಏಳುತ್ತಾ ಅಟ್ಟಹಾಸ ಮಾಡುತ್ತಾನೆ. ಈ ಹಂತದಲ್ಲಿ ತೆರೆಕಾರನ ತಲೆಗೆ ಪೂಕೊಟ್ಟಿ ಅಥವಾ ಪೂಕೊಟ್ಟಿ ಚೆಯ್ಯಾಕ್ ಎಂಬ ಶಿರೋಭೂಷಣವನ್ನು ತೆರೆಕಾರನ ಸಹಾಯಕರು ಕಟ್ಟುತ್ತಾರೆ. ಒಡಿಕತ್ತಿ ಹಾಗೂ ಪರಿಯ(ಗುರಾಣಿ) ಕೇತ್ರಪ್ಪನ ಆಯುಧಗಳು. ಬಲಗೈಯಲ್ಲಿ 'ಒಡಿಕತ್ತಿ' ಎಡಗೈಯಲ್ಲಿ 'ಪರಿಯ' ಹಿಡಿದುಕೊಂಡು ಚಂಡೆಯ ಹಿಮ್ಮೇಳಕ್ಕೆ ಸರಿಯಾಗಿ ಕುಣಿಯುತ್ತದೆ. ಪ್‌ೀಡದ ಮೇಲೆ ಹತ್ತಿ ಕುಣಿದು ತನ್ನ ಮಹಿಮೆಯನ್ನು ಪ್ರದರ್ಶಿಸುತ್ತದೆ. ಭಕ್ತರು ಸಲ್ಲಿಸುವ ಹರಕೆ ಕಾಣಿಕೆಗಳನ್ನು ಸ್ವೀಕರಿಸಿ ಅವರನ್ನು ಹರಸುತ್ತದೆ. "ಕೇತ್ರಪ್ಪಂಗ್ ಪಾತ್‌ರೆಡೆ"(ಕೇತ್ರಪ್ಪನಿಗೆ ಪೂರ್ತಿ ಎಡೆ ಸಲ್ಲಬೇಕು) ಎಂಬ ನಾಣ್ಣುಡಿ ಕೊಡಗಿನಲ್ಲಿ ಪ್ರಚಲಿತದಲ್ಲಿದೆ. ಈಚಲು ಹೆಂಡ ಕೇತ್ರಪ್ಪನಿಗೆ ಪ್ರಿಯವಾದುದು ಹಾಗಾಗಿ ಪಾತ್ರೆಯಲ್ಲಿ ಎಡೆ ಇಟ್ಟಿರುವುದೆಲ್ಲವೂ ಆತನಿಗೆ ಸಲ್ಲಬೇಕು ಎಂಬುದು ವಾಡಿಕೆ. ಈ ಹಿನ್ನೆಲೆಯಲ್ಲಿ ಉತ್ಸವದ ಸಂದರ್ಭದಲ್ಲಿ ಕೇತ್ರಪ್ಪನಿಗೆ ಪ್ರಿಯವಾದ ಈಚಲು ಹೆಂಡವನ್ನು ತರುವ ಆಚರಣೆಯನ್ನು ನಡೆಸಲಾಗುತ್ತದೆ. ಬೇಂಗೂರಿನಿಂದ ೭ ಮೈಲಿ ದೂರದಲ್ಲಿರುವ ಕೋಪಟ್ಟಿ ಮಲೆಯಲ್ಲಿ ನೆಲೆಸಿರುವ ಕುಡಿಯರು ಇದನ್ನು ತರುತ್ತಾರೆ.

ಹಬ್ಬದ ಕಟ್ಟುಕಟ್ಟಳೆಗಳು ಆರಂಭವಾದ ನಂತರ ಏಳನೆಯ ದಿನದಂದು ಈ ವಿಧಿಯು ನಡೆಯುತ್ತದೆ. ಗ್ರಾಮದಲ್ಲಿರುವ 'ಕಾವುಕಾರ'(ಉತ್ಸವದ ಪೂಜಾರಿಗಳು) ಒಕ್ಕಗಳಿಂದ ಕನಿಷ್ಟ ಒಬ್ಬ ವ್ಯಕ್ತಿಯಾದರೂ ಈ ವಿಧಿಯಲ್ಲಿ ಪಾಲ್ಗೊಳ್ಳಬೇಕೆಂಬುದು ನಿಯಮ. 'ಕಲಿಯ' ಎಂದು ಕರೆಯಲ್ಪಡುವ ಮಣ್ಣಿನ ಕುಡಿಕೆಯಲ್ಲಿ ಭತ್ತವನ್ನು ತುಂಬಿಸಿ ಹೊತ್ತುಕೊಂಡು ಮುಂಜಾನೆ ೪ ಗಂಟೆಗೆ ಹೊರಡುತ್ತಾರೆ. ಹೀಗೆ ಹೋಗುವವರು ತಣ್ಣೀರಿನಲ್ಲಿ ಸ್ನಾನಮಾಡಿ ಶುದ್ಧಮುದ್ರಿಕೆಯಲ್ಲಿರುತ್ತಾರೆ. ಅವರು ಗ್ರಾಮದ ಗಡಿಯನ್ನು ದಾಟುವವರೆಗೆ ಉಳಿದ ಗ್ರಾಮಸ್ಥರು ಅವರನ್ನು ನೋಡುವಂತಿಲ್ಲ. ಕೋಪಟ್ಟಿ ಮಲೆಗೆ ತೆರಳಿ ಭತ್ತ ತುಂಬಿರುವ ಕಲಿಯಗಳನ್ನು ಕುಡಿಯ ಸಮುದಾಯದವರಿಗೆ ನೀಡುತ್ತಾರೆ. ಅಲ್ಲಿ ಕುಡಿಯ ವ್ಯಕ್ತಿಯೋರ್ವನಿಗೆ ಕುಡಿಯರ ದೈವ ಮಲೆತಮ್ಮಚ್ಚ ಆವಾಹನೆಯಾಗಿ ಬಂದವರನ್ನು

ಹರಸುತ್ತಾನೆ. ಹದಿನಾರನೆಯ ದಿನದಂದು ಈಚಲು ಹೆಂಡ ತುಂಬಿರುವ ಕಲಿಯುಗಳನ್ನು ತಂದು ಮರುದಿನ ಕೇತ್ರಪ್ಪನಿಗೆ ಒಪ್ಪಿಸಲಾಗುತ್ತದೆ. ಕೇತ್ರಪ್ಪ ತೆರೆಕಟ್ಟುವಂದು ಕೋಪಟ್ಟಿಯ ಕುಡಿಯರು ಆಗಮಿಸಿ ತಮ್ಮ ಹರಕೆ ಕಾಣಿಕೆಗಳನ್ನು ಸಲ್ಲಿಸುತ್ತಾರೆ. ತಮ್ಮ ಪಾಲಿನ ಸಂಭಾವನೆ, ಬಲಿ ನೀಡಿದ ಪ್ರಾಣಿಗಳ ಮಾಂಸ ಹಾಗೂ ಹೆಂಡವನ್ನು ಪಡೆದುಕೊಂಡು ಹಿಂದಿರುಗುತ್ತಾರೆ.

**೫.೧.೨.೨೦ ಕಾರೋಣ ತೆರೆ**

**ಅರ್ಥ :**

ಕಾರೋಣ ಎಂದರೆ ಕುಟುಂಬದ ಮೂಲಪುರುಷ. ಕೊಡಗಿನ ಪ್ರತಿಯೊಂದು ಕೊಡವ ಒಕ್ಕ(ಕುಟುಂಬ)ದವರು ಕಾರೋಣನನ್ನು ಪೂಜಿಸುವರು. ಕಾರೋಣನಿಗೆ ಕೈಮಡ ಎಂಬ ಪುಟ್ಟ ಗುಡಿಯಿದ್ದು; ಅದನ್ನು ಅತ್ಯಂತ ಪೂಜ್ಯನೀಯ ಭಾವನೆಯಿಂದ ಕಾಣುತ್ತಾರೆ. ಜನಪದರು ಕಾರೋಣನನ್ನು ಗುರುಕಾರೋಣ ಎಂದೂ ಕರೆಯುವರು. ಈತ ಒಕ್ಕಕ್ಕೆ ದೇವರ ಸಮಾನ ಅಥವಾ ದೇವರೇ ಎಂಬುದು ನಂಬಿಕೆ. ಶುಭಾಶುಭ ಸಂದರ್ಭಗಳಲ್ಲಿ ಅಕ್ಕಿಹಾಕಿ ಆತನನ್ನು ಪ್ರಾರ್ಥಿಸುವುದು ವಾಡಿಕೆ. ಆಯಾಯ ಕುಟುಂಬದವರು ವಾರ್ಷಿಕವಾಗಿ ಕಾರೋಣನನ್ನು ತೆರೆ ಕಟ್ಟುವ ಆಚರಣೆಯ ಮೂಲಕ ಆರಾಧಿಸುತ್ತಾರೆ. ಇದರೊಂದಿಗೆ ಕಾರೋಣನಿಗೆ ಮೀದಿ ಬೆಪ್ಪೊ(ನೈವೇದ್ಯ ಇಡುವುದು) ಹಾಗೂ ಕಾರಣಂಗ್ ಕೊಡ್‌ಪ(ಎಡೆ ಹಾಕುವ) ಆಚರಣೆಯೂ ನಡೆಯುತ್ತದೆ. ಕೊಡಗಿನ ಕಾರೋಣನ ಆರಾಧನೆಯನ್ನು ತುಳುನಾಡಿನ ಭೂತಾರಾಧನೆಗೆ ಹೋಲಿಸುತ್ತಾರೆ.



ಆದರೆ ಇದು ಭೂತಾರಾಧನೆಯ ಪರಿಕಲ್ಪನೆಯನ್ನು ಮೀರಿ ಬೆಳೆದು ನಿಂತಿದೆ. ಇಲ್ಲಿ ವಂಶದ ಮೂಲ ಪುರುಷನು ದೇವರೆಂದೇ ಆರಾಧನೆಗೊಳ್ಳುತ್ತಾನೆ. ಕಾರೋಣನು ವಂಶವನ್ನು ಎತ್ತಿ ಹಿಡಿದವನು ಹಾಗೂ ಒಕ್ಕಕ್ಕೆ ಕೀರ್ತಿ ತಂದವನು. ವಿದ್ವಾಂಸರ ಪ್ರಕಾರ "ಗುರುಕಾರೋಣ ಎಂದರೆ ಭೂತ ಎನ್ನುವ ಬದಲು ದೈವೀಕರಣಗೊಂಡ ಪೂರ್ವಜ ಅಥವಾ ದೈವೀಕರಣಗೊಂಡ ವೀರಪೂರ್ವಜ

ಎಂದಾಗಿ ಕಾರೋಣ ಆರಾಧನೆ ಎಂಬ ಅರ್ಥವೇ ಕೊಡಗಿನ ಸಂದರ್ಭಕ್ಕೆ ಸಮುಚಿತವಾಗುತ್ತದೆ."[೧೭] ಎಂಬ ಅಭಿಪ್ರಾಯ ಇಲ್ಲಿ ಸಮಂಜಸವೆನಿಸುತ್ತದೆ.

**ಆಚರಣೆ ಮತ್ತು ಬಣ್ಣಗಾರಿಕೆ :**

ಕಾರೋಣ ತೆರೆಯನ್ನು ಬಣ್ಣರು ಕಟ್ಟುತ್ತಾರೆ. ಕುಟುಂಬದ ಐನ್‌ಮನೆ ಅಥವಾ ಕೈಮಡಗಳಲ್ಲಿ ಈ ಆಚರಣೆಯನ್ನು ಮಾಡುತ್ತಾರೆ. ನಿಗದಿತ ದಿನದಂದು ಒಕ್ಕದ ಸದಸ್ಯರೆಲ್ಲರೂ ಐನ್‌ಮನೆ(ಮೂಲಮನೆ)ಯಲ್ಲಿ ಸೇರುತ್ತಾರೆ. ನೆಲ್ಲಕ್ಕಿ ನಡುಬಾಡೆಯಲ್ಲಿ ನಾಲ್ಮೊಳಿ ತಕ್ಕ್ ವಿಧಿಯ ಮೂಲಕ ಪ್ರಾರ್ಥಿಸಿ ತೆರೆಕಟ್ಟುವ ಆಚರಣೆಯನ್ನು ಪ್ರಾರಂಭಿಸುತ್ತಾರೆ. ಸ್ನಾನದ ವಿಧಿಯ ನಂತರ ತೆರೆಕಾರನು ಬಣ್ಣಗಾರಿಕೆಯಲ್ಲಿ ತೊಡಗಿಸಿಕೊಳ್ಳುತ್ತಾನೆ. ಕೆಂಪು ಬಣ್ಣವನ್ನು ತಳಹದಿಯ ಬಣ್ಣವಾಗಿ ಬಳಸಲಾಗುತ್ತದೆ. ತೆರೆಕಾರನ ಸಹಾಯಕರು ಮೂಗು ಹಾಗೂ ಹುಬ್ಬಿನ ಮೇಲ್ಭಾಗಕ್ಕೆ ಹಳದಿ ಬಣ್ಣವನ್ನು ಬಳಸಿ ಕಲಾತ್ಮಕ ಚಿತ್ರಗಳನ್ನು ಬಿಡಿಸುವರು. ಹಣೆಯ ಮೇಲೆ ಇಂಗ್ಲಿಷಿನ ಯು ಆಕೃತಿಯನ್ನು ಬರೆಯುವರು. ಗಲ್ಲದ ಮೇಲೆ ಕಿವಿಯವರೆಗೆ ಹಳದಿ ಬಣ್ಣದ ಮುದ್ರೆಯನ್ನು ಬಿಡಿಸಿ ಕಣ್ಣಿನ ಸುತ್ತಲೂ ಕಪ್ಪು ಬಣ್ಣವನ್ನು ಹಚ್ಚುತ್ತಾರೆ. ಕಾಲಿಗೆ ಕೆಂಪು ಬಣ್ಣ ಹಾಗೂ ಕೈಗಳಿಗೆ ಹಳದಿ ಬಣ್ಣವನ್ನು ಹಚ್ಚುತ್ತಾರೆ.

**ವೇಷಭೂಷಣಗಳು :**

ತೆರೆಕಾರನು ಕೆಂಪು ಬಣ್ಣದ ಷರಾಯಿಯನ್ನು ಧರಿಸುತ್ತಾನೆ. ಸಹಾಯಕರು ಆತನ ಸೊಂಟಕ್ಕೆ ಕೆಂಪು ಬಣ್ಣದ ಬಟ್ಟೆಯನ್ನು ಸುತ್ತುವರು. ಅದರ ಮೇಲೆ ಕನ್ನಿಬಳೆಯನ್ನು ಬಿದಿರಿನ ಕೋಲು ಮತ್ತು ಹಗ್ಗವನ್ನು ಬಳಸಿ ಕಟ್ಟುತ್ತಾರೆ. ಮೇಲ್ಭಾಗಕ್ಕೆ ಚೆರುಬೊಳಂಬವನ್ನು ಧರಿಸಿ ಚೆಂಡ್‌ಬಳೆ ಎಂಬ ವಸ್ತ್ರವನ್ನು ಇಳಿಬಿಡುತ್ತಾರೆ. ತೆರೆಕಾರನು ಪ್ರಾರ್ಥಿಸಿ ಅಕ್ಕಿ ಹಾಕಿ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುವನು. ಅದರ ಎರಡೂ ಬದಿಯಲ್ಲಿ ಕಿವಿಯ ಮೇಲ್ಭಾಗಕ್ಕೆ ಚೆನ್ನೆಲರ್ ಧರಿಸುವನು. ನೆತ್ತಿಪಟ್ಟಿಯ ಮೇಲ್ಭಾಗಕ್ಕೆ ತಲೆಪೂ ಧರಿಸಿ ಅದರ ಮೇಲೆ ಪೂಕೊಟ್ಟಿ ಚೆಯ್ಯಾಕ್ ಎಂಬ ದೊಡ್ಡ ಶಿರೋಭೂಷಣವನ್ನು ಧರಿಸುವರು. ತೆರೆಕಾರನು ಕೈ ಮತ್ತು ತೋಳುಗಳಿಗೆ ಮರದ ಬಳೆ ಮತ್ತು ಕಂಚಿನ ಚೂಡಗವೆಂಬ ಕಡಗವನ್ನು ತೊಡುತ್ತಾನೆ. ಕಾಲಿಗೆ ಪಟ್ಟ್‌ಮಡವನ್ನು ಕಟ್ಟುತ್ತಾನೆ. ಪ್ರಾರ್ಥಿಸಿ ಕುಟುಂಬದ ಹಿರಿಯನ ಅಪ್ಪಣೆ ಪಡೆದು ಪಾದಗಳ ಮೇಲ್ಭಾಗಕ್ಕೆ ಚಲ್‌ಂಬು ಧರಿಸುವನು. ಕರಿಂದಾಡಿ ಮೀಸೆ ಎಂಬ ಕೃತಕ ಗಡ್ಡ ಮತ್ತು ಮೀಸೆ ಕಾರಣ ತೆರೆಯ ವೇಷದಲ್ಲಿ ಪ್ರಮುಖವಾಗಿ ರುತ್ತದೆ. ವೇಷ ಧರಿಸಿದ ನಂತರ ಕುಟುಂಬದ ಹಿರಿಯನು ಕಾರೋಣನ ಆಯುಧಗಳನ್ನು ನೀಡುವನು. ತೆರೆಕಾರನು ಅದನ್ನು ಪಡೆದುಕೊಂಡು ಬಲಗೈಯಲ್ಲಿ ಒಡಿಕತ್ತಿ ಎಂಬ ದೊಡ್ಡಕತ್ತಿಯನ್ನು ಎಡಗೈಯಲ್ಲಿ 'ಪರಿಯ' ಎಂಬ ಗುರಾಣಿಯನ್ನು

ಹಿಡಿದುಕೊಳ್ಳುವನು.

**ಕಾರೋಣನ ಆವಾಹನೆ ಮತ್ತು ಅನುವಾದ :**

ತೆರೆಕಾರನು ಒಕ್ಕದ ಕಾರೋಣನನ್ನು ಆವಾಹಿಸಿಕೊಂಡು ಅವನಂತೆಯೇ ವರ್ತಿಸುವನು. ಪ್ೇಡವೆಂಬ ಪೀಠದ ಮೇಲೆ ಹತ್ತಿ ಕುಣಿಯುತ್ತಾ ತನ್ನ ಶಕ್ತಿಯನ್ನು ಪ್ರದರ್ಶಿಸುವನು. ಒಕ್ಕದವರೆಲ್ಲಾ ಕಾರೋಣನಿಗೆ ಹೂವಿನ ಹಾರವನ್ನು ಹಾಕಿ ಅನುವಾದ ಪಡೆದುಕೊಳ್ಳುತ್ತಾರೆ. ಎಲ್ಲರೂ ಒಗ್ಗಟ್ಟಿನಿಂದ ಬಾಳುವಂತೆ ಕಾರೋಣನು ಹರಸುವನು. ಕೋಳಿ ಬಲಿಯೊಂದಿಗೆ ತೆರೆಯು ಮುಕ್ತಾಯಗೊಳ್ಳುತ್ತದೆ. ತಮ್ಮ ಪೂರ್ವಜನನ್ನು ತೆರೆಕಾರನ ಮಾಧ್ಯಮದ ಮೂಲಕ ಆವಾಹಿಸಿ ಆತನನ್ನು ತೃಪ್ತಿಪಡಿಸುವುದು ಕಾರೋಣ ತೆರೆಯ ಪ್ರಮುಖ ಆಶಯವಾಗಿದೆ. ಒಕ್ಕದ ಪರಿಪಾಲಕನಾದ ಕಾರೋಣನಿಗೆ ತೆರೆಯನ್ನು ಕಟ್ಟಿಸದಿದ್ದರೆ ಕುಟುಂಬಕ್ಕೆ ದೋಷ ಉಂಟಾಗುತ್ತದೆ ಎಂಬ ಭಯವೂ ಇದಕ್ಕೆ ಕಾರಣವಾಗಿದೆ.

**೫.೧.೨.೨೧ ಬೀರತೆರೆ**

**ಅರ್ಥ ಮತ್ತು ಹಿನ್ನೆಲೆ :**

ಬೀರನೆಂದರೆ ಕುಟುಂಬದ ಮೂಲವೀರ. ಈತ ಶಿವನ ಸ್ವರೂಪದವನಾಗಿದ್ದು; ಭೈರವ ಎಂದೂ ಕರೆಯುತ್ತಾರೆ. ವಂಶದ ಕೀರ್ತಿಯನ್ನು ಬೆಳಗಿದ ಬೀರನನ್ನು ಕೊಡಗಿನ ಜನಪದರು ದೈವಸ್ವರೂಪಿ ಎಂದು ನಂಬುತ್ತಾರೆ. ಬೀರನಿಗೆ ಕೊಡಿಬೀರ, ಕುಡಿಬೀರ, ಪಡೆಬೀರ ಇತ್ಯಾದಿ ಹೆಸರುಗಳಿವೆ. ಕಾರೋಣನಿಗೆ ಕೈಮಡಗಳು ಇರುವಂತೆ ಕುಡಿಬೀರನ ಸ್ಮರಣಾರ್ಥ ಕುಡಿಬೀರ ಕೋಟಗಳು ಇವೆ. ಅಪ್ಪಚ್ಚಿರ ಮಂದಣ್ಣ, ಕನ್ನಂಡ ದೊಡ್ಡಯ್ಯ ಮುಂತಾದ ಕುಡಿಬೀರರಿಗೆ ಕೋಟಗಳಿದ್ದು; ಅವುಗಳನ್ನು ಕುಡಿಬೀರ ಕೋಟ, ಬೀರ ಕೋಟ ಎಂದು ಕರೆಯುತ್ತಾರೆ. ಕುಡಿಬೀರರ ಬದುಕು ಮತ್ತು ಸಾಧನೆಯನ್ನು ವರ್ಣಿಸುವ ಕೊಡವಜನಪದ ಗೀತೆಗಳನ್ನು ಜನಪದರು ಹಾಡುತ್ತಾರೆ. ಕನ್ನಂಡ ಒಕ್ಕದ ಕೊಡಿಬೀರರು ಹಾಗೂ ಕ್ರಿ.ಶ. ೧೭೬೭ರ ಯುದ್ದದಲ್ಲಿ ಹೋರಾಡಿದ ಪಡೆಬೀರ ಕನ್ನಂಡ ದೊಡ್ಡಯ್ಯನ ಕೋಟ ಮಡಿಕೇರಿಯ ಕನ್ನಂಡಬಾಣೆ ಎಂಬಲ್ಲಿದೆ. ಕೋಕೇರಿ ಗ್ರಾಮದ ಪೊನ್ನಚಂಡ ಒಕ್ಕದ ಕೈಮಡದಲ್ಲಿ ಒಡಿಕತ್ತಿಯನ್ನು ಹಿಡಿದುಕೊಂಡಿರುವ ಕೊಡಿಬೀರ ಪ್ರತಿಮೆ ಇದೆ. ಕಂಬೇಯಂಡ ಒಕ್ಕದ ಐನ್‌ಮನೆಯ ನೆಲ್ಲಕ್ಕಿ ನಡುಬಾಡೆಯ ಬೊಳ್‌ಚ ಕೊಡ(ದೀಪದ ಗೂಡು) ದಲ್ಲಿ ಕುದುರೆಯ ಮೇಲೆ ಕುಳಿತಿರುವ ಕೊಡಿಬೀರನ ಪುಟ್ಟ ವಿಗ್ರಹವಿದೆ.

**ಆಚರಣೆ :**

ಒಕ್ಕಗಳು ನಡೆಸುವ ಒಕ್ಕತೆರೆ ಹಾಗೂ ಪುದಿಯೋದಿ ತೆರೆಯ ಸಂದರ್ಭದಲ್ಲಿ ಬೀರತೆರೆಯನ್ನು ಆಚರಿಸಲಾಗುತ್ತದೆ. ಕುಟುಂಬಗಳು ಆಚರಿಸುವ ಒಕ್ಕ ತೆರೆಗಳಲ್ಲಿ

ಮಂದಣಮೂರ್ತಿ ತೆರೆಗೆ ಧರಿಸಿದ ವೇಷ ಭೂಷಣಗಳಿಗೆ ಅಲ್ಪ ಬದಲಾವಣೆಯನ್ನು ಮಾಡಿಕೊಂಡು ಬೀರತೆರೆಯನ್ನು ಕಟ್ಟುತ್ತಾರೆ. ಬೀರ ಕೋಟಗಳನ್ನು ಹೊಂದಿರುವ ಒಕ್ಕಗಳಲ್ಲಿ ನಡೆಯುವ ಬೀರತೆರೆಯಲ್ಲಿ ತೆರೆ ಆಚರಣೆಯ ಎಲ್ಲಾ ವಿಧಿವಿಧಾನಗಳನ್ನು ಪಾಲಿಸಲಾಗುತ್ತದೆ.

**ವಿಧಿವಿಧಾನಗಳು :**

ಬಣ್ಣರು ಮತ್ತು ಮಲಿಯರು ಬೀರತೆರೆಗಳನ್ನು ಕಟ್ಟುತ್ತಾರೆ. ತೆರೆಕಾರನು ಎಣ್ಣೆಯನ್ನು ಪಡೆದು ಸ್ನಾನ ಮಾಡಿ ಸಿದ್ಧತೆಗಳನ್ನು ಮಾಡಿಕೊಳ್ಳುವನು. ತೆರೆಯ ಮೊದಲ ಹಂತವಾಗಿ ಒಕ್ಕ(ಕುಟುಂಬ)ದ ಹಿರಿಯ 'ನಾಲ್ಮೊಳಿ ತಕ್ಕ್' ಎಂಬ ಆರಂಭಿಕ ಪ್ರಾರ್ಥನಾ ನುಡಿಯನ್ನು ಆಡುತ್ತಾನೆ. ತೆರೆಕಾರರು ಕುಟುಂಬದ ಸದಸ್ಯರು ಹಾಗೂ ನೆಂಟರಿಷ್ಟರು ನೆಲ್ಲಕ್ಕಿ ನಡುಬಾಡೆಗೆ ಬರುತ್ತಾರೆ. ಕುಟುಂಬದ ಹಿರಿಯನು ಎಲ್ಲರಿಗೂ ಅಕ್ಕಿಯನ್ನು ನೀಡಿ ಸರ್ವರ ಪರವಾಗಿ ಮಾತನಾಡುವನು. "ಒಕ್ಕದ ಕಾರೋಣ ಹಾಗೂ ತೆರೆಕಟ್ಟಿ ಆರಾಧಿಸಲ್ಪಡುವ ಬೀರ ದೈವವು ಈ ಆಚರಣೆಯನ್ನು ತೃಪ್ತಿಯಿಂದ ಸ್ವೀಕರಿಸಬೇಕು. ತಪ್ಪುಗಳಾದರೆ ಮನ್ನಿಸಿ ಆಶೀರ್ವದಿಸಬೇಕು"ಎಂದು ಪ್ರಾರ್ಥಿಸುವನು. ಅನಂತರ ತೆರೆಕಾರನು ಪ್ರಾರ್ಥಿಸುವನು. ಎಲ್ಲರೂ ಉರಿಯುತ್ತಿರುವ ದೀಪಕ್ಕೆ ಅಕ್ಕಿಯನ್ನು ಹಾಕುವರು.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ಪ್ರಾರ್ಥಿಸಿದ ನಂತರ ಸಹಾಯಕರು ತೆರೆಕಾರನಿಗೆ ಬಣ್ಣಗಾರಿಕೆ ಕಾರ್ಯವನ್ನು ಪ್ರಾರಂಭಿಸುವರು. ಮುಖವರ್ಣಿಕೆಯಲ್ಲಿ ಅರಸಿನ ಬಣ್ಣವನ್ನು ತಳಹದಿಯಾಗಿ ಬಳಸಲಾಗುತ್ತದೆ. ಹುಬ್ಬಿನ ಕೆಳಭಾಗ ಹಾಗೂ ಕಣ್ಣಿನ ಸುತ್ತ ಕಪ್ಪು ಬಣ್ಣವನ್ನು ಹಚ್ಚುವರು. ಹಣೆಯಲ್ಲಿ ಕೆಂಪು ಬಣ್ಣದ ಮುದ್ರೆಯನ್ನು ಬಿಡಿಸಿ ತಿಲಕವನ್ನು ಹಚ್ಚುವರು. ಮೂಗಿನಿಂದ ಕಿವಿಯವರೆಗೆ ಗಲ್ಲದ ಮೇಲೆ ಹಾದುಹೋಗುವಂತೆ ವಿಸ್ತಾರವಾದ ರೇಖೆಗಳನ್ನು ಬಿಡಿಸುವರು. ಬಣ್ಣಗಾರಿಕೆಯ ನಂತರ ತೆರೆಕಾರನು ವೇಷ ಭೂಷಣಗಳನ್ನು ಧರಿಸುತ್ತಾನೆ. ಕೆಂಪು ಬಣ್ಣದ ಉದ್ದ ತೋಳಿನ ಅಂಗಿ ಮತ್ತು ಷರಾಯಿಯನ್ನು ಧರಿಸಿದ ತೆರೆಕಾರನ ಸೊಂಟಕ್ಕೆ ಕನ್ನಿಬಳೆಯನ್ನು ಬಿಗಿದು ಕಟ್ಟಲಾಗುತ್ತದೆ. ಅದರ ಮೇಲ್ಭಾಗವನ್ನು ಅಡಕ್ ಎಂಬ ಮರದ ಹಲಗೆಯಿಂದ ಮುಚ್ಚುತ್ತಾರೆ. ಅನಂತರ ಬಟ್ಟೆ ಹಾಗೂ ಬಿದಿರಿನ ಪಟ್ಟಿಗಳನ್ನು ಬಳಸಿ ತಯಾರಿಸಲಾದ 'ಚೆರು' ಅಥವಾ 'ಚೆರು ಬೊಳಂಬ'ವನ್ನು ಧರಿಸುತ್ತಾರೆ. ಕೆಂಪು ಬಣ್ಣದ ಲಂಗದಂತಿರುವ ಈ ಉಡುಪಿನ ಕೆಳಭಾಗಕ್ಕೆ ಕೆಂಪು, ಕಪ್ಪು ಹಾಗು ಬಿಳಿ ಬಣ್ಣದ ಪಟ್ಟಿಗಳಿರುತ್ತವೆ. ಚೆರುವಿನ ಮೇಲ್ಭಾಗಕ್ಕೆ ಚೆಂಡ್‌ಬಳೆ ಎಂಬ ಕಲಾತ್ಮಕ ವಸ್ತ್ರವನ್ನು ಇಳಿಬಿಡಲಾಗುತ್ತದೆ. ದುಡಿಬಾರಿಸುತ್ತಾ ಹಾಡುವ ದುಡಿಪಾಟ್ ಹಾಗೂ ಚಂಡೆಯ ಹಿಮ್ಮೇಳ ಇರುತ್ತದೆ. ಚಂಡೆಯ ಬಡಿತಕ್ಕೆ ತಕ್ಕಂತೆ ನೆಲ್ಲಕ್ಕಿ ನಡುಬಾಡೆಯ

'ಮುಂದ್'ನಲ್ಲಿ ಮೂರು ಸುತ್ತು ಕುಣಿಯುತ್ತದೆ. ಅನಂತರ ನೆರೆದವರೆಲ್ಲರಿಗೂ ಅನುವಾದ ನೀಡಿ ಹೊರಬರುತ್ತದೆ. ತಟ್ಪ್‌ತಡೆಗೆ ಕೋಳಿಬಲಿ ನೀಡುವುದರೊಂದಿಗೆ ತೆರೆ ಮುಕ್ತಾಯವಾಗುತ್ತದೆ. ಕೆಲವು ಕುಟುಂಬದವರು ಬೀರ ಕೋಟದಲ್ಲಿ ಬೀರ ತೆರೆಯ ಆಚರಣೆಯನ್ನು ಮಾಡುತ್ತಾರೆ. ಇನ್ನು ಕೆಲವು ಕುಟುಂಬಗಳು ಕೈಮಡದಲ್ಲಿ ಬೀರ ತೆರೆಯನ್ನು ಕಟ್ಟಿಸುವರು. ಪುದಿಯೋದಿ ತೆರೆಯ ಅಂಗವಾಗಿ ನಡೆಯುವ ಬೀರ ತೆರೆಯನ್ನು ರಾತ್ರಿಯ ಹೊತ್ತು ಕಟ್ಟಲಾಗುತ್ತದೆ. ಎಂಟು ಗಂಟೆಯ ಹೊತ್ತಿಗೆ ಕುಟುಂಬದ ಎಲ್ಲಾ ಸದಸ್ಯರು, ನೆಂಟರಿಷ್ಟರು ಹಾಗೂ ಊರಿನವರು ಐನ್‌ಮನೆಯಲ್ಲಿ ಸೇರುತ್ತಾರೆ. ಎಲ್ಲರೂ ಸೇರಿ ಊಟೋಪಚಾರವನ್ನು ಮುಗಿಸಿ ಕೈಮಡಕ್ಕೆ ತೆರಳುತ್ತಾರೆ. ರಾತ್ರಿ ಹನ್ನೊಂದು ಗಂಟೆಗೆ ಕೈಮಡದಲ್ಲಿ ಬೀರತೆರೆಯನ್ನು ಕಟ್ಟಲಾಗುತ್ತದೆ. ಬಣ್ಣಗಾರಿಕೆಯ ನಂತರ ವೇಷಭೂಷಣಗಳನ್ನು ಧರಿಸಿದ ತೆರೆಕಾರನು ಐನ್‌ಮನೆಗೆ ಬರುತ್ತಾನೆ. ಐನ್‌ಮನೆಯ ಅಂಗಳದಲ್ಲಿ ಚಂಡೆಯ ಬಡಿತ ತೀವ್ರವಾಗುತ್ತಿದ್ದಂತೆ ದೈವವು ಮೈದುಂಬಿ ಬಂದು ಕುಣಿಯಲಾರಂಭಿಸುತ್ತಾನೆ. ನೆರೆದಿರುವ ಜನರಿಗೆ ಅಭಯದ ಮಾತುಗಳನ್ನು ಹೇಳಿ ಕೈಮಡಕ್ಕೆ ಹಿಂದಿರುಗುತ್ತಾನೆ. ಅಲ್ಲಿ ಹರಕೆಯ ಕೋಳಿಯನ್ನು ತಟ್ಪ್‌ತಡೆಗೆ ಬಲಿ ನೀಡಲಾಗುತ್ತದೆ.

**ಅನುವಾದ(ಅನುಗ್ರಹ) :**

ತೆರೆ ಆಚರಣೆಯಲ್ಲಿ ಭಾಗವಹಿಸಿದವರನ್ನು ದೈವವು ಅನುಗ್ರಹಿಸುವ ವಿಧಿಯನ್ನು 'ಅನುವಾದ ಕೊಡ್‌ಪೊ' ಎನ್ನುತ್ತಾರೆ. ಕೋಳಿ ಬಲಿಯ ನಂತರ ಬೀರ ದೈವವು ಕೈಮಡದಿಂದ ಐನ್‌ಮನೆಗೆ ಮರಳಿ ಬರುತ್ತದೆ. ಪಡಸಾಲೆಯಲ್ಲಿರುವ ಐಮರ(ಮರದ ಆಸನ)ದಲ್ಲಿ ಕುಳಿತುಕೊಳ್ಳುತ್ತದೆ. ಮನೆಯವರು ಬೆಳ್ಳಿಯ ಗಿಂಡಿಯಲ್ಲಿ ಹಸುವಿನ ಹಾಲು ಮತ್ತು ಮದ್ಯವನ್ನು ನೀಡುತ್ತಾರೆ. ದೈವವು ಕುಡಿದು ಸಂತೃಪ್ತಿಯನ್ನು ವ್ಯಕ್ತಪಡಿಸುತ್ತದೆ. ಭಾಗವಹಿಸಿದವರೆಲ್ಲರಿಗೂ ಅನುವಾದ ನೀಡುತ್ತದೆ. ಇದರೊಂದಿಗೆ ಬೀರತೆರೆಯು ಮುಕ್ತಾಯಗೊಳ್ಳುತ್ತದೆ. ವೀರತ್ವ ಮತ್ತು ದುರಂತ ಬೀರತೆರೆಯಲ್ಲಿ ಕಂಡುಬರುವ ಪ್ರಮುಖ ಅಂಶಗಳು. ವೀರನಾಗಿದ್ದು ದುರಂತ ಸಾವಿಗೀಡಾದ ವ್ಯಕ್ತಿಯ ಸಂತೃಪ್ತಿಗಾಗಿ ಆಯಾ ಕುಟುಂಬದವರು ಬೀರತೆರೆಯನ್ನು ಕಟ್ಟಿಸುತ್ತಾರೆ. "ತನ್ನ ಕುಟುಂಬದ ರಕ್ಷಣೆಗಾಗಿ ಹೋರಾಡಿ ಮರಣ ಹೊಂದಿದವನು ಕೊಡಿಬೀರನಾದರೆ; ಗ್ರಾಮ ಮತ್ತು ನಾಡಿನ ರಕ್ಷಣೆಗಾಗಿ ಯುದ್ಧದಲ್ಲಿ ಹೋರಾಡಿದವನು ಪಡೆಬೀರ ಎನಿಸಿಕೊಳ್ಳುತ್ತಾನೆ."[೧೮] ಒಟ್ಟಾರೆಯಾಗಿ ಕುಟುಂಬದ ಕೀರ್ತಿಯನ್ನು ಬೆಳಗಿದ ವೀರನ ಪ್ರತೀಕವಾಗಿ ಬೀರತೆರೆಯನ್ನು ಆಚರಿಸಲಾಗುತ್ತದೆ.

**೫.೧.೨.೨೨ ಅಜ್ಜಪ್ಪ ತೆರೆ**

**ಅರ್ಥ:**

ಪಿತೃ ಪೂಜೆ ಹಾಗೂ ವೀರಾರಾಧನೆ ತೆರೆಕಟ್ಟುವ ಆಚರಣೆಯೊಂದಿಗೆ

ಪ್ರತ್ಯೇಕಿಸಲಾರದ ರೀತಿಯಲ್ಲಿ ಬೆಸೆದುಕೊಂಡಿದೆ. ವೀರರಾಗಿದ್ದು ವಿವಿಧ ಕಾರಣಗಳಿಂದ ಅಕಾಲ ಮೃತ್ಯು ಹೊಂದಿ ದೈವಗಳಾಗಿ ಮಾರ್ಪಟ್ಟ ವ್ಯಕ್ತಿಗಳು ತೆರೆಕಟ್ಟುವ ಆಚರಣೆಯಲ್ಲಿ ಆರಾಧಿಸಲ್ಪಡುತ್ತಾರೆ. ಪೂರ್ವದಲ್ಲಿ ಕೊಡಗಿನಲ್ಲಿ ಕಲ್ಯಾಂಟಂಡ ಪೊನ್ನಪ್ಪ ಎಂಬ ವೀರನಿದ್ದನು. ಮಂತ್ರತಂತ್ರಗಳಲ್ಲಿ ಪರಿಣತನಾಗಿದ್ದ ಈತನನ್ನು ಕೊಡಗಿನ ಹಲವು ಗ್ರಾಮಗಳಲ್ಲಿ ಅಜ್ಜಪ್ಪನೆಂದು ಆರಾಧಿಸಲಾಗುತ್ತದೆ. ಅಜ್ಜಪ್ಪನಿಗೆ ವಾರ್ಷಿಕವಾಗಿ ತೆರೆಕಟ್ಟುವ ಆಚರಣೆ ನಡೆಯುತ್ತದೆ.

**ಹಿನ್ನೆಲೆ :**

ಕಲ್ಯಾಟಂಡ ಪೊನ್ನಪ್ಪ ನಾಪೋಕ್ಲು ನಾಡಿನವನು. ಈತನ ತಂದೆ ಕುಟ್ಟಯ್ಯ, ತಾಯಿ ಚೀಯಮ್ಮ. ಮಕ್ಕಳಿಲ್ಲದ ಈ ದಂಪತಿಗಳಿಗೆ ಪಾಡಿ ಇಗ್ಗುತಪ್ಪ ದೇವರ ಕೃಪೆಯಿಂದ ಜನಿಸಿದವನು ಪೊನ್ನಪ್ಪ. ವಿದ್ಯಾಭ್ಯಾಸಕ್ಕಾಗಿ ಮಲಬಾರ್ ಪ್ರಾಂತ್ಯಕ್ಕೆ ತೆರಳಿದ ಆತ ಮಂತ್ರ ತಂತ್ರ ವಿದ್ಯಾ ಪಾರಂಗತನಾಗಿ ಪತ್ತ್‌ಕೂಟ್ ಪಾತಾಳನನ್ನು ತನ್ನ ಜೊತೆಗಾರನಾಗಿಸಿಕೊಳ್ಳುವನು. ಮಂತ್ರ ವಿದ್ಯೆ ಕಲಿತಿದ್ದ ಕಾಟಾಳ ಬೊಳ್ತು ಎಂಬವನು ಈತನ ಆತ್ಮೀಯ ಸ್ನೇಹಿತನಾಗಿದ್ದನು. ಒಂದು ದಿನ ಪೊನ್ನಪ್ಪ ತನ್ನ ಮಿತ್ರ ಕಾಟಾಳ ಬೊಳ್ತುವಿನೊಂದಿಗೆ ದನಗಳನ್ನು ಮೇಯಿಸುತ್ತಾ ಕಾಡಿಗೆ ಹೋದನು. ಸ್ನೇಹಿತರಿಬ್ಬರೂ ದನಗಳನ್ನು ಮರೆತು ಹಕ್ಕಿಬೇಟೆಯಲ್ಲಿ ಮಗ್ನರಾದರು. ದನಗಳು ಗದ್ದೆಯಲ್ಲಿ ಭತ್ತದ ಬೆಳೆಯನ್ನು ಮೇಯತೊಡಗಿದವು. ಇದನ್ನು ಕಂಡ ಪೊನ್ನಪ್ಪನ ತಂದೆ ಕುಟ್ಟಯ್ಯ ತೀವ್ರ ಕೋಪಗೊಂಡನು. ಪೊನ್ನಪ್ಪನ ಬಿದಿರಿನ ಬಿಲ್ಲನ್ನು ಮುರಿದು ಅಂಗಳಕ್ಕೆ ಬಿಸುಟ್ಟನು. ಇದರಿಂದ ನೊಂದ ಪೊನ್ನಪ್ಪ ತನ್ನ ಸ್ನೇಹಿತ ಕಾಟಾಳ ಬೊಳ್ತುವಿನೊಂದಿಗೆ ಮನೆಬಿಟ್ಟು ಹೊರಟುಹೋದನು. ತಾಯಿ ಚೀಯಮ್ಮ ಹಾಗೂ ಊರುನಾಡಿನ ಜನರೆಲ್ಲಾ ಪರಿಪರಿಯಾಗಿ ಬೇಡಿಕೊಂಡರೂ ಪೊನ್ನಪ್ಪ ತನ್ನ ನಿರ್ಧಾರವನ್ನು ಬದಲಿಸಲಿಲ್ಲ. ಮಾತೆ ಕಾವೇರಿಯ ಪಾದದ ಮುಂದೆಯೇ ನೆಲೆಸಬೇಕೆಂದು ನಿರ್ಧರಿಸಿ ತಾವುನಾಡಿಗೆ ಹೋದನು. ಈ ವಿಚಾರ ತಾವುನಾಡಿನ ನಾಯಕ ಕರ್ನೆಯ್ಯ(ಕರ್ಣೆಂಬಾಹು)ವಿಗೆ ತಿಳಿಯಿತು. ತನ್ನನ್ನು ಭೇಟಿ ಮಾಡುವಂತೆ ದೂತರೊಡನೆ ಪೊನ್ನಪ್ಪನಿಗೆ ಹೇಳಿ ಕಳುಹಿಸಿದನು. ಆದರೆ ಪೊನ್ನಪ್ಪ "ಎನ್ನ ಕಾಂಬ ಬ್ಯೆಂಬನ್ ಇಲ್ಲಿ ಬಂದ್ ಕಂಡೋಡ್"(ನನ್ನನ್ನು ಕಾಣಬೇಕೆಂಬ ಗಂಡು ನನ್ನ ಬಳಿ ಬಂದು ಭೇಟಿಯಾಗಲಿ) ಎಂದು ಹೇಳಿ ಆತನ ಆಹ್ವಾನವನ್ನು ತಿರಸ್ಕರಿಸುವನು.

ಇದನ್ನು ಅರಿತ ಕರ್ನೆಯ್ಯ ಚಿನ್ನದ ಬಳೆಯೊಂದನ್ನು ಉಡುಗೊರೆಯಾಗಿ ನೀಡಿ ಆತನನ್ನು ಕರೆದುಕೊಂಡು ಬರುವಂತೆ ತನ್ನ ಸೈನಿಕರನ್ನು ಕಳುಹಿಸುವನು. ಉಡುಗೊರೆಯನ್ನು ತಿರಸ್ಕರಿಸಿದ ಪೊನ್ನಪ್ಪ "ನಾಕೀ ಬಳೆ ಬೋಂಡಲ. ಪಟ್ಟ ಚತ್ತ ಮುಂಡೆಕ್ ಮೆಚ್ಚಿತ್ ಕೊಡ್‌ಕಡ್."(ನನಗೆ ಈ ಬಳೆ ಬೇಕಾಗಿಲ್ಲ. ಬ್ರಾಹ್ಮಣ

ವಿಧವೆಗೆ ಮೆಚ್ಚುಗೆಯಾಗಿ ಈ ಬಳೆಯನ್ನು ನೀಡಲಿ) ಎನ್ನುವನು. ಪೊನ್ನಪ್ಪನ ಪ್ರತಿಕ್ರಿಯೆಯಿಂದ ಕರ್ನಯ್ಯ ಕೋಪಗೊಂಡನು. ತಾವುನಾಡಿನ ಯುವಕರನ್ನು ಕರೆಸಿ ರಾತ್ರಿಯ ವೇಳೆ ಪೊನ್ನಪ್ಪನ ಮೇಲೆ ಆಕ್ರಮಣ ನಡೆಸುವಂತೆ ಅಪ್ಪಣೆ ಮಾಡಿದನು. ನಾಡಿನ ಯುವಕರೆಲ್ಲಾ ತಾವುನಾಡಿನ ಕೋರಂಗಾಲ ಊರಿನ ಚೋಕಂಡಾಣೆ ಮಂದ್ ಎಂಬ ಪವಿತ್ರ ಮೈದಾನದಲ್ಲಿ ಇದ್ದ ಪೊನ್ನಪ್ಪ ಮತ್ತು ಕಾಟಾಳ ಬೊಳ್ತುವಿನ ಮೇಲೆ ಧಾಳಿ ಮಾಡಲು ತೀರ್ಮಾನಿಸಿದರು. ಈ ಸಂಚನ್ನು ಅರಿತ ಕಾಟಾಳ ಬೊಳ್ತು ತನ್ನ ಮಂತ್ರವಿದ್ಯೆಯಿಂದ ಪೊನ್ನಪ್ಪನ 'ಗೆಜ್ಜೆತಂಡ್' ಅನ್ನು ಮಂದ್‌ನ ಮಧ್ಯಭಾಗದಲ್ಲಿ ಭದ್ರವಾಗಿ ನಿಲ್ಲಿಸಿ ಅದರ ಮೇಲ್ಭಾಗದಲ್ಲಿ ಪೊನ್ನಪ್ಪನ ಪಾನಿಮಂಡೆ ಕೆಟ್ಟ್ ಎಂಬ ಪೇಟವನ್ನು ಇರಿಸುವನು. ಅನಂತರ ಇಬ್ಬರೂ ಪಾಲೇರಿ(ಹಾಲೇರಿ) ಅರಸನ ಬಳಿ ತೆರಳುವರು. ರಾತ್ರಿಯ ವೇಳೆ ತಾವುನಾಡಿನ ಯುವಕರು ಸುತ್ತುವರೆದು ಕೋವಿಗಳಿಂದ ಗುಂಡು ಹಾರಿಸುವರು. ಮರುದಿನ ಬೆಳಗ್ಗೆ ಬಂದು ನೋಡಿದ ಅವರಿಗೆ ಗುಂಡುಗಳೆಲ್ಲಾ ಪಾನಿಮಂಡೆ ಕೆಟ್ಟ್‌ಗೆ ತಾಗಿರುವುದು ಕಾಣಿಸಿತು. ಈ ವಿಚಾರವನ್ನು ಕರ್ನಯ್ಯನಿಗೆ ತಿಳಿಸಿದಾಗ ಪೊನ್ನಪ್ಪ ಅಡಗಿರುವ ತಾಣವನ್ನು ತಿಳಿದುಕೊಂಡು ಬರುವಂತೆ ಆಜ್ಞೆ ಮಾಡಿದನು.

ಇತ್ತ ಪಾಲೇರಿ ಅರಸನ ಬಳಿ ಹೋದ ಪೊನ್ನಪ್ಪ ಮತ್ತು ಕಾಟಾಳ ಬೊಳ್ತು ಕರ್ನಯ್ಯನ ವಿಚಾರವನ್ನು ಹೇಳಿ ಸಹಾಯ ಕೋರಿದರು. ಪಾಲೇರಿ ಅರಸನು ಐನೂರು ಮಂದಿ ಅರಮನೆ ಪಾಲೆ ಸಮುದಾಯದ ಸೈನಿಕರನ್ನು ಕರೆಸುವನು. ಅವರ ನಾಯಕ ಕುಟ್ಟಪಾಲೆ ಮಾಯಿಲನಿಗೆ ಬಿಲ್ಲು ಬಾಣಗಳನ್ನು ನೀಡಿ ಪೊನ್ನಪ್ಪನೊಡನೆ ಹೋಗುವಂತೆ ಆಜ್ಞೆ ಮಾಡುವನು. ಪೊನ್ನಪ್ಪನಿಗೆ ಚಿನ್ನದ ಹಿಡಿಕೆಯ ಒಡಿಕತ್ತಿ ಹಾಗೂ ಕೋವಿಯನ್ನು ನೀಡುವನು. ಪೊನ್ನಪ್ಪ ಸೈನಿಕರನ್ನು ಕುಯ್ಯಂಗೇರಿ ನಾಡಿನ ಪಾಲೂರಿಗೆ ಕಳುಹಿಸುವನು. ತಾನು ನಾಲ್‌ನಾಡಿನ ಬೇತು ಗ್ರಾಮದಲ್ಲಿರುವ ತನ್ನ ಪತ್ನಿಯ ತವರು ಕುಟ್ಟಂಜೆಟ್ಟಿರ ಕುಟುಂಬದ ಮನೆಯಲ್ಲಿ ಇರಲು ತೀರ್ಮಾನಿಸಿದನು. ಈ ವಿಚಾರ ಕರ್ನಯ್ಯನಿಗೆ ತಿಳಿಯಿತು. ಆತ ಅದೇ ಊರಿನ ಕೀಕಂಡ ಕುಟುಂಬದ ಮುದುಕಿಯೊಬ್ಬಳಿಗೆ ಹಣವನ್ನು ನೀಡಿ ಪೊನ್ನಪ್ಪನನ್ನು ಕೊಲ್ಲಲು ಸಂಚು ಹೂಡಿದನು. ಅದರಂತೆ ಮುದುಕಿಯು ದಾರಿಯಲ್ಲಿ ಬರುತಿದ್ದ ಪೊನ್ನಪ್ಪನನ್ನು ತಡೆದು ಮಾತನಾಡಿಸಿ ತನ್ನ ಮನೆಗೆ ಕರೆದುಕೊಂಡು ಹೋದಳು. ಸ್ನೇಹಿತರಿಬ್ಬರನ್ನೂ ಉಪಚರಿಸಿ ಉಮ್ಮತ(ದತ್ತೂರ) ಬೀಜವನ್ನು ಬೆರೆಸಿದ ಮದ್ಯವನ್ನು ನೀಡಿದಳು. ಉಪಚಾರ ಸ್ವೀಕರಿಸಿದ ಪೊನ್ನಪ್ಪ ಕಾಟಾಳ ಬೊಳ್ತುವಿನೊಂದಿಗೆ ಕುಟ್ಟಂಜೆಟ್ಟಿರ ಮನೆಗೆ ತೆರಳುವನು. ಅಲ್ಲಿ ಅಸ್ವಸ್ಥಗೊಂಡ ಪೊನ್ನಪ್ಪನನ್ನು ಮನೆಯವರು ಉಪಚರಿಸುವರು.

ಅಷ್ಟರಲ್ಲಿ ತಾವುನಾಡಿನ ಯುವಕರು ಕುಟ್ಟಂಜೆಟ್ಟಿರ ಒಕ್ಕದ ಹಿತ್ತಲಿನ

ಬಾಳೆಯ ತೋಟವನ್ನು ಸುತ್ತುವರೆದರು. ಉಮ್ಮತ್ತದ ಮತ್ತಿನಲ್ಲಿ ನಿದ್ರಿಸುತಿದ್ದ ಪೊನ್ನಪ್ಪನನ್ನು ಆತನ ಪತ್ನಿ ಉಮ್ಮವ್ವ ಎಬ್ಬಿಸಿದಳು. ಎಚ್ಚೆತ್ತ ಪೊನ್ನಪ್ಪ ತಾವುನಾಡಿನ ಯುವಕರನ್ನು ಹೊಡೆದುರುಳಿಸಿದನು. ಹೋರಾಟದ ನಡುವೆ ಹಾರುವಾಗ ಪೊನ್ನಪ್ಪನ ಕಾಲು ಊನಗೊಂಡಿತು. ಆದರೂ ಮಂಡಿಯೂರಿ ಹೋರಾಡಿದನು. ಅಷ್ಟರಲ್ಲಿ ಶತ್ರುಪಡೆ ಪ್ರಯೋಗಿಸಿದ ಜೋಡು ಬಾಣ ಆತನಿಗೆ ತಾಗಿತು. ಗಾಯಗೊಂಡ ಪೊನ್ನಪ್ಪ ಮಂತ್ರ ಜಪಿಸಿ ಪತ್್ತಕೂಟ್ ಪಾತಾಳನನ್ನು ಸ್ಮರಿಸಿದನು. ಪ್ರತ್ಯಕ್ಷನಾದ ಪತ್್ತಕೂಟ್ ಪಾತಾಳನನ್ನು ನೋಡಿ ಶತ್ರುಗಳು ಬೆದರಿ ಓಡಿಹೋದರು. ಹನ್ನೆರಡನೆಯ ದಿನದಂದು ಪೊನ್ನಪ್ಪ ಮರಣಹೊಂದಿದನು. ಸ್ನೇಹಿತನ ಅಗಲಿಕೆಯಿಂದ ದುಃಖಿತನಾದ ಕಾಟಾಳ ಬೊಳ್ತು ಎದೆಗೆ ಬಾಣಬಿಟ್ಟು ಆತ್ಮಹತ್ಯೆ ಮಾಡಿಕೊಂಡನು. ವಿಚಾರ ಅರಿತ ಕುಟ್ಟ ಪಾಲೆ ಮಾಯಿಲ ಐನೂರು ಮಂದಿ ಪಾಲೆಯರನ್ನು ಪಾಲೇರಿಗೆ ಕಳುಹಿಸಿದನು. ತಾನು ಮಾಣಿಕ ಮಲೆನಾಡಿನ(ಕೇರಳ) ಕಾಳೆಗಾಟ್ ಬೊಳ್ಳು ಎಂಬವನ ಮನೆಯಲ್ಲಿ ದನಗಾಹಿಯಾಗಿ ಸೇರಿಕೊಂಡನು.

ಮರಣ ಹೊಂದಿದ ಪೊನ್ನಪ್ಪ, ಕಾಟಾಳ ಬೊಳ್ತು ಹಾಗೂ ಪತ್್ತಕೂಟ್ ಪಾತಾಳ ನಾಡಿನುದ್ದಕ್ಕೂ ಸಂಚರಿಸುತ್ತಾ ಜನರನ್ನು ಸೋಕತೊಡಗಿದರು. ಇದರಿಂದ ಜನರೆಲ್ಲಾ ಮೈಕೈ ಹಾಗೂ ತಲೆನೋವಿನಿಂದ ಬಳಲತೊಡಗಿದರು. ಜ್ಯೋತಿಷಿಯಾದ ಅಚ್ಚುತ ಕಣಿಯನ ಬಳಿ ಹೋಗಿ ಕಾರಣ ಕೇಳಿದರು. ಆತ ಇದು ಪೊನ್ನಪ್ಪನ ಸೋಂಕು ಎಂಬ ವಿಚಾರವನ್ನು ತಿಳಿಸಿದನು. ನಾಡಿನವರೆಲ್ಲಾ ಸೇರಿ ನೀಲೇಶ್ವರ ತಂತ್ರಿಯನ್ನು ಬರಹೇಳಿದರು. ಆತನು ಏಳು ದಿನಗಳ ಕಾಲ ಅನ್ನನೀರು ಬಿಟ್ಟು ತಂತ್ರ ಮಂತ್ರವನ್ನು ಪ್ರಯೋಗಿಸಿ ಪೊನ್ನಪ್ಪ ಮತ್ತು ಆತನ ಸಂಗಡಿಗರನ್ನು ಶಂಖವೊಂದರಲ್ಲಿ ಬಂಧಿಸಿ ತನ್ನ ಊರಿಗೆ ಮರಳಿದನು. ಅಲ್ಲಿ ಕಲ್ಲೊಂದನ್ನು ಕೊರೆದು ಅದರೊಳಗೆ ಶಂಖವನ್ನು ಹೂತು ಕಲ್ಲಿನಿಂದ ಮುಚ್ಚಿದನು. ಶಂಖದೊಳಗೆ ಬಂಧಿತರಾದ ಪೊನ್ನಪ್ಪ ಮತ್ತು ಸಂಗಡಿಗರು ದುಃಖಿಸತೊಡಗಿದರು. ಒಂದು ದಿನ ಕಾಳೆಗಾಟ್ ಬೊಳ್ಳುವಿನಲ್ಲಿ ದನಗಾಹಿಯಾಗಿದ್ದ ಕುಟ್ಟಪಾಲೆ ಮಾಯಿಲ ದನಗಳನ್ನು ಮೇಯಿಸುತ್ತಾ ಕಾಡಿಗೆ ಹೋದನು. ಆಯಾಸಗೊಂಡ ಆತ ಹತ್ತಿರದಲ್ಲಿದ್ದ ಬಂಡೆಕಲ್ಲಿನ ಮೇಲೆ ಕುಳಿತುಕೊಂಡನು. ಅಷ್ಟರಲ್ಲಿ ಆತನಿಗೆ ಕಲ್ಲಿನ ಕೆಳಗೆ ಮನುಷ್ಯರ ಧ್ವನಿ ಕೇಳಿಸಿದಂತಾಯಿತು. ತನ್ನ ಬಳಿ ಇದ್ದ ಈಟಿಯಿಂದ ಕಲ್ಲನ್ನು ಮಗುಚಿದನು. ಆಗ ಅದರ ಕೆಳಗಿದ್ದ ಶಂಖ ಒಡೆದು ಬಂಧಿತರಾಗಿದ್ದ ಪೊನ್ನಪ್ಪ ಮತ್ತು ಆತನ ಸಂಗಡಿಗರು ಹೊರಬಂದರು.

ಸಂತಸಗೊಂಡ ಪೊನ್ನಪ್ಪನು ಮಾಂತ್ರಾಶಕ್ತಿಯಿಂದ ಕುಟ್ಟಪಾಲೆ ಮಾಯಿಲನನ್ನೂ ತನ್ನೊಡನೆ ಕರೆದುಕೊಂಡು ಸ್ನೇಹಿತರೊಂದಿಗೆ ಕೊಡಗಿಗೆ ಹೋಗುವನು. ನಾಲ್‌ನಾಡಿನ ಮಕ್ಕಿ ಸಾತಾವು ದೇವರ ಬಳಿ ಬಂದು ನೆಲೆ

ನೀಡುವಂತೆ ಬೇಡಿಕೊಂಡನು. ಪೊನ್ನಪ್ಪನ ಕೋರಿಕೆಯನ್ನು ಮನ್ನಿಸಿದ ಮಕ್ಕಿ ಸಾರ್ತಾವು "ನನ್ನನ್ನು ನೀನು ನಂಬಿರುವುದರಿಂದ ನಿನಗೆ ಇಂಬು ನೀಡುವೆ. ಇಂದಿನವರೆಗೆ ಪೊನ್ನಪ್ಪನಾಗಿದ್ದ ನೀನು ಇನ್ನು ಮುಂದಕ್ಕೆ ಅಜ್ಜಪ್ಪ ಎಂಬ ಹೆಸರಿನಲ್ಲಿ ನನ್ನ ಬಲಭಾಗದಲ್ಲಿ ನೆಲೆಸು. ನಿನ್ನ ಇಬ್ಬರು ಸ್ನೇಹಿತರು ಇಲ್ಲಿಯೇ ನೆಲೆಸಲಿ. ವಾರ್ಷಿಕವಾಗಿ ನನ್ನ ಉತ್ಸವ ನಡೆಯುವಾಗ ನಿನಗೆ ತೆರೆಕಟ್ಟುವಂತಾಗಲಿ" ಎಂದು ಹರಸುವನು. ಹೀಗೆ ಮೂವರು ಸ್ನೇಹಿತರು ಮಕ್ಕಿ ಸಾರ್ತಾವು ನೆಲೆಯಲ್ಲಿ ಕಲ್ಯಾಟಂಡ ಅಜ್ಜಪ್ಪ, ಕಾಟಾಳ ಬೊಳ್ತು ಹಾಗೂ ಕುಟ್ಟಪಾಲೆ ಕರ್ತು ಎಂಬ ಹೆಸರಿನಿಂದ ಸ್ಥಾನ ಪಡೆದರು ಎಂಬುದಾಗಿ ಕಥನವಿದೆ.

ಈ ಹಿನ್ನೆಲೆಯಲ್ಲಿ ಮಡಿಕೇರಿ ತಾಲೂಕು ನಾಪೋಕ್ಲುನಾಡಿನ ಬೇತು ಗ್ರಾಮದ ಮಕ್ಕಿಸಾರ್ತಾವು ದೇವರ ವಾರ್ಷಿಕೋತ್ಸವದ ಸಂದರ್ಭದಲ್ಲಿ ಅಜ್ಜಪ್ಪ ತೆರೆಯನ್ನು ಕಟ್ಟಿ ಆರಾಧಿಸಲಾಗುತ್ತದೆ. ಅಲ್ಲದೆ ಆಯಾಯ ಕುಟುಂಬಗಳು ತಮ್ಮ ಐನ್‌ಮನೆಗಳಲ್ಲಿ ನಡೆಸುವ ಒಕ್ಕತೆರೆಗಳಲ್ಲೂ ಅಜ್ಜಪ್ಪತೆರೆ ಕಟ್ಟುವ ಆಚರಣೆ ನಡೆಯುತ್ತದೆ. ಕೊಡಗಿನ ಬಹುತೇಕ ಗ್ರಾಮಗಳಲ್ಲಿ ಅಜ್ಜಪ್ಪನನ್ನು ತೆರೆಕಟ್ಟುವ ಮೂಲಕ ಆರಾಧಿಸುತ್ತಾರೆ. ಆದರೆ ವಿರಾಜಪೇಟೆ ತಾಲ್ಲೂಕಿನ ಕಡಿಯತ್‌ನಾಡಿಗೆ ಸೇರಿದ ಕೋಕೇರಿ ಗ್ರಾಮದಲ್ಲಿ ಪೊನ್ನಚಂಡ ಅಜ್ಜಪ್ಪನನ್ನು ಹಾಗೂ ಮರಂದೋಡ ಗ್ರಾಮದಲ್ಲಿ ಅನ್ನಡಿಯಂಡ ಅಜ್ಜಪ್ಪನನ್ನು ಆರಾಧಿಸುತ್ತಾರೆ. ಪೊನ್ನಚಂಡ ಅಜ್ಜಪ್ಪ ಹಾಗೂ ಅನ್ನಡಿಯಂಡ ಅಜ್ಜಪ್ಪ ಕಲ್ಯಾಟಂಡ ಪೊನ್ನಪ್ಪನ ಸಮಕಾಲೀನರು. ಪೊನ್ನಪ್ಪನಂತೆ ತಂತ್ರ ಮಂತ್ರಗಳಲ್ಲಿ ಪ್ರವೀಣರಾಗಿದ್ದ ಇವರು ಪೊನ್ನಪ್ಪನನ್ನು ತಮ್ಮ ಗ್ರಾಮಗಳಿಗೆ ಪ್ರವೇಶಿಸಲು ಬಿಡಲಿಲ್ಲ. ಆದುದರಿಂದ ಈ ಗ್ರಾಮಗಳಲ್ಲಿ ಕಲ್ಯಾಟಂಡ ಅಜ್ಜಪ್ಪನ ಆರಾಧನೆ ಕಂಡುಬರುವುದಿಲ್ಲ.

**ಆಚರಣೆ :**

ಅಜ್ಜಪ್ಪ ತೆರೆಯನ್ನು ಕುಟುಂಬ(ಒಕ್ಕ) ಹಾಗೂ ಗ್ರಾಮಗಳಲ್ಲಿ ಆಚರಿಸಲಾಗುತ್ತದೆ. ಒಕ್ಕದ ತೆರೆಗಳಾದರೆ ಆಯಾಯ ಒಕ್ಕದ ಅಜ್ಜಪ್ಪ ಕೋಟದಲ್ಲಿ ತೆರೆಕಟ್ಟುತ್ತಾರೆ. ಗ್ರಾಮದ ತೆರೆಗಳಾದರೆ ಗ್ರಾಮದಲ್ಲಿರುವ ಅಜ್ಜಪ್ಪ ಕೋಟದಲ್ಲಿ ತೆರೆಯ ಆಚರಣೆ ನಡೆಯುತ್ತದೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ತೆರೆಕಟ್ಟುವ ಆಚರಣೆಯಂದು ಬೆಳಗ್ಗೆ ತೆರೆಕಾರರು ಬರುತ್ತಾರೆ. ಅಜ್ಜಪ್ಪ ತೆರೆಯನ್ನು ಕಟ್ಟುವ ತೆರೆಕಾರನು ಮುಖ್ಯಸ್ಥರಿಂದ ಎಣ್ಣೆಯನ್ನು ಪಡೆದು ಸ್ನಾನ ಮಾಡುತ್ತಾನೆ. ಕೆಂಪು ಅಂಗಿ ಮತ್ತು ಷರಾಯಿಯನ್ನು ತೊಟ್ಟು ಬಣ್ಣಗಾರಿಕೆಗೆ ಸಿದ್ಧನಾಗುತ್ತಾನೆ. ಮುಖ್ಯಸ್ಥರ ಸಮ್ಮುಖದಲ್ಲಿ ಅಕ್ಕಿಹಾಕಿ ಪ್ರಾರ್ಥಿಸಿದ ನಂತರ ಸಹಾಯಕರು ಮುಖವರ್ಣಿಕೆಯ ಕೆಲಸವನ್ನು ಆರಂಭಿಸುವರು. ಬಣ್ಣಗಾರಿಕೆಯಲ್ಲಿ



ಅರಿಸಿನ ಹಾಗೂ ಕೆಂಪು ಬಣ್ಣವನ್ನು ಪ್ರಧಾನವಾಗಿ ಬಳಸಲಾಗುತ್ತದೆ. ಕಣ್ಣಿನ ಸುತ್ತ ಕಪ್ಪು ಬಣ್ಣವನ್ನು ಹಾಗೂ ತುಟಿಗಳಿಗೆ ಕೆಂಪು ಬಣ್ಣವನ್ನು ಹಚ್ಚುತ್ತಾರೆ. ಕೆನ್ನೆ ಮತ್ತು ಹುಬ್ಬಿನ ಮೇಲ್ಭಾಗಕ್ಕೆ ಹಳದಿ ಮತ್ತು ಕೆಂಪು ಬಣ್ಣದ ವಿವಿಧ ರೇಖೆ ಹಾಗೂ ಮುದ್ರೆಗಳನ್ನು ಬಿಡಿಸುತ್ತಾರೆ. ಬಣ್ಣಗಾರಿಕೆಯ ನಂತರ ತೆರೆಕಾರನಿಗೆ ಉಡುಗೆ ತೊಡುಗೆಗಳನ್ನು ತೊಡಿಸಲಾಗುತ್ತದೆ. ಅಜ್ಜಪ್ಪ ತೆರೆಯ ವೇಷಭೂಷಣಗಳು ಕೆಂಪು ಬಣ್ಣದ ಬಟ್ಟೆ, ಮರ ಹಾಗೂ ಲೋಹದ ತಗಡುಗಳಿಂದ ನಿರ್ಮಿಸಲ್ಪಟ್ಟಿರುತ್ತವೆ.

ತೆರೆಕಾರನ ಸಹಾಯಕರು ಆತನ ಸೊಂಟಕ್ಕೆ ಚೇಲೆ ಎಂಬ ಕೆಂಪು ಬಣ್ಣದ ಬಟ್ಟೆಯನ್ನು ಸುತ್ತಿ ಕನ್ನಿಬಳೆಯನ್ನು ಕಟ್ಟುತ್ತಾರೆ. ಅದರ ಮೇಲೆ ಅಡ್‌ಕ್ ಎಂಬ ಮರದ ಕಲಾತ್ಮಕ ಹಲಗೆಯನ್ನು ಇರಿಸಿ ಚೆರು ಬೊಳಂಬ ಎಂಬ ಲಂಗದಂತಹ ಉಡುಗೆಯನ್ನು ತೊಡಿಸುತ್ತಾರೆ. ಅದರ ಮಧ್ಯಭಾಗಕ್ಕೆ ಮುನ್ನಾಕ್ ಹಾಗೂ ಮೇಲ್ಭಾಗಕ್ಕೆ ಚೆಂಡ್‌ಬಳೆ ಎಂಬ ವಸ್ತ್ರವನ್ನು ಇಳಿಬಿಡುತ್ತಾರೆ. ತೆರೆಕಾರನ ತಲೆಗೆ ಕೆಂಪು ಬಣ್ಣದ ವಸ್ತ್ರವನ್ನು ಕಟ್ಟುತ್ತಾರೆ.

ತೆರೆಕಾರನು ದೇವರನ್ನು ಪ್ರಾರ್ಥಿಸಿ ಅಕ್ಕಿಹಾಕಿ ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುವನು. ನೆತ್ತಿಪಟ್ಟಿಯ ಮೇಲ್ಭಾಗಕ್ಕೆ ತಲೆಪೂ ಎಂಬ ಹೂವಿನ ದಂಡೆ ಇರುತ್ತದೆ. ಕಿವಿಗೆ ಚೆನ್ನೆಲರ್ ಎಂಬ ಕಿವಿಯೋಲೆ ಧರಿಸುತ್ತಾನೆ. ಕರಿಂದಾಡಿಮೀಸೆ ಎಂಬ ಕಪ್ಪು ಗಡ್ಡ ಮತ್ತು ಮೀಸೆಯನ್ನು ದಾರದ ಸಹಾಯದಿಂದ ಕಟ್ಟುತ್ತಾನೆ. ಕೈ ಮತ್ತು ತೋಳುಗಳಿಗೆ ಮರದ ಬಳೆ, ಕೈಪೂ ಮತ್ತು ಕಂಚಿನ ಚೂಡಗವನ್ನು ಧರಿಸುವನು. ಮೊಣಕಾಲಿನ ಕೆಳಭಾಗಕ್ಕೆ ಪಟ್ಟಿಮಡ ಹಾಗೂ ಅದರ ಮೇಲ್ಭಾಗಕ್ಕೆ ಮಣಿಕೇರ್ ಎಂಬ ಗೆಜ್ಜೆಯನ್ನು ಕಟ್ಟುವನು. ಕುತ್ತಿಗೆಗೆ ಪವ್ವಿಡ ಎಂಬ ಮಣಿಹಾರವನ್ನು ಧರಿಸುವನು. ಪ್ರಾರ್ಥಿಸಿ ಅಕ್ಕಿಹಾಕಿ ಮುಖ್ಯಸ್ಥರ ಅನುಮತಿಯನ್ನು ಪಡೆದು ತೆರೆಕಾರನು ಚಲ್ಂಬು ಧರಿಸುವನು. ಇದನ್ನು ಪಾದಗಳ ಮೇಲ್ಭಾಗಕ್ಕೆ ಧರಿಸಲಾಗುತ್ತದೆ.

**ತೆರೆಹಾಡು ಮತ್ತು ಕುಣಿತ :**

ಬಣ್ಣಗಾರಿಕೆಯ ನಂತರ ವೇಷಭೂಷಣಗಳನ್ನು ಧರಿಸಿದ ತೆರೆಕಾರನು ಪ್ೕಡವೆಂಬ ವಿಶೇಷ ಪೀಠದಲ್ಲಿ ಕುಳಿತುಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ತೆರೆಹಾಡನ್ನು ಹಾಡುತ್ತಾರೆ. ಕುಟುಂಬದಲ್ಲಿ ಆಚರಿಸುವ ತೆರೆಗಳಲ್ಲಿ ತೆರೆಹಾಡಿಗಿಂತ ಮೊದಲು ದುಡಿಯನ್ನು ಬಾರಿಸುತ್ತಾ ದುಡಿಕೊಟ್ಟ್ ಪಾಟ್ ಹಾಡಲಾಗುತ್ತದೆ. ಅನಂತರ ತೆರೆಕಾರರು ಚಂಡೆ ಬಾರಿಸುತ್ತಾ ತೆರೆಹಾಡನ್ನು ಹಾಡುತ್ತಾರೆ. ಗ್ರಾಮದ ತೆರೆ ಆಚರಣೆಗಳಲ್ಲಿ ಸಾಂಕೇತಿಕವಾಗಿ ದುಡಿಕೊಟ್ಟ್ ಪಾಟ್ ಹಾಡುತ್ತಾರೆ. ಅನಂತರ ತೆರೆಕಾರರು ಚಂಡೆಯ ಹಿಮ್ಮೇಳದೊಂದಿಗೆ ತೆರೆಹಾಡನ್ನು ಹಾಡುವರು. ಇದು ಅಜ್ಜಪ್ಪನ ಬದುಕು ಮತ್ತು ಸಾಧನೆಯನ್ನು ವರ್ಣಿಸುತ್ತದೆ. ತೆರೆಹಾಡು ಮುಗಿಯುತ್ತಿದ್ದಂತೆಯೇ ತೆರೆಕಾರನ ಮೇಲೆ ಅಜ್ಜಪ್ಪನ ಆವಾಹನೆಯಾಗುತ್ತದೆ. ಪ್ೕಡದಿಂದ ಜಿಗಿದು ಏಳುತ್ತಾ ಅಟ್ಟಹಾಸ ಮಾಡುತ್ತಾನೆ. ಈ ಹಂತದಲ್ಲಿ ತೆರೆಕಾರನ ತಲೆಗೆ ಪೂಕೊಟ್ಟಿ ಅಥವಾ ಪೂಕೊಟ್ಟಿ ಚೆಯ್ಯಾಕ್ ಎಂಬ ಶಿರೋಭೂಷಣವನ್ನು ತೆರೆಕಾರನ ಸಹಾಯಕರು ಕಟ್ಟುತ್ತಾರೆ. ಅಜ್ಜಪ್ಪನ ಆಯುಧಗಳಾದ ಒಡಿಕತ್ತಿ ಹಾಗೂ ಪರಿಯ ಎಂಬ ಗುರಾಣಿಯನ್ನು ನೀಡುತ್ತಾರೆ. ಬಲಗೈಯಲ್ಲಿ ಒಡಿಕತ್ತಿ ಎಡಗೈಯಲ್ಲಿ ಪರಿಯ ಹಿಡಿದುಕೊಳುವ ಅಜ್ಜಪ್ಪ ತೆರೆಯು ಕುಣಿಯಲಾರಂಭಿಸುತ್ತದೆ. ಚಂಡೆಯ ಬಡಿತ ತಾರಕಕ್ಕೆ ಏರುತ್ತಿದ್ದಂತೆಯೇ ಪ್ೕಡದ ಮೇಲೆ ಹತ್ತಿ ಕುಣಿಯುತ್ತಾ ತನ್ನ ಶಕ್ತಿಯನ್ನು ಪ್ರದರ್ಶಿಸುತ್ತದೆ.

**ಅನುವಾದ :**

ಒಕ್ಕದವರು ಹಾಗೂ ಗ್ರಾಮದವರು ಅಜ್ಜಪ್ಪನಿಗೆ ಹೂವಿನಹಾರವನ್ನು ಹಾಕಿ ಅನುಗ್ರಹ ಪಡೆದುಕೊಳ್ಳುತ್ತಾರೆ. ಇದನ್ನು ಅನುವಾದ ಕೇಟವೊ ಎನ್ನುತ್ತಾರೆ. ಅಜ್ಜಪ್ಪ ತೆರೆಯು ಭಕ್ತರೊಂದಿಗೆ ಕೊಡವ ಭಾಷೆಯಲ್ಲಿ ಸಂಭಾಷಣೆ ನಡೆಸುತ್ತದೆ. ಅವರೊಂದಿಗೆ ತನ್ನ ಸಾಹಸಗಳನ್ನು ವರ್ಣಿಸುತ್ತದೆ. ತನಗೆ ಒಪ್ಪಿಸಲು ತಂದಿರುವ ಅಮೃತ(ಮದ್ಯ)ವನ್ನು ನೀಡುವಂತೆ ಕೇಳುತ್ತದೆ. ಭಕ್ತರು ತಂದ ಕಾಣಿಕೆಗಳನ್ನು ಸ್ವೀಕರಿಸಿ ಆಶೀರ್ವದಿಸುತ್ತದೆ. ತಟ್ಟ್ತಡೆಗೆ ಕೋಳಿಬಲಿ ನೀಡಿದ ನಂತರ ಅಜ್ಜಪ್ಪ ತೆರೆಯು ಮುಕ್ತಾಯಗೊಳ್ಳುತ್ತದೆ.

**೫.೧.೩ ಪ್ರಾಣಿ ವರ್ಗದ ತೆರೆಗಳು**

ಪೂರ್ವದಲ್ಲಿ ಅರಣ್ಯವಾಸಿಯಾಗಿದ್ದ ಮಾನವನಿಗೆ ತನ್ನ ಬದುಕನ್ನು ಸುಗಮಗೊಳಿಸಿಕೊಳ್ಳಲು ಪ್ರಕೃತಿಯೊಡನೆ ಹೋರಾಡುವ ಅನಿವಾರ್ಯತೆ ಇತ್ತು. ಆತ ನಿಸರ್ಗದ ಶಕ್ತಿಗಳನ್ನು ವಿವಿಧ ಆಚರಣೆಗಳ ಮೂಲಕ ಆರಾಧಿಸಿ ಓಲೈಸಿಕೊಳ್ಳುತ್ತಿದ್ದನು. ಆ ಮೂಲಕ ಅವುಗಳ ಮೇಲೆ ಪ್ರಭುತ್ವ ಸಾಧಿಸುವ ಪ್ರಯತ್ನದ ಅಂಗವಾಗಿ ಮೃಗಾರಾಧನೆ ರೂಢಿಯಾಯಿತು. ಹೀಗೆ ಬೇಟೆಯ

ಬದುಕು ಹಾಗೂ ಕೃಷಿ ಸಂಸ್ಕೃತಿಯ ಹಿನ್ನೆಲೆಯಿಂದ ಪ್ರಾಣಿಮೂಲ ದೈವಗಳ ಆರಾಧನೆ ಹುಟ್ಟಿಕೊಂಡಿತು. ನಿಸರ್ಗದಿಂದ ಮೈತಳೆದ ಇಂಥ ದೈವಗಳನ್ನು ಕ್ರಮೇಣ ಪುರಾಣ ಮೂಲದ ಕಥೆಗಳಿಗೆ ತಳುಕು ಹಾಕಿದ ಸಂದರ್ಭವೂ ಇದೆ. ಆದರೆ ಜನಪದ ಮೂಲದ ಕಥೆಗಳು ಇಂದಿಗೂ ಊರ್ಜಿತವಾಗಿದ್ದು ಅವುಗಳ ಸಹಜ ಹಿನ್ನೆಲೆಯನ್ನು ವಿವರಿಸುತ್ತವೆ. ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲಿ ಮೃಗಗಳ ಪಾತ್ರ ಗಮನೀಯವಾದುದು. ತೆರೆಕಟ್ಟಿ ಆರಾಧಿಸಲ್ಪಡುವ ದೈವಗಳ ಕೋಟ ಮತ್ತು ನೆಲೆಗಳಲ್ಲಿ ಕೆಲವು ರೀತಿಯ ಮೃಗಗಳ ವಿಗ್ರಹಗಳನ್ನು ಕಾಣಬಹುದು. ಅಯ್ಯಪ್ಪನ ನೆಲೆಯಲ್ಲಿ ಸಹಚರರಾದ ಕೆನ್ನಾಯಿಗಳ ಮಣ್ಣಿನ ವಿಗ್ರಹಗಳಿರುತ್ತವೆ. ಚೌಂಡಿ ದೈವದ ಮೊಗವು ಹಂದಿಯ ಮುಖವನ್ನು ಹೋಲುತ್ತದೆ. ಇದಲ್ಲದೆ ಪ್ರಾಣಿಗಳನ್ನೇ ದೈವಗಳೆಂದು ತೆರೆಕಟ್ಟಿ ಆರಾಧಿಸುವ ಸಂಪ್ರದಾಯವೂ ಕೊಡಗಿನಲ್ಲಿದೆ. ಅಂತಹ ಪ್ರಾಣಿ ಸಂಬಂಧಿ ತೆರೆಗಳನ್ನು ಈ ಕೆಳಗಿನಂತೆ ನಿರೂಪಿಸಲಾಗಿದೆ.

**೫.೧.೩.೧ ಎತ್ತ್‌ತೆರೆ**

**ಅರ್ಥ ಮತ್ತು ಹಿನ್ನೆಲೆ :**

ಕೊಡವ ಭಾಷೆಯಲ್ಲಿ 'ಎತ್ತ್' ಎಂದರೆ ದನ ಎಂದರ್ಥ. ಕೊಡಗಿನ ಜನಪದರು ಪೂರ್ವದಿಂದಲೇ ಕೇರಳದೊಂದಿಗೆ ವ್ಯಾಪಾರ ವಹಿವಾಟು ನಡೆಸುತ್ತಿದ್ದರು. ಆಗ ಎತ್ತು ಸರಕು ಸಾಗಾಣಿಕೆಯ ಮಾಧ್ಯಮವಾಗಿತ್ತು. ಅದರಂತೆಯೇ ಕೇರಳದಲ್ಲಿರುವ ಬಯತ್ತೂರ್ ಮತ್ತು ಪಯ್ಯಾವೂರ್ ದೇವಾಲಯಗಳಿಗೆ ಉತ್ಸವದ ಸಂದರ್ಭದಲ್ಲಿ ಕೊಡಗಿನಿಂದ 'ಎತ್ತ್ ಪೋರ್'(ಎತ್ತಿನ ಹೇರು) ಹೋಗುವುದು ವಾಡಿಕೆ. ಇದು ಪರಂಪರಾಗತವಾಗಿ ನಡೆದು ಬಂದ ಪದ್ಧತಿಯಾಗಿದೆ. ಹೀಗೆ ದೇವಾಲಯಗಳಿಗೆ ಎತ್ತ್‌ಪೋರ್ ಹೋಗುವ ಸಂದರ್ಭದಲ್ಲಿ ದನಗಳು ದುರ್ಮರಣಕ್ಕೀಡಾದರೆ ಅವುಗಳ ಸ್ಮರಣಾರ್ಥ ಎತ್ತ್‌ತೆರೆಯನ್ನು ಕಟ್ಟಲಾಗುತ್ತದೆ. ಕೊಡಗಿನಲ್ಲಿ ಪ್ರಮುಖವಾಗಿ ಕೋಕೇರಿ ಗ್ರಾಮದ ಚೇನಂಡ ಕುಟುಂಬ, ಕರಡ ಗ್ರಾಮದ ನಡಿಕೇರಿಯಂಡ ಕುಟುಂಬ, ಚೇರಂಬಾಣೆ ಬೇಂಗೂರಿನ ಕಲ್ಮಾಡಂಡ ಕುಟುಂಬಗಳು ಎತ್ತ್‌ತೆರೆ ಆಚರಣೆಯನ್ನು ನಡೆಸುತ್ತವೆ. ಕೇರಳದಲ್ಲಿರುವ ಪಯ್ಯಾವೂರ್ ದೇವಸ್ಥಾನಕ್ಕೆ ವಾರ್ಷಿಕವಾಗಿ ಎತ್ತ್‌ಪೋರ್ ಒಪ್ಪಿಸುವುದು ಈ ಕುಟುಂಬಗಳಲ್ಲಿ ವಾಡಿಕೆ. ಹೀಗೆ ತೆರಳಿದ ಎತ್ತು ದುರಂತ ಸಾವಿಗೀಡಾದರೆ ಅದರ ಸ್ಮರಣಾರ್ಥ ಕುಟುಂಬದ ಐನ್‌ಮನೆಯಲ್ಲಿ ಎತ್ತ್‌ತೆರೆಯನ್ನು ಕಟ್ಟಲಾಗುತ್ತದೆ.

**ಆಚರಣೆ :**

ಕೊಡಗಿನ ಕೆಲವು ಕುಟುಂಬಗಳು ಎತ್ತ್‌ತೆರೆಯ ಆಚರಣೆಯನ್ನು ನಡೆಸುತ್ತವೆ.

ಐನ್‌ಮನೆಯಲ್ಲಿ ಒಕ್ಕತೆರೆಗಳನ್ನು ಆಚರಿಸುವ ಸಂದರ್ಭದಲ್ಲಿ ಈ ತೆರೆಯನ್ನು ಕಟ್ಟಲಾಗುತ್ತದೆ. ಅಲ್ಲಿ ಆಚರಿಸುವ ಕಾರೋಣನ ಅಂಜಿಕೂಟ್ ಮೂರ್ತಿಯಡ ತೆರೆ ಹಾಗೂ ಚೌಂಡಿ ತೆರೆಯೊಂದಿಗೆ ಎತ್ತ್‌ತೆರೆಯನ್ನು ಕಟ್ಟಲಾಗುತ್ತದೆ. ಆಯಾಯ ಕುಟುಂಬಗಳ ರೂಢಿಗೆ ಅನುಗುಣವಾಗಿ ಎರಡು, ಮೂರು ಅಥವಾ ಐದು ವರ್ಷಗಳಿಗೊಮ್ಮೆ ಎತ್ತ್‌ತೆರೆಯನ್ನು ಆಚರಣೆ ಮಾಡುತ್ತಾರೆ.

**ಎತ್ತಿನ ಪ್ರತಿಕೃತಿಯ ನಿರ್ಮಾಣ :**



ತೆರೆಕಾರರು ತೆರೆಕಟ್ಟಲು ಅಗತ್ಯವಾದ ಎತ್ತಿನ ಪ್ರತಿಕೃತಿಯನ್ನು ಬೆತ್ತದಿಂದ ನಿರ್ಮಿಸುತ್ತಾರೆ. ದೇಹದ ಭಾಗವನ್ನು ಮೊದಲು ನಿರ್ಮಿಸಲಾಗುತ್ತದೆ. ಇದು ತೊಟ್ಟಿಲಿನ ಆಕಾರದಲ್ಲಿರುತ್ತದೆ. ಈ ಆಕೃತಿಯ ಮೇಲೆ ಬಿಳಿಯ ಬಟ್ಟೆಯನ್ನು ಹೊದಿಸಿ ಹೊಲಿದು ಎತ್ತಿನ ಹೊಟ್ಟೆಯನ್ನು ನಿರ್ಮಿಸುತ್ತಾರೆ. ಒಣಹುಲ್ಲಿನಿಂದ ಎತ್ತಿನ ಮುಖ ಹಾಗೂ ಕೊಂಬನ್ನು ನಿರ್ಮಿಸಿ ಅದನ್ನು ಬಿಳಿಯ ಬಟ್ಟೆಯಿಂದ ಸುತ್ತಲಾಗುತ್ತದೆ. ಬಟ್ಟೆಯಿಂದಲೇ ಎತ್ತಿನ ಬಾಲವು ಸಿದ್ಧಗೊಳ್ಳುತ್ತದೆ. ಅಡಿಕೆಯ ಹಾಳೆಯಿಂದ ಎತ್ತಿನ ಮುಖವಾಡವನ್ನು ತಯಾರಿಸಿ ಪ್ರತಿಕೃತಿಯ ಮುಂಭಾಗಕ್ಕೆ ಕಟ್ಟುತ್ತಾರೆ.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ಎತ್ತ್‌ತೆರೆಯ ಬಣ್ಣಗಾರಿಕೆಯಲ್ಲಿ ಹಳದಿ ಬಣ್ಣವನ್ನು ತಳಹದಿಯಾಗಿ ಬಳಸಲಾಗುತ್ತದೆ. ಹಣೆ, ತುಟಿಯ ಮೇಲ್ಭಾಗ ಹಾಗೂ ಕೆಳಭಾಗಕ್ಕೆ ಕೆಂಪು ಬಣ್ಣದ



ರೇಖೆಗಳಿರುತ್ತವೆ. ಕೆನ್ನೆಯ ಮೇಲೆ ಕೆಂಪು ಬಣ್ಣದ ಚುಕ್ಕೆಗಳಿರುತ್ತವೆ. ಕಣ್ಣಿನ ಸುತ್ತಲೂ ಕಪ್ಪು ಬಣ್ಣವನ್ನು ಹಚ್ಚಿದರೆ ಬಣ್ಣಗಾರಿಕೆಯ ಕಾರ್ಯ ಮುಕ್ತಾಯಗೊಳ್ಳುತ್ತದೆ. ಬಣ್ಣಹಚ್ಚಿ ಸಿದ್ಧಗೊಂಡ ತೆರೆಕಾರನು ವೇಷಭೂಷಣಗಳನ್ನು ಧರಿಸಲು ಅನುವಾಗುತ್ತಾನೆ. ಎತ್ತ್ ತೆರೆಯ ಉಡುಪು ಸರಳವಾಗಿರುತ್ತದೆ.

ತೆರೆಕಾರನು ಕೆಂಪು ಬಣ್ಣದ ಪಂಚೆಯನ್ನು ಉಟ್ಟುಕೊಳ್ಳುತ್ತಾನೆ. ದೈವವನ್ನು ಪ್ರಾರ್ಥಿಸಿ ತಕ್ಕ ಮುಖ್ಯಸ್ಥರು ಹಾಗೂ ಭಾಗವಹಿಸಿದವರ ಅನುಮತಿಯನ್ನು ಪಡೆದು ಹಣೆಯ ಮೇಲ್ಭಾಗಕ್ಕೆ ನೆತ್ತಿಪಟ್ಟಿಯನ್ನು ಕಟ್ಟುವನು. ಅದರ ಮೇಲ್ಭಾಗಕ್ಕೆ ತಲೆಪೂ ಎಂಬ ಹೂವಿನ ದಂಡೆ ಹಾಗೂ ಕಿರೀಟದಂತಿರುವ ನಾಗಡವನ್ನು ಧರಿಸುತ್ತಾನೆ. ಕಿವಿಗೆ ವಾಲೆಕಾದ್ ಹಾಗೂ ಕಿವಿಯ ಕೆಳಭಾಗಕ್ಕೆ ಕೊಂಬೋಲೆ ಕಾದ್ ಎಂಬ ಕರ್ಣಾಭರಣಗಳನ್ನು ತೊಡುತ್ತಾನೆ. ಕಾಲಿಗೆ ಮಣಿಕೇರ್ ಎಂಬ ಗೆಜ್ಜೆಯನ್ನು ಕಟ್ಟಿದರೆ ತೆರೆಕಾರನ ವೇಷ ಪೂರ್ಣಗೊಳ್ಳುತ್ತದೆ. ಹೀಗೆ ಸಿದ್ಧಗೊಳ್ಳುವ ತೆರೆಕಾರನು ನೆಲ್ಲಕ್ಕಿ ನಡುಬಾಡೆಯಲ್ಲಿ ಇರಿಸಿದ ತಟ್ಟ್ ತಡೆಯ ಮುಂದೆ ನಿಂತುಕೊಳ್ಳುತ್ತಾನೆ. ಕುಟುಂಬದ ಮುಖ್ಯಸ್ಥ ಹಾಗೂ ಭಾಗವಹಿಸಿದವರನ್ನು ಕರೆದು ದೈವವನ್ನು ಪ್ರಾರ್ಥಿಸುತ್ತಾನೆ. ಎಲ್ಲರೂ ನೆಲ್ಲಕ್ಕಿ ನಡುಬಾಡೆಯ ದೀಪಕ್ಕೆ ಅಕ್ಕಿ ಹಾಕಿ ನಮಸ್ಕರಿಸುತ್ತಾರೆ. ಸಹಾಯಕರ ನೆರವಿನೊಂದಿಗೆ ಸಿದ್ಧಗೊಂಡಿರುವ ಎತ್ತಿನ ಪ್ರತಿಕೃತಿಯೊಳಗೆ ಮೈತೂರಿಸಿ ಹೊತ್ತುಕೊಳ್ಳುತ್ತಾನೆ.

**ಎತ್ತ್‌ತೆರೆ ಪಾಟ್(ಎತ್ತಿನ ತೆರೆಯ ಹಾಡು) :**

ಎತ್ತ್‌ತೆರೆಯ ಆಚರಣೆಯ ಸಂದರ್ಭದಲ್ಲಿ ಜನಪದರು ಎತ್ತ್‌ತೆರೆಪಾಟ್ ಹಾಡುವರು. ಈ ಹಾಡು ಎತ್ತ್‌ತೆರೆಯ ಹಿನ್ನೆಲೆಯನ್ನು ನಿರೂಪಿಸುತ್ತದೆ. ಎತ್ತಿನ ತೆರೆಯ ಹಾಡನ್ನು ದುಡಿವಾದ್ಯ ಬಾರಿಸುತ್ತಾ ಹಾಡಲಾಗುತ್ತದೆ.ಇದನ್ನು ಎತ್ತ್‌ಪಾಟ್(ಎತ್ತಿನ ಹಾಡು) ಎಂದೂ ಕರೆಯುತ್ತಾರೆ. “ಲೆಲ್ಲೇಲೋ ಲೆಲ್ಲಲಾ ಲೆಲ್ಲೇಲೋ ಲೆಲ್ಲಲಾ” ಎಂಬ ಸೊಲ್ಲಿನೊಂದಿಗೆ ಈ ಗೀತೆ ಪ್ರಾರಂಭಗೊಳ್ಳುತ್ತದೆ. ಹಾಡಿನ ಪ್ರಕಾರ “ಒಂದು ದಿನ ಕೋಕೇರಿ ಊರಿನ ಚೇನಂಡ ಒಕ್ಕದ ಉತ್ತಯ್ಯ ಎಂಬ ವ್ಯಕ್ತಿಗೆ ವಾಡಿಕೆಯಂತೆ ಪಯ್ಯಾವೂರಿಗೆ ಎತ್ತ್‌ಪೋರ್ ಹೋಗಬೇಕೆನಿಸಿತು. ಅಂತೆಯೇ ಅವನು ಮೂವತ್ತೈದು ಎತ್ತುಗಳ ಬೆನ್ನಿನ ಮೇಲೆ ತಲಾ ಹನ್ನೆರಡು ಸೇರು ಅಕ್ಕಿಯ ಹೇರಿನೊಂದಿಗೆ ಪಯ್ಯಾವೂರಿಗೆ ಹೋಗುವನು. ದೇವಾಲಯಕ್ಕೆ ಅಕ್ಕಿಯನ್ನು ಒಪ್ಪಿಸಿ ಹಿಂದಿರುಗುವಷ್ಟರಲ್ಲಿ ಕತ್ತಲಾಯಿತು. ಆದುದರಿಂದ ಬಣ್ಣಾಯಿ ಕಡು ಎಂಬಲ್ಲಿ ದನಗಳನ್ನು ಮೇಯಲು ಬಿಟ್ಟು ವಿಶ್ರಮಿಸುವನು. ಮರುದಿನ ಬೆಳಗ್ಗೆ ಎದ್ದು ನೋಡಿದಾಗ ಮೂವತ್ತೈದು ಎತ್ತುಗಳಲ್ಲಿ ಬಲಶಾಲಿಯಾಗಿದ್ದ ಪಾಪುಲಿ ಎಂಬ ಎತ್ತು ಕಾಣೆಯಾಗಿತ್ತು. ಎಷ್ಟು ಹುಡುಕಿದರೂ ಉತ್ತಯ್ಯನಿಗೆ ಎತ್ತು ಮಾತ್ರ ಸಿಗಲಿಲ್ಲ. ಬೇರೆ ದಾರಿ ಕಾಣದೆ ಉಳಿದ ಮೂವತ್ತನಾಲ್ಕು ಎತ್ತುಗಳನ್ನು ಹೊಡೆದುಕೊಂಡು ಕೊಡಗಿಗೆ ಹೊರಟನು.

ದಾರಿಯಲ್ಲಿ ಉಡುಂಬೆಪೊಳೆ ಎಂಬ ನದಿಯಲ್ಲಿ ಸ್ನಾನ ಮಾಡಿದ ಆತ ಪಯ್ಯಾವೂರಪ್ಪ(ಈಶ್ವರ) ನನ್ನು ಪ್ರಾರ್ಥಿಸುವನು. “ನಿನ್ನ ಸೇವೆಗೆ ಬಂದ ನನ್ನ ಮೂವತ್ತೈದು ಎತ್ತುಗಳಲ್ಲಿ ಒಂದು ಕಾಣೆಯಾಗಿದೆ. ನಾನು ನನ್ನ ಐನ್‌ಮನೆಗೆ

ತಲುಪುವುದರೊಳಗೆ ಕಾಣೆಯಾದ ಆ ಎತ್ತು ನಿನ್ನ ದಯೆಯಿಂದ ಮರಳುವಂತಾಗಲಿ. ಹಾಗಾದಲ್ಲಿ ಒಕ್ಕದವರೆಲ್ಲಾ ಸೇರಿ ನಡೆಸುವ ಒಕ್ಕತೆರೆಯಲ್ಲಿ ಅಂಜಿಕೂಟ್ ಮೂರ್ತಿಗಳ ತೆರೆ ಕಟ್ಟುವಾಗ ನಿನ್ನ ನೆನಪಿಗಾಗಿ ಎತ್ತ್‌ತೆರೆಯನ್ನು ಕಟ್ಟಿಸುತ್ತೇನೆ" ಎಂದು ಹರಕೆ ಹೊತ್ತುಕೊಂಡನು. ಮನೆಗೆ ತಲುಪಿದ ಉತ್ತಯ್ಯನಿಗೆ ಅಚ್ಚರಿಯೊಂದು ಕಾದಿತ್ತು. ಪವಾಡ ಎಂಬಂತೆ ಪಾಪುಲಿ ಎತ್ತು ಮನೆಗೆ ಮರಳಿ ಬಂದಿತ್ತು. ಹುಲಿಯ ಧಾಳಿಗೊಳಗಾಗಿ ಗಾಯಗೊಂಡು ನಿತ್ರಾಣವಾಗಿದ್ದ ಪಾಪುಲಿ ಐನ್‌ಮನೆಯ ಸುತ್ತಲೂ ಮೂರು ಬಾರಿ ಪ್ರದಕ್ಷಿಣೆ ಬಂದಿತು. ನೆಲ್ಲಕ್ಕಿ ನಡುಬಾಡೆಯಲ್ಲಿ ಉರಿಯುತ್ತಿದ್ದ ದೀಪದ ಬೆಳಕನ್ನು ನೋಡುತ್ತಾ ಮಂಡಿಯೂರಿ ಜೋರಾಗಿ ಅರಚುತ್ತಾ ಪ್ರಾಣ ಬಿಟ್ಟಿತು. ಆದುದರಿಂದ ಎರಡು ವರ್ಷಗಳಿಗೊಮ್ಮೆ ಐನ್‌ಮನೆಯಲ್ಲಿ ಎತ್ತ್‌ತೆರೆಯನ್ನು ಕಟ್ಟಿ ಕಾರೋಣನನ್ನು ಸಂತೃಪ್ತಿಗೊಳಿಸಲಾಗುತ್ತದೆ." ಎಂಬ ವಿವರಗಳನ್ನು ಎತ್ತ್‌ತೆರೆ ಹಾಡು ಒಳಗೊಂಡಿದೆ.

ತೆರೆಹಾಡು ಮುಕ್ತಾಯಗೊಳ್ಳುತ್ತಿದ್ದಂತೆಯೇ ತೆರೆಯು ಆವೇಷಕ್ಕೆ ಒಳಗಾಗುತ್ತದೆ. ಎತ್ತಿನಂತೆ ಜಿಗಿಯುತ್ತದೆ. ಎದುರಿಗೆ ಬಂದವರನ್ನೆಲ್ಲಾ ತಿವಿಯುತ್ತಾ ಐನ್‌ಮನೆಯ ಮುಂದ್‌ನ ಸುತ್ತಲೂ ಕುಣಿಯುತ್ತದೆ. ಅನಂತರ ಮನೆಯ ಅಂಗಳದಲ್ಲಿ ಕೊಂಬು ಕೊಟ್ಟ್ ವಾಲಗದ ಹಿಮ್ಮೇಳಕ್ಕೆ ಸರಿಯಾಗಿ ಹೆಜ್ಜೆ ಹಾಕುತ್ತದೆ. ಮನೆಯ ಸುತ್ತಮುತ್ತಲಿರುವ ಗಿಡಗಳನ್ನು ತಿವಿದು ಮುರಿಯುತ್ತಾ ತಿನ್ನಲು ಹವಣಿಸುತ್ತದೆ. ಗಂಡಸರು ಅದನ್ನು ತಡೆಯಲು ಪ್ರಯತ್ನಿಸುತ್ತಾರೆ. ಪುಂಡು ದನದಂತೆ ವರ್ತಿಸುತ್ತಾ ಅಂಗಳದಲ್ಲಿ ಕುಣಿಯುತ್ತದೆ. ಏಕಾಏಕಿ ಐನ್‌ಮನೆಯ ಜಗಲಿಯನ್ನು ಏರಿ ಅಲ್ಲಿ ನಿಂತಿರುವವರನ್ನು ತಿವಿಯಲು ಪ್ರಯತ್ನಿಸುತ್ತದೆ. ಧೋ ಎಂದು ಸುರಿವ ಮಳೆಯನ್ನು ಲೆಕ್ಕಿಸದೆ ಕುಣಿಯುತ್ತದೆ. ಅರ್ಧ ಗಂಟೆಯ ಹೊತ್ತು ಹೀಗೆ ವಿವಿಧ ಚೇಷ್ಟೆಗಳನ್ನು ಮಾಡುತ್ತಾ ಕುಣಿಯುತ್ತದೆ. ನೆರೆದಿರುವ ಜನರೂ ತೆರೆಯೊಡನೆ ಕುಣಿಯುತ್ತಾರೆ.

ಅನಂತರ ತೆರೆಯು ಕುಟುಂಬದ ನಿರ್ದಿಷ್ಟ ಗದ್ದೆಗೆ ತೆರಳುತ್ತದೆ. ಅಲ್ಲಿ ಪೈರನ್ನು ಮೇಯುತ್ತಾ, ತುಳಿಯುತ್ತಾ ಕುಣಿಯುತ್ತದೆ. ಅಷ್ಟರಲ್ಲಿ ತೆರೆಕಾರನ ಸಹಾಯಕರು ಹಾಗೂ ತೆರೆಯನ್ನು ನಡೆಸುವ ಕುಟುಂಬದವರು ತಟ್ಟ್‌ತಡೆಯೊಂದಿಗೆ ಅಲ್ಲಿಗೆ ಬರುತ್ತಾರೆ. ಎಲ್ಲರೂ ಸಮೀಪದಲ್ಲಿರುವ ಎತ್ತ್‌ಪಲ್‌ಚಿ ಎಂಬ ಹಲಸಿನ ಮರದ ಬಳಿ ಹೋಗುತ್ತಾರೆ. ಇಲ್ಲಿ ತೆರೆಯು ಮುಕ್ತಾಯವಾಗುತ್ತದೆ. ಈ ಸಂದರ್ಭದಲ್ಲಿ ಕೋಳಿಯನ್ನು ಬಲಿ ನೀಡುವ ಬದಲು ತೆರೆಯ ಮೇಲೆ ಹಾರಿಸಲಾಗುತ್ತದೆ. ಇದನ್ನು ಪಾರಿಕೋಳಿ ಎನ್ನುತ್ತಾರೆ. ಈ ಕೋಳಿಯನ್ನು ಹಿಡಿದುಕೊಂಡು ಹೋಗಿ ಸಾಕುವುದರಿಂದ ಸಂಪತ್ತು ವೃದ್ಧಿಯಾಗುತ್ತದೆ ಎಂಬ ನಂಬಿಕೆ ಜನಪದರಲ್ಲಿದೆ. ಹೀಗೆ ತೆರೆಕಟ್ಟುವ ಆಚರಣೆಯಲ್ಲಿ ಆರಾಧಿಸಲ್ಪಡುವ

ಎತ್ ತೆರೆ ಎತ್ತಿನ ಅಂತರ್ಯಾಮಿ ಶಕ್ತಿಯ ಪ್ರತೀಕವಾಗಿದೆ. ಇಲ್ಲಿ ದುರಂತ ಸಾವಿಗೆ ಈಡಾದ ದನಕ್ಕೆ ದೈವತ್ವವನ್ನು ಆರೋಪಿಸಿ ತೆರೆ ಕಟ್ಟಿ ಆರಾಧಿಸಲಾಗುತ್ತದೆ. ಇತರ ತೆರೆಗಳಿಗೆ ಹೋಲಿಸಿದಾಗ ಎತ್ ತೆರೆಯಲ್ಲಿ ಭಕ್ತಿಯ ಭಾವಕ್ಕಿಂತ ವಿನೋದವೇ ಪ್ರಧಾನವಾಗಿ ಗೋಚರಿಸುತ್ತದೆ.

**೫.೧.೩.೨ ನರಿಪೂದ ತೆರೆ**

**ಅರ್ಥ :**

'ಕ್ರೂರ ಪ್ರಾಣಿಗಳ ಅಂತರ್ಯಾಮಿ ಶಕ್ತಿಗಳನ್ನು ಪೂಜಿಸುವುದೂ ನಿರ್ದಿಷ್ಟ ಪ್ರಾಣಿಗಳ ಕೆಲವೊಂದು ಸ್ವರೂಪ, ಸ್ವಭಾವಗಳನ್ನು ತಮ್ಮ ವ್ಯಕ್ತಿತ್ವಕ್ಕೆ ಆರೋಪಿಸಿಕೊಳ್ಳುವುದೂ ಅಭಿನಯಿಸುವುದೂ ವಿವಿಧ ಪ್ರಾಚೀನ ಸಮಾಜಗಳಲ್ಲಿ ರೂಢವಾಗಿದ್ದ ವಿಚಾರ."[೧೯] ಇದಕ್ಕೆ ಪೂರಕವಾಗಿರುವಂತಹ ನರಿಪೂದ ತೆರೆಯನ್ನು ಕೊಡಗಿನ ಜನಪದರು ಆಚರಿಸುತ್ತಾರೆ. ಕೊಡವ ಭಾಷೆಯಲ್ಲಿ 'ನರಿ' ಎಂದರೆ ಹುಲಿ ಎಂದು ಅರ್ಥ. 'ನರಿಪೂದ' ಎಂಬ ಹೆಸರಿನಲ್ಲಿ ಆರಾಧನೆಗೊಳ್ಳುವ ದೈವ ಹುಲಿಯ ಅಂತರ್ಯಾಮಿ ಶಕ್ತಿಯಾಗಿದೆ. ಹುಲಿಯ ಧಾಳಿಗೆ ತುತ್ತಾಗಿ ದುರಂತ ಸಾವಿಗೀಡಾದ ವ್ಯಕ್ತಿ ಹಾಗೂ ಹುಲಿಯ ಸ್ಮರಣಾರ್ಥ ನಿರ್ದಿಷ್ಟ ಒಕ್ಕದವರು ನರಿಪೂದ ತೆರೆಯನ್ನು ಕಟ್ಟಿಸುತ್ತಾರೆ. ಆ ಮೂಲಕ ಹುಲಿಯನ್ನು ಅಲೌಕಿಕ ರೂಪದಲ್ಲಿ ಆರಾಧಿಸುವ ಆಚರಣೆ ಕೊಡಗಿನಲ್ಲಿದೆ. ಇದನ್ನು ನರಿಪೂದ ತೆರೆ ಎಂದು ಕರೆಯುತ್ತಾರೆ. ನರಿಪೂದ ತೆರೆಯಲ್ಲಿ ತೆರೆಕಾರನು ಹುಲಿಯಂತೆ ವೇಷವನ್ನು ಧರಿಸುತ್ತಾನೆ. ಹುಲಿಯ ಅಂತರ್ಯಾಮಿ ಶಕ್ತಿಯನ್ನು ಮೈಮೇಲೆ ಆವಾಹಿಸಿಕೊಂಡು ಹುಲಿಯಂತೆ ವರ್ತಿಸುತ್ತಾನೆ.



**ಹಿನ್ನೆಲೆ ಮತ್ತು ಆಚರಣೆ :**

ಕೊಡಗಿನ ವಿರಾಜಪೇಟೆ ಮತ್ತು ಮಡಿಕೇರಿ ತಾಲೂಕಿನ ಕೆಲವು ಕುಟುಂಬಗಳು ನರಿಪೂದ ತೆರೆಕಟ್ಟುವ ಆಚರಣೆಯನ್ನು ನಡೆಸುತ್ತವೆ. ನರಿಪೂದ ತೆರೆಯ ಆಚರಣೆಗೆ ಒಂದು ಹಿನ್ನಲೆ ಅವಶ್ಯಕ. ಒಂದು ಒಕ್ಕದಲ್ಲಿ ವ್ಯಕ್ತಿಯೊಬ್ಬ ಹುಲಿಯ ಧಾಳಿಯಿಂದ ಮೃತನಾಗಿದ್ದರೆ ಅಥವಾ ಆ ಕುಟುಂಬದ ವ್ಯಕ್ತಿ

ಹುಲಿಯನ್ನು ಕೊಂದಿದ್ದರೆ ಆ ಒಕ್ಕದವರು ನರಿಪೂದ ತೆರೆಯನ್ನು ಆಚರಿಸುವರು. ವಿರಾಜಪೇಟೆ ತಾಲೂಕಿನಲ್ಲಿ ಬಿ. ಶೆಟ್ಟಿಗೇರಿ ಗ್ರಾಮದ ಕಡೇಮಾಡ ಒಕ್ಕ, ನಡಿಕೇರಿ ಗ್ರಾಮದ ಕೋಳೇರ ಒಕ್ಕ, ಹಳ್ಳಿಗಟ್ಟು ಗ್ರಾಮದ ಅಚ್ಚಿಯಂಡ ಒಕ್ಕಗಳಲ್ಲಿ ಈ ಆಚರಣೆಯನ್ನು ನಡೆಸುತ್ತಾರೆ. ಅಲ್ಲದೆ ಮಡಿಕೇರಿ ತಾಲೂಕಿನ ಮರಂದೋಡ ಗ್ರಾಮದ ಮೇರಿಯಂಡ ಒಕ್ಕ ಹಾಗೂ ಕರಡ ಗ್ರಾಮದ ನಡಿಕೇರಿಯಂಡ ಒಕ್ಕಗಳಲ್ಲಿ ನರಿಪೂದ ತೆರೆಯ ಆಚರಣೆಯನ್ನು ಮಾಡುತ್ತಾರೆ.

**ವೇಷಭೂಷಣಗಳು :**

ನರಿಪೂದ ತೆರೆಯ ವೇಷ ಬಹಳ ಸರಳವಾದುದು. ಇಲ್ಲಿ ಯಾವುದೇ ರೀತಿಯ ಆಭರಣಗಳ ಬಳಕೆ ಇಲ್ಲ. ತೆರೆಕಾರನು ಕೆಂಪು ಬಣ್ಣದ ಪಂಚೆಯನ್ನು ಮೊಣಕಾಲಿನವರೆಗೆ ಕಟ್ಟಿಕೊಳ್ಳುತ್ತಾನೆ. ಸಹಾಯಕರು ಚೇಲೆ ಎಂದು ಕರೆಯಲ್ಪಡುವ ಉದ್ದನೆಯ ಬಟ್ಟೆಯನ್ನು ತೆರೆಕಾರನ ಸೊಂಟಕ್ಕೆ ಸುತ್ತುತ್ತಾರೆ. ಅದರ ಮೇಲ್ಭಾಗಕ್ಕೆ ಹಗ್ಗವನ್ನು ಕಟ್ಟಲಾಗುತ್ತದೆ. ಈ ಹಗ್ಗಗಳನ್ನು ತೆರೆಕಾರನ ಸಹಾಯಕರು ಹಾಗೂ ಆಚರಣೆಯನ್ನು ನಡೆಸುವ ಒಕ್ಕದ ಯುವಕರು ಹಿಡಿದುಕೊಳ್ಳುವರು. ಆವೇಶಗೊಂಡ ನರಿಪೂದನನ್ನು ಈ ಹಗ್ಗಗಳನ್ನು ಎಳೆದು ನಿಯಂತ್ರಿಸುವರು. ಹಿಂಭಾಗಕ್ಕೆ ಹುಲ್ಲು ಮತ್ತು ಪಾಂಬಳೆಯ ಹಾಳೆಗಳನ್ನು ಬಳಸಿ ಹುಲಿಯ ಬಾಲವನ್ನು ನಿರ್ಮಿಸುವರು.

**ಬಣ್ಣಗಾರಿಕೆ ಮತ್ತು ವೇಷಭೂಷಣಗಳು :**

ಬಣ್ಣಗಾರಿಕೆಯು ನರಿಪೂದ ತೆರೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಮುಖವರ್ಣಿಕೆಯಲ್ಲಿ ಕಲಾವಿದರು ಹಣೆಯ ವಿಸ್ತಾರವನ್ನು ಪೂರ್ಣವಾಗಿ ಬಳಸಿಕೊಳ್ಳುತ್ತಾರೆ. ಹಣೆಗೆ ಬಣ್ಣ, ತಿಲಕ, ನಾಮ, ಚುಕ್ಕೆ ಹಾಗೂ ಮುದ್ರೆಗಳೆಂಬ ಅಲಂಕಾರಗಳಿರುತ್ತದೆ. ಮೂಗು ಹಾಗೂ ಕೆನ್ನೆಯ ಮೇಲೆ ಕೆಂಪು ಮುದ್ರೆಗಳನ್ನು ಸಾಲಾಗಿ ಬಿಡಿಸಲಾಗಿರುತ್ತದೆ. ಕಣ್ಣಿನ ಸುತ್ತಲೂ ಮತ್ತು ರೆಪ್ಪೆಯ ಮೇಲೆ ಕೆಂಪುಬಣ್ಣವನ್ನು ಹಚ್ಚುತ್ತಾರೆ. ಅಂತಿಮವಾಗಿ ಬಿಳಿಯ ಬಣ್ಣದ ಚುಕ್ಕೆಗಳನ್ನು ಹಾಕುತ್ತಾರೆ. ನರಿಪೂದ ತೆರೆಗೆ ನೂರೊಂದು ಚುಕ್ಕೆಗಳನ್ನು ಹಾಕಬೇಕೆಂಬ ಕ್ರಮವಿದೆ. ಈ ಚುಕ್ಕೆಗಳು ತೆರೆಯ ಶಕ್ತಿಯನ್ನು ಹೆಚ್ಚಿಸುತ್ತವೆ ಎಂಬುದು ನಂಬಿಕೆ. "ಹಿಂದೆ ನೂರೊಂದು ಚುಕ್ಕೆಯನ್ನು ಹಾಕಿ ತೆರೆಕಟ್ಟಿದ ತೆರೆಕಾರ ಕಾಡುಪಾಲಾಗಿದ್ದನಂತೆ. ಆದುದರಿಂದ ನಿಗಧಿತ ಚುಕ್ಕೆಗಳಿಗಿಂತ ಕಡಿಮೆ ಸಂಖ್ಯೆಯ ಚುಕ್ಕೆಗಳನ್ನು ಹಾಕಿ ತೆರೆ ಕಟ್ಟಲಾಗುತ್ತದೆ."[೨೦] ಎಂಬುದು ತೆರೆಕಾರರ ಅಭಿಪ್ರಾಯವಾಗಿದೆ. ಕೈ, ಕಾಲು, ಎದೆ ಹಾಗೂ ಬೆನ್ನಿನ ಭಾಗಗಳಿಗೆ ಹಳದಿ ಮತ್ತು ಕೆಂಪು ಬಣ್ಣಗಳನ್ನು ಬಳಸಿ ಹುಲಿಯಂತೆ ಪಟ್ಟೆಗಳನ್ನು ಬಿಡಿಸುತ್ತಾರೆ.

**ಮೊಗ(ಮುಖವಾಡ) ಧರಿಸುವುದು :**

ಮೊಗವನ್ನು ಧರಿಸುವುದು ತೆರೆಕಟ್ಟುವ ಆಚರಣೆಯ ಪ್ರಮುಖ

ಅಂಶವಾಗಿದೆ. ನರಿಪೂದ ತೆರೆಯಲ್ಲಿ ತೆರೆಕಾರನು ಅಡಿಕೆ ಹಾಳೆಯಿಂದ ನಿರ್ಮಿಸಲಾದ ಹುಲಿಯ ಮೊಗವನ್ನು ಧರಿಸಿಕೊಳ್ಳುತ್ತಾನೆ. ಹುಲಿಯ ಕಿವಿ ಹಾಗೂ ಹೊರಚಾಚಿದ ನಾಲಿಗೆಯಿಂದಾಗಿ ತೆರೆಕಾರನು ಹುಲಿಯಂತೇ ಕಾಣಿಸುತ್ತಾನೆ. ಹೀಗೆ ತೆರೆಕಾರನು ಸಂಪೂರ್ಣವಾಗಿ ಸಿದ್ಧಗೊಳ್ಳುತ್ತಾನೆ. ಐನ್‌ಮನೆಯ ನೆಲ್ಲಕ್ಕಿ ನಡುಬಾಡೆಯಲ್ಲಿ ತೆರೆಕಾರ, ಒಕ್ಕದ ಹಿರಿಯ ಹಾಗೂ ಸರ್ವ ಸದಸ್ಯರು ಸೇರಿ ಪ್ರಾರ್ಥಿಸಿ ಅಕ್ಕಿ ಹಾಕುತ್ತಾರೆ. ಆಚರಣೆಯು ಸಾಂಗವಾಗಿ ನೆರವೇರುವಂತೆ ಬೇಡಿಕೊಳ್ಳುತ್ತಾರೆ. ಅನಂತರ ತೆರೆಕಾರನ ಸಹಾಯಕರು ಚಂಡೆ ಬಾರಿಸುತ್ತಾ ನರಿಪೂದ ತೆರೆ ಹಾಡನ್ನು ಹಾಡಲಾರಂಭಿಸುತ್ತಾರೆ.

**ಅಭಿನಯ ಮತ್ತು ಸಂಭಾಷಣೆ :**

ನರಿಪೂದ ತೆರೆಯಲ್ಲಿ ತೆರೆಕಾರನ ಚಲನವಲನಗಳು ಹುಲಿಯನ್ನೇ ಹೋಲುತ್ತವೆ. ಯಾವುದೇ ಸಂದರ್ಭದಲ್ಲಿಯೂ ಆತ ಮನುಷ್ಯರ ಭಾಷೆಯನ್ನು ಬಳಸುವುದಿಲ್ಲ. ಹುಲಿಯಂತೆ ಚಲಿಸುತ್ತಾ ನಾಲಿಗೆಯನ್ನು ಹೊರಚಾಚುತ್ತಾನೆ. ಹಾಡು ಮುಗಿಯುತ್ತಿದ್ದಂತೆಯೇ ತೆರೆಕಾರನ ಮೇಲೆ ನರಿಪೂದನು ಮೈದುಂಬಿ ಬಂದು ಆವೇಶಗೊಂಡು ಎದ್ದು ಜಿಗಿಯುತ್ತಾನೆ. ಹುಲಿಯಂತೆ ಗರ್ಜಿಸುತ್ತಾನೆ. ತೆರೆಕಾರನ ಸೊಂಟಕ್ಕೆ ಬಿಗಿದ ಹಗ್ಗದ ಎರಡು ತುದಿಗಳನ್ನು ಕುಟುಂಬ ಅಥವಾ ಊರಿನ ಐದಾರು ಯುವಕರು ತೆರೆಕಾರನ ಸಹಾಯಕರೊಂದಿಗೆ ಹಿಡಿದುಕೊಂಡು ನಿಯಂತ್ರಿಸುತ್ತಾರೆ. ನರಿಪೂದ ತೆರೆಯು ಐನ್‌ಮನೆಯ ಅಟ್ಟಕ್ಕೆ ಹತ್ತಿ ಅಲ್ಲಿ ಓಡಾಡಿ ಇಳಿಯುತ್ತದೆ. ಎದುರಿಗೆ ಸಿಕ್ಕವರ ಮೇಲೆ ಬಿದ್ದು ಹೊಡೆಯಲು ಯತ್ನಿಸುತ್ತದೆ. ಕೈಗೆ ಸಿಕ್ಕ ವಸ್ತುಗಳನ್ನು ಎಸೆಯುತ್ತಾ ನೆಲದಲ್ಲಿ ಬಿದ್ದು ಹೊರಳಾಡುತ್ತಾ ಹುಲಿಯಂತೆಯೇ ವರ್ತಿಸುತ್ತದೆ. ಕೆಲವು ಹೊತ್ತು ಮನೆಯ ಒಳಗೆ ಓಡಾಡಿದ ನಂತರ ಅಂಗಳಕ್ಕೆ ಬರುತ್ತದೆ. ಅಲ್ಲಿ ಸೇರಿರುವ ಜನರನ್ನು ಸಮೀಪಿಸಿ ಹಲ್ಲೆ ಮಾಡಲು ಯತ್ನಿಸುತ್ತದೆ.



ಸನ್ನೆ ಮಾಡಿ ತಿನ್ನಲು ಆಹಾರ ನೀಡುವಂತೆ ಕೇಳುತ್ತದೆ. ಜನರು ತಾವು ತಂದಿರುವ ಕೋಳಿಗಳನ್ನು ದೂರದಿಂದಲೇ ಎಸೆಯುತ್ತಾರೆ. ತೆರೆಯು ಜೀವಂತ ಕೋಳಿಯ

ಕರುಳನ್ನು ಬಗೆದು ತಿನ್ನುತ್ತಾ ಉಳಿದುದನ್ನು ಬಚ್ಚಿಡುತ್ತದೆ. ಅನಂತರ ಗದ್ದೆಗೆ ತೆರಳಿ ಅಲ್ಲಿ ಕೆಸರಿನಲ್ಲಿ ಹೊರಳಾಡುತ್ತಾ ಭಕ್ತರು ನೀಡುವ ಕೋಳಿಯನ್ನು ಬಗೆದು ತಿನ್ನುತ್ತದೆ. ಉಳಿದುದನ್ನು ಕೆಸರಿನಲ್ಲಿ ಹೂತು ಹಾಕಿ ಮತ್ತೆ ಎಳೆದು ತಿನ್ನುತ್ತದೆ. ಸಮಯ ಸಾಧಿಸಿ ಹಗ್ಗವನ್ನು ಬಿಡಿಸಿಕೊಂಡು ಓಡಲು ಯತ್ನಿಸುತ್ತದೆ. ಸುಮಾರು ಅರ್ಧ ಗಂಟೆಯ ಹೊತ್ತು ಹೀಗೆ ಗದ್ದೆಯಲ್ಲಿ ಓಡಾಡುತ್ತದೆ.

**ತೆರೆ ಬಾಂಗುವೊ (ತೆರೆಯ ಮುಕ್ತಾಯ) :**

ನರಿಪೂದ ತೆರೆಯ ಕೊನೆಯ ಹಂತದಲ್ಲಿ ಮುಕ್ತಾಯದ ವಿಧಿ ನಡೆಯುತ್ತದೆ. ತೆರೆಕಾರನ ಸಹಾಯಕರು ಗದ್ದೆಯ ಸಮೀಪ ನಿಗದಿತ ಸ್ಥಳದಲ್ಲಿ ತಟ್ಟ್‌ತಡೆಯನ್ನು ನಿರ್ಮಿಸುತ್ತಾರೆ. ರಕ್ತತರ್ಪಣ ನೀಡಲು ತಂದಿರುವ ಹಂದಿಯ ಕೈಕಾಲುಗಳಿಗೆ ಕಟ್ಟಿರುವ ಹಗ್ಗವನ್ನು ಬಿಚ್ಚುತ್ತಾರೆ. ಹರಿತವಾದ ಚೂರಿಯಂತಹ ಕತ್ತಿಯಲ್ಲಿ ಕೊರಳನ್ನು ಕತ್ತರಿಸಿ ರಕ್ತತರ್ಪಣ ನೀಡುತ್ತಾರೆ. ಈ ವಿಧಿಯು ನಡೆಯುತ್ತಿರುವ ಸಂದರ್ಭದಲ್ಲಿ ನರಿಪೂದ ತೆರೆಯು ಬಾಯಲ್ಲಿ ನೀರೂರಿಸುತ್ತಾ ನಾಲಿಗೆಯನ್ನು ಹೊರಚಾಚಿ ಕಾತರದಿಂದ ನೋಡುತ್ತಿರುತ್ತದೆ. ರಕ್ತತರ್ಪಣ ಕ್ರಿಯೆ ಮುಕ್ತಾಯಗೊಳ್ಳುತ್ತಿದ್ದಂತೆಯೇ ಹಗ್ಗವನ್ನು ಎಳೆದು ಹಿಡಿದುಕೊಂಡಿರುವವರು ಸಡಿಲಿಸುತ್ತಾರೆ. ಓಡುತ್ತಾ ಹೋಗಿ ಹಂದಿಯ ಮೇಲೆ ಮುಗಿಬೀಳುತ್ತದೆ. ಅದರ ಕೊರಳಿಗೆ ಬಾಯಿ ಹಾಕಿ ಕಚ್ಚಿಕೊಂಡು ಹೊತ್ತೊಯ್ದು ಸಮೀಪದಲ್ಲಿರುವ ಕೆರೆಗೆ ಬೀಳುತ್ತದೆ. ಆ ಮೂಲಕ ನರಿಪೂದ ದೈವವು ಸಂತೃಪ್ತಿಯನ್ನು ಹೊಂದುತ್ತದೆ.

ನರಿಪೂದ ತೆರೆಯನ್ನು ಗಮನಿಸಿದಾಗ ಹುಲಿಗೆ ಬೇಟೆಯನ್ನು ಒದಗಿಸುವುದು ಈ ಆಚರಣೆಯ ಪ್ರಧಾನ ಆಶಯವಾಗಿದೆ. ತಮ್ಮ ಸಾಕುಪ್ರಾಣಿಗಳಿಗೆ ಪ್ರಮುಖ ಅಪಾಯುವಾಗಿರುವ ಹುಲಿಯ ಅಂತರ್ಯಾಮಿ ಶಕ್ತಿಯನ್ನು ಸಂತೃಪ್ತಿಪಡಿಸಿ ಅವುಗಳನ್ನು ರಕ್ಷಿಸುವುದು ಇಲ್ಲಿನ ಪ್ರಮುಖ ಉದ್ದೇಶವಾಗಿದೆ. ಭೌಗೋಳಿಕವಾಗಿ ಕೊಡಗು ಬೆಟ್ಟಗುಡ್ಡಗಳು ಹಾಗೂ ದಟ್ಟಕಾಡಿನಿಂದ ಆವೃತವಾದ ಪ್ರದೇಶ. ಹಾಗಾಗಿ ಇಲ್ಲಿನ ಜನಸಮುದಾಯಗಳು ಹುಲಿ, ಆನೆ, ಚಿರತೆ, ಕಿರುಬ, ಕಾಡು ಹಂದಿ, ಕಾಡು ಕೋಣ ಇತ್ಯಾದಿ ವನ್ಯಜೀವಿಗಳ ಸಂಘರ್ಷದೊಂದಿಗೆ ಬದುಕಬೇಕಾದ ಅನಿವಾರ್ಯತೆ ಇದೆ. ಹುಲಿ, ಚಿರತೆ, ಕಿರುಬಗಳಂತಹ ಕ್ರೂರಪ್ರಾಣಿಗಳು ಗ್ರಾಮಗಳಿಗೆ ಬಂದು ಜಾನುವಾರುಗಳನ್ನು ಕೊಂದು ತಿನ್ನುವುದು ಇಲ್ಲಿ ಸಾಮಾನ್ಯ ವಿಚಾರ. ಈ ಹಿನ್ನೆಲೆಯಲ್ಲಿ ನರಿಪೂದ ತೆರೆಯ ಆಚರಣೆಯು ಇಂದಿಗೂ ತನ್ನ ಮಹತ್ವವನ್ನು ಉಳಿಸಿಕೊಂಡಿದೆ.

ಹೀಗೆ ಕೊಡಗಿನ ತೆರೆಕಟ್ಟು ಆಚರಣೆಗಳಲ್ಲಿ ಸ್ತ್ರೀ, ಪುರುಷ ಹಾಗೂ ಪ್ರಾಣಿಮೂಲದ ದೈವಗಳು ವಿಶಿಷ್ಟ ರೀತಿಯಲ್ಲಿ ಆರಾಧಿಸಲ್ಪಡುತ್ತವೆ. ಯಾವುದೇ ಆಚರಣೆಗಳ ಆಂತರ್ಯದಲ್ಲಿ ಆರಾಧನೆ ಸ್ಥಿರವಾಗಿ ಉಳಿದಿರುತ್ತದೆ. ಈ

ಹಿನ್ನೆಲೆಯಲ್ಲಿ ಕೊಡಗಿನ ತೆರೆಕಟ್ಟುವ ಆಚರಣೆಗಳನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ಹಲವು ವಿಧದ ಆರಾಧನೆಗಳ ಸಮನ್ವಯತೆಯನ್ನು ಕಾಣಬಹುದು. ಮಾತೃ ದೇವತಾರಾಧನೆ, ವೃಕ್ಷಾರಾಧನೆ, ಪೂರ್ವಜರ ಆರಾಧನೆ, ಮೃಗಾರಾಧನೆ, ಆಯುಧ ಪೂಜೆ, ಫಲವಂತಿಕೆಯ ಪೂಜೆ ಇಲ್ಲಿ ಸಮ್ಮಿಳಿತಗೊಂಡಿವೆ. ಅಲ್ಲದೆ ಶಕ್ತಿ, ಚಾಮುಂಡಿ, ಶೈವ ಮತ್ತು ವೈಷ್ಣವ ಕಲ್ಪನೆಗಳು ಸೇರಿಕೊಂಡಿವೆ. ಸಾಂಸ್ಕೃತಿಕ ವಿಕಾಸದ ವಿವಿಧ ಹಂತಗಳಲ್ಲಿ ಇವುಗಳ ಸ್ವೀಕಾರ ನಡೆದಿರಬಹುದೆನಿಸುತ್ತದೆ.

**೫.೨ ತೆರೆಕಟ್ಟುವ ಆಚರಣೆ ಮತ್ತು ಬಲಿ**

'ಬಲಿ' ಶತಮಾನಗಳಿಂದಲೂ ರೂಢಿಯಲ್ಲಿರುವ ಪದ್ಧತಿಯಾಗಿದೆ. ಬಲಿ ಎಂದರೆ ರಕ್ತಾರ್ಪಣೆಯ ಮೂಲಕ ಸಂತೃಪ್ತಿ ಪಡಿಸುವುದು ಎಂದು ಅರ್ಥ. ವೈದಿಕ ಸಂಸ್ಕೃತಿಯಲ್ಲಿ ಕುಂಬಳಕಾಯಿ ಒಡೆದು ಕುಂಕುಮ ಹಾಕಿದರೆ ಶಾಸ್ತ್ರೋಕ್ತ ರೀತಿಯಲ್ಲಿ ಅದು ಬಲಿ ಸಮರ್ಪಣೆ ಎಂದೇ ಪರಿಗಣಿತವಾಗುತ್ತದೆ. ಅದು ಸಾತ್ವಿಕ ಬಲಿ ಎನಿಸಿಕೊಳ್ಳುತ್ತದೆ. ಆದರೆ ಜನಪದ ಸಂಸ್ಕೃತಿಯಲ್ಲಿ ಯಾವುದಾದರೂ ಪ್ರಾಣಿ ಅಥವಾ ಪಕ್ಷಿ(ಕೋಳಿ)ಯ ರಕ್ತಾರ್ಪಣೆಯೇ ಬಲಿಯಾಗಿರುತ್ತದೆ. ಅದನ್ನು ತಾಮಸ ಬಲಿ ಎನ್ನುತ್ತಾರೆ. ಪೂರ್ವದಲ್ಲಿ ಜನಪದರು ನಿರ್ದಿಷ್ಟ ದೈವದ ಹೆಸರಿನಲ್ಲಿ ಮನುಷ್ಯರನ್ನು ಬಲಿ ಕೊಡುವ ನರಬಲಿಯು ರೂಢಿಯಲ್ಲಿತ್ತು. ಬಲಿಯು ದೇವರ ಹೆಸರಿನಲ್ಲಿಯೇ ನಡೆಯುತ್ತದೆ. ಇದು ಧರ್ಮದ ಕಲ್ಪನೆಗೆ ಹೊರತಾದುದೆಂದು ಧಾರ್ಮಿಕ ಮುಖಂಡರು ಖಂಡಿಸುತ್ತಾ ಬಂದಿದ್ದಾರೆ. ಆದರೂ ಜನಪದರ ಜೀವನ ಇದರಿಂದ ದೂರ ಉಳಿಯಲಿಲ್ಲ ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ.

**ಹಿನ್ನೆಲೆ ಮತ್ತು ಉದ್ದೇಶ :**

ಅತಿರೇಕವಾದ ನಂಬಿಕೆ ಮತ್ತು ಭಯ ಬಲಿಪದ್ಧತಿಯ ಆಚರಣೆಗೆ ಪ್ರಮುಖ ಕಾರಣವಾಗಿದೆ. ದುಷ್ಟಶಕ್ತಿಗಳಿಂದ ರಕ್ಷಣೆ, ತಾವು ನಂಬಿರುವ ದೈವಗಳನ್ನು ಸಂತೃಪ್ತಿಪಡಿಸುವುದು ಆ ಮೂಲಕ ವ್ಯಕ್ತಿ, ಸಮಾಜ ಹಾಗೂ ಗ್ರಾಮಗಳನ್ನು ರಕ್ಷಿಸಬಹುದು ಎಂಬ ನಂಬಿಕೆ ಬಲಿಪದ್ಧತಿಯ ಹಿನ್ನೆಲೆಯಾಗಿದೆ. ಕೆಲವು ಸಂದರ್ಭಗಳಲ್ಲಿ ಬಲಿಪದ್ಧತಿಯು ತ್ಯಾಗ ಎಂಬ ಹೆಸರಿನಲ್ಲೂ ಬಳಕೆಗೊಂಡಿದೆ. ಇದನ್ನು ಕೆರೆಗೆ ಹಾರ ಕಥನಗೀತೆ ಹಾಗೂ ಹೊನ್ನಮ್ಮನ ಕೆರೆಯ ಐತಿಹ್ಯಗಳಲ್ಲಿ ಕಾಣಬಹುದು. ಮಾಂತ್ರಿಕರು ವಾಮಾಚಾರದ ವಿದ್ಯೆಯನ್ನು ವಶೀಕರಣ ಮಾಡಿಕೊಳ್ಳುವುದಕ್ಕಾಗಿ ಕ್ಷುದ್ರಶಕ್ತಿಗಳಿಗೆ ನರಬಲಿ ಮತ್ತು ಪ್ರಾಣಿಬಲಿಯನ್ನು ನೀಡಿರುವ ಸಂದರ್ಭಗಳು ಸಾಹಿತ್ಯದಲ್ಲಿ ಉಲ್ಲೇಖಗೊಂಡಿವೆ. ಹೀಗೆ ಬಲಿಪದ್ಧತಿಯು ಸಾಮಾಜಿಕ ನೆಮ್ಮದಿ ಹಾಗೂ ವೈಯಕ್ತಿಕ ಬಯಕೆಗಳನ್ನು ಈಡೇರಿಸುವ ಉದ್ದೇಶವನ್ನು ಹೊಂದಿದ್ದು; ಆದಿಯಿಂದಲೂ ಅವ್ಯಾಹತವಾಗಿ

ನಡೆಯುತ್ತಲೇ ಬಂದಿದೆ. ವಿಶ್ವದ ಬಹುತೇಕ ಸಮುದಾಯಗಳಲ್ಲಿ ಈ ಸಂಪ್ರದಾಯ ರೂಢಿಯಲ್ಲಿದೆ. ಹೀಗೆ ಪ್ರಚಲಿತವಿರುವ ಬಲಿ ಸಂಪ್ರದಾಯವು ಕರ್ನಾಟಕ ಜಾನಪದ ಬದುಕನ್ನೂ ಆವರಿಸಿಕೊಂಡಿದೆ.

ಬಲಿ ಸಂಪ್ರದಾಯವು ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿದೆ ಎಂಬುದಕ್ಕೆ ಕಾವ್ಯ ಹಾಗೂ ಇತಿಹಾಸಗಳ ಆಧಾರಗಳಿವೆ. ಹನ್ನೊಂದನೇ ಶತಮಾನದಲ್ಲಿ ದೇವರ ಹೆಸರಿನಲ್ಲಿ ಬಲಿ ಸಲ್ಲಿಸಿ ಮದ್ಯ ಮಾಂಸಗಳನ್ನು ಸೇವಿಸುತ್ತಿದ್ದ ಉಲ್ಲೇಖ 'ಸಮಯ ಪರೀಕ್ಷೆ' ಕೃತಿಯಲ್ಲಿದೆ.

"ಪಲವು ಪ್ರಾಣಿಗಳಂ ನಿ
ಚ್ಚಲುಮಳಿಯಲು ಮದ್ಯಮಾಂಸಮಂ ಸೇವಿಸಲುಂ
ನಲಿವ ವರ್ಗಳ ಬಳರಿಯ ದೇ
ಗುಲಮಂ ಮಾಡಿಸುವರಶ್ಕ್ರಿಯಿಂ ಪಾಪಿಷ್ಠರ್"[೨೧]

ಹಬ್ಬದ ಸಂದರ್ಭದಲ್ಲಿ ಹರಕೆಯ ರೂಪದಲ್ಲಿ ಪ್ರಾಣಿಬಲಿ ನಡೆಯುತ್ತಿತ್ತು ಎಂಬ ವಿವರಗಳು ಬಸವಣ್ಣನವರ ವಚನದಲ್ಲಿದೆ.

"ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು!
ಕೊಂದಹರೆಂಬುದನರಿಯದೆ ಬೆಂದೊಡಲ ಹೊರೆಯ ಹೋಯಿತ್ತು!
ಅಂದದೆ ಹುಟ್ಟಿತ್ತು, ಅಂದಂದೆ ಹೊಂದಿತ್ತು
ಕೊಂದವರುಳಿದರೆ ಕೂಡಲಸಂಗಮದೇವ?"[೨೨]

ಕೊಡವರು ಸಾವಿನ ಸಂದರ್ಭದಲ್ಲಿ ಹಾಡುವ ಜನಪದ ಗೀತೆ ಜಾವುಪಾಟ್(ಸಾವಿನ ಹಾಡು)ನಲ್ಲಿ ದೈವಗಳಿಗೆ ಬಲಿಯನ್ನು ನೀಡುವ ಬಗ್ಗೆ ಉಲ್ಲೇಖವಿದೆ.

"ಭದ್ರಕಾಳಿ ಕೋಟತ್ ಅಜ್ಜಯ್ಯ
ಆಡರತ್ ನೀಕ್‌ಚಿ ಅಜ್ಜಯ್ಯ
ಅಂದಿತೂ ಗುಣವಿಲ್ಲೆ ಅಜ್ಜಯ್ಯ
ನಾಡ್‌ಡ ಮುಂದಲೆಲ್ ಅಜ್ಜಯ್ಯ
ಅಗ್ಗಿಬಾಯಿ ಚೌಂಡಿಕ್ ಅಜ್ಜಯ್ಯ
ಪಂದಿ ಕೆತ್ತಿ ನೀಕ್‌ಚಿ ಅಜ್ಜಯ್ಯ"[೨೩]

**ಕನ್ನಡಾನುವಾದ:**

"ಭದ್ರಕಾಳಿ ಕೋಟದಲ್ಲಿ ಅಜ್ಜಯ್ಯ
ಆಡನ್ನು ಬಲಿ ನೀಡಿದರು ಅಜ್ಜಯ್ಯ
ಆದರೂ ಗುಣವಾಗಲಿಲ್ಲ ಅಜ್ಜಯ್ಯ

ನಾಡಿನ ಮುಂಭಾಗದಲ್ಲಿ ಅಜ್ಜಯ್ಯ
ಅಗ್ನಿ ಬಾಯಿ ಚೌಂಡಿಗೆ ಅಜ್ಜಯ್ಯ
ಹಂದಿಯನ್ನು ಬಲಿ ನೀಡಿದರು ಅಜ್ಜಯ್ಯ
ಆದರೂ ಗುಣವಾಗಲಿಲ್ಲ ಅಜ್ಜಯ್ಯ"

ಹೀಗೆ ಮುಂದುವರೆಯುವ ಈ ಗೀತೆಯಲ್ಲಿ ತೆರೆ ಕಟ್ಟುವ ಆಚರಣೆಯ ಮೂಲಕ ಆರಾಧಿಸಲ್ಪಡುವ ಭದ್ರಕಾಳಿಗೆ ಆಡನ್ನು ಬಲಿ ನೀಡುವುದು ಹಾಗೂ ಅಗ್ನಿಬಾಯಿ ಎಂದು ಕರೆಯಲ್ಪಡುವ ಚೌಂಡಿ ದೈವಕ್ಕೆ ಹಂದಿಯನ್ನು ಬಲಿ ನೀಡುವ ವಿವರಗಳಿವೆ.

೧೮೫೫ ರಲ್ಲಿ COORG MEMOIRS : AN ACCOUNT OF COORG, AND OF THE COORG MISSION ಕೃತಿಯನ್ನು ರಚಿಸಿದ ಮೋಗ್ಲಿಂಗ್ ಕೊಡಗಿನಲ್ಲಿ ಆಚರಣೆಯಲ್ಲಿದ್ದ ಪ್ರಾಣಿಬಲಿಯ ಬಗ್ಗೆ ವಿವರಿಸಿದ್ದಾರೆ. ಸಾಂಪ್ರದಾಯಿಕ ಮಲೆಯಾಳಿ ಜ್ಯೋತಿಷಿಗಳಾದ ಕಣಿಯ ಸಮುದಾಯದವರು ಕೊಡಗಿನ ಜನರ ಭವಿಷ್ಯವನ್ನು ಬರೆಯುತ್ತಾರೆ. ಮಾಟಮಂತ್ರ ಮೋಡಿಗಳ ವಿಚಾರದಲ್ಲಿ ಕೊಡಗಿನವರಿಗೆ ಕಣಿಯನ ಮಾತು ದಿವ್ಯವಾಣಿಯಂತೆ. ಕಣಿಯನ ಸೂಚನೆಯಂತೆ ಮನೆ ಅಥವಾ ಸ್ಥಳದ ಮೇಲಿರುವ ಹಳೆಯ ಶಾಪಗಳ ವಿಮೋಚನೆಗಾಗಿ 'ಮರನಾಡ ಬಲಿ' ಎಂಬ ಅಸಾಧಾರಣ ಆಹುತಿಯನ್ನು ಆಚರಿಸುತ್ತಾರೆ. ಪಣಿಕ ಅಥವಾ ಬಣ್ಣರು ಈ ಆಚರಣೆಯನ್ನು ನಡೆಸುತ್ತಾರೆ ಎಂಬ ವಿವರಗಳನ್ನು ದಾಖಲಿಸಿದ್ದಾರೆ.

೧೮೭೦ ರಲ್ಲಿ ಪ್ರಕಟಗೊಂಡ Rev. G. Richter ಸಂಗ್ರಹಿಸಿದ GAZETTEER OF COORG ಕೃತಿಯಲ್ಲಿ ಕೊಡಗಿನ ಗ್ರಾಮದೇವತೆಗಳ ಬಗ್ಗೆ ವಿವರಗಳು ದಾಖಲಾಗಿವೆ. 'Substitutes for human sacrifices and other peculiar rites' ಶೀರ್ಷಿಕೆಯಲ್ಲಿ ಕಡಿಯತ್‌ನಾಡಿನ ಕಿರುಂದಾಡು ಮತ್ತು ಕೊಣಂಜಗೇರಿ ಗ್ರಾಮದಲ್ಲಿ ಮೂರು ವರ್ಷಗಳಿಗೊಮ್ಮೆ ನಡೆಯುತ್ತಿದ್ದ ನರಬಲಿಯ ಬಗ್ಗೆ ವಿವರಗಳನ್ನು ನೀಡಿದ್ದಾರೆ. ಪಣಿಕರು ನರಬಲಿ ಆಚರಣೆಯನ್ನು ನಡೆಸುತ್ತಾರೆ. ಈ ಸಂದರ್ಭದಲ್ಲಿ ನೆರೆದ ಜನರು "ಆಳಮ್ಮ" (ಆಳು – ಅಮ್ಮ: ಮನುಷ್ಯ ಓ ಅಮ್ಮ) ಎಂದು ಆವೇಶದ ಉದ್ಗಾರ ಮಾಡುತ್ತಾರೆ. ಒಮ್ಮೆ ಒಬ್ಬ ಭಕ್ತ "ಆಳಲ್ಲಮ್ಮ, ಆಡು" ಅಂದರೆ "ಮನುಷ್ಯನಲ್ಲಮ್ಮ ಆಡು" ಎಂದು ಉದ್ಗರಿಸುತ್ತಾನೆ. ಅಂದಿನಿಂದ ಯಾವುದೇ ಕಳಂಕವಿಲ್ಲದ ಗಂಡು ಆಡನ್ನು ಬಲಿ ಕೊಡುವುದು ಆರಂಭವಾಯಿತು ಎನ್ನುತ್ತಾರೆ. ಅಲ್ಲದೆ ಕ್‌ಗ್ಗಟ್ಟ್‌ನಾಡ್ ತಾಲೋಕಿನ ತಾವಳಗೇರಿ ಮೂಂದ್‌ನಾಡಿನ ಬೆಳ್ಳೂರು ಗ್ರಾಮದಲ್ಲಿ ವಾರ್ಷಿಕವಾಗಿ ಒಂದು ಮನೆಯಿಂದ ಒಬ್ಬ ವ್ಯಕ್ತಿ ಹೋಗಬೇಕಾಗಿತ್ತು. ಆತನ ತಲೆಯನ್ನು ಕಡಿಯುವುದರ ಮೂಲಕ ದೇವಸ್ಥಾನದಲ್ಲಿ

ಅರ್ಪಿಸಲಾಗುತಿತ್ತು. ಆದರೆ ಒಂದು ಕುಟುಂಬಕ್ಕೆ ಸರದಿ ಬಂದಾಗ ಆ ವ್ಯಕ್ತಿ ಕಾಡಿನಲ್ಲಿ ತಲೆಮರೆಸಿಕೊಂಡನು. ಹುಡುಕಿದ ಗ್ರಾಮಸ್ಥರು ಆತ ಸಿಗದಿದ್ದಾಗ "ಕಾಲಕ್- ಆಡ್" ಎನ್ನುತ್ತಾರೆ. ಈ ಪದವು "ಮುಂದಿನ ವರ್ಷಕ್ಕೆ ಆಗಲಿ/ ಮುಂದಿನ ವರ್ಷಕ್ಕೆ ಆಡು"ಎಂಬ ದ್ವಂದ ಅರ್ಥವನ್ನು ಹೊಂದಿದ್ದು: ಅಂದಿನಿಂದ ಹೋತವನ್ನು ಬಲಿನೀಡುವುದು ಆರಂಭವಾಯಿತು. ಮಧ್ಯಾಹ್ನದ ನಂತರ ಪಣಿಕರು ಆಡನ್ನು ಬಲಿನೀಡಿ ಅದರ ರಕ್ತವನ್ನು ನಿಗದಿತ ಕಲ್ಲಿನ ಮೇಲೆ ಸುರಿಸುತ್ತಾರೆ. ಎಂಬ ವಿವರಗಳನ್ನು ದಾಖಲಿಸುತ್ತಾರೆ. ವೋಗ್ಲಿಂಗ್ ದಾಖಲಿಸಿರುವ 'ಮರನಾಡಬಲಿ'ಯ ವಿವರಗಳು ಈ ಕೃತಿಯಲ್ಲಿ ಉಕ್ತಗೊಂಡಿವೆ. ಇದರಿಂದ ಕೊಡಗಿನ ದೈವಾರಾಧನೆಯಲ್ಲಿ ಬಲಿ ಸಂಪ್ರದಾಯ ಪ್ರಮುಖ ಸ್ಥಾನವನ್ನು ಪಡೆದಿದೆ ಎಂಬುದು ವೇದ್ಯವಾಗುತ್ತದೆ. ಬಲಿಯ ಮೂಲಕ ದೈವಗಳನ್ನು ಸಂತೃಪ್ತಿಪಡಿಸಬಹುದು ಎಂಬ ನಂಬಿಕೆ ಪ್ರಬಲವಾಗಿದ್ದು; ಈ ಹಿನ್ನೆಲೆಯಲ್ಲಿ ತೆರೆಕಟ್ಟುವ ಸಂದರ್ಭದಲ್ಲಿ ಬಲಿಯ ಆಚರಣೆ ಪ್ರಮುಖವಾಗಿ ನಡೆಯುತ್ತದೆ.

**ಬಲಿ ಬೇಡುವ ದೈವಗಳು :**

ಸಾಮಾನ್ಯವಾಗಿ ಸ್ತ್ರೀ ದೈವಗಳಿಗೇ ಪ್ರಾಣಿಬಲಿಯನ್ನು ಸಮರ್ಪಿಸುವುದು ರೂಢಿಯಲ್ಲಿದೆ. ಸ್ತ್ರೀದೈವಗಳನ್ನು ಜನಪದರು ಉಗ್ರ ದೇವತೆಗಳೆಂದೇ ಭಾವಿಸುತ್ತಾರೆ. ದುರಗಮ್ಮ, ಮಾರಮ್ಮ, ದ್ಯಾಮವ್ವ, ಮರಗವ್ವ, ಲಕ್ಕವ್ವ, ಚಂದ್ರವ್ವ, ಅಂಕಾಲೆವ್ವ, ಊರವ್ವ ಮುಂತಾದ ಜನಪದ ದೇವತೆಗಳು ಬಲಿಯನ್ನು ಬೇಡುತ್ತವೆ. ಈ ದೇವತೆಗಳು ಆಯಾ ಗ್ರಾಮಗಳ ಗ್ರಾಮದೇವತೆಗಳು ಅಥವಾ ಗ್ರಾಮವೊಂದರ ಓಣಿಯ ದೇವತೆಗಳೂ ಆಗಿರುತ್ತವೆ. ಇಂತಹ ದೇವತೆಗಳು ಕ್ರಮವಾಗಿ ಗ್ರಾಮದವರಿಂದ, ಓಣಿಯುವರಿಂದ ಪೂಜೆಗೊಳ್ಳುತ್ತವೆ. ಕೃಷಿ ಸಂಸ್ಕೃತಿಯ ಅಂಗವಾಗಿ ಬಂದ ಈ ಗ್ರಾಮದೇವತೆಗಳು ಅತ್ಯಂತ ಪ್ರಬಲವಾಗಿದ್ದು ಗ್ರಾಮದ ರಕ್ಷಣೆ ಮತ್ತು ಜನತೆಯ ಆರೋಗ್ಯ ರಕ್ಷಣೆಯ ಹೊಣೆಯನ್ನು ಹೊತ್ತಿರುತ್ತವೆ. ಈ ದೇವತೆಗಳಿಗೆ ಸೂಕ್ತವಾದ ಹಬ್ಬ, ಆಚರಣೆಗಳು ನೆರವೇರದೆ ಇದ್ದಲ್ಲಿ ಇಡೀ ಗ್ರಾಮಕ್ಕೆ ಸಾಮೂಹಿಕ ರೋಗ, ಕಷ್ಟ ನಷ್ಟಗಳು ಸಂಭವಿಸಬಹುದೆಂಬ ಭೀತಿಗೆ ಜನ ಒಳಗಾಗುತ್ತಾರೆ. ಇದಕ್ಕಾಗಿ ಹೇರಳವಾದ ಬಲಿಯನ್ನು ಕೊಡಲಾಗುತ್ತದೆ. ಕೊಡಗಿನ ತೆರೆಕಟ್ಟುವ ಆಚರಣೆಗಳ ಮೂಲಕ ಆರಾಧಿಸಲ್ಪಡುವ ಚೌಂಡಿ, ವಿಷ್ಣುಮೂರ್ತಿ, ಭದ್ರಕಾಳಿ, ಪುದಿಯೋದಿ ಹಾಗೂ ಕುಳಿಯ ದೈವಗಳಿಗೆ ಬಲಿಯನ್ನು ನೀಡಲಾಗುತ್ತದೆ. ಚೌಂಡಿ ಹಾಗೂ ವಿಷ್ಣುಮೂರ್ತಿ ದೈವಗಳಿಗೆ ಹಂದಿಯನ್ನು ಮಾತ್ರ ಬಲಿ ನೀಡಲಾಗುತ್ತದೆ. ಭದ್ರಕಾಳಿ ಹಾಗೂ ಪುದಿಯೋದಿ ದೈವಗಳು ಕೋಳಿ ಮತ್ತು ಆಡಿನ ಬಲಿ ಸ್ವೀಕರಿಸುತ್ತವೆ. ಕುಳಿಯನಿಗೆ ಕೋಳಿಯನ್ನು ಬಲಿ ನೀಡಲಾಗುತ್ತದೆ.

**ಪ್ರಾಣಿ ಬಲಿಯ ಆಚರಣೆ :**

ತೆರೆಕಟ್ಟುವ ಆಚರಣೆಗಳಲ್ಲಿ ಆಡು, ಕುರಿ, ಕೋಳಿ ಮತ್ತು ಹಂದಿಯನ್ನು ದೈವಗಳಿಗೆ ಬಲಿ ನೀಡುತ್ತಾರೆ. ಸಾಮಾನ್ಯವಾಗಿ ಗಂಡು ಪ್ರಾಣಿಗಳನ್ನೇ ಬಲಿ ನೀಡಲಾಗುತ್ತದೆ. ಅವುಗಳು ಸಿಗದಿದ್ದ ಸಂದರ್ಭಗಳಲ್ಲಿ ಈಯದ, ಹಾಲು ಹಿಂಡದ ಎಳೆಯ ಹೆಣ್ಣು ಪ್ರಾಣಿಗಳನ್ನು ಬಲಿಗೆ ಅರ್ಪಿಸುತ್ತಾರೆ. ಬಲಿ ನೀಡುವ ಪ್ರಾಣಿಗಳನ್ನು ಒಂದು ವರ್ಷ ಮುಂಚಿತವಾಗಿ ತಂದು ಸಾಕುತ್ತಾರೆ. ಪೂರ್ವದಲ್ಲಿ ಪ್ರಾಣಿಗಳನ್ನು ಸಾಕುತಿದ್ದುದರಿಂದ ಅವುಗಳಲ್ಲಿ ಒಂದನ್ನು ಆಯಾ ದೈವದ ಹೆಸರಿನಲ್ಲಿ ಸಾಕಿ ಬಲಿ ನೀಡುತ್ತಿದ್ದರು. ನಂತರದ ದಿನಗಳಲ್ಲಿ ಬಲಿ ನೀಡಲು ಒಂದು ವರ್ಷ ಅಥವಾ ಮೂರು ತಿಂಗಳು ಮುಂಚಿತವಾಗಿ ತಂದು ಸಾಕಲಾಗುತ್ತಿತ್ತು. ಇತ್ತೀಚೆಗೆ ಬಲಿ ಆಚರಣೆ ನಡೆಯುವ ಹಿಂದಿನ ದಿನ ಅಥವಾ ಅಂದೇ ಹರಕೆಯ ಪ್ರಾಣಿಯನ್ನು ಮನೆಗೆ ತರುತ್ತಾರೆ. ನೆಲ್ಲಕ್ಕಿ ನಡುಬಾಡೆಯಲ್ಲಿ ದೀಪ ಹಚ್ಚಿ ಮನೆಯ ಸದಸ್ಯರೆಲ್ಲಾ ಸೇರಿ ಕೈಯಲ್ಲಿ ಅಕ್ಕಿಯನ್ನು ಹಿಡಿದು ಪ್ರಾರ್ಥಿಸುತ್ತಾರೆ. ಕೈಯಲ್ಲಿರುವ ಅಕ್ಕಿಯಲ್ಲಿ ಸ್ವಲ್ಪ ಭಾಗವನ್ನು ದೀಪಕ್ಕೆ ಹಾಕಿ ಉಳಿದುದನ್ನು ಹರಕೆಯ ಪ್ರಾಣಿಯ ಬಾಯಿಗೆ ಹಾಕುತ್ತಾರೆ.

ತೆರೆಕಟ್ಟುವ ಆಚರಣೆಯ ಅಂತಿಮ ಘಟ್ಟದಲ್ಲಿ ಪ್ರಾಣಿಬಲಿ ನಡೆಯುತ್ತದೆ. ತೆರೆಯ ಮುಕ್ತಾಯಕ್ಕಿಂತ ಮುಂಚಿತವಾಗಿ ಇದು ನಡೆಯುತ್ತದೆ. ಕೆಲವು ತೆರೆಗಳಲ್ಲಿ ತೆರೆಯ ಮುಕ್ತಾಯದ ನಂತರ ನಡೆಯುತ್ತದೆ. ಈಗಾಗಲೇ ನಿರ್ಮಿಸಲಾಗಿರುವ ತಟ್ಟ್‌ತಡೆಯ ಮುಂದೆ ಬಲಿ ನೀಡುವ ಪ್ರಾಣಿಯ ಕುತ್ತಿಗೆಯನ್ನು ಕತ್ತರಿಸುತ್ತಾರೆ. ಸುರಿಯುವ ರಕ್ತವನ್ನು ತಟ್ಟ್‌ತಡೆಗೆ ಸುರಿಯುತ್ತಾರೆ. ಕೆಲವು ತೆರೆಗಳಲ್ಲಿ ತೆರೆಕಾರನು ಕತ್ತರಿಸಿದ ಕೋಳಿಯ ಕುತ್ತಿಗೆಗೆ ಬಾಯಿಹಾಕಿ ರಕ್ತವನ್ನು ಸೇವಿಸುತ್ತಾನೆ. ಆ ಮೂಲಕ ದೈವವನ್ನು ಸಂತೃಪ್ತಿಪಡಿಸಲಾಗುತ್ತದೆ. ನರಿಮೂದ ತೆರೆಯಲ್ಲಿ ತೆರೆಕಾರನು ಬಲಿ ನೀಡಲಾದ ಹಂದಿಯ ಕೊರಳಿಗೆ ಬಾಯಿಹಾಕಿ ಕಚ್ಚಿ ಹೊತ್ತೊಯ್ದು ಸಂಭ್ರಮಿಸುತ್ತಾನೆ. ಗ್ರಾಮಗಳು ಶಾಂತಿಯಿಂದ ಇರಬೇಕು, ಗ್ರಾಮದ ಜನರಿಗೆ ಯಾವುದೇ ಕಾರಣದಿಂದಲೂ ರೋಗ ರುಜಿನಗಳು ಬರಬಾರದು ಎಂಬ ಉದ್ದೇಶಗಳಿಂದ



ಪ್ರಾಣಿಬಲಿಯನ್ನು ನೀಡುತ್ತಾರೆ. ಬಲಿಯ ಮೂಲಕ ಗ್ರಾಮದ ದೈವಗಳು ಸಂತೃಪ್ತಿಯಾದರೆ ಇಡೀ ಗ್ರಾಮವೇ ಸಂತೃಪ್ತಿಯಾಗುತ್ತದೆ. ಇದರಿಂದ ಗ್ರಾಮ ಸಮೃದ್ಧಿಯಾಗುತ್ತದೆ ಎಂಬ ಬಲವಾದ ನಂಬಿಕೆ ಇದೆ."ಒಂದು ದೇವತೆಗೆ ಬಲಿ ಕೊಡುವುದು ಅರ್ಪಣೆ ಅಷ್ಟೇ ಅಲ್ಲ, ಒಂದು ಜನಾಂಗ ತನ್ನ ದೇವರೊಂದಿಗೆ ಒಂದಾಗುವುದನ್ನು ಸಾಧಿಸುವ ದಾರಿಯಾಗಿದೆ. ದೇವತೆಗಾಗಿ ರಕ್ತವನ್ನು ಚೆಲ್ಲುವುದರ ಮೂಲಕ ಒಂದು ಜನಾಂಗಕ್ಕೆ ದೇವತೆಯೊಡನೆ ಒಂದು ಬಗೆಯ ರಕ್ತ ಸಂಬಂಧ ಏರ್ಪಟ್ಟಿತೆಂದು ಜನ ಭಾವಿಸುತ್ತಾರೆ."[೨೪] ಹಾಗಾಗಿ ಕಾನೂನಿನ ಪ್ರಕಾರ ಪ್ರಾಣಿ ಬಲಿಯ ನಿಷೇಧವಿದ್ದರೂ ಅದನ್ನು ಲೆಕ್ಕಿಸದೆ ಗುಟ್ಟಾಗಿ ನಡೆಸುತ್ತಾರೆ. ಹೀಗೆ ಪ್ರಾಣಿಬಲಿಯ ವಿಧಿ ವಿಧಾನಗಳು ಜನಪದರಿಗೆ ಸಮೃದ್ಧಿ ಸುಖ ಸಂತೋಷಗಳನ್ನು ತಂದುಕೊಡುವ ಆಚರಣೆಗಳಾಗಿವೆ.

ಪೂರ್ವದಲ್ಲಿ ದಿನನಿತ್ಯದ ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡಿದ ಪರಂಪರೆ ಜನಪದರದು. ಇಂದು ನಮಗೆ ಉಣ್ಣುವ ಅನ್ನ ಹೇಗೆ ಪವಿತ್ರವೋ ಹಾಗೆ ನಮ್ಮ ಪೂರ್ವಜರಿಗೆ ಮಾಂಸವು ಜೀವ ಉಳಿಸುವ ನಿತ್ಯದ ಆಹಾರವಾಗಿತ್ತು. ಆದುದರಿಂದ ಅದನ್ನು ಬಳಸುವಲ್ಲಿ ಪವಿತ್ರ ಭಾವನೆ ಮೂಡಿರಬಹುದು. ಹಾಗಾಗಿ ಬಲಿ ಪದ್ದತಿಯನ್ನು ಜನಪದರ ಜೀವನದ ವಿಧಾನದ ಹಿನ್ನೆಲೆಯಲ್ಲಿ ಗ್ರಹಿಸಬೇಕಾಗುತ್ತದೆ. ಹಾಗೆಯೇ ದೇವರಿಗೆ ಎಡೆ ಇಡುವಾಗ ನಮ್ಮ ಆಹಾರ ಪದ್ಧತಿಯನ್ನೇ ದೇವರಿಗೆ ಹೊಂದಿಸುವುದು ಸಹಜ ಆಗಿರುತ್ತದೆ. ಆಗ ದೇವರಿಗೆ ಅರ್ಪಿಸಿದ ಮಾಂಸ ಎಡೆಯಾಗುತ್ತದೆ. ಮನುಷ್ಯರು ಬಳಸುವಾಗ ಅದು ಪ್ರಸಾದವಾಗುತ್ತದೆ.

ದೈವಕ್ಕೂ ಆಹಾರ ಸರಪಳಿಗೂ ಸಂಸ್ಕೃತಿಯ ವಿಕಾಸಕ್ಕೂ ಇವತ್ತಿನ ಸಮುದಾಯಗಳ ಸಮಕಾಲೀನತೆಗೂ ಅತಿ ಸೂಕ್ಷ್ಮವಾದ ಆಳದ ಸಂಬಂಧಗಳಿವೆ. ಕುರಿ, ಕೋಳಿ, ಕೋಣ ಮುಂತಾದ ಪ್ರಾಣಿಗಳ ಬಲಿಯು ಬೇಟೆ ಸಂಸ್ಕೃತಿಯ ಜೀವಂತ ಪಳೆಯುಳಿಕೆಯಾಗಿದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. "ದೈವಗಳಿಗೆ ಪ್ರಾಣಿಗಳನ್ನು ಹರಕೆಯಾಗಿ ಅರ್ಪಿಸುವುದು ಸಮುದಾಯಗಳ ಬೇಟೆ ಪರಂಪರೆಯನ್ನೆ ಧ್ವನಿಸುತ್ತದೆ. ಸಾಂಕೇತಿಕವಾಗಿ ದೈವದ ಜೊತೆ ಆಹಾರವನ್ನು ಹಂಚಿಕೊಳ್ಳುವ ಕ್ರಿಯೆಯನ್ನು ಹರಕೆಗಳು ಸೂಚಿಸುತ್ತವೆ. ಎಲ್ಲ ಬಗೆಯ ಹರಕೆಗಳು ಆಹಾರದ ನೆಲೆಗೆ ಬರದಿದ್ದರೂ ಪ್ರಾಣಿಗಳ ಹರಕೆಯು ಸಮುದಾಯಗಳ ಮಾಂಸಾಚರಣೆಯನ್ನು ಪ್ರತಿನಿಧಿಸುತ್ತದೆ. ಇಲ್ಲಿ ಮಾಂಸಾಚರಣೆಯು ಕೇವಲ ತಿನ್ನುವ ಕ್ರಿಯೆಯಾಗಿರದೆ ದೈವದ ಜೊತೆಗೆ ಆಹಾರವನ್ನು ದೈವೀಕರಿಸುವುದಾಗಿರುತ್ತದೆ. ಗ್ರಾಮದೈವಗಳ ಆಚರಣೆಗಳಲ್ಲಿ ಇಡೀ ಸಮುದಾಯವೇ ಆಹಾರ ಕ್ರಿಯೆಯ ನೈಸರ್ಗಿಕ ಅನಿವಾರ್ಯತೆಯನ್ನು ಸಾಂಸ್ಕೃತಿಕ

ನೆಲೆಗಳಿಂದ ಬೆಸೆಯುತ್ತಿರುತ್ತದೆ. ಮಾಂಸಾಚರಣೆಯು ಸಮುದಾಯಗಳನ್ನು ಸಮೀಪಿಸುವುದು ಈ ಬಗೆಯ ನಂಬಿಕೆಯಿಂದಲೂ ಹೌದೆಂಬುದನ್ನು ಇಲ್ಲಿ ಗಮನಿಸಬೇಕು."[೨೫] ಹೀಗೆ ಬಲಿಪದ್ಧತಿಯು ಬೇಟೆಯುಗದ ಸಂಸ್ಕೃತಿಯ ಆಳವಾದ ಕೊಂಡಿಯಂತೆ ಜನಪದರ ಸಾಮಾಜಿಕ ಜೀವನದಲ್ಲಿ ಬೆಸುಗೆಯಾಗಿದೆ.



ಬೇಟೆ ಹಾಗೂ ಮಾಂಸಾಹಾರ ಕೊಡಗಿನ ಸಂಸ್ಕೃತಿಯ ಭಾಗವಾಗಿದೆ. ತೆರೆಕಟ್ಟುವ ಆಚರಣೆಯ ವಿಧಿ ವಿಧಾನಗಳು, ಆಯುಧಗಳು ಹಾಗೂ ಪ್ರಾಣಿಬಲಿಯನ್ನು ಗಮನಿಸಿದಾಗ ಅಲ್ಲಿ ಬೇಟೆ ಸಂಸ್ಕೃತಿಯ ಸಂಗತಿಗಳು ಗೋಚರಿಸುತ್ತವೆ. ಅಯ್ಯಪ್ಪ ಬೇಟೆಯ ದೈವ. ಆದುದರಿಂದ ಆತನನ್ನು ಬೋಟೆಕಾರ(ಬೇಟೆಗಾರ) ಅಯ್ಯಪ್ಪ, ಬೊಳ್ಳಿಬಿಲ್ಲ್ (ಬೆಳ್ಳಿಯ ಬಿಲ್ಲಿನ) ಅಯ್ಯಪ್ಪ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಅಯ್ಯಪ್ಪ ತೆರೆಯಲ್ಲಿ ತೆರೆಕಾರನು ಬಿಲ್ಲು ಬಾಣಗಳನ್ನು ಹಿಡಿದು ನರ್ತಿಸುವುದು ಇದಕ್ಕೆ ಪೂರಕವಾಗಿದೆ. ನರಿಪೂದ ತೆರೆಯು ಬಲಿ ನೀಡಿದ ಹಂದಿಯ ಕೊರಳಿನ ಭಾಗವನ್ನು ಬಾಯಲ್ಲಿ ಕಚ್ಚಿ ಹೊತ್ತೊಯ್ದು ಸಂಭ್ರಮಿಸುತ್ತದೆ. ಚೌಂಡಿ ತೆರೆಯು ಬಲಿ ನೀಡಿದ ಪ್ರಾಣಿಯ ಕೊರಳಿನ ಭಾಗದ ಮೇಲೆ ಮುಗಿಬೀಳುತ್ತದೆ. ಪಣಿಕರು ಕಟ್ಟುವ ಚೌಂಡಿ ತೆರೆಯಲ್ಲಿ ದೈವವು ಬಲಿ ನೀಡಿದ ಕೋಳಿಯ ಕೊರಳನ್ನು ಕಚ್ಚಿ ರಕ್ತ ಸೇವಿಸುತ್ತದೆ. ಕುಳಿಯಂದೆರೆಯು ಮನೆಯ ಮುಖ್ಯಸ್ಥನ ಕೋವಿಯನ್ನು ಪಡೆದು ತೆಂಗಿನಕಾಯಿಗೆ ಗುಂಡು ಹೊಡೆಯುತ್ತದೆ. ಇವೆಲ್ಲವೂ ಬೇಟೆ ಸಂಸ್ಕೃತಿಯ ಕುರುಹುಗಳಾಗಿವೆ. ಹೀಗೆ ಜನಪದರು ತಮ್ಮ ದೈವಗಳನ್ನು ಮೆಚ್ಚಿಸಲು, ಅವುಗಳೊಡನೆ ಸಮ್ಮಿಲನ ಸಾಧಿಸಲು ಪ್ರಾಣಿಬಲಿಯನ್ನು ವಿಶೇಷ ಸಾಧನವನ್ನಾಗಿ ಅಳವಡಿಸಿಕೊಂಡಿದ್ದಾರೆ.

**೫.೩ ಮಹಿಳೆ ಮತ್ತು ತೆರೆ ಆಚರಣೆಯ ನಿರ್ಬಂಧಗಳು**

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಗೆ ನಿರ್ಬಂಧಗಳು ಹುಟ್ಟಿನೊಂದಿಗೆ ಅಂಟಿಕೊಂಡು ಸಾಗಿಬಂದಿವೆ. ಪುರುಷ ಪ್ರಣೀತ ಮೌಲ್ಯಗಳಿಗೆ ಬದ್ಧಳಾಗಿ

ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಳೆದುಕೊಂಡಿರುವವಳು ಮಹಿಳೆ. ಹುಟ್ಟಿನಿಂದ ಮರಣದವರೆಗೆ ವ್ಯಕ್ತಿಗತ ಹಾಗೂ ಸಾಮುದಾಯಿಕ ನೆಲೆಗಳಿಂದ ಒಂದಲ್ಲಾ ಒಂದು ರೀತಿಯ ಸಂಕೋಲೆಗಳಿಗೆ ಆಕೆ ಸಿಲುಕಿಕೊಂಡಿರುತ್ತಾಳೆ. ಆರಂಭದಿಂದಲೂ ಮಹಿಳೆ ಸ್ವಾತಂತ್ರ್ಯ ಮತ್ತು ಸಮಾನತೆಯಿಂದ ವಂಚಿತಳಾಗುತ್ತಲೇ ಬಂದಿದ್ದಾಳೆ. ಮಹಿಳೆಯರ ಬಗ್ಗೆ ಸಮಾಜದ ಅಭಿಪ್ರಾಯವನ್ನು ರೂಪಿಸಿದ ಮನುಸ್ಮೃತಿಯು ಆಕೆಯನ್ನು ಕುರಿತು ಹೀಗೆನ್ನುತ್ತದೆ.

'ಪಿತಾ ರಕ್ಷತಿ ಕೌಮಾರೇ ಭ್ರಾತೃ ರಕ್ಷತಿ ಯೌವ್ವನೇ
ರಕ್ಷಂತಿ ಸ್ಥವಿರೇ ಪುತ್ರಾ ನಸ್ತ್ರೀ ಸ್ವಾತಂತ್ರ್ಯಮರ್ಹತಿ'

ಕೌಮಾರ್ಯದಲ್ಲಿ ತಂದೆಯು, ಯೌವ್ವನದಲ್ಲಿ ಸಹೋದರನು, ಮುಪ್ಪಿನಲ್ಲಿ ಮಗನಿಂದ ರಕ್ಷಿಸಲ್ಪಡುವ ಸ್ತ್ರೀಗೆ ಸ್ವಾತಂತ್ರ್ಯ ಎಂಬುದು ಇಲ್ಲ ಎನ್ನುತ್ತದೆ. ಅದೇ ಮನುಸ್ಮೃತಿಯು 'ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೇ ತತ್ರ ದೇವತಾಃ'- ಎಲ್ಲಿ ನಾರಿಯರನ್ನು ಪೂಜ್ಯ ಭಾವನೆಯಿಂದ ಕಾಣುತ್ತಾರೋ ಅಲ್ಲಿ ದೇವತೆಗಳು ಪ್ರಸನ್ನರಾಗುತ್ತಾರೆ ಎಂಬ ತದ್ವಿರುದ್ಧವಾದ ಅಭಿಪ್ರಾಯವನ್ನು ತಿಳಿಸುತ್ತದೆ. ಇದನ್ನು ಗಮನಿಸಿದಾಗ ಅಂದಿನ ಸಮಾಜವು ಮಹಿಳೆಯನ್ನು ದೈವತ್ವಕ್ಕೇರಿಸಿತ್ತೇ ಹೊರತು ಆಕೆಗೆ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ನೀಡಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

"ಪುರುಷಪ್ರಧಾನ ಸಂಸ್ಕೃತಿ ಹೆಣ್ಣಿನ ಬಗೆಗೆ ಕೆಲವೊಂದು ಗುಣ ಮತ್ತು ಮೌಲ್ಯಗಳನ್ನು ಆರೋಪಿಸಿದೆ. ಪುರುಷನಿರ್ಮಿತ ಮಾದರಿಗೆ ಒಪ್ಪುವ ಹೆಣ್ಣು ದೇವತೆಯಾಗುತ್ತಾಳೆ, ಹಾಗೆ ಅಳವಡದ ಹೆಣ್ಣು ರಾಕ್ಷಸಿಯಾಗುತ್ತಾಳೆ. ಈ ಗುಣ ಮೌಲ್ಯಗಳು ಹೆಣ್ಣಿಗೆ ಸಹಜವಾದವುಗಳಲ್ಲ."[೨] ಈ ರೀತಿಯ ಮನೋಭಾವಗಳು ಸತಿ ಪದ್ಧತಿಯಂತಹ ಹಲವು ಅಮಾನವೀಯ ಪದ್ಧತಿ ಹುಟ್ಟಿಕೊಳ್ಳಲು ಕಾರಣವಾಯಿತು. ಪುರುಷಪ್ರಧಾನ ಸಮಾಜದಲ್ಲಿನ ಧಾರ್ಮಿಕ ಕಟ್ಟುಪಾಡುಗಳು, ಬಂಡವಾಳ ಶಾಹಿ, ಪುರೋಹಿತಶಾಹಿ, ಪ್ರಭುತ್ವಶಾಹಿ ವ್ಯವಸ್ಥೆಗಳು ಮಹಿಳಾ ಅಸಮಾನತೆಗೆ ಕಾರಣವಾಗಿವೆ. ಪುರುಷ ಜಗತ್ತಿನೊಳಗೆ ಆಕೆಯ ಇತಿಹಾಸ ಹೂತುಹೋಗಿದೆ.

ಆದರೆ ಇಂತಹ ಅಸಮಾನತೆಯನ್ನು ಪ್ರತಿಭಟಿಸುವಂತಹ ಪ್ರಯತ್ನವನ್ನು ಮಹಿಳೆ ಆರಂಭದಿಂದಲೂ ಮಾಡಿಕೊಂಡು ಬಂದಿದ್ದಾಳೆ. ವೇದಗಳ ಕಾಲದಲ್ಲಿ ಗಾರ್ಗಿ, ಮೈತ್ರೇಯಿ ಮೊದಲಾದ ಮಹಿಳೆಯರು ತಮ್ಮ ಹಕ್ಕುಗಳನ್ನು ಪ್ರಶ್ನಿಸಿದವರು. ಸ್ತ್ರೀ ಶಕ್ತಿಯನ್ನು ಪ್ರಚುರಪಡಿಸುವ ಅನೇಕ ಆಶಯಗಳು ಜನಪದ ಸಾಹಿತ್ಯದಲ್ಲಿ ದೊರೆಯುತ್ತವೆ. ಸ್ಥಾಪಿತ ಹೆಣ್ಣಿನ ಮಾದರಿಗಳನ್ನು ಮೀರಿದ ಹೆಣ್ಣುತನದ ಚಿತ್ರಣಕ್ಕೆ ಜನಪದ ಗೀತೆಗಳಲ್ಲಿ ಸಾಕಷ್ಟು ಉದಾಹರಣೆಗಳಿವೆ. ಸಾಂಪ್ರದಾಯಿಕ ಹೆಣ್ಣು-ಗಂಡು ಪರಿಕಲ್ಪನೆಯನ್ನು ಭಂಜಿಸುವ ಹೆಣ್ಣೊಬ್ಬಳ ಚಿತ್ರಣ 'ಪೊಳ್ಳದೇವಿರ

ಅಪ್ಪಯ್ಯಂಡ ಪಾಟ್' ಎಂಬ ಕೊಡವ ಜನಪದ ಗೀತೆಯಲ್ಲಿದೆ. ಈ ಗೀತೆಯಲ್ಲಿನ ದಿಟ್ಟ ಮಹಿಳೆ ಕೇಳಪಂಡ ಕುಟುಂಬದ ಚೀಯುವ್ವ ಕೊಡಗಿನ ಆನೆಬೆಪ್ಪುನಾಡಿನವಳು. ಸೌದೆ ತರಲೆಂದು ಕಾಡಿಗೆ ಹೋದ ಆಕೆ ತನಗೆ ಎದುರಾದ ಹೆಬ್ಬುಲಿಯನ್ನು ಕೊಂದು ಅದರ ಮರಿಯನ್ನು ತನ್ನ ಮಡಿಲಿನಲ್ಲಿ ಕಟ್ಟಿಕೊಂಡು ಬರುವಳು. ಅಂದಿನ ದಿನಗಳಲ್ಲಿ ಗ್ರಾಮಕ್ಕೆ ಬಂದು ಉಪಟಳ ನೀಡುತ್ತಿದ್ದ ಹುಲಿಯನ್ನು ಕೊಂದ ಪುರುಷನಿಗೆ ಅತ್ಯಂತ ಗೌರವ ನೀಡಲಾಗುತ್ತಿತ್ತು. ಆತನ ಕೋವಿಯ ನಳಿಗೆಗೆ ಓಜ(ಕೆಂಪು ಬಣ್ಣದ ಬಾವುಟ)ವನ್ನು ಕಟ್ಟಿ ನರಿ ಮಂಗಲ(ಹುಲಿ ಮದುವೆ) ಆಚರಿಸಿ ಗೌರವ ನೀಡುತ್ತಿದ್ದರು.

ಹುಲಿಯನ್ನು ಕೊಂದ ಚೀಯವ್ವ ನ್ಯಾಯತೀರ್ಮಾನಗಳು ನಡೆಯುತ್ತಿದ್ದ ಮಾದಂಬಟ್ಟ್ ಮಂದ್(ಮೈದಾನ)ಕ್ಕೆ ತೆರಳುವಳು. ಅಲ್ಲಿ ಸೇರಿದ್ದ ನಾಡಿನ ಗಂಡಸರ ಮುಂದೆ ನಿಂತು ನ್ಯಾಯಕ್ಕಾಗಿ ಆಗ್ರಹಿಸುವಳು. "ಇಲ್ಲಿ ನೆರೆದಿರುವ ಗಂಡಸರೇ ಕೇಳಿ, ನನಗೆ ನ್ಯಾಯ ಬೇಕು. ಗಂಡಸು ಹುಲಿಯನ್ನು ಕೊಂದರೆ ಕೋವಿಗೆ ಓಜ(ಬಾವುಟ) ಕಟ್ಟುವಿರಿ. ಹೆಣ್ಣಾದ ನಾನೂ ಹುಲಿಯನ್ನು ಕೊಂದಿದ್ದೇನೆ. ನನಗೆ ಎಲ್ಲಿಗೆ ಬಾವುಟ ಕಟ್ಟುವಿರಿ?" ಎಂದು ಪ್ರಶ್ನಿಸುವಳು. ಊರಿನವರು ಈ ವಿಚಾರಕ್ಕೆ ಸರಿಯಾದ ಸಾಕ್ಷಿ ಇಲ್ಲ ಎಂಬ ಕಾರಣವನ್ನು ನೀಡುವರು. ಅದಕ್ಕೆ ವಿಧಿಸಲು ವಿಧಿಗಳಿಲ್ಲ ಎಂದು ಆಕೆಯ ಮಾತನ್ನು ನಿರ್ಲಕ್ಷಿಸುವರು. ರೊಚ್ಚಿಗೆದ್ದ ಚೀಯವ್ವ ಹೆಬ್ಬುಲಿಯನ್ನು ಕೊಂದ ಕುರುಹಾಗಿ ಅದರ ಬಾಲವನ್ನು ಹಾಗೂ ತನ್ನ ಮಡಿಲಲ್ಲಿ ಇದ್ದ ಮರಿಗಳನ್ನು ತೋರಿಸಿ ಹೀಗೆನ್ನುತ್ತಾಳೆ.

"ಇಾಣಕೆಟ್ಟ ಬಾಲರೆ
ಬಿದಿಪಕ್ ಬಿದಿಯುಂಡ್
ಬಾಲ ನರಿ ಕೊಂದಕ
ತೋಕ್‌ಕೋಜ ಕೆಟ್ಟಂಡು
ಪೊಂಗ ನರಿ ಕೊಂದಕ
ಚೆಂಡ್‌ಕೋಜ ಕೆಟ್ಟಂಡು"[೨೭]

ಅಂದರೆ "ನಾಚಿಕೆಯಿಲ್ಲದ ಗಂಡಸರೇ ವಿಧಿಸಲು ವಿಧಿಗಳಿವೆ. ಗಂಡಸು ಹುಲಿಯನ್ನು ಕೊಂದರೆ ಓಜ(ಬಾವುಟ) ವನ್ನು ಕೋವಿಗೂ; ಹೆಂಗಸು ಕೊಂದರೆ ಆಕೆಯ ತುರುಬಿಗೂ ಕಟ್ಟಿ ಗೌರವಿಸಬೇಕು" ಎಂದು ಅಧಿಕಾರಯುತವಾಗಿ ಹೇಳುವಳು. ಅಂತೆಯೇ ಊರಿನವರು ಆಕೆಯ ತುರುಬಿಗೆ ಬಾವುಟವನ್ನು ಕಟ್ಟಿ ನರಿ ಮಂಗಲ(ಹುಲಿ ಮದುವೆ) ಗೌರವ ನೀಡಿದರು. ಇಂತಹ ದಿಟ್ಟತನ ಜನಪದ ಮಹಿಳೆಯರಲ್ಲಿತ್ತು.

ಆಧುನಿಕ ಕಾಲಘಟ್ಟದಲ್ಲಿ ಹಲವು ಸಾಮಾಜಿಕ ಚಿಂತಕರು, ಚಳವಳಿಗಳು, ಸಂಘಟನೆಗಳು ಹಾಗೂ ಸರಕಾರ ಜನಜಾಗೃತಿಯನ್ನು ಮೂಡಿಸುವಲ್ಲಿ ಸಫಲವಾದವು. ಬ್ರಿಟೀಷರ ಆಗಮನದ ನಂತರ ಲಾರ್ಡ್ ವಿಲಿಯಂ ಬೆಂಟಿಕ್ ಗವರ್ನರ್ ಜನರಲ್ ಆಗಿದ್ದ ಸಂದರ್ಭದಲ್ಲಿ ಹಲವು ಸುಧಾರಣೆಗಳಾದವು. ಸತಿಪದ್ಧತಿ ನಿಷೇಧ ಕಾನೂನನ್ನು ೧೮೨೯ ರಲ್ಲಿ ಜಾರಿಗೆ ತರಲಾಯಿತು. ಭಾರತದಲ್ಲಿ ಸತಿಪದ್ಧತಿಯಂತಹ ಅನಿಷ್ಟ ಪದ್ಧತಿಯ ನಿರ್ಮೂಲನೆಯಲ್ಲಿ ರಾಜಾರಾಂ ಮೋಹನ ರಾಯ್, ಸ್ವಾಮಿ ದಯಾನಂದ ಸರಸ್ವತಿ, ಈಶ್ವರಚಂದ್ರ ವಿದ್ಯಾಸಾಗರ್‌ರಂತಹ ಮಹನೀಯರು ಶ್ರಮಿಸಿದರು. ಆದರೆ ಈ ಎಲ್ಲಾ ಪ್ರಯತ್ನಗಳ ನಡುವೆಯೂ ಇಂದಿಗೂ ಮುಟ್ಟು, ಮಡಿ, ಮೈಲಿಗೆ ಆಚರಣೆಗಳು ನಮ್ಮ ಸಮಾಜದಲ್ಲಿ ರೂಢಿಯಲ್ಲಿವೆ. ರಜಸ್ವಲೆಯಾದ ಹೆಣ್ಣನ್ನು ಮಡಿಮೈಲಿಗೆಯಿಂದ ಕಾಣುವುದು ಆರಂಭದಿಂದಲೂ ಎಲ್ಲಾ ಸಮುದಾಯಗಳಲ್ಲಿ ಕಾಣಬಹುದು. ಹಾಗೆಯೇ ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲೂ ಮಹಿಳೆಯರಿಗೆ ಸಂಬಂಧಿಸಿದಂತೆ ಇಂತಹ ವಿಧಿನಿಷೇಧಗಳನ್ನು ಕಾಣಬಹುದು. ಪುರುಷರು ಮುಕ್ತವಾಗಿ ಭಾಗವಹಿಸುವ ಈ ಆಚರಣೆಯ ಕೆಲವು ವಿಧಿಗಳಲ್ಲಿ ಮಹಿಳೆಯರು ಭಾಗವಹಿಸುವಂತಿಲ್ಲ.

ಮಹಿಳೆ ಮತ್ತು ಪುರುಷ ಎಂಬ ಲಿಂಗಭೇದ ಇಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಕೇವಲ ಪ್ರೇಕ್ಷಕರಾಗಿರುವ ಮಹಿಳೆಯರು ಆಚರಣೆಯ ವಿಧಿಗಳಲ್ಲಿ ಭಾಗವಹಿಸಲು ಮುಂದಾದರೆ ಅದು ಕೂಡದು ಎಂದು ಹಿರಿಯರು ನಿರ್ಬಂಧ ಹೇರುತ್ತಾರೆ. ವಯಸ್ಸಾದ ಮಹಿಳೆಯರು ಹಾಗೂ ಸಣ್ಣ ಬಾಲಕಿಯರಿಗೆ ಇದರಿಂದ ವಿನಾಯಿತಿಯಿದ್ದು; ಅವರು ತೆರೆಯ ಕಾರ್ಯದಲ್ಲಿ ನೆರವಾಗುತ್ತಾರೆ. ಆದರೆ ಅವರೂ ಕೂಡ ತಟ್ಟ್‌ತಡೆಯ ನಿರ್ಮಾಣ, ಬಲಿ ಸಮರ್ಪಣೆ ಹಾಗೂ ತೆರೆ ಬಾಂಗುವೊ ವಿಧಿಗಳಲ್ಲಿ ಭಾಗವಹಿಸುವಂತಿಲ್ಲ ಎಂಬ ನಿಯಮವಿದೆ.

ತೆರೆಕಟ್ಟುವ ಆಚರಣೆಯಲ್ಲಿ ಆರಾಧಿಸಲ್ಪಡುವ ಚೌಂಡಿ, ಭದ್ರಕಾಳಿ, ಭಗವತಿ, ನುಚ್ಚುಟೆ, ಚೊಡಲ್‌ಚಿ, ಕಾಳಿಪೊಲ್‌ತಿ ದೈವಗಳು ಸ್ತ್ರೀದೈವಗಳೇ ಆಗಿವೆ. ಆದರೂ ಇಲ್ಲಿ ಮಹಿಳೆಯರು ದೈವಗಳ ಮಾಧ್ಯಮ ಆಗುವಂತಿಲ್ಲ ಎಂಬ ನಿರ್ಬಂಧವಿದೆ. ಹಾಗಾಗಿ ತೆರೆಕಟ್ಟಿ ಆರಾಧಿಸಲ್ಪಡುವ ದೈವಗಳು ಸ್ತ್ರೀದೈವಗಳೇ ಆಗಿದ್ದರೂ ಪುರುಷ ತೆರೆಕಾರನೇ ಸ್ತ್ರೀರೂಪವನ್ನು ಧರಿಸಿ ತೆರೆಕಟ್ಟುತ್ತಾನೆ. ತೆರೆಕಟ್ಟುವ ಆಚರಣೆಯಲ್ಲಿ ಆರಾಧಿಸಲ್ಪಡುವ ಈತ್‌ಕುಳಿಯು(ಹೆರಿಗೆಯ ಕುಳಿಯು) ಫಲವಂತಿಕೆಯ ದೈವವಾಗಿದ್ದು; ತೆರೆಯ ಸಂದರ್ಭದಲ್ಲಿ ಬಸುರಿ ಹೆಣ್ಣಿನಂತೆ ವರ್ತಿಸುತ್ತದೆ. ಆಕೆಯ ಹೆರಿಗೆ ಹಾಗೂ ಮಗುವಿನ ಲಾಲನೆ ಪಾಲನೆಯನ್ನು ಪ್ರದರ್ಶಿಸುತ್ತಾನೆ. ಇದೆಲ್ಲಾ ವಿಚಾರಗಳು ಹೆಣ್ಣಿಗೆ ಸಂಬಂಧಿಸಿದ್ದರೂ ತೆರೆಯನ್ನು ಕಟ್ಟುವವರು ಮಾತ್ರ ಪುರುಷರೇ

ಆಗಿರುತ್ತಾರೆ. ಅಲ್ಲದೆ ಕೆಲವು ಕಡೆಗಳಲ್ಲಿ ಈ ತೆರೆಯನ್ನು ಮಹಿಳೆಯರು ನೋಡಬಾರದೆಂಬ ನಿರ್ಭಂಧವೂ ಇದೆ.

ಸಾಮಾನ್ಯವಾಗಿ ತೆರೆಕಟ್ಟುವ ಸ್ಥಳಗಳಲ್ಲಿ ಮುಟ್ಟಾದ ಮಹಿಳೆಯರು ಕಾಣಿಸಿಕೊಳ್ಳುವಂತಿಲ್ಲ. ಕೆಲವು ಗ್ರಾಮುಗಳಲ್ಲಿ ಮನೆಯನ್ನು ಬಿಟ್ಟು ನೆಂಟರಿಷ್ಟರ ಮನೆಯಲ್ಲಿ ಉಳಿದುಕೊಳ್ಳುವುದೂ ಇದೆ. ಈ ರೀತಿಯ ವಿಧಿ ನೀಷೇಧಗಳನ್ನು ಪಾಲಿಸದಿದ್ದರೆ ತಟ್ಪ್‌ಮುಟ್ಪ್(ಮೈಲಿಗೆ) ಉಂಟಾಗಿ ತೆರೆಕಟ್ಟುವ ಸಂದರ್ಭದಲ್ಲಿ ತೆರೆಕಾರನ ಮೈಮೇಲೆ ದೈವವು ಸರಿಯಾಗಿ ಆವಾಹನೆಯಾಗುವುದಿಲ್ಲ. ನಡೆಸಿದ ಆಚರಣೆಯ ಬಗ್ಗೆ ದೈವಕ್ಕೆ ಅತೃಪ್ತಿ ಉಂಟಾಗಬಹುದು. ಇದರಿಂದ ಕುಟುಂಬಕ್ಕೆ ಅಥವಾ ಊರಿಗೆ ತೊಂದರೆಗಳು ಬರಬಹುದೆಂಬ ಭಯ ಜನಪದರಲ್ಲಿದೆ. ನೆಲ್ಲಕ್ಕಿ ನಡುಬಾಡೆಯಲ್ಲಿ ದೀಪ ಹಚ್ಚುವುದನ್ನು ಹೊರತುಪಡಿಸಿ ತೆರೆ ಆಚರಣೆಯ ಪ್ರತಿಂಯೊಂದು ವಿಧಿವಿಧಾನಗಳಲ್ಲಿ ಪುರುಷರೇ ಭಾಗವಹಿಸುತ್ತಾರೆ. ವಿಪರ್ಯಾಸವೆಂದರೆ ಆಚರಣೆಗೆ ಮುನ್ನ ತೆರೆಗೆ ಅವಶ್ಯಕವಾದ ಸಾಮುಗ್ರಿಗಳನ್ನು ಸಿದ್ಧಗೊಳಿಸುವವರು ಮಹಿಳೆಯರೇ ಆಗಿರುತ್ತಾರೆ.

ಆಚರಣೆಯ ಸಂದರ್ಭದಲ್ಲಿ ಮಹಿಳೆಯರಿಗೆ ಹೇರಿರುವ ನಿರ್ಬಂಧಗಳಿಗೆ ಪುರುಷ ಪ್ರಧಾನ ವ್ಯವಸ್ಥೆಯು ಕಾರಣ ಕೊಡುವುದನ್ನು ಮರೆಯಲಿಲ್ಲ. ಉದಾಹರಣೆಗೆ ತೆರೆಕಟ್ಟುವ ಆಚರಣೆಯ ಕೊನೆಯ ಹಂತವಾಗಿ ನಡೆಯುವ ಬಲಿ ಸಮರ್ಪಣೆಯ ವಿಧಿಯಲ್ಲಿ ಹೆಂಗಸರ ಭಾಗವಹಿಸುವಿಕೆಯನ್ನು ನಿಷೇಧಿಸಲಾಗಿದೆ. ಬಲಿಯನ್ನು ನೀಡುವ ಸ್ಥಳ ಕಡಿಯಕಳಕ್ಕೆ ಮಹಿಳೆಯರ ಪ್ರವೇಶ ನಿಷಿದ್ಧವಾಗಿರುತ್ತದೆ. ಈ ರೀತಿಯ ನಿಷೇಧಗಳಿಗೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಪುರುಷರಷ್ಟು ಬಲಾಢ್ಯರಲ್ಲದ ಸ್ತ್ರೀಯರು ಇಂತಹ ವಿಧಿವಿಧಾನಗಳಿಂದ ಭಯಭೀತರಾಗಬಹುದು ಎಂಬ ಕಾರಣವನ್ನು ಹಿರಿಯರು ನೀಡುತ್ತಾರೆ.

**ಕೊನೆ ಟಿಪ್ಪಣಿ:**

೧. ಮುಲ್ಲೇಂಗಡ ಬೇಬಿ ಚೋಂದಮ್ಮ, ವಯಸ್ಸು ೭೫, ನಿ.ಶಿಕ್ಷಕಿ, ಎರಡನೇ ರುದ್ರುಗುಪ್ಪೆ.
೨. ಬೀಕಚಂಡ ಎಂ. ಬಿದ್ದಪ್ಪ, ವಯಸ್ಸು ೭೦, ಕೆದಮುಳ್ಳೂರು ಗ್ರಾಮ
೩. ರೆವರೆಂಡ್ ಎಚ್. ಮೋಗ್ಲಿಂಗ್, 'ಕೂರ್ಗ್ ಮೆಮಾಯರ್ಸ್: ಆನ್ ಅಕೌಂಟ್ ಆಫ್ ಕೂರ್ಗ್, ಅಯಿಂಡ್ ಆಫ್ ದ ಕೂರ್ಗ್ ಮಿಷನ್, ೧೮೫೫, ಪು. ೬೩
೪. ಮಲಿಯರ ಚಂದ್ರ, ವಯಸ್ಸು ೬೮, ವಿರಾಪೇಟೆ
೫ ಅಮ್ಮಣಿಚಂಡ ರಾಜ ನಂಜಪ್ಪ, ವಯಸ್ಸು ೫೯, ಕದನೂರು ಗ್ರಾಮ, ಕೆ.

ಬೋಯಿಕೇರಿ ಅಂಚೆ

೬. ವಿವರಗಳಿಗೆ ನೋಡಿ ಕಾಟಿಲ್ ಅಯ್ಯಪ್ಪ ತೆರೆ.

೭. ಅಮ್ಮಣಿಚಂಡ ಪ್ರವೀಣ್ ಚಂಗಪ್ಪ, ವಯಸ್ಸು ೪೪, ಉಪನ್ಯಾಸಕರು, ವಿರಾಜಪೇಟೆ

೮. ಐಚೆಟ್ಟಿರ ಜೂಸಿ ಮಾದಪ್ಪ, ಐಚೆಟ್ಟಿರ ಕುಲದೇವಿ: ಶ್ರೀ ಪುದಿಯೋದಿ, ಐಚೆಟ್ಟಿರ ಹಾಕಿನಮ್ಮೆ ಸ್ಮರಣ ಸಂಚಿಕೆ, ೨೦೧೨, ಪು. ೩

೯. ಅದೇ, ಪು. ೪

೧೦. ಮಿನ್ನಂಡ ಲಾಲಾ ತಿಮ್ಮಯ್ಯ, ವಯಸ್ಸು ೫೦, ಶಿಕ್ಷಕರು, ಗಾಳಿಬೀಡು, ಮಡಿಕೇರಿ.

೧೧. ಎಂ. ಜಿ. ನಾಗರಾಜ್, ಕೊಡಗಿನ ಹಾಲೇರಿ ರಾಜವಂಶವು ಭಾಗ ೧, ೨೦೦೪, ಪು. ೨೮೩

೧೨. ಮುಲ್ಲೇಂಗಡ ಮಧೋಷ್ ಪೂವಯ್ಯ, ವಯಸ್ಸು ೪೩, ಸಂಪಾದಕರು, ತೂಕ್‌ಬೊಳಕ್ ವಾರಪತ್ರಿಕೆ, ೨ನೇ ರುದ್ರುಗುಪ್ಪೆ

೧೩. ಮಲಿಯರ ಕಿಟ್ಟಪ್ಪ, ವಯಸ್ಸು ೭೯, ಗಾಂಧಿನಗರ, ವಿರಾಜಪೇಟೆ.

೧೪. ಡಾ. ಅಮೃತ ಸೋಮೇಶ್ವರ, ತುಳುವ ಜಾನಪದ ಕೆಲವು ನೋಟಗಳು, ೨೦೦೭, ಪು. ೧೧೦

೧೫. ಡಾ. ಮೊಗಳ್ಳಿ ಗಣೇಶ್, ಅವ್ಯಕ್ತ ಚರಿತ್ರೆ, ೨೦೦೯, ಪು. ೧೮

೧೬. ಮಲೆಯರ ಕಿಟ್ಟಪ್ಪ, ವಯಸ್ಸು ೭೫, ಗಾಂಧಿನಗರ, ವಿರಾಜಪೇಟೆ

೧೭. ಎಂ. ಜಿ. ನಾಗರಾಜ್, ಕೊಡಗಿನ ಹಾಲೇರಿ ರಾಜವಂಶವು ಭಾಗ ೧, ೨೦೦೪, ಪು. ೩೨೮

೧೮. ಬೀಕಚಂಡ ಎಂ. ಬಿದ್ದಪ್ಪ, ವಯಸ್ಸು ೭೦, ಕೆದಮುಳ್ಳೂರು ಗ್ರಾಮ

೧೯. ಡಾ. ಅಮೃತ ಸೋಮೇಶ್ವರ, ತುಳುವ ಜಾನಪದ: ಕೆಲವು ನೋಟಗಳು, ೨೦೦೭, ಪು. ೬೯

೨೦. ಪಣಿಕಡ ಸಿ. ಕಿಷನ್, ವಯಸ್ಸು ೩೩, ಕುಟ್ಟಂದಿ ಗ್ರಾಮ ಮತ್ತು ಅಂಚೆ

೨೧. ಡಾ. ಬಿ. ಎಸ್. ಕುಲಕರ್ಣಿ(ಸಂ), ಸಮಯ ಪರೀಕ್ಷೆ, ೧೯೫೮, ಪು. ೨೦೩-೪.

೨೨. ಡಾ. ಎಲ್. ಬಸವರಾಜು(ಸಂ) ಬಸವಣ್ಣನವರ ವಚನಗಳು, ವಚನ ೮೩, ೧೯೭೨(ತೃತೀಯ ಸಂಸ್ಕರಣ), ಪು. ೬೮-೬೯

೨೩. ನಡಿಕೇರಿಯಂಡ ಚಿಣ್ಣಪ್ಪ, ಪಟ್ಟೋಲೆ ಪಳಮೆ, ೨೦೦೨(ನಾಲ್ಕನೆಯ ಮುದ್ರಣ), ಪು. ೧೨೩

೨೪. ಸಿದ್ಧಲಿಂಗಯ್ಯ, ಕೆಲವು ಆರಾಧನೆಗಳು ಮತ್ತು ಆಚರಣೆಗಳು, ಸುವರ್ಣ

ಜಾನಪದ(ಸಂಪುಟ- ೨), (ಪ್ರ. ಸಂ.) ಡಾ. ಎಚ್. ಜೆ. ಲಕ್ಕಪ್ಪಗೌಡ, ೧೯೯೮, ಪು. ೧೨೮

೨೫. ಡಾ. ಮೊಗಳ್ಳಿ ಗಣೇಶ್, ಆದಿಮ ಜಾನಪದ, ೨೦೧೪, ಪು. ೨೧೬

೨೬. ಡಾ. ಗಾಯತ್ರಿ ನಾವಡ, ಜನಪದ ಸಾಹಿತ್ಯದಲ್ಲಿ ಸ್ತ್ರೀಶಕ್ತಿ, ಜಾನಪದ ಕರ್ನಾಟಕ, (ಸಂ.) ಡಾ. ಸ. ಚಿ. ರಮೇಶ್, ೨೦೦೪, ಪು. ೧೨೨

೨೭. ನಡಿಕೇರಿಯಂಡ ಚಿಣ್ಣಪ್ಪ, ಪಟ್ಟೋಲೆ ಪಳಮೆ, ೨೦೦೨(ನಾಲ್ಕನೆಯ ಮುದ್ರಣ), ಪು. ೩೬೦

## ಅಧ್ಯಾಯ ೬

## ಕೊಡಗಿನ ತೆರೆ ಆಚರಣೆಗಳು ಮತ್ತು ಸ್ಥಿತ್ಯಂತರಗಳು

ಯಾವುದೇ ಪ್ರದೇಶದ ಜಾನಪದ ಅಲ್ಲಿನ ಜನಪದರ ಬದುಕಿನಲ್ಲಿ ಅಂತರ್ಗತವಾಗಿರುತ್ತದೆ. ಆದುದರಿಂದ ಆಯಾ ಪ್ರದೇಶದ ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ವಿಚಾರಗಳು ಅನನ್ಯವೂ ವಿಶಿಷ್ಟವೂ ಆಗಿರುತ್ತವೆ. ಜನಪದರ ಜಾನಪದವು ಸಾಮಾಜಿಕ ಬದುಕಿನ ವೈವಿಧ್ಯಮಯ ವಿಚಾರಗಳನ್ನು ತನ್ನಲ್ಲಿ ಹುದುಗಿಸಿಕೊಂಡು ಆಳದಲ್ಲಿ ಬೇರೂರಿರುತ್ತದೆ. ಆಚರಣೆಗಳು ಗತವನ್ನು ಅಂತರ್ಗತ ಮಾಡಿಕೊಂಡು ವರ್ತಮಾನದಲ್ಲಿ ಮುಂದುವರಿಯುತ್ತಿರುತ್ತವೆ.

ಪೂರ್ವದಲ್ಲಿ ಕೊಡಗಿನ ಸಾಮಾಜಿಕ ವ್ಯವಸ್ಥೆಯು ಒಕ್ಕ, ಊರು, ನಾಡು, ದೇಶ ಎಂಬ ಆಡಳಿತ ಘಟಕಗಳಾಗಿ ವಿಭಾಗಿಸಲ್ಪಟ್ಟಿತು. ಈ ವಿಭಜನೆಯಲ್ಲಿ 'ಒಕ್ಕ'ವು ಪುಟ್ಟ ಘಟಕ. ಇದರ ಮುಖ್ಯಸ್ಥ ಆಯಾ ಒಕ್ಕದ ಹಿರಿಯ ವ್ಯಕ್ತಿ. ಈತನನ್ನು ಕೊರವುಕಾರ ಅಥವಾ ಪಟ್ಟೆದಾರ ಎಂದು ಕರೆಯುತ್ತಿದ್ದರು. ನಂತರ ಊರು, ನಾಡು ಹಾಗೂ ದೇಶ. ಇವುಗಳಿಗೆ ಕ್ರಮವಾಗಿ ಊರ್ ತಕ್ಕ, ನಾಡ್ ತಕ್ಕ ಮತ್ತು ದೇಶತಕ್ಕರೆಂಬ ಮುಖ್ಯಸ್ಥರಿದ್ದರು. ಸಾಮಾನ್ಯವಾಗಿ ಈ ಮುಖ್ಯಸ್ಥರೆಲ್ಲಾ ಕೊಡಗಿನಲ್ಲಿ ಭೂಸ್ವಾಮ್ಯವನ್ನು ಹೊಂದಿದ್ದು ಸಾಮಾಜಿಕ ವ್ಯವಸ್ಥೆಯನ್ನು ನಿಯಂತ್ರಿಸುತ್ತಾ ಬಂದಿದ್ದಾರೆ. ಅಲ್ಲದೆ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸಿದ್ದಾರೆ. ಸಾಂಪ್ರದಾಯಿಕವಾಗಿ ಕೊಡಗು ೩೫ ನಾಡುಗಳು ಹಾಗೂ ೧೨ ಕೊಂಬುಗಳಾಗಿ ವಿಭಾಗಿಸಲ್ಪಟ್ಟಿತ್ತು. ಕೊಂಬು ಎಂದರೆ ಕಹಳೆ ಎಂದರ್ಥ. ಆದರೆ ಆಡಳಿತಾತ್ಮಕವಾಗಿ ಕೊಂಬು ಎಂದರೆ ಕಹಳೆಯನ್ನು ಊದಿದಾಗ ಅದರ ಶಬ್ದ ವ್ಯಾಪಿಸುವ ಪ್ರದೇಶ. ಹಲವು ಊರುಗಳು ಸೇರಿ ಒಂದು ನಾಡಾಗುತ್ತದೆ. ಕೊಡವ ಜನಪದಗೀತೆಗಳಲ್ಲಿ ಇವುಗಳ ಉಲ್ಲೇಖವಿದೆ. ಊರು ಎಂಬುದು ಒಂದೇ ಸಮುದಾಯದ ನೆಲೆಯಲ್ಲ. ಇಲ್ಲಿ ಹಲವು ಕೇರಿಗಳಿದ್ದು; ಬೇರೆ ಬೇರೆ ಸಮುದಾಯಗಳು ನೆಲೆಸಿರುತ್ತವೆ.

ತೆರೆಕಟ್ಟುವ ಆಚರಣೆಯನ್ನು ಒಂದು ಸಾಮಾಜಿಕ ಪದ್ಧತಿಯಾಗಿ

ರೂಪಿಸುವಲ್ಲಿ ಶ್ರೇಣೀಕೃತ ಸಮಾಜ, ಭೂಒಡೆತನ, ರಾಜಕೀಯ ಮತ್ತು ಆಡಳಿತಾತ್ಮಕ ಅಧಿಕಾರದಂತಹ ಅಂಶಗಳು ಪ್ರಮುಖ ಪಾತ್ರ ವಹಿಸಿವೆ. ಸಾಂಪ್ರದಾಯಿಕವಾದ ಸಾಮಾಜಿಕ ಮೌಲ್ಯಗಳು, ಕಟ್ಟುಕಟ್ಟಳೆಗಳು, ನಿರ್ಬಂಧಗಳನ್ನು ಚಾಚೂತಪ್ಪದೆ ಪಾಲಿಸುವಂತೆ ನೋಡಿಕೊಳ್ಳಲಾಗಿದೆ. ಹೀಗೆ ಸಾಮಾಜಿಕ ವ್ಯವಸ್ಥೆಯಾಗಿರುವ ತೆರೆಕಟ್ಟುವ ಆಚರಣೆಯಲ್ಲಿ ಸಹಜವಾಗಿ ಊಳಿಗಮಾನ್ಯ ಪದ್ಧತಿಯ ಅಂಶಗಳು, ಶ್ರೇಣಿಬದ್ಧ ವ್ಯವಸ್ಥೆ, ನಿಷೇಧಗಳಿದ್ದರೂ; ಸಮಾಜ ಸ್ವಾಸ್ಥ್ಯಕ್ಕೆ ಸಂಬಂಧಪಡುವ ಅನೇಕ ಅಂಶಗಳನ್ನು ನಿರ್ಲಕ್ಷಿಸುವಂತಿಲ್ಲ.

ಸಮಾಜದಲ್ಲಿ ಸಂಘ ಜೀವಿಯಾದ ಮನುಷ್ಯ ವಿವಿಧ ಸಮುದಾಯಗಳೊಂದಿಗೆ ಸಾಂಸ್ಕೃತಿಕ ಸಂಬಂಧಗಳನ್ನಿರಿಸಿಕೊಂಡು ಬಾಳುತ್ತಾನೆ. ಆಚರಣಾತ್ಮಕವಾಗಿ ಹೀಗೆ ಒಂದುಗೂಡಿದಾಗ ಒಂದು ರೀತಿಯ ಭಾವೈಕ್ಯತೆ ಮೂಡುತ್ತದೆ. ಇದನ್ನು ಕೊಡಗಿನ ತೆರೆಕಟ್ಟುವ ಆಚರಣೆಗಳಲ್ಲಿ ಕಾಣಬಹುದು. "ಜಾತೀಯತೆ, ಮತೀಯತೆಗಳನ್ನು ಮೀರಿದ ಒಂದು ಜನಪದ ಧರ್ಮವನ್ನು ನಾವು ಕೆಲವೊಮ್ಮೆ ಜಾನಪದಲೋಕದಲ್ಲಿ ಮಾತ್ರ ಗುರುತಿಸಬಹುದು. ಮತನಿಷ್ಠ ಕರ್ಮಠರೂ, ಧಾರ್ಮಿಕ ಸಿದ್ಧಾಂತಪಟುಗಳೂ ಸಾಮಾನ್ಯವಾಗಿ ಇಂಥ ವಿಚಾರಗಳನ್ನು ಕಾಣಲಾರರು ಹಾಗೂ ಇಷ್ಟಪಡಲಾರರು."[೧] ಎಂಬಂತೆ ತೆರೆಕಟ್ಟುವ ಆಚರಣೆಗಳಲ್ಲಿ ವಿಶಿಷ್ಟವಾದ ಕೋಮು ಸಾಮರಸ್ಯವನ್ನು ಕಾಣಬಹುದು. ತೆರೆಕಟ್ಟಿ ಆರಾಧಿಸಲ್ಪಡುವ ದೈವಗಳ ಕುರಿತ ಐತಿಹ್ಯ ಮತ್ತು ತೆರೆಹಾಡಿನ ಪ್ರಕಾರ ಕೆಲವು ದೈವಗಳು ಮಾನವ ವರ್ಗಕ್ಕೆ ಸೇರಿದವುಗಳು. ಇಲ್ಲಿ ತಳ ಸಮುದಾಯದಿಂದ ಮೇಲ್ವರ್ಗದವರೆನಿಸಿಕೊಂಡ ಮಾನವರೂ ದೈವತ್ವಕ್ಕೇರಿದ್ದಾರೆ. ನುಚ್ಚುಟೆ, ಕಾಳಿಪೊಲ್‌ತಿ, ದೈವಗಳು ತಳ ಸಮುದಾಯದಿಂದ ಬಂದವರು. ಅಜ್ಜಪ್ಪ ಕೊಡವ ಸಮುದಾಯಕ್ಕೆ ಸೇರಿದವನು. ಕುಟ್ಟಿಚಾತ ಬುಡಕಟ್ಟು ಮೂಲದವನು.

ತೆರೆಕಟ್ಟಿ ಆರಾಧಿಸಲ್ಪಡುವ ಬಹುತೇಕ ದೈವಗಳು ಗ್ರಾಮದೈವಗಳಾಗಿರುತ್ತವೆ. ಹಾಗಾಗಿ ಗ್ರಾಮಕ್ಕೆ ಸಂಬಂಧಪಟ್ಟ ತೆರೆಗಳಲ್ಲಿ ಆ ಗ್ರಾಮದ ಪ್ರತಿಯೊಂದು ವರ್ಗದ ವ್ಯಕ್ತಿಗಳು ಒಂದಲ್ಲ ಒಂದು ರೀತಿಯಲ್ಲಿ ಆ ಉತ್ಸವಕ್ಕೆ ಸಂಬಂಧಪಡುವಂತೆ ಸಮಾರಂಭವು ರೂಪುಗೊಂಡಿರುತ್ತದೆ. ದೈವಗಳ ವೇಷ ಧರಿಸಿ ಆವೇಶಗೊಳ್ಳುವುದು, ಭಂಡಾರ, ದೀಪಸೇವೆ, ಊಮೆ, ಮೇಲೇರಿಗೆ ಅಗ್ನಿಸ್ಪರ್ಶ ಮುಂತಾದ ಸೇವೆಗಳನ್ನು ನಿರ್ದಿಷ್ಟ ಸಮುದಾಯದ ವ್ಯಕ್ತಿಗಳು ನಿರ್ವಹಿಸುತ್ತಾರೆ. ಇಲ್ಲಿ ವಿವಿಧ ಸಮುದಾಯಗಳಿಗೆ ಸೇರಿದ ಪ್ರತಿನಿಧಿಗಳು ನಿರ್ವಹಿಸಬೇಕಾದ ಕರ್ತವ್ಯಗಳು ಪರಂಪರೆಯಿಂದ ನಿಗದಿಗೊಳಿಸಲ್ಪಟ್ಟಿರುತ್ತವೆ. ಕೊಡಗಿನ ಅರಪಟ್ಟು ಗ್ರಾಮದಲ್ಲಿ ನಡೆಯುವ ಚೌಂಡಿತೆರೆಯ ಬಗ್ಗೆ ಸ್ಥಳೀಯ ಮುಸ್ಲಿಂ ಸಮುದಾಯದವರಾದ ಮಾಪಿಳ್ಳೆಗಳಿಗೆ ವಿಶೇಷವಾದ ಭಕ್ತಿಯಿದೆ. ಹೀಗೆ

ಗ್ರಾಮದ ಎಲ್ಲಾ ವರ್ಗಗಳ ಪ್ರತಿನಿಧಿಗಳು ಒಂದೆಡೆ ಸೇರುವ ಈ ವ್ಯವಸ್ಥೆಯ ಹಿಂದೆ ಐಕ್ಯ ಮನೋಭಾವ, ಸಹಕಾರ ಪ್ರವೃತ್ತಿ, ತ್ಯಾಗ, ಸಾಮಾಜಿಕ ಕಾಳಜಿ, ಸಾಮೂಹಿಕ ಕ್ಷೇಮ ಚಿಂತನೆ ಮುಂತಾದ ಮೌಲ್ಯಗಳು ಕಾರ್ಯ ನಿರ್ವಹಿಸಿವೆ. ತೆರೆ ಆಚರಣೆಯ ಸಂದರ್ಭದಲ್ಲಿ ದೈವಗಳು ಅನುವಾದ ಕೊಡುವ ಸಂದರ್ಭ ಪ್ರಮುಖವಾದುದು. ಇಲ್ಲಿ ಜನಪದರು ತಮ್ಮ ಸಂಕಷ್ಟಗಳನ್ನು ದೈವದೊಂದಿಗೆ ನೇರವಾಗಿ ಹೇಳಿಕೊಂಡು ಅವುಗಳಿಗೆ ಪರಿಹಾರವನ್ನು ಪಡೆದುಕೊಳ್ಳುತ್ತಾರೆ. ಆಸ್ತಿ ಮತ್ತು ಹಣಕಾಸಿಗೆ ಸಂಬಂಧಿಸಿದ ಕಲಹಗಳು, ಭೂಮಿಯ ಒಡೆತನಕ್ಕೆ ಸಂಬಂಧಿಸಿದಂತೆ ಉದ್ಭವಿಸಿದ ಸಮಸ್ಯೆಗಳು, ಬೆಲೆಬಾಳುವ ವಸ್ತುಗಳು ಕಳ್ಳತನವಾದಾಗ ಪತ್ತೆ ಹಚ್ಚಲು, ಸಾಲ ನೀಡಿದ್ದು ಮರಳಿ ಸಿಗದಿದ್ದಾಗ ದೊರಕಿಸಿಕೊಡುವುದು ಮುಂತಾದ ವಿಚಾರಗಳಿಗೆ ಸಂಬಂಧಿಸಿದಂತೆ ದೈವವು ನ್ಯಾಯಾಧೀಶನಂತೆ ಸಲಹೆ ಸೂಚನೆಯನ್ನು ನೀಡಿ ಸಮಸ್ಯೆಗಳನ್ನು ಇತ್ಯರ್ಥಗೊಳಿಸಲಾಗುತ್ತದೆ. ಅಪವಾದಗಳು ಬಂದಾಗ ಜನರು ಅದರ ನಿವಾರಣೆಗಾಗಿ ಹರಕೆ ಹೊತ್ತುಕೊಂಡು ಸಲ್ಲಿಸುವುದು ವಾಡಿಕೆ.

ಗ್ರಾಮದಲ್ಲಿ ಸಾರ್ವತ್ರಿಕವಾಗಿ ಕಾಣಿಸಿಕೊಳ್ಳುವ ಕಾಯಿಲೆಗಳು, ಮಾಟ ಮಂತ್ರ, ಕೈವಿಷ ಹಾಕುವುದು ಇತ್ಯಾದಿಗಳಿಂದ ಉಂಟಾದ ಕಾಯಿಲೆಗಳು, ಮಾನಸಿಕ ಮತ್ತು ದೈಹಿಕ ಕಾಯಿಲೆಗಳಿಗೆ ದೈವಗಳು ವೈದ್ಯರಂತೆ ಚಿಕಿತ್ಸೆಯನ್ನು ನೀಡುತ್ತವೆ. ಇದರ ಭಾಗವಾಗಿ ಕೂಳಿ ಬುಡ್ ತ್‌ವೊ(ಪ್ರೇತ ಬಿಡಿಸುವ) ವಿಧಿಯು ನಡೆಯುತ್ತದೆ. ಸಾಮಾನ್ಯವಾಗಿ ಇದು ಒಕ್ಕತೆರೆಗಳಲ್ಲಿ ನಡೆಯುತ್ತದೆ. ದುಷ್ಟ ಶಕ್ತಿಯು ವ್ಯಕ್ತಿಯೊಬ್ಬನ ದೇಹದಲ್ಲಿ ಸೇರಿಕೊಂಡು ದೈಹಿಕ ಮತ್ತು ಮಾನಸಿಕ ಕಾಯಿಲೆಗಳನ್ನು ಉಂಟುಮಾಡುತ್ತದೆ ಎಂಬ ನಂಬಿಕೆ ಜನಪದರಲ್ಲಿದೆ. ಜನಸಾಮಾನ್ಯರ ಕಣ್ಣಿಗೆ ಗೋಚರಿಸದ ಇವುಗಳನ್ನು ಗುರುತಿಸಿ ಉಚ್ಚಾಟಿಸುವ ಶಕ್ತಿ ಅಲೌಕಿಕವಾದ ದೈವಗಳಿಗೆ ಇದೆ ಎಂದು ಭಾವಿಸುತ್ತಾರೆ.

ಪ್ರೇತದ ಭಾದೆಗೊಳಗಾದ ವ್ಯಕ್ತಿಯನ್ನು ಸ್ನಾನಮಾಡಿಸಿ ಮಡಿಬಟ್ಟೆಯನ್ನು ತೊಡಿಸಿ ದೈವಗಳ ಎದುರು ನಿಲ್ಲಿಸುತ್ತಾರೆ. ಆತನ ಕುಟುಂಬದ ಸದಸ್ಯರು ಸಮೀಪದಲ್ಲೇ ನಿಂತಿರುತ್ತಾರೆ. ಸಿದ್ಧಗೊಂಡ ತೆರೆಕಾರನು ಕೈಯಲ್ಲಿ ಆಯುಧವನ್ನು ಹಿಡಿದು ಒಕ್ಕದ ಮುಖ್ಯಸ್ಥನನ್ನು ಕರೆದು ಪ್ರೇತ ಬಿಡಿಸುವ ವಿಧಿಯ ಪ್ರಾರಂಭಕ್ಕೆ ಅನುಮತಿ ಕೇಳುತ್ತಾನೆ. ಚಂಡೆಯ ಪ್ರಚಂಡ ಹಿಮ್ಮೇಳದ ಹಿನ್ನೆಲೆಯಲ್ಲಿ ತೆರೆಕಾರನು ಆವೇಷಗೊಂಡು ಆಯುಧವನ್ನು ರೋಗಿಯ ತಲೆಗೆ ಮುಟ್ಟಿಸುವುದು, ತನ್ನ ಕೈಯಲ್ಲಿರುವ ಚೌರಿಯಿಂದ ತಲೆಗೆ ಹೊಡೆಯುವುದು, ಕಾಯಿಲೆಯ ವ್ಯಕ್ತಿಗೆ ತನ್ನ ಮುಖವನ್ನೇ ನೋಡುವಂತೆ ಹೇಳುವುದು, ಅಕ್ಕಿಯನ್ನು ಹಾಕುವುದು ಮಾಡುತ್ತಾನೆ. ಈ ಸಂದರ್ಭದಲ್ಲಿ ಮಾನಸಿಕ ಸ್ವಾಸ್ಥ್ಯವನ್ನು ಕಳೆದುಕೊಂಡ

ವ್ಯಕ್ತಿಯು ಆವೇಶಗೊಂಡು ವರ್ತಿಸುವನು. ತೆರೆಕಾರನು ಮತ್ತೊಮ್ಮೆ ಮೇಲಿನ ಕ್ರಿಯೆಗಳನ್ನು ಪುನರಾವರ್ತಿಸುತ್ತಾ ವ್ಯಕ್ತಿಯ ಮನಸ್ಸಿನ ಸುಪ್ತ ಭಾವನೆಗಳನ್ನು ಹೊರತೆಗೆಯಲು ಪ್ರಯತ್ನಿಸಲಾಗುತ್ತದೆ. ರೋಗಿಯು ಮಾತನಾಡಲಾರಂಭಿಸುತ್ತಾನೆ. ಇದನ್ನು 'ಕೂಳಿ ಬಾಯಿ ಬುಟ್ಟತ್'(ಪ್ರೇತ ಬಾಯಿ ಬಿಟ್ಟಿತು) ಎನ್ನುತ್ತಾರೆ. ರೋಗಿಯ ದೇಹದಲ್ಲಿದ್ದ ಪ್ರೇತವು ತನ್ನ ವಶವಾಗಿದೆ ಇನ್ನು ಚಿಂತಿಸಬೇಕಾಗಿಲ್ಲ ಎಂದು ದೈವವು ಅಭಯ ನೀಡುತ್ತದೆ.

ತೆರೆಕಾರರು ಜನಪದ ವೈದ್ಯ ಪದ್ಧತಿಯನ್ನು ಅರಿತುಕೊಂಡು ಹಲವು ಕಾಯಿಲೆಗಳಿಗೆ ನಾಟಿ ಔಷಧಿಯನ್ನು ನೀಡುವರು. ಇದು ಕೂಳಿ ಬುಡುತ್‌ವೊ ವಿಧಿಯಲ್ಲಿ ಅವರಿಗೆ ಸಹಾಯಕವಾಗಿರುತ್ತದೆ. ರೋಗಿಯ ಮಾನಸಿಕ ಸ್ಥಿತಿಯನ್ನು ಅರಿತುಕೊಂಡು ಅವನಲ್ಲಿ ಭಯವನ್ನು ಉಂಟುಮಾಡಿ ಭಾವನೆಗಳನ್ನು ಹೊರಬರಿಸುತ್ತಾನೆ. ಆ ಮೂಲಕ ರೋಗಿಯನ್ನು ಮಾತನಾಡಿಸಿ ಅಂತಿಮವಾಗಿ ಕಾಯಿಲೆಗೆ ಕಾರಣವಾದ ಪ್ರೇತವು ದೈವದ ವಶವಾಯಿತು ಎಂಬ ನಂಬಿಕೆಯನ್ನು ಹುಟ್ಟಿಸುತ್ತಾನೆ. ಪರಂಪರಾಗತವಾಗಿ ನಿರ್ದಿಷ್ಟ ಸಮುದಾಯದ ತೆರೆಕಾರನೇ ತೆರೆಯನ್ನು ಕಟ್ಟುವುದರಿಂದ ರೋಗಿಯ ಕೌಟುಂಬಿಕ ವಿಚಾರಗಳ ಅರಿವು ಆತನಿಗಿರುತ್ತದೆ. ಈ ಎಲ್ಲಾ ಜ್ಞಾನಗಳು ತೆರೆಕಾರನಿಗೆ ಚಿಕಿತ್ಸೆಯ ಹಿನ್ನೆಲೆಯಾಗಿ ಕಾರ್ಯ ನಿರ್ವಹಿಸುತ್ತವೆ. ಹೀಗೆ ಕೂಳಿ ಬುಡ್‌ತ್‌ವೊ ವಿಧಿಯಲ್ಲಿನ ಕ್ರಿಯಾತ್ಮಕ ವಿಧಿವಿಧಾನಗಳು ಮಾನಸಿಕ ಚಿಕಿತ್ಸೆಯ ಆಶಯಗಳನ್ನು ಹೊಂದಿದ್ದು ಚಿಕಿತ್ಸಾ ಪದ್ಧತಿಯಾಗಿ ರೂಪುಗೊಂಡಿದೆ.

ಜನಪದರು ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಆಚರಿಸಿ ರೂಢಿಸಿಕೊಂಡು ಬರುತ್ತಿರುವ ಆಚರಣೆಗಳಲ್ಲಿ ಸ್ಥಿತ್ಯಂತರಗಳು ಕಾಲದ ಹೊಡೆತಕ್ಕೆ ಸಿಲುಕಿ ಘಟಿಸುತ್ತಿವೆ. ಆಧುನೀಕರಣ, ಯಾಂತ್ರೀಕರಣ ಹಾಗೂ ಜಾಗತೀಕರಣಗಳು ಮಾನವನ ಬದುಕಿನಲ್ಲಿ ಮಹತ್ತರ ಬದಲಾವಣೆಗಳನ್ನು ತಂದಿವೆ. ಆಧುನೀಕತೆ ಹಾಗೂ ನಾಗರೀಕತೆಯ ಪರಿಕಲ್ಪನೆಗಳು ಜನಪದರ ಆಚರಣೆಗಳನ್ನು ಸಡಿಲಗೊಳಿಸುತ್ತಿವೆ. ಅಲ್ಲದೆ ಕೊಡಗಿನ ತೆರೆಕಟ್ಟುವ ಆಚರಣೆಗಳು ವರ್ತಮಾನದ ಪಲ್ಲಟಗಳಿಗೆ ಸಿಲುಕಿ ಸ್ಥಿತ್ಯಂತರಗೊಳ್ಳುತ್ತಿವೆ. "ಜನಪದರು ದಿನನಿತ್ಯದ ಬದುಕಿನ ಜಂಜಾಟದಲ್ಲಿ ಜಾಗತೀಕರಣದ ಪ್ರಜ್ಞೆಯತ್ತ ತಮ್ಮನ್ನು ತೊಡಗಿಸಿಕೊಂಡಿರುವುದಿಲ್ಲ. ಮುಗ್ಧತೆಯ ಬದುಕಿನಲ್ಲಿ ಜನಪದರು ದಿನಗಳನ್ನು ಸ್ವಾಗತಿಸುತ್ತಾರೆ. ಒಟ್ಟಾರೆಯಾಗಿ ಕಾರಣಗಳ ಕಲ್ಪನೆ ಹಳ್ಳಿಯಲ್ಲಿರುವವರಿಗೆ ಅರಿವಿಗೆ ಬರುವುದಿಲ್ಲ. ಗೊತ್ತಿಲ್ಲದಂತೆಯೇ ಜಾಗತೀಕರಣದ ಬಲೆಯೊಳಗೆ ನುಸುಳಿಕೊಂಡಿರುವರು. ಈ ಆಧುನಿಕತೆಗೆ, ಜಾಗತೀಕರಣಕ್ಕೆ ಒಳಗಾಗದ ಯಾವುದೇ ಜನಪದರ ಹಬ್ಬ, ಜಾತ್ರೆ, ಉತ್ಸವ ಆಚರಣೆಗಳು ಇರಲಾರವು."[೨] ಎಂಬ ಅಭಿಪ್ರಾಯದಂತೆ ಕೊಡಗಿನ ಜನಪದರು

ತಮಗೆ ಅರಿವಿಲ್ಲದಂತೆಯೇ ಆಧುನಿಕರಣ ಮತ್ತು ಜಾಗತೀಕರಣದ ಪರಿಧಿಯೊಳಗೆ ಸೇರಿಕೊಂಡಿದ್ದಾರೆ. ಇದರಿಂದಾಗಿ ಜಾನಪದದ ಪ್ರಮುಖ ಭಾಗವಾದ ತೆರೆಕಟ್ಟುವ ಆಚರಣೆಯು ತನ್ನ ಬಾಹ್ಯ ಮತ್ತು ಆಂತರಿಕ ಸ್ವರೂಪಗಳಲ್ಲಿ ಗಣನೀಯ ಬದಲಾವಣೆಗೆ ಒಳಗಾಗುತ್ತಿದೆ. ತೆರೆಕಟ್ಟುವ ಆಚರಣೆಯ ಆಂತರಿಕ ಅಂಶಗಳಾದ ನ್ಯಾಯ ತೀರ್ಮಾನ, ಐಕ್ಯತಾ ಭಾವನೆಯ ಪ್ರತಿಪಾದನೆ ಹಾಗೂ ಧಾರ್ಮಿಕತೆಯಂತಹ ಪರಿಕಲ್ಪನೆಗಳು ಇಂದು ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಪೂರ್ವದಲ್ಲಿ ಕೌಟುಂಬಿಕ ಹಾಗೂ ಸಾಮುದಾಯಿಕ ವಿವಾದಗಳು ತೆರೆಕಟ್ಟುವ ಆಚರಣೆಯ ಸಂದರ್ಭದಲ್ಲಿ ಇತ್ಯರ್ಥಗೊಳ್ಳುತ್ತಿದ್ದವು. ಆದರೆ ವರ್ತಮಾನಕಾಲದಲ್ಲಿ ವಿವಾದಗಳೆಲ್ಲಾ ನ್ಯಾಯಾಲಯಗಳಲ್ಲಿ ಇತ್ಯರ್ಥಗೊಳ್ಳುತ್ತವೆ. ಅಲ್ಲದೆ ತೆರೆಕಟ್ಟುವ ಆಚರಣೆಯ ಸಂದರ್ಭದಲ್ಲಿ ದೈವಗಳ ಮುಂದೆ ಇತ್ಯರ್ಥಗೊಳಿಸಲು ವಿವಾದಗಳೇ ಇರುವುದಿಲ್ಲ. ಇದ್ದರೂ ಯುವ ಸಮೂಹಕ್ಕೆ ದೈವವು ನಡೆಸುವ ನ್ಯಾಯತೀರ್ಮಾನದಲ್ಲಿ ನಂಬಿಕೆಯೂ ಇಲ್ಲವಾಗಿದೆ. ನ್ಯಾಯಾಲಯದಲ್ಲಿ ಬಗೆಹರಿಯುವ ವಿವಾದಗಳಾದರೆ ದೈವವು ಅದನ್ನು ಎತ್ತಿಕೊಳ್ಳದೆ ನ್ಯಾಯಾಲಯವನ್ನು ಸಂಪರ್ಕಿಸುವಂತೆ ಹೇಳುತ್ತದೆ.

ತೆರೆಕಟ್ಟುವ ಆಚರಣೆಯು ಜಾತಿ ಆಧಾರಿತ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯ ಅಂಗವಾಗಿದೆ. ಜಾತಿನಿಷ್ಟ ಹಾಗೂ ಧರ್ಮನಿಷ್ಠವಾದ ಐಕ್ಯತೆಯ ಪ್ರತಿಪಾದನೆಯಲ್ಲಿ ವಿರೋಧಾಭಾಸಗಳು ಇವೆ. ಈ ಹಿನ್ನೆಲೆಯಲ್ಲಿ ಐಕ್ಯ ಪ್ರತಿಪಾದನೆಯ ಪರಿಕಲ್ಪನೆಯ ಬಗ್ಗೆ ಇಂದು ಚರ್ಚೆಗಳು ನಡೆಯುತ್ತಿವೆ. ದೇವರು, ಧರ್ಮದ ಹೆಸರಿನಲ್ಲಿ ನಡೆಯುತ್ತಾ ಬಂದಿರುವ ವ್ಯಾಪಾರೀಕರಣವು ಖಂಡಿಸಲ್ಪಡುತ್ತಿರುವ ಈ ಸಂದರ್ಭದಲ್ಲಿ ತೆರೆಕಟ್ಟುವ ಆಚರಣೆಗಳು ಟೀಕೆಗೆ ಒಳಗಾಗುತ್ತಿವೆ.

ತೆರೆಕಟ್ಟುವ ಆಚರಣೆಗಳಲ್ಲಿ ಧಾರ್ಮಿಕತೆಯ ಪರಿಕಲ್ಪನೆ ಮಹತ್ವವನ್ನು ಕಳೆದುಕೊಳ್ಳುತ್ತಿದೆ. "ಕೆಲವು ಸಂದರ್ಭಗಳಲ್ಲಿ ತೆರೆಕಾರರು ಮದ್ಯಕ್ಕಾಗಿ ಪೀಡಿಸುವುದು, ಹೆಚ್ಚಿನ ಮದ್ಯ ಸೇವನೆಯಿಂದ ಕಾಟಾಚಾರಕ್ಕಾಗಿ ತೆರೆಕಟ್ಟುವುದೂ ನಡೆಯುತ್ತದೆ. ಇಂತಹ ಕಾರಣಗಳಿಂದ ಕೆಲವು ಕುಟುಂಬಗಳು ತೆರೆಕಟ್ಟುವ ಆಚರಣೆಯನ್ನು ನಿಲ್ಲಿಸಿ ವಾರ್ಷಿಕವಾಗಿ ದೈವಗಳಿಗೆ ಬಲಿ ನೀಡುವುದಕ್ಕೆ ಆಚರಣೆಯನ್ನು ಸೀಮಿತಗೊಳಿಸಿದ್ದಾರೆ."[೩] ಕೆಲವು ಗ್ರಾಮಗಳಲ್ಲಿ ಆಯಾ ಗ್ರಾಮದಲ್ಲಿ ನೆಲೆಸಿರುವ ಊಮೆಕಾರ ತೆರೆಕಾರರು ಗ್ರಾಮದ ಹಾಗೂ ಗ್ರಾಮದಲ್ಲಿರುವ ಕುಟುಂಬಗಳ ತೆರೆಗಳನ್ನು ಕಟ್ಟಬೇಕಾಗಿರುತ್ತದೆ. ಊಮೆ ತೆರೆಗಳಾದುದರಿಂದ ತೆರೆಕಾರರು ಕನಿಷ್ಟ ಸಂಭಾವನೆಯನ್ನು ಪಡೆಯುತ್ತಾರೆ. ಪೂರ್ವದಲ್ಲಿ ತೆರೆಕಾರರು ತಮ್ಮ ಜೀವನಕ್ಕೆ ಆಧಾರವಾಗಿದ್ದ ಭೂಮಿಯನ್ನು ಮಿತಿಯಿಲ್ಲದ ಕುಡಿತ ಹಾಗೂ

ಬಡತನದಿಂದ ಸಣ್ಣ ಮೊತ್ತಕ್ಕೆ ಮಾರಿಕೊಂಡಿದ್ದಾರೆ. ಹಾಗಾಗಿ ತೆರೆ ಕಟ್ಟಿಸುವವರು ನೀಡುವ ಪರಂಪರಾನುಗತವಾಗಿ ನಿಗದಿಪಡಿಸಿದ ಅಲ್ಪ ಮೊತ್ತವು ತೆರೆಕಾರರ ಜೀವನ ನಿರ್ವಹಣೆಗೆ ಸಾಕಾಗುತ್ತಿಲ್ಲ. ಈ ಕಾರಣದಿಂದ ಗ್ರಾಮಸ್ಥರು ಹಾಗೂ ತೆರೆಕಾರರ ನಡುವೆ ಭಿನ್ನಾಭಿಪ್ರಾಯಗಳು ಉಂಟಾಗುತ್ತಿವೆ. ಇಂತಹ ಸಮಸ್ಯೆಗಳಿಂದಾಗಿ ತೆರೆ ಕಟ್ಟಿಸುವವರು ಊರಿನ ತೆರೆಕಾರರನ್ನು ಬಿಟ್ಟು ಇತರ ಗ್ರಾಮಗಳಲ್ಲಿ ನೆಲೆಸಿರುವ ಅಥವಾ ನೆರೆರಾಜ್ಯ ಕೇರಳದಿಂದ ತೆರೆಕಾರರನ್ನು ಕರೆಸಿ ತೆರೆಕಟ್ಟಿಸುವುದೂ ನಡೆಯುತ್ತಿದೆ.

ಪೂರ್ವದಲ್ಲಿ ತೆರೆಕಟ್ಟುವ ಆಚರಣೆಯು ಕೃಷಿಸಂಸ್ಕೃತಿಯ ಭಾಗವಾಗಿ ನಡೆಯುತ್ತಿತ್ತು. ಇಂದು ಬತ್ತದ ಗದ್ದೆಗಳು ನಿವೇಶನಗಳಾಗಿ ಪರಿವರ್ತನೆಯಾಗುತ್ತಿವೆ. ಪ್ರವಾಸೋದ್ಯಮದ ಭಾಗವಾಗಿ ತಲೆಎತ್ತಿರುವ ಹೋಂಸ್ಟೇ, ರೆಸಾರ್ಟ್‌ಗಳು ಜನರ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಸಹಕಾರಿಯಾದರೂ; ಸ್ಥಳೀಯ ಸಂಸ್ಕೃತಿ ಹಾಗೂ ಪರಿಸರದ ಮೇಲೆ ಗಂಭೀರ ದುಷ್ಪರಿಣಾಮವನ್ನು ಉಂಟುಮಾಡುತ್ತಿದೆ. ಇದು ತೆರೆಕಟ್ಟುವ ಆಚರಣೆಯ ಮೇಲೂ ಪ್ರಭಾವ ಬೀರಿದೆ. ವರ್ತಮಾನದ ತೆರೆಗಳು ವಾಣಿಜ್ಯೋದ್ಯಮದಿಂದ ಬರುವ ಹಣವನ್ನು ಅವಲಂಭಿಸಿರುವುದರಿಂದ ಅದರ ಸ್ವರೂಪವು ಇಂದು ಹೆಚ್ಚು ವೈಭವಪೂರ್ಣವಾಗಿರುವಂತೆ ಗೋಚರಿಸುತ್ತದೆ. ಅಂದವಾದ ಆಮಂತ್ರಣ ಪತ್ರಿಕೆಗಳನ್ನು ಮುದ್ರಿಸಿ ಹಂಚುವುದು, ಆಕರ್ಷಕ ಫ್ಲೆಕ್ಸ್ ಮತ್ತು ಬ್ಯಾನರ್‌ಗಳನ್ನು ಹಾಕುವುದು ಕಂಡುಬರುತ್ತದೆ. ಪತ್ರಿಕೆಗಳಲ್ಲಿ, ಸ್ಥಳೀಯ ಆಕಾಶವಾಣಿಯಲ್ಲಿ ತೆರೆಕಟ್ಟುವ ಆಚರಣೆಯ ಆಮಂತ್ರಣದ ಜಾಹೀರಾತುಗಳು ಕಂಡುಬರುತ್ತವೆ.

ತೆರೆ ದೈವಗಳ ನೆಲೆಯಾದ ಕೋಟಗಳು ಆಧುನೀಕರಣಗೊಳ್ಳುತ್ತಿವೆ. ಕೋಟಗಳ ಜೀರ್ಣೋದ್ಧಾರ ಕಾರ್ಯಗಳು ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿವೆ. ಈ ಸಂದರ್ಭಗಳಲ್ಲಿ ಆಧುನಿಕತೆಯ ಪ್ರಭಾವವನ್ನು ಗಮನಿಸಬಹುದು. ಕೋಟಗಳ ಸಾಂಪ್ರದಾಯಿಕ ಆಕಾರ ಮತ್ತು ವಿನ್ಯಾಸಗಳು ಮರೆಯಾಗುತ್ತಿವೆ. ಇವು ಕ್ರಮೇಣವಾಗಿ ದೇವಾಲಯಗಳ ವಿನ್ಯಾಸವನ್ನು ಹೋಲುತ್ತಿವೆ. ಆಕರ್ಷಕ ವಿನ್ಯಾಸದ ಕಾಂಕ್ರೀಟ್ ಕಟ್ಟಡ, ದೈವದ ಸುಂದರ ಮೂರ್ತಿ, ವಿದ್ಯುತ್ ದೀಪಗಳ ಅಲಂಕಾರ, ಧ್ವನಿ ವರ್ಧಕಗಳು, ವಿವಿಧ ಬಗೆಯ ಅಂಗಡಿ ಮಳಿಗೆಗಳು ದೈವಗಳ ಕೋಟಗಳಿಗೆ ಆಧುನಿಕತೆಯ ಮೆರಗನ್ನು ನೀಡುವಲ್ಲಿ ಸಫಲವಾಗಿವೆ. ಹಾಲು ಒಸರುವ ಮರದಡಿಯಲ್ಲಿ ಯಾವುದೇ ನಿರ್ದಿಷ್ಟ ಆಕಾರವಿಲ್ಲದೆ ಕಲ್ಲಿನ ರೂಪದಲ್ಲಿದ್ದ ತೆರೆದೈವಗಳು ವೈದಿಕ ಸಂಸ್ಕೃತಿಯ ಪ್ರಭಾವದಿಂದ ಇಂದು ಸುಂದರ ಮೂರ್ತಿಗಳಾಗಿವೆ. ಈ ಮೂರ್ತಿಗಳು ದೇವಾಲಯದಲ್ಲಿ ವೈದಿಕ ಸಂಪ್ರದಾಯದಂತೆ ಅಷ್ಟಬಂಧ ಬ್ರಹ್ಮಕಲಶ ವಿಧಿಯ ಮೂಲಕ

ಪ್ರತಿಷ್ಠಾಪನೆಗೊಳ್ಳುತ್ತಿವೆ. ಪುರೋಹಿತರಿಂದ ವೈದಿಕ ವಿಧಿಯಲ್ಲಿ ಪೂಜಿಸಲ್ಪಡುತ್ತಿವೆ. ಜನಪದ ದೈವ ಚೌಂಡಿ ಚಾಮುಂಡೇಶ್ವರಿಯಾಗಿ ರೂಪಾಂತರ ಹೊಂದಿದೆ. ವಿಷ್ಣುಮೂರ್ತಿಯು ಮಹಾವಿಷ್ಣುವಾಗಿ ದೇವಾಲಯದ ಒಳಗೆ ಪೂಜಿಸಲ್ಪಟ್ಟರೆ; ಹೊರ ಆವರಣದಲ್ಲಿ ಮೂಲ ವಿಷ್ಣುಮೂರ್ತಿಯಾಗಿ ಮೊಗ ಮತ್ತು ಆಯುಧಗಳ ರೂಪದಲ್ಲಿ ಆರಾಧನೆಗೊಳ್ಳುತ್ತಿದೆ. ಮೂಲತಃ ರಕ್ತತರ್ಪಣ ಬಯಸುತ್ತಿದ್ದ ದೈವಗಳು ಸಸ್ಯಾಹಾರಿಗಳಾಗಿ ಬದಲಾಗಿವೆ. ತೆರೆದೈವಗಳ ಮೂಲ ನೆಲೆಯಲ್ಲಿ ಬಲಿ ಆಚರಣೆಗಳು ನಡೆಯದೆ ಅವುಗಳು ದೇವಾಲಯದ ಹೊರ ಆವರಣಕ್ಕೆ ಸ್ಥಳಾಂತರಗೊಂಡಿವೆ.

ವರ್ತಮಾನ ಕಾಲದಲ್ಲಿ ತೆರೆ ಆಚರಣೆಯ ಸಾಂಸ್ಕೃತಿಕ ಹಾಗೂ ತಾಂತ್ರಿಕ ಸ್ವರೂಪದಲ್ಲಿ ಕೆಲವು ಬದಲಾವಣೆಗಳು ಉಂಟಾಗಿವೆ. ಆಚರಣೆಯ ಸಾಂಸ್ಕೃತಿಕ ಸ್ವರೂಪದಲ್ಲಿ ಪ್ರಮುಖವಾಗಿರುವ ಈ ಕೆಳಗಿನ ಅಂಶಗಳಲ್ಲಿ ಬದಲಾವಣೆಗಳು ಕಂಡುಬರುತ್ತವೆ.

೧. ತೆರೆಕಾರರ ವೇಷಭೂಷಣ
೨. ಪರಿಕರಗಳು
೩. ಬಣ್ಣಗಾರಿಕೆ
೪. ತೆರೆಹಾಡು
೫. ವಾದ್ಯಗಳು
೬. ತೆರೆಯ ಕುಣಿತ
೭. ಭಾಷಾ ಶೈಲಿ
೮. ದೀಪಾಲಂಕಾರ
೯. ತೆರೆಕಾರರ ಆರ್ಥಿಕ ಸ್ಥಿತಿಗತಿ

ಸಾಂಪ್ರದಾಯಿಕವಾಗಿ ತೆರೆಕಾರನ ವೇಷಭೂಷಣಗಳನ್ನು ನೈಸರ್ಗಿಕವಾಗಿ ದೊರೆಯುವ ವಸ್ತುಗಳಿಂದ ನಿರ್ಮಿಸಲಾಗುತ್ತದೆ. ಉಡುಗೆ ತೊಡುಗೆಗಳಲ್ಲಿ ತೆಂಗಿನ ಎಳೆಯ ಗರಿ, ನೈಸರ್ಗಿಕವಾಗಿ ದೊರೆಯುವ ಹೂವುಗಳು, ಅಡಿಕೆಯ ಹಾಳೆ ಹಾಗೂ ಬಿದಿರನ್ನು ಬಳಸುವುದು ವಾಡಿಕೆಯಾಗಿತ್ತು. ಅಜ್ಜಪ್ಪ ತೆರೆಯ ವೇಷಕ್ಕೆ ಮುಸುವ ಅಥವಾ ಆಡಿನ ಚರ್ಮದಿಂದ ಮೀಸೆ ತಯಾರಿಸಲಾಗುತ್ತಿತ್ತು. ಆದರೆ ಇಂದು ದೈವಗಳ ವೇಷಗಾರಿಕೆಯಲ್ಲಿ ಬದಲಾವಣೆಗಳಾಗಿವೆ. ವೇಷಭೂಷಣಗಳಲ್ಲಿ ವಿವಿಧ ರೀತಿಯ ಆಕರ್ಷಕ ಬಟ್ಟೆಗಳು, ಬೆಲೆಬಾಳುವ ಲೋಹದ ಆಭರಣಗಳು, ಮಾರುಕಟ್ಟೆಯಲ್ಲಿ ಸಿಗುವ ಕೃತಕ ಮೀಸೆಗಳನ್ನು ಕಾಣಬಹುದು. ಆಧುನಿಕ ಮನೋಭಾವದಿಂದಾಗಿ ತೆರೆಕಾರರು ಯಕ್ಷಗಾನ ಹಾಗೂ ನಾಟಕದ ವೇಷಭೂಷಣಗಳ ಅನುಕರಣೆ ಮಾಡುತ್ತಿದ್ದಾರೆ. ಪ್ಲಾಸ್ಟಿಕ್ಕಿನ ಕೃತಕ ಹೂವಿನ

ಹಾರ, ಆಧುನಿಕ ಆಭರಣಗಳನ್ನು ಅಲಂಕಾರ ಸಾಮಗ್ರಿಗಳನ್ನಾಗಿ ಬಳಸಲಾಗುತ್ತಿದೆ. ತೆರೆಯ ವಾದ್ಯ ಪರಿಕರಗಳು ಇಂದು ಬದಲಾಗುತ್ತಿವೆ. ಮರ, ಚರ್ಮವನ್ನು ಬಳಸಿ ತಯಾರಿಸುತ್ತಿದ್ದ ಚಂಡೆಗಳಲ್ಲಿ ಪ್ಲಾಸ್ಟಿಕ್‌ನ ಬಳಕೆ ಹೆಚ್ಚಾಗಿದೆ. ಹಿಂದೆ ತೆರೆಯ ಬಣ್ಣಗಾರಿಕೆಗೆ ಅರಸಿನ, ಕುಂಕುಮ, ಸುಣ್ಣ ಹಾಗೂ ಕಾಡಿಗೆಯನ್ನು ಬಳಸಲಾಗುತ್ತಿತ್ತು. ಇಂದು ಮಾರುಕಟ್ಟೆಯಲ್ಲಿ ದೊರೆಯುವ ಬಣ್ಣದ ಪುಡಿಗಳು ಅವುಗಳ ಸ್ಥಾನವನ್ನು ಆಕ್ರಮಿಸಿಕೊಂಡಿವೆ. ಸಾಂಪ್ರದಾಯಿಕ ಮುಖವರ್ಣಿಕೆಯ ಬದಲಾಗಿ ನಾಟಕೀಯ ರೀತಿಯ ಮುಖವರ್ಣಿಕೆಯನ್ನು ಮಾಡುತ್ತಾರೆ. ವೈಭವೀಕರಣ ಹಾಗೂ ಸುಧಾರಣೆಯ ಭ್ರಮೆಯಲ್ಲಿ ಆಚರಣೆಯ ಸಹಜ ಗಾಂಭೀರ್ಯ ಮತ್ತು ಕಲಾತ್ಮಕತೆಗೆ ಧಕ್ಕೆಯಾಗುತ್ತಿದೆ.

ವರ್ತಮಾನದ ತೆರೆಹಾಡುಗಳಲ್ಲಿ ಸ್ಪಷ್ಟತೆ, ಪರಿಪೂರ್ಣತೆಯ ಅಂಶಗಳು ಮರೆಯಾಗುತ್ತಿವೆ. ತೆರೆಕಾರರಲ್ಲಿ ತೆರೆಪಾಟ್‌ನ ಸಾಹಿತ್ಯಕ ಅಂಶಗಳ ಸ್ಪಷ್ಟ ಪರಿಜ್ಞಾನದ ಕೊರತೆಯಿದೆ. ಇದು ಯುವ ತೆರೆಕಾರರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ತೆರೆಕಟ್ಟುವ ಆಚರಣೆಯ ಸಂದರ್ಭದಲ್ಲಿ ಬಳಸುವ ವಾದ್ಯಗಳಲ್ಲೂ ಇಂದು ಹಲವು ಬದಲಾವಣೆಗಳು ಉಂಟಾಗಿವೆ. ಪೂರ್ವದಲ್ಲಿ ಕೇವಲ ಚಂಡೆ ಅಥವಾ ಮದ್ದಲೆಯನ್ನು ಬಳಸಲಾಗುತ್ತಿತ್ತು. ಇಂದು ಅದರೊಂದಿಗೆ ತಾಳ ಹಾಗೂ ವಿವಿಧ ರೀತಿಯ ಚಂಡೆ ವಾದ್ಯಗಳ ಬಳಕೆಯನ್ನು ಕಾಣಬಹುದು. ತೆರೆಯ ಕುಣಿತದ ಭಾಗದಲ್ಲಿಯೂ ಮಾರ್ಪಾಡುಗಳಾಗಿದ್ದು; ಆಧುನಿಕ ನೃತ್ಯದ ಪ್ರಭಾವ ಅಲ್ಲಲ್ಲಿ ಕಂಡುಬರುತ್ತವೆ. ಲಾಸ್ಯ ಹಾಗೂ ನಾಜೂಕಿನ ಹೆಜ್ಜೆಗಾರಿಕೆ ಪ್ರಮುಖವಾಗುತ್ತಿದೆ. ದೈವಗಳ ಸಂಭಾಷಣೆಯಲ್ಲಿ ಭಾಷಾ ಪ್ರೌಢಿಮೆ ಮರೆಯಾಗುತ್ತಿದೆ. ಮಾತುಕತೆಯ ಸಂದರ್ಭದಲ್ಲಿ ಅಲ್ಲಲ್ಲಿ ಆಂಗ್ಲ ಭಾಷೆಯ ಪದಗಳು ಇಣುಕುತ್ತಿವೆ.

ಸಾಮಾನ್ಯವಾಗಿ ತೆರೆ ಆಚರಣೆಗಳು ರಾತ್ರಿಯ ಹೊತ್ತು ನಡೆಯುವುದರಿಂದ ಬೆಳಕು ಅಗತ್ಯ. ಪೂರ್ವದಲ್ಲಿ ಹಣತೆ ಹಾಗೂ ದೊಂದಿಯ ಬೆಳಕಿನಲ್ಲಿ ಆಚರಣೆಗಳು ನಡೆಯುತ್ತಿದ್ದವು. ಇಂದು ಅವುಗಳ ಬದಲಾಗಿ ವಿದ್ಯುತ್ ದೀಪಾಲಂಕಾರವನ್ನು ಕಾಣಬಹುದು. ಮರ, ಮಾವಿನ ಸೊಪ್ಪು ಹಾಗೂ ತೆಂಗಿನ ಗರಿಗಳನ್ನು ಬಳಸಿ ನಿರ್ಮಿಸುತ್ತಿದ್ದ ಚಪ್ಪರಗಳ ಸ್ಥಾನವನ್ನು ಆಕರ್ಷಕ ಶಾಮಿಯಾನಗಳು ಆಕ್ರಮಿಸಿಕೊಂಡಿವೆ.

ಯುವ ಪೀಳಿಗೆಯ ತೆರೆಕಾರರು ಈ ವೃತ್ತಿಯನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲ. ಪ್ರಸ್ತುತ ದಿನಗಳಲ್ಲಿ ತೆರೆಕಟ್ಟುವ ಆಚರಣೆ ಹಾಗೂ ತೆರೆಕಾರರ ನಡುವಿನ ಸಂಬಂಧದಲ್ಲಿಯೂ ಕೆಲವು ಬದಲಾವಣೆಗಳಾಗಿವೆ. ಇಂದು ತೆರೆಕಾರರ ಆರ್ಥಿಕ ಸ್ಥಿತಿಗತಿಯು ಹಿಂದಿನ ಕಾಲಕ್ಕಿಂತ ಉತ್ತಮವಾಗಿದೆ. ವರ್ತಮಾನದಲ್ಲಿ ತೆರೆಕಾರರು ತೆರೆಯೊಂದಕ್ಕೆ ೫೦೦೦ ದಿಂದ ೮೦೦೦೦ ರೂಪಾಯಿಗಳ

ಸಂಭಾವನೆಯನ್ನು ಪಡೆಯುತ್ತಿದ್ದಾರೆ. ಈ ಸಂಭಾವನೆಯು ತೆರೆ ಆಚರಣೆ ನಡೆಯುವ ದಿನಗಳ ಸಂಖ್ಯೆ ಹಾಗೂ ತೆರೆಮುಡಿಗಳ ಗಾತ್ರದ ಆಧಾರದಲ್ಲಿ ನಿಗಧಿಗೊಳ್ಳುತ್ತದೆ. ಈ ಮೊತ್ತ ನಮಗೆ ಯಾವುದಕ್ಕೂ ಸಾಲದು. ಇದು ನಮ್ಮ ಕುಲಕಸುಬು ಎಂಬ ಕಾರಣದಿಂದ ಮಾಡುತ್ತೇವೆ. ಎಂದು ಅನುಭವೀ ತೆರೆಕಾರರು ತಮ್ಮ ಅಳಲನ್ನು ತೋಡಿಕೊಳ್ಳುತ್ತಾರೆ.

ತೆರೆಕಟ್ಟುವ ಕ್ರಿಯೆ ಒಬ್ಬನಿಂದ ನಡೆಯುವಂತಹದಲ್ಲ. ಇಲ್ಲಿ ದೈವದ ಮಾಧ್ಯಮವಾಗುವ ತೆರೆಕಾರನಷ್ಟೇ ಪ್ರಮುಖರಾದವರು ಅವನೊಂದಿಗಿರುವ ಆತನ ಸಹಾಯಕರು. ತೆರೆಕಟ್ಟುವವರ ಸಂಖ್ಯೆ ಕ್ಷೀಣಿಸಿರುವ ಈ ಸಂದರ್ಭದಲ್ಲಿ ಬೇರೆ ಊರುಗಳಲ್ಲಿ ನೆಲೆಸಿರುವ ತಮ್ಮ ಬಂಧುಗಳ ಸಹಕಾರವನ್ನು ಮುಖ್ಯ ತೆರೆಕಾರನು ಪಡೆದುಕೊಳ್ಳುತ್ತಾನೆ. ಅವರು ತೆರೆ ಆಚರಣೆಗೆ ಎರಡು ದಿನ ಮುಂಚಿತವಾಗಿಯೇ ತೆರೆಕಾರನ ಮನೆಗೆ ಆಗಮಿಸುತ್ತಾರೆ. ಹೀಗೆ ಬಂದ ದಿನದಿಂದ ತೆರೆ ಮುಗಿಯುವವರೆಗೆ ಅವರ ಊಟ ವಸತಿಯ ಖರ್ಚನ್ನು ನೋಡಿಕೊಳ್ಳುವ ಜವಾಬ್ದಾರಿ ಮುಖ್ಯ ತೆರೆಕಾರನದ್ದಾಗಿರುತ್ತದೆ. ತೆರೆ ಆಚರಣೆ ಮುಗಿದು ಅವರು ಮರಳುವಾಗ ಸಂಭಾವನೆಯನ್ನು ನೀಡಬೇಕಾಗುತ್ತದೆ. ಹಾಗಾಗಿ ದೊರಕುವ ಸಂಭಾವನೆ ಯಾವುದಕ್ಕೂ ಸಾಲುವುದಿಲ್ಲ ಎಂಬುದು ಅವರ ಅಭಿಪ್ರಾಯವಾಗಿದೆ. ಅಲ್ಲದೆ ಎಲ್ಲಾ ತೆರೆಗಳಿಗೂ ದೊಡ್ಡಮೊತ್ತದ ಸಂಭಾವನೆ ಸಿಗುವುದಿಲ್ಲ. ಊರಿನ ಊಮೆ ತೆರೆಗಳಾದರೆ ವಸ್ತು ರೂಪದಲ್ಲಿ ಅಥವಾ ಕನಿಷ್ಟ ಮೊತ್ತದ ಸಂಭಾವನೆ ಪಡೆಯುತ್ತಾರೆ. ಇದು ತೆರೆಕಾರರ ಆರ್ಥಿಕತೆಯ ಹಿನ್ನಡೆಗೆ ಕಾರಣವಾಗಿದೆ.

ಪೂರ್ವದಲ್ಲಿ ತೆರೆಕಟ್ಟುವ ಸಮುದಾಯಗಳು ತಮ್ಮ ವೃತ್ತಿಯನ್ನು ಸಾಂಪ್ರದಾಯಿಕವಾಗಿ ನಿರ್ವಹಿಸುತ್ತಾ ಬಂದಿರುವುದರಿಂದ ಪರ್ಯಾಯವಾದ ವೃತ್ತಿಗಳಲ್ಲಿ ತೊಡಗಿಕೊಂಡಿರುವವರ ಸಂಖ್ಯೆ ವಿರಳವಾಗಿತ್ತು. ವರ್ತಮಾನದಲ್ಲಿ ಈ ಸಮುದಾಯಗಳ ಮಕ್ಕಳು ಶಾಲೆಗೆ ಹೋಗಿ ಶಿಕ್ಷಿತರಾಗುತ್ತಿದ್ದಾರೆ. ಹಾಗಾಗಿ ಯುವಕರು ಸಾಂಪ್ರದಾಯಿಕ ಕಸುಬಾದ ತೆರೆಕಟ್ಟುವುದರೊಂದಿಗೆ ವಾಹನ ಚಾಲಕ, ಗ್ಯಾರೇಜ್ ಕಾರ್ಮಿಕ, ಬಸ್ ನಿರ್ವಾಹಕ ಇತ್ಯಾದಿ ವೃತ್ತಿಗಳನ್ನು ಮಾಡುತ್ತಿದ್ದಾರೆ. ತಮ್ಮ ಕಸುಬಿನ ಕುರಿತು ಸಂದಿಗ್ಧ ಭಾವನೆಯನ್ನು ಹೊಂದಿದ್ದಾರೆ. ಒಳ್ಳೆಯ ನೌಕರಿ ಹಾಗೂ ಆರ್ಥಿಕವಾಗಿ ಸ್ಥಿತಿವಂತರಾದ ಯುವ ಸಮೂಹ ತಮ್ಮ ಮೂಲ ವೃತ್ತಿ ತೆರೆಕಟ್ಟುವುದರ ಬಗ್ಗೆ ಹೇಳಿಕೊಳ್ಳಲು ಇಷ್ಟಪಡುವುದಿಲ್ಲ. ಅದರಲ್ಲೂ ಈ ಸಮುದಾಯದ ಹೆಣ್ಣುಮಕ್ಕಳಲ್ಲಿ ಇಂತಹ ಭಾವನೆ ಹೆಚ್ಚಾಗಿ ಕಂಡುಬರುತ್ತದೆ. ದೈವದ ವೇಷವನ್ನು ಹಾಕಿ ತೆರೆಕಟ್ಟುವುದರ ಬಗ್ಗೆ ಕೆಲವು ತೆರೆಕಾರರಿಗೆ ಸಾಮಾಜಿಕವಾಗಿ ಗೌರವ ಭಾವನೆ ಇದ್ದರೂ; ಆರ್ಥಿಕವಾಗಿ ಲಾಭದಾಯಕವಲ್ಲ ಎಂಬ ಅಸಮಾಧಾನವಿದೆ.

ತೆರೆಕಟ್ಟುವ ಆಚರಣೆಗಳ ತಾಂತ್ರಿಕ ಭಾಗದ ಮೇಲೆ ವೈದಿಕ ಸಂಸ್ಕೃತಿಯ ಪ್ರಭಾವ ದಟ್ಟವಾಗಿ ಆಗುತ್ತಿರುವುದು ಇತ್ತೀಚಿನ ಬೆಳವಣಿಗೆಯಾಗಿದೆ. ಪೂರ್ವದಲ್ಲಿ ಆಯಾ ಸಮುದಾಯದ ಜನರಿಂದ ಪೂಜಿಸಲ್ಪಡುತ್ತಿದ್ದ ದೈವಗಳು ಇಂದು ಪುರೋಹಿತರ ಪೂಜೆಯ ಮೂಲಕ ಆರಾಧನೆಗೊಳ್ಳುತ್ತಿವೆ. ತೆರೆಯ ಮುಖವಾಡಗಳು ಹಾಗೂ ಆಯುಧಗಳನ್ನು ಕುಂಕುಮಾರ್ಚನೆ, ಕರ್ಪೂರದಾರತಿ, ಮಂಗಳಾರತಿಯಂತಹ ವೈದಿಕ ಪೂಜಾವಿಧಿಗಳ ಮೂಲಕ ಅರ್ಚಕರು ಪೂಜಿಸುತ್ತಾರೆ. ಹೀಗೆ ವರ್ತಮಾನ ಕಾಲದಲ್ಲಿ ಜನಪದ ಸಂಸ್ಕೃತಿಯ ತೆರೆಕಟ್ಟುವ ಆಚರಣೆಗಳು ವೈದಿಕ ಸಂಸ್ಕೃತಿಯ ಭಾಗವಾಗಿ ಬದಲಾವಣೆಗೊಂಡಿವೆ.

ತೆರೆ ಕಟ್ಟುವ ಆಚರಣೆಯ ವೆಚ್ಚ, ದೈವಗಳ ಕೋಟಗಳು, ಆಚರಣೆ ನಡೆಯುವ ಸ್ಥಳ ಹಾಗೂ ಆಚರಣೆಯ ಸಂದರ್ಭದಲ್ಲಿ ಸೇರುವ ಜನರಲ್ಲಿ ಗುಣಾತ್ಮಕ ಹೆಚ್ಚಳ ಕಂಡುಬರುತ್ತಿದೆ. ಮೈಸೂರು, ಬೆಂಗಳೂರಿನಂತಹ ನಗರ ಪ್ರದೇಶಗಳಲ್ಲಿ ನೆಲೆಸಿರುವ ಕೊಡಗಿನ ಜನರು ಕುಟುಂಬ ಹಾಗೂ ಗ್ರಾಮದ ತೆರೆಕಟ್ಟುವ ಆಚರಣೆಗಳಲ್ಲಿ ಸ್ಥಳೀಯರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಾರೆ. ಹೀಗೆ ಆಧುನಿಕ ಸಂದರ್ಭಗಳಲ್ಲಿ ತೆರೆಕಟ್ಟುವ ಆಚರಣೆಯು ಜನರಲ್ಲಿ ಸ್ನೇಹ ಸಂವರ್ಧನೆ, ಅಕ್ಕರತೆ, ಆತ್ಮೀಯತೆ, ಪ್ರೀತಿ ವಿಶ್ವಾಸಗಳನ್ನು ಬೆಸೆಯುವ ಮಾಧ್ಯಮವಾಗಿ ಕಾರ್ಯ ನಿರ್ವಹಿಸುತ್ತಿದೆ.

ತೆರೆಕಟ್ಟುವ ಆಚರಣೆಗಳಲ್ಲಿ ಕಲಾತ್ಮಕ ಅಂಶಗಳು ಮೇಳೈಸಿವೆ. ಇವು ವರ್ತಮಾನದಲ್ಲಿ ಜನಪದರ ಕಲೆ-ಸಂಸ್ಕೃತಿಗಳನ್ನು ಜೀವಂತವಾಗಿಡುವಲ್ಲಿ ಸಹಕಾರಿಯಾಗಿವೆ. ಕೇವಲ ದೈವ ನೆಲೆಗಳಲ್ಲಿ ಪ್ರದರ್ಶಿಸಲ್ಪಡುತ್ತಿದ್ದ ತೆರೆಗಳು ಇಂದು ಸಾಹಿತ್ಯ, ಸಾಂಸ್ಕೃತಿಕ ಸಮ್ಮೇಳನಗಳ ಕಲಾತಂಡಗಳಾಗಿ ಮೆರವಣಿಗೆಯಲ್ಲಿ ಭಾಗವಹಿಸುತ್ತಿವೆ. ಜನಪದ ಕಲಾ ಪ್ರಕಾರವಾಗಿ ಸಮಾರಂಭಗಳ ವೇದಿಕೆಯಲ್ಲೂ ಪ್ರದರ್ಶಿಸಲ್ಪಡುತ್ತಿವೆ. ಪೂರ್ವದಲ್ಲಿ ತೆರೆ ಕಟ್ಟುವ ಆಚರಣೆಗಳು ಹುಟ್ಟಿಕೊಂಡ ಉದ್ದೇಶ ಮತ್ತು ಸಂದರ್ಭಗಳು ವರ್ತಮಾನ ಕಾಲದಲ್ಲಿ ಬದಲಾವಣೆಗೊಂಡಿವೆ. ಬದಲಾದ ಸಾಮಾಜಿಕ ವ್ಯವಸ್ಥೆಯಲ್ಲಿ ತೆರೆ ಆಚರಣೆಗಳು ಸಾಂಸ್ಕೃತಿಕವಾಗಿ ಉಳಿದುಕೊಳ್ಳಬೇಕಾದರೆ ಅವುಗಳ ಬಾಹ್ಯ ಮತ್ತು ಆಂತರಿಕ ಸ್ವರೂಪದಲ್ಲಿ ಬದಲಾವಣೆ ಅನಿವಾರ್ಯವಾಗಿದೆ. ಹೀಗೆ ಜನಪದ ಸಂಸ್ಕೃತಿಯ ಜೀವಂತ ಭಾಗವಾಗಿರುವ ತೆರೆ ಕಟ್ಟುವ ಆಚರಣೆಗಳು ಹಲವು ಬದಲಾವಣೆಗಳೊಂದಿಗೆ ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳುತ್ತಾ ಬೆಳೆಯುತ್ತಿವೆ.

**ಕೊನೆ ಟಿಪ್ಪಣಿ**

೧. ಅಮೃತ ಸೋಮೇಶ್ವರ., ತುಳುವ ಜಾನಪದ: ಕೆಲವು ನೋಟಗಳು, ೨೦೦೭, ಪು. ૩૨

೨. ಡಾ. ಹೆಬ್ಬಾಲೆ ಕೆ. ನಾಗೇಶ್, ಮುಕ್ತ ಸಂಸ್ಕೃತಿ ಮತ್ತು ಹಂಪಿ ಪರಿಸರ, ಪು. ೧೨೫

೩. ಚೆಪ್ಪುಡಿರ ಪೊನ್ನಪ್ಪ, ವಯಸ್ಸು ೮೦, ಕಿರುಗೂರು ಗ್ರಾಮ ಮತ್ತು ಅಂಚೆ

## ಅಧ್ಯಾಯ ೭

## ಸಮಾರೋಪ

ಆಚರಣೆಗಳು ಜನಪದರ ಬದುಕಿನ ಅವಿಭಾಜ್ಯ ಅಂಗಗಳು. ಜಾನಪದ ಪರಂಪರೆಯಲ್ಲಿ ಇವುಗಳಿಗೆ ಮಹತ್ವದ ಸ್ಥಾನವಿದೆ. ಕೊಡಗಿನ ಆಚರಣಾ ಲೋಕದಲ್ಲಿ ತೆರೆಕಟ್ಟುವ ಆಚರಣೆಗಳು ಅನನ್ಯವಾದ ಸ್ಥಾನವನ್ನು ಪಡೆದುಕೊಂಡಿವೆ. ಅನಾದಿ ಕಾಲದಿಂದಲೂ ಅನೂಚಾನವಾಗಿ ನಡೆದುಕೊಂಡು ಬಂದಿರುವ ಇವುಗಳು ಕೊಡಗಿನ ಸಂಸ್ಕೃತಿಯನ್ನು ನಿರ್ದೇಶಿಸುತ್ತಾ ಬಂದಿವೆ. ಕೊಡಗಿನ ಜನಜೀವನದಲ್ಲಿ ಹಾಸುಹೊಕ್ಕಾಗಿದ್ದು ವರ್ತಮಾನದಲ್ಲೂ ಮುಂದುವರೆಯುತ್ತಿವೆ. ಕೊಡಗಿನ ತೆರೆಕಟ್ಟುವ ಆಚರಣೆಗಳು ಕೊಡಗಿನ ಭೌಗೋಳಿಕತೆಗೆ ಪೂರಕವಾಗಿದ್ದು; ಇವುಗಳನ್ನು ಇಂದಿಗೂ ನಿಸರ್ಗದ ನಡುವಿನಲ್ಲಿ ಆಚರಣೆ ಮಾಡುತ್ತಾರೆ. ನೈಸರ್ಗಿಕ ವಿಕೋಪಗಳು, ಪ್ರಕೃತಿಯೊಡನೆ ಇಲ್ಲಿನ ಜನಪದರ ನಿಕಟ ಒಡನಾಟ, ನಿಸರ್ಗಾರಾಧನೆ ಹಾಗೂ ಪೂರ್ವಜರ ಆರಾಧನೆ ತೆರೆಕಟ್ಟುವ ಆಚರಣೆಗಳ ಪರಿಣಾಮವನ್ನು ಹೆಚ್ಚಿಸಿವೆ. ಸ್ಥಳೀಯ ಐತಿಹ್ಯಗಳು ಪುರಾಣ ಮತ್ತು ದಂತಕಥೆಗಳು ತೆರೆಕಟ್ಟುವ ಆಚರಣೆಗಳ ಅಸ್ತಿಭಾರದಂತೆ ಕಾರ್ಯ ನಿರ್ವಹಿಸಿವೆ. ಜಾನಪದ ವಿಕಾಸಕ್ಕಿಂತ ಮೊದಲು ಈ ಆಚರಣೆಗಳು ಬುಡಕಟ್ಟು ಚಹರೆಗಳನ್ನು ಅಳವಡಿಸಿಕೊಂಡವುಗಳಾಗಿವೆ. ಸಮಕಾಲೀನ ಸಂದರ್ಭದಲ್ಲಿ ಭದ್ರವಾದ ಧಾರ್ಮಿಕ ನೆಲೆಗಟ್ಟನ್ನು ಪಡೆದುಕೊಂಡು ಜನಪದರಲ್ಲಿ ಅಭಿವ್ಯಕ್ತಗೊಂಡಿವೆ. ತೆರೆಗಳನ್ನು ಇಂದಿಗೂ ಅತ್ಯಂತ ಶ್ರದ್ಧೆಯಿಂದ ಆಚರಿಸಲಾಗುತ್ತದೆ.

ಕೊಡಗಿನ ಜನಪದರು ಚೌಂಡಿ, ಭದ್ರಕಾಳಿ, ಸಾರ್ತಾವು, ಭಗವತಿ, ಅಯ್ಯಪ್ಪ, ಕುಳಿಯ, ವಿಷ್ಣುಮೂರ್ತಿ, ಮುಂದಣಮೂರ್ತಿ ಇತ್ಯಾದಿ ದೈವಗಳಿಗೆ ತೆರೆಕಟ್ಟುವ ಆಚರಣೆಯನ್ನು ಮಾಡುವರು. ಇವು ಆಯಾಯ ಕುಟುಂಬ, ಸಮುದಾಯ, ಸ್ಥಳ ಹಾಗೂ ಗ್ರಾಮಗಳಿಗೆ ಅನುಗುಣವಾಗಿ ವೈವಿಧ್ಯಮಯವಾಗಿರುತ್ತವೆ. ಅಲ್ಲದೆ ಕುಟುಂಬದ ಪೂರ್ವಿಕರಾದ ಕಾರೋಣ, ಕಲ್ಯಾಟ ಅಜ್ಜಪ್ಪನಂತಹ ಜನಪದ ವೀರರು, ಎತ್ತು ಮತ್ತು ಹುಲಿಯಂತಹ ಪ್ರಾಣಿಗಳು ಇಲ್ಲಿ ಆರಾಧನೆಗೊಳ್ಳುತ್ತವೆ.

ಕೊಡಗಿನ ಇತಿಹಾಸ, ಸಾಮಾಜಿಕತೆ, ಸಂಸ್ಕೃತಿ, ಧಾರ್ಮಿಕತೆ ಹಾಗೂ ರಾಜಕೀಯ ಅಂಶಗಳು ಇಲ್ಲಿನ ಆಚರಣೆಗಳ ಮೇಲೆ ಪ್ರಭಾವ ಬೀರಿವೆ. ಪ್ರಾದೇಶಿಕವಾಗಿ ಕೊಡಗು ತನ್ನ ಗಡಿಯನ್ನು ಮಲಬಾರ್‌ನೊಂದಿಗೆ ಹಂಚಿಕೊಂಡಿದ್ದು; ಪೂರ್ವದಿಂದಲೇ ಮಲಬಾರ್‌ನೊಂದಿಗೆ ನಿಕಟ ಸಂಬಂಧವನ್ನು ಹೊಂದಿದೆ. ಇಲ್ಲಿ ಆರಾಧಿಸುವ ಹಲವು ದೇವರುಗಳು ಮಲೆಯಾಳದಿಂದ ಬಂದು ಕೊಡಗಿನಲ್ಲಿ ನೆಲೆಸಿದವುಗಳಾಗಿವೆ. ಈ ವಿಚಾರವು ಆಯಾಯ ದೈವಗಳ ಕಥಾನಕಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ. ಕೊಡಗಿನ ಜನಪದರು ಆರಾಧಿಸುವ ಬೈತೂರಪ್ಪ, ತಿರ್‌ನೆಲ್ಲಿ ಪೆಮ್ಮಯ್ಯ ದೇವಾಲಯಗಳು ಮಲಬಾರ್‌ನಲ್ಲಿದ್ದರೂ;ಕೊಡಗಿನ ಕೆಲವು ಕುಟುಂಬದವರು ಅಲ್ಲಿನ ಮುಖ್ಯಸ್ಥರಾಗಿದ್ದಾರೆ. ವಾರ್ಷಿಕ ಉತ್ಸವಗಳ ಸಂದರ್ಭದಲ್ಲಿ ಈ ದೇವಾಲಯಗಳಿಗೆ ಎತ್ತಿನ ಹೇರು ಹೋಗುವ ಸಂಪ್ರದಾಯವನ್ನು ಜನಪದರು ಇಂದಿಗೂ ಪಾಲಿಸುತ್ತಿದ್ದಾರೆ.

ಕೊಡಗಿನ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿರುವ ತೆರೆಕಟ್ಟುವ ಆಚರಣೆಗಳು ಆರಂಭದಲ್ಲಿ ಮಲಬಾರ್ ಪ್ರಾಂತ್ಯದಿಂದ ಬಂದವುಗಳಾಗಿದ್ದರೂ ಸಹ ಅವು ಇಂದು ಕೊಡಗಿನ ಜನಪದರಲ್ಲಿ ಜೀವಂತವಾಗಿವೆ. ಅಲ್ಲಿನ ತಿರಂ ಆಚರಣೆ ಹಾಗೂ ಸ್ಥಳೀಯ ಪದ್ಧತಿಗಳ ಸಂಯೋಗದಿಂದ ತೆರೆಕಟ್ಟುವ ಆಚರಣೆಗಳು ರೂಪುಗೊಂಡಿವೆ. ಕೊಡಗಿನಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ ಪ್ರಬಲವಾಗಿರುವ ಸಮುದಾಯದವರು ತೆರೆ ಆಚರಣೆಗಳನ್ನು ನಡೆಸುತ್ತಾರೆ. ಪಣಿಕ, ಬಣ್ಣ ಮತ್ತು ಮಲಿಯ ಸಮುದಾಯದವರು ಈ ತೆರೆಗಳನ್ನು ಕಟ್ಟುವುದರಲ್ಲಿ ನಿಪುಣರು. ಇವರನ್ನು ತೆರೆಕಾರರು ಅಥವಾ ತೆರೆಕಟ್ಟುವವರು ಎಂದು ಕರೆಯುತ್ತಾರೆ. ಇವರಲ್ಲಿ ಯಾವುದೇ ಒಂದು ಸಮುದಾಯ ಗ್ರಾಮ ಮತ್ತು ಕುಟುಂಬಗಳಲ್ಲಿ ತೆರೆಗಳನ್ನು ಕಟ್ಟುತ್ತಾರೆ. ತೆರೆ ಆಚರಣೆಯ ಸಂದರ್ಭದಲ್ಲಿ ಆಯಾಯ ದೈವಗಳ ವೇಷವನ್ನು ಧರಿಸುತ್ತಾರೆ. ನಿರ್ದಿಷ್ಟ ವಿಧಿಗಳ ಮೂಲಕ ಅಲೌಕಿಕ ದೈವಗಳನ್ನು ಲೌಕಿಕ ಸ್ಥಿತಿಗೆ ತಂದು ತಾವೇ ದೈವಗಳಾಗುತ್ತಾರೆ. ಈ ದೈವಗಳಿಗೆ ಹರಕೆ ಕಾಣಿಕೆಗಳನ್ನು ಒಪ್ಪಿಸಿ ಸಂತುಷ್ಟಗೊಳಿಸಿದರೆ ಗ್ರಾಮ ಹಾಗೂ ಕುಟುಂಬಗಳಿಗೆ ಶ್ರೇಯಸ್ಸು ಉಂಟಾಗುತ್ತದೆ ಎಂಬುದು ಜನಪದರ ನಂಬಿಕೆ. ಇದು ಆಚರಣೆಗಳ ಮುಂದುವರಿಕೆಗೆ ಸಹಕಾರಿಯಾಗಿವೆ. ತೆರೆಕಾರರ ವೇಷಭೂಷಣಗಳು, ಬಣ್ಣಗಾರಿಕೆ, ಮಾತು, ಹಾಡುಗಳು ತೆರೆ ಆಚರಣೆಯನ್ನು ಕಲಾತ್ಮಕ ಅಭಿವ್ಯಕ್ತಿಯನ್ನಾಗಿಸಿದೆ.

ಕೊಡಗು ತೆರೆ ಆಚರಣೆಯ ಪ್ರಮುಖ ಕೇಂದ್ರವಾಗಿದೆ. ಇಲ್ಲಿನ ಗ್ರಾಮಗಳಲ್ಲಿರುವ ದೇವಸ್ಥಾನ, ಕೋಟ, ಬನ, ನೆಲೆ ಹಾಗೂ ಐನ್‌ಮನೆಗಳಲ್ಲಿ ತೆರೆಕಟ್ಟುವ ಆಚರಣೆಗಳು ನಡೆಯುತ್ತವೆ. ಈ ನೆಲೆಗಳು ಜನಪದರಿಗೆ ಅತ್ಯಂತ

ಪವಿತ್ರವಾದವುಗಳಾಗಿವೆ. ತೆರೆಯನ್ನು ಕಟ್ಟುವ ಪಣಿಕ, ಮಲಿಯ ಮತ್ತು ಬಣ್ಣರು ಮಲಬಾರ್ ಮೂಲದವರಾದರೂ ನಂತರದ ದಿನಗಳಲ್ಲಿ ಕೊಡಗಿನಲ್ಲಿಯೇ ನೆಲೆಸಿ ಇಲ್ಲಿನವರೇ ಆಗಿದ್ದಾರೆ. ಸಾಮಾಜಿಕ ಹಾಗೂ ಆರ್ಥಿಕವಾಗಿ ಹಿಂದುಳಿದಿರುವ ಇವರು ತೆರೆ ಆಚರಣೆಯ ಸಂದರ್ಭದಲ್ಲಿ ಕೇಂದ್ರ ಬಿಂದುಗಳಾಗಿ ಇಡೀ ಸನ್ನಿವೇಶವನ್ನು ಆಳುತ್ತಾರೆ. ವೇಷ ಕಳಚಿದ ಬಳಿಕ ಅದೇ ಸಂಕಷ್ಟದ ಬದುಕು ಅವರದಾಗಿದೆ.

ಕೊಡಗಿನ ತೆರೆ ಆಚರಣೆಗಳನ್ನು ಸ್ತ್ರೀದೈವಗಳ ತೆರೆಗಳು, ಪುರುಷ ದೈವಗಳ ತೆರೆಗಳು ಹಾಗೂ ಪ್ರಾಣಿ ಸಂಬಂಧ ತೆರೆಗಳೆಂದು ವರ್ಗೀಕರಿಸಬಹುದಾಗಿದೆ. ಒಂದೊಂದು ತೆರೆಯು ತನ್ನದೇ ಆದ ಸಾಂಸ್ಕೃತಿಕ ವೈವಿಧ್ಯತೆಯಿಂದ ಕೂಡಿ ಅನನ್ಯವಾಗಿವೆ. ತೆರೆಕಟ್ಟುವ ಆಚರಣೆಗಳಲ್ಲಿ ಬಲಿಕರ್ಮವೂ ಒಂದು ಪ್ರಮುಖ ಅಂಗವಾಗಿದೆ. ಆಚರಣೆಯ ಕೊನೆಯ ಹಂತದಲ್ಲಿ ಕೋಳಿ, ಹಂದಿ ಮತ್ತು ಆಡಿನ ಬಲಿಯನ್ನು ನೀಡುತ್ತಾರೆ. ಬಲಿ ನೀಡುವ ಸಂದರ್ಭದಲ್ಲಿ ತೆರೆಕಾರರು ರಕ್ತವನ್ನು ಕುಡಿಯುವುದು, ಜೀವಂತ ಕೋಳಿಯನ್ನು ತಿನ್ನುವುದು, ಬಲಿ ನೀಡಿದ ಪ್ರಾಣಿಯನ್ನು ಹಲ್ಲಿನಲ್ಲಿ ಕಚ್ಚಿ ಎತ್ತಿಕೊಳ್ಳುವುದು ಮಾಡುತ್ತಾರೆ. ಇಂತಹ ವರ್ತನೆಗಳು ವರ್ತಮಾನದಲ್ಲಿ ಕಡಿಮೆಯಾಗುತ್ತಿದ್ದು; ಕೆಲವು ಗ್ರಾಮಗಳಲ್ಲಿ ಹಾಗೆಯೇ ಮುಂದುವರೆದಿದೆ.

ತೆರೆಕಟ್ಟುವ ಆಚರಣೆಗಳು ಮಾತೃದೇವತಾರಾಧನೆಯ ನೆಲೆಯಲ್ಲಿ ಉಗಮಗೊಂಡಿವೆ. ಇದರೊಂದಿಗೆ ವೃಕ್ಷಾರಾಧನೆ, ಪೂರ್ವಜರ ಆರಾಧನೆ, ವೀರಾರಾಧನೆ, ಮೃಗಾರಾಧನೆ, ಆಯುಧ ಪೂಜೆ ಹಾಗೂ ಫಲವಂತಿಕೆಯ ಪೂಜೆಗಳು ಸಂಯೋಗಗೊಂಡಿವೆ. ಶಕ್ತಿ, ಚಾಮುಂಡಿ, ವೈಷ್ಣವ ಹಾಗೂ ಶೈವ ಕಲ್ಪನೆಗಳನ್ನೂ ಇಲ್ಲಿ ಕಾಣಬಹುದಾಗಿದೆ. ತೆರೆಕಟ್ಟುವ ಆಚರಣೆಗಳಲ್ಲಿ ಹೆಚ್ಚಾಗಿ ಪುರುಷರೇ ಭಾಗವಹಿಸುತ್ತಾರೆ. ಪ್ರೇಕ್ಷಕರಾಗಿಯೂ ಅವರ ಸಂಖ್ಯೆಯೇ ಹೆಚ್ಚಾಗಿರುತ್ತದೆ. ಸ್ತ್ರೀದೈವಗಳ ಆರಾಧನೆ ಇಲ್ಲಿ ಪ್ರಮುಖವಾಗಿದ್ದರೂ ಮಹಿಳೆಯರಿಗೆ ಹಲವು ನಿರ್ಬಂಧಗಳನ್ನು ಹೇರಲಾಗಿದೆ. ದೈವಗಳು ಮೈದುಂಬಿ ಬಂದು ನರ್ತಿಸುವಾಗ ಪುರುಷರಿಗಿಂತ ಮುಂದೆ ಆಕೆ ಹೋಗುವುದಿಲ್ಲ. ಪ್ರಾಣಿಬಲಿಯ ಸಂದರ್ಭದಲ್ಲಿ ಮಹಿಳೆಯರು ಭಾಗವಹಿಸುವಂತಿಲ್ಲ. ಆದರೆ ಇಂದು ಆ ರೀತಿಯ ಕಟ್ಟುಪಾಡುಗಳು ಸಡಿಲಗೊಂಡಿವೆ.

ಕೊಡಗಿನಾದ್ಯಂತ ಆಚರಿಸಲ್ಪಡುವ ತೆರೆ ಆಚರಣೆಗಳಲ್ಲಿ ಸಮಕಾಲೀನತೆಯ ಸಂದರ್ಭದಲ್ಲಿ ಸಾಮಾಜಿಕವಾಗಿ ಕೆಲವು ಸ್ಥಿತ್ಯಂತರಗಳನ್ನು ಕಾಣಬಹುದು. ನಿಸರ್ಗಮೂಲದ ಈ ದೈವಗಳು ಜಾಗತೀಕರಣ, ಆಧುನೀಕರಣದ ಪ್ರಭಾವಕ್ಕೆ ಸಿಲುಕಿ ರೂಪಾಂತರಗೊಂಡಿವೆ. ವೈದಿಕ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ

ಉತ್ಸವ ಮೂರ್ತಿಗಳಾಗಿವೆ.

ಒಟ್ಟಾರೆಯಾಗಿ ಕೊಡಗಿನ ಜನಪದರ ಅನುಭವದ ನೆಲೆಯಲ್ಲಿ ಉದಯಿಸಿದ ತೆರೆಕಟ್ಟುವ ಆಚರಣೆಗಳನ್ನು ಅವು ಹೊಂದಿರುವ ವಿಶಾಲ ವ್ಯಾಪ್ತಿಗೆ ಧಕ್ಕೆಯಾಗದಂತೆ ಉಳಿಸಿಕೊಳ್ಳುವ ಅನಿವಾರ್ಯತೆ ಇದೆ. ಕಾರಣ ಆಧುನಿಕತೆಯ ಪ್ರಭಾವಕ್ಕೆ ಸಿಲುಕಿ ಆಚರಣೆಗಳಿಂದು ವರ್ತಮಾನಕ್ಕೆ ತಕ್ಕಂತೆ ಸ್ಥಿತ್ಯಂತರಗೊಳ್ಳುತ್ತಿವೆ. ಅವುಗಳಲ್ಲಿನ ಜೀವಮುಖಿ ಅಂಶಗಳಿಗೆ ಧಕ್ಕೆಯಾಗದಂತೆ, ಅವು ಲಾಭಮುಖಿಯಾಗುವಂತೆ ಗಮನಹರಿಸುವ ಅಗತ್ಯತೆ ಇಂದಿನ ಸಮಾಜಕ್ಕಿದೆ. ಆಚರಣೆಗಳು ಅತಿರೇಕದ ವರ್ತನೆಗಳಾಗದಂತೆ ನೋಡಿಕೊಳ್ಳುವುದೂ ಇಲ್ಲಿ ಮುಖ್ಯವಾಗಿದೆ. ಭಾವನಾತ್ಮಕ, ನೈತಿಕ, ಕ್ರಿಯಾತ್ಮಕ ಮಾನಸಿಕ ಸಂವೇದನೆಗಳು ಆಚರಣೆಯಲ್ಲಿ ಹೆಚ್ಚು ಹೆಚ್ಚು ಪಾಲನೆಯಾದಾಗ ಮಾತ್ರ ತೆರೆಕಟ್ಟುವ ಆಚರಣೆಗಳು ಉಳಿಯಲು ಸಾಧ್ಯವಾಗುತ್ತದೆ.

**ಅಧ್ಯಯನದ ಫಲಿತಗಳು**

* ಜನಪದರು ತಮ್ಮ ಅನುಭವ ಕಕ್ಷೆಯೊಳಗೆ ಬಂದ ಹಲವು ಅಂಶಗಳನ್ನು ಸ್ವೀಕರಿಸಿ ಅನನ್ಯವಾದ ಜನಪದ ಆರಾಧನಾ ಪದ್ಧತಿಗಳನ್ನು ಪ್ರಾದೇಶಿಕವಾಗಿ ಬೆಳೆಸಿಕೊಂಡು ಬಂದಿರುತ್ತಾರೆ. ಅಂತಹ ಆರಾಧನಾ ಪದ್ಧತಿಗಳಲ್ಲಿ ಕೊಡಗಿನ ತೆರೆಕಟ್ಟುವ ಆಚರಣೆಯು ಪ್ರಮುಖವಾದುದಾಗಿದೆ. ಹಾಲು ಒಸರುವ ಮರದ ಬುಡದಲ್ಲಿ ಒಂದು ಸಾಮಾನ್ಯ ಕಲ್ಲಿನ ತುಂಡಿನಲ್ಲಿ ದೈವವನ್ನು ಕಲ್ಪಿಸಿ ಪೂಜಿಸುವ ಅತ್ಯಂತ ಪ್ರಾಚೀನ ಸ್ವರೂಪದ ತೆರೆಕಟ್ಟುವ ಆಚರಣೆಯು ಇಂದು ವಿಕಾಸಗೊಂಡು ವರ್ಣರಂಜಿತ ವೈಭವೋಪೇತ ಸ್ವರೂಪದವರೆಗೆ ಬೆಳೆದಿದೆ.

* ಪೂರ್ವಜರ ಆರಾಧನೆ ಹಾಗೂ ಗ್ರಾಮದೇವತೆಗಳ ಆರಾಧನೆ ತೆರೆಕಟ್ಟುವ ಆಚರಣೆಗಳ ಉಗಮಕ್ಕೆ ಮೂಲಪ್ರೇರಣೆಯಾಗಿವೆ.

* ಜನಪದರು ಅಲೌಕಿಕ ಶಕ್ತಿಗಳನ್ನು 'ದೈವ'ಗಳೆಂಬ ಪ್ರತಿಮಾ ರೂಪದಲ್ಲಿ ಪ್ರತಿನಿಧೀಕರಿಸಿದ್ದಾರೆ. ತೆರೆ ಆಚರಣೆಯ ಮೂಲಕ ಆರಾಧಿಸಲ್ಪಡುವ ಈ ಅಲೌಕಿಕ ಶಕ್ತಿಗಳಿಗೆ ನಂಬಿದವರನ್ನು ರಕ್ಷಿಸುವ ಜವಾಬ್ದಾರಿಯಿದೆ. ಕೇಡು ಬಗೆಯುವವರನ್ನು ಶಿಕ್ಷಿಸುವ ಶಕ್ತಿಯಿದೆ ಎನ್ನುವ ನಂಬಿಕೆಯಿದೆ. ತೆರೆಕಟ್ಟಿ ಆರಾಧಿಸಿ ಈ ಅಲೌಕಿಕ ಶಕ್ತಿಗಳನ್ನು ತೃಪ್ತಿಪಡಿಸುವುದರಿಂದ ಕಾಲಕಾಲಕ್ಕೆ ಮಳೆ ಬೆಳೆಯಾಗಿ ಸುಖ ಸಮೃದ್ಧಿ ನೆಲೆಸುತ್ತದೆ ಎಂಬ ಆಶಾಭಾವನೆ ಇದೆ. ಕೊಡಗಿನ ಆರಾಧನೆ ಮತ್ತು ಆಚರಣೆಗಳ ಬಗ್ಗೆ ಬರೆದಿರುವ ಪಾಶ್ಚಾತ್ಯ ವಿದ್ವಾಂಸರು ತಮ್ಮ ಕೃತಿಗಳಲ್ಲಿ ಇವುಗಳನ್ನು ಕೊಡಗಿನ ಮೂಢನಂಬಿಕೆಗಳೆಂದು ಕರೆಯುತ್ತಾರೆ.

* ತೆರೆ ಆಚರಣೆಗಳು ತುಂಬಾ ಮಹತ್ವವಾಗಿವೆ. ಜೀವಪರವಾದ, ಮಾನವಪರವಾದ, ಸಾಂಪ್ರದಾಯಿಕವಾಗಿರುವ ಇವುಗಳು ಇಂದಿನ ಜಾಗತೀಕರಣ,

ಬಂಡವಾಳೀಕರಣ, ಉದಾರೀಕರಣಗಳ ನಡುವೆಯು ನಿರಂತರವಾಗಿ ಮೂಲ ಮೌಲ್ಯಗಳನ್ನು ಕಳೆದುಕೊಳ್ಳದೆ ಹಿಂದಿನಂತೆಯೇ ಇಂದಿಗೂ ಮುಂದುವರೆಸಿಕೊಂಡು ಹೋಗುತ್ತಿರುವುದು ವಿಶೇಷವಾಗಿರುತ್ತದೆ.

* ಹಿಂದೆ ಈ ಆಚರಣೆಗಳಲ್ಲಿ ಸ್ತ್ರೀಯರು ನೇರವಾಗಿ ಭಾಗವಹಿಸುವಂತಿರಲಿಲ್ಲ. ಮರೆಯಲ್ಲಿ ನಿಂತು ತೆರೆ ಆಚರಣೆಗಳನ್ನು ನೋಡಬೇಕಾಗಿತ್ತು. ಮುಟ್ಟಾದವರು, ಗರ್ಭಿಣಿಯರು ಆಚರಣೆ ನಡೆಯುವ ಸ್ಥಳದಲ್ಲಿಯೇ ಇರಕೂಡದೆಂಬ ನಿಷೇಧವಿತ್ತು. ಆದರೆ ಈಗ ಹಾಗಿಲ್ಲ ಸ್ತ್ರೀಯರು ತೆರೆಯನ್ನು ಕಟ್ಟುವ ಸ್ಥಳಗಳಲ್ಲಿ ನಿಂತು ನೋಡಬಹುದಾಗಿದೆ. ಇದಕ್ಕೆ ಕಾರಣವೆಂದರೆ ಸಾಮಾಜಿಕ ವ್ಯವಸ್ಥೆಯಲ್ಲಿ ಆಗಿರುವ ಬದಲಾವಣೆಯಾಗಿದೆ. ಅಲ್ಲದೆ ಕೌಂಟುಂಬಿಕ ಹಾಗೂ ಮಾನಸಿಕ ತಳಮಳಗಳ ಕಾರಣಗಳಿಂದ ಬದುಕನ್ನು ಸಂತೋಷವಾಗಿಡುವ ಹಿನ್ನೆಲೆಯಲ್ಲಿ ಸ್ತ್ರೀಯರು ಮುಂದಾಗಿರುತ್ತಾರೆ.

* ಇತ್ತೀಚಿನ ದಿನಗಳಲ್ಲಿ ತೆರೆಯ ಆಚಾರ ವಿಚಾರಗಳಲ್ಲಿ ಆಧುನಿಕತೆಯ ಆಶಯಗಳು ಹೆಚ್ಚು ಕಂಡುಬರುವುದನ್ನು ಕಾಣಬಹುದು.

* ಮೊದಲು ಸವರ್ಣೀಯ ಜಾತಿಗಳು ತೆರೆ ಆಚರಣೆಯಲ್ಲಿ ಪ್ರಮುಖವಾಗಿ ಭಾಗವಹಿಸುತ್ತಿದ್ದರು. ಇಂದು ಬಹುತ್ವದ ಜಾತಿ, ಧರ್ಮ, ವರ್ಗ, ವರ್ಣದವರು ಈ ತೆರೆ ಆಚರಣೆಯಲ್ಲಿ ಭಾಗವಹಿಸಿ ವೀಕ್ಷಿಸುವುದನ್ನು ಕಾಣಬಹುದು.

* ವರ್ತಮಾನದ ಈ ಹೊತ್ತಿನಲ್ಲಿಯೂ ಕೂಡ ತೆರೆ ಆಚರಣೆಯ ಸ್ಥಳಗಳು ವ್ಯಾಪಾರದ ಕೇಂದ್ರವಾಗಿ ಪರಿವರ್ತನೆಯಾಗದಿರುವುದೇ ವಿಶೇಷ.

* ಕೊಡವ ಸಮುದಾಯದ ಮೂಲಮನೆಯಾದ ಐನ್‌ಮನೆ, ದೇವರಾದ ಕಾರೋಣ, ದೈವಗಳು ನೆಲೆಸಿರುವ ಕೋಟಗಳು, ಕೈಮಡ, ನೆಲ್ಲಕ್ಕಿ ನಡುಬಾಡೆ, ಬನಗಳು. ದೇವಕಾಡುಗಳು ಇಂದಿಗೂ ಭಕ್ತಿಯ ಕೇಂದ್ರವಾಗಿ ಉಳಿದುಕೊಂಡಿವೆ.

* ಪ್ರಸ್ತುತದಲ್ಲಿಯೂ ಕೂಡ ತೆರೆ ಆಚರಣೆಗಳಲ್ಲಿ ವಿಶೇಷವಾಗಿ ಹಂದಿ, ಆಡು, ಕೋಳಿಗಳನ್ನು ಬಲಿಕೊಡುವ ಆಚರಣೆ ಮುಂದುವರಿಯುತ್ತಿದೆ.

* ಪ್ರಾಚೀನ ಸಂದರ್ಭದಲ್ಲಿ ತೆರೆ ಕಟ್ಟುವಾಗ ನರಬಲಿಯನ್ನು ಕೊಡುತ್ತಿದ್ದರು. ಆದರೆ ಇಂದು ಆ ಪದ್ಧತಿ ಇರುವುದಿಲ್ಲ.

* ತೆರೆ ಆಚರಣೆಯಲ್ಲಿ ದೈವ ಕೇಂದ್ರಗಳಾದ ಐನ್‌ಮನೆ, ನೆಲ್ಲಕ್ಕಿ ನಡುಬಾಡೆ, ಕೈಮಡ, ಬನ, ಕೋಟ, ನೆಲೆಗಳನ್ನು ವ್ಯಾಜ್ಯ ಹಾಗೂ ಇತರ ಜಗಳಗಳನ್ನು ಬಗೆಹರಿಸುವ ಕೇಂದ್ರಗಳಾಗಿ ಕೊಡವರು ಅಂದಿನಿಂದ ಇಂದಿನವರೆಗೂ ಮುಂದುವರೆಸಿಕೊಂಡು ಬರುತ್ತಿದ್ದಾರೆ.

* ಕೊಡಗಿನ ತೆರೆ ಕಟ್ಟುವ ಆಚರಣೆಗಳು ನೆರೆ ರಾಜ್ಯ ಕೇರಳದ ತೆಯ್ಯಂ ಹಾಗೂ ತಿರಂ ಆಚರಣೆಗಳನ್ನು ಹೋಲುತ್ತದೆ. ಈ ಹಿನ್ನೆಲೆಯಲ್ಲಿ ಮಲಬಾರ್

ಪ್ರಾಂತ್ಯದ ತಿರಂ ಕೊಡಗಿನಲ್ಲಿ ತೆರೆಯೆಂದು ರೂಪಾಂತರಗೊಂಡು ಆಚರಣೆ ಮಾಡುತ್ತಿದ್ದಾರೆ ಎಂಬುದನ್ನು ಈ ಅಧ್ಯಯನ ದೃಢಪಡಿಸಿದೆ.

* ತೆರೆ ಆಚರಣೆಗಳು ದೈವಗಳ ಕುರಿತಾಗಿದ್ದು; ಅನೇಕ ಕಥಾನಕಗಳನ್ನು ಹೊಂದಿವೆ. ಕ್ಷೇತ್ರಪ್ಪ, ಭದ್ರಕಾಳಿ, ಚೋಲಿ ಭಗವತಿಯ ಹಾಡುಗಳನ್ನು ಜನಪದರು ಇಂದಿಗೂ ಹೇಳುತ್ತಾರೆ. ಅವುಗಳು ಆರಾಧನೆಯ ಸ್ವರೂಪದವುಗಳಾಗಿರುತ್ತವೆ.

* ತೆರೆಕಟ್ಟುವ ಆಚರಣೆಗಳಿಗೆ ಸಿದ್ಧತೆಯನ್ನು ಮಾಡುವವರು ಮಹಿಳೆಯರು. ಆದರೆ ಕೆಲವು ಗ್ರಾಮಗಳಲ್ಲಿ ಮುಟ್ಟಾದವರು, ಬಸುರಿಯರು ತೆರೆ ಆಚರಣೆಯ ಸಂದರ್ಭದಲ್ಲಿ ಮನೆಗಳಲ್ಲಿ ಇರುವ ಹಾಗಿಲ್ಲ. ತೆರೆಯು ಮುಗಿಯುವವರೆಗೂ ಬರುವ ಹಾಗಿಲ್ಲ. ಪುರುಷ ಪ್ರಣೀತ ಧೋರಣೆಗಳು ಮಹಿಳೆಯರನ್ನು ಸಾಂಪ್ರದಾಯಿಕತೆಯಿಂದ ಹೊರಬರದಂತೆ ಮಾಡಿವೆ.

* ತೆರೆಯನ್ನು ಕಟ್ಟುವ ಜನರು ಪ್ರಧಾನವಾಗಿ ಕೃಷಿ ಹಾಗೂ ಕೃಷಿಯೇತರ ಕೆಲಸಗಳನ್ನು ನಿರ್ವಹಿಸುವ ಮೂಲಕ ಜೀವನ ಸಾಗಿಸುತ್ತಾರೆ.

* ತೆರೆಕಟ್ಟುವ ಸಮುದಾಯಗಳು ತುಂಬಾ ಕಡಿಮೆ ಪ್ರಮಾಣದಲ್ಲಿದ್ದು; ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಬಲವಿಲ್ಲದೆ ಇಂದಿಗೂ ಸಂಕಷ್ಟದ ಸ್ಥಿತಿಯಲ್ಲಿ ಜೀವನ ನಡೆಸುತ್ತಿದ್ದಾರೆ.

* ತೆರೆಕಟ್ಟುವ ಆಚರಣೆಯನ್ನು ನಡೆಸುವ ವ್ಯಕ್ತಿ, ಕುಟುಂಬ ಅಥವಾ ಸಮಾಜದ ಆರ್ಥಿಕ ಸ್ಥಿತಿಗತಿಗೆ ಅನುಗುಣವಾಗಿ ಈ ಆಚರಣೆಯು ಸಾಂಸ್ಕೃತಿಕ ಸ್ವರೂಪವನ್ನು ಅಡಕಗೊಳಿಸಿಕೊಂಡಿದೆ.

* ತೆರೆಕಟ್ಟುವ ಆಚರಣೆಗಳು ಕೊಡವ ಜನಪದರ ಅನನ್ಯತೆಯ ಅಂಶಗಳಾದ ನಿಸರ್ಗಾರಾಧನೆ, ಪೂರ್ವಿಕರ ಆರಾಧನೆ, ವೀರರ ಆರಾಧನೆ, ಮೃಗಾರಾಧನೆ ಹಾಗೂ ಜನಪದ ದೈವಾರಾಧನೆಯ ವಾಹಕಗಳಾಗಿವೆ.

* ಆದಿಮಕಾಲದ ಆರಾಧನಾ ವಿಧವಾದ ತೆರೆಕಟ್ಟುವ ಆಚರಣೆಗಳು ಸಾಂಸ್ಕೃತಿಕವಾಗಿ ಹಲವು ಪಲ್ಲಟಗಳಿಗೆ ಒಳಗಾಗಿವೆ. ಆಧುನಿಕತೆಯ ಸಂಸ್ಪರ್ಷದಿಂದ ರೂಪಾಂತರಗೊಂಡಿವೆ. ಪ್ರಮುಖವಾಗಿ ತೆರೆಕಟ್ಟುವ ಆಚರಣೆಯ ಸಾಂಸ್ಕೃತಿಕ ಸ್ವರೂಪದಲ್ಲಿ ಸ್ಥಿತ್ಯಂತರಗಳು ಉಂಟಾಗಿವೆ. ಹಿಂದೆ ಸರಳ ಸ್ವರೂಪದಲ್ಲಿ ಆಚರಿಸಲ್ಪಡುತ್ತಿದ್ದ ತೆರೆಗಳು ಇಂದು ಅತ್ಯಂತ ವೈಭವಯುತವಾಗಿ ನಡೆಯುತ್ತಿವೆ. ದೈವಗಳ ನೆಲೆಯಾದ ಕೋಟಗಳು, ಪುಟ್ಟ ಗುಡಿಗಳು ಇಂದು ದೊಡ್ಡ ದೇವಾಲಯಗಳಾಗಿ ಅಷ್ಟಬಂಧ ಕಲಶೋತ್ಸವಗಳು ನಡೆಯುತ್ತಿವೆ. ವೈದಿಕ ಧರ್ಮದ ಪ್ರಭಾವ ಇಲ್ಲಿ ಹೆಚ್ಚಾಗಿದ್ದು; ದೈವನೆಲೆಗಳಲ್ಲಿ ಪುರೋಹಿತರಿಂದ ಪೂಜೆಗಳು ನಡೆಯುತ್ತಿವೆ.

# ಅನುಬಂಧ

ಪರಾಮರ್ಶನ ಗ್ರಂಥಗಳು

ವಕ್ತೃ ವಿವರ

ಸಾಂಸ್ಕೃತಿಕ ಪದಕೋಶ

ತೆರೆ ಹಾಡು

## ಪರಾಮರ್ಶನ ಗ್ರಂಥಗಳು


೧. ಅಮೃತ ಸೋಮೇಶ್ವರ, ತುಳುವ ಜಾನಪದ: ಕೆಲವು ನೋಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೭

೨. ಕಾವೇರಿ ಪ್ರಕಾಶ್, ಕೊಡವರ ಸಂಸ್ಕಾರಗಳು, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ, ೨೦೧೬

೩. ಕಾಳೇಗೌಡ ನಾಗವಾರ ಮತ್ತು ಅಂಬಳಿಕೆ ಹಿರಿಯಣ್ಣ (ಸಂ), ಜೀಶಂಪ ಅವರ ಜಾನಪದ ಬರಹಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦

೪. ಕುಲಕರ್ಣಿ ಬಿ. ಎಸ್.(ಸಂ), ಸಮಯ ಪರೀಕ್ಷೆ, ಧಾರವಾಡ, ೧೯೫೮

೫. ಕುಶಾಲಪ್ಪ ಭೀಮಂಡ. ಈ., ಕೊಡಗು ಚರಿತ್ರೆಯ ಮೇಲೆ ಹೊಸ ಬೆಳಕು, ಪಾಲೂರು, ಕೊಡಗು, ೨೦೧೬(ದ್ವಿತೀಯ ಮುದ್ರಣ)

೬. ಕೃಷ್ಣಯ್ಯ ಡಿ.ಎನ್., ಕೊಡಗಿನ ಇತಿಹಾಸ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೫ (ದ್ವಿತೀಯ ಮುದ್ರಣ)

೭. ಕೃಷ್ಣಯ್ಯ ಡಿ.ಎನ್., ಸುಬ್ಬರಾವ್ ಎಂ.ಎಸ್(ಸಂ), ರಾಜೇಂದ್ರನಾಮೆ, ೧೯೫೯(ದ್ವಿತೀಯ ಮುದ್ರಣ)

೮. ಕೃಷ್ಣಕುಮಾರ್ ಸಿ.ಪಿ., (ಸಂ), ಜನ್ನನ ಯಶೋಧರ ಚರಿತೆ, ಚೇತನ ಬುಕ್ ಹೌಸ್, ಮೈಸೂರು, ೧೯೯೪

೯. ಕೇಶವಾಚಾರ್ಯ ಜಿ.ಎಸ್., ಕೊಡಗು ಜಿಲ್ಲೆ ದರ್ಶನ, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು, ೧೯೭೮

೧೦. ಗಣಪತಿ ಬಿ.ಡಿ., ಕೊಡವರು (ಜೀವನ ಮತ್ತು ಪದ್ಧತಿಗಳು), ಕೊಡಗು, ೧೯೬೨

೧೧. ಚಂಗಪ್ಪ ಪೇರಿಯಂಡ, ಕೊಡವಡ ಅಂದೋಳತ್ ಪಾಟ್, ನಾಡ ಕಲಾಭಿಮಾನಿಗಳು, ಕೊಡಗು, ೧೯೬೧

೧೨. ಚಿಣ್ಣಪ್ಪ ನಡಿಕೇರಿಯಂಡ(ಸಂ), ಪಟ್ಟೋಲೆ ಪಳಮೆ, ಮಡಿಕೇರಿ, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ೨೦೦೨ (ನಾಲ್ಕನೆಯ ಮುದ್ರಣ)

೧೩. ಚಿನ್ನಪ್ಪ ಗೌಡ ಕೆ., ಭೂತಾರಾಧನೆ ಕೆಲವು ಅಧ್ಯಯನಗಳು, ತುಳುವ ಪ್ರಕಾಶನ, ಮಂಗಳೂರು, ೧೯೮೩

೧೪. ಚಿನ್ನಪ್ಪ ಗೌಡ ಕೆ., ಭೂತಾರಾಧನೆ ಜಾನಪದೀಯ ಅಧ್ಯಯನ, ಮದಿಪು ಪ್ರಕಾಶನ, ಮಂಗಳ ಗಂಗೋತ್ರಿ, ಮಂಗಳೂರು, ೧೯೯೦

೧೫. ನರಸಿಂಹಾಚಾರ್ ಡಿ. ಎಲ್.(ಸಂ), ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ, ಡಿ. ವಿ. ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೧೪ (ಹದಿನೆಂಟನೆಯ ಮುದ್ರಣ)

೧೬. ನಾಗರಾಜ್ ಎಂ. ಜಿ., ಕೆಂಬಟ್ಟಿ ಹೊಲೆಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೧೭. ನಾಗರಾಜ್ ಎಂ. ಜಿ., ಕೃಷ್ಣಮೂರ್ತಿ ಪಿ. ಪಿ. (ಸಂ), ಇತಿಹಾಸ ದರ್ಶನ, ಸಂಪುಟ ೧೪, ೧೯೯೯

೧೮. ನಾಗರಾಜ್ ಎಂ. ಜಿ., ಕೊಡಗಿನ ಹಾಲೇರಿ ರಾಜವಂಶವು ಭಾಗ ೧, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೪

೧೯. ನಾಗೇಶ್ ಕಾಲೂರು, ಕೊಡವ ಭಾಷಿಕ ಜನಾಂಗಗಳ ಸಾಂಸ್ಕೃತಿಕ ಬದುಕು, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ೨೦೧೩

೨೦. ಬಸವರಾಜು ಎಲ್.,(ಸಂ), ಬಸವಣ್ಣನವರ ವಚನಗಳು, ಗೀತಾ ಬುಕ್ ಹೌಸ್, ಮೈಸೂರು, ೧೯೭೨ (ತೃತೀಯ ಸಂಸ್ಕರಣ)

೨೧. ಬಸವರಾಜು ಎಲ್., ಸರಳ ಪಂಪಭಾರತ, ಗೀತಾ ಬುಕ್ ಹೌಸ್ ಮೈಸೂರು, ೨೦೦೯(ದ್ವಿತೀಯ ಸಂಸ್ಕರಣ)

೨೨. ಮೊಗಳ್ಳಿ ಗಣೇಶ್, ದೇಶಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೨೩. ಮೊಗಳ್ಳಿ ಗಣೇಶ್, ಆದಿಮ ಜಾನಪದ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೪

೨೪. ಮೊಗಳ್ಳಿ ಗಣೇಶ್, ಅವ್ಯಕ್ತ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೨೫. ರಾಮಕೃಷ್ಣ ಜಿ., (ಸಂಗ್ರಹಾನುವಾದ), ದೇವಿಪ್ರಸಾದ ಚಟ್ಟೋಪಧ್ಯಾಯ (ಮೂಲ), ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೨೦೧೪(ಎರಡನೆಯ ಮುದ್ರಣ)

೨೬. ರಾಮಾನುಜಂ ಪಿ.ಎಸ್., ಕೊಡವರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೫

೨೭. ರಾ.ಯ. ಧಾರವಾಡಕರ, ಕನ್ನಡ ಭಾಷಾಶಾಸ್ತ್ರ, ಗೀತಾ ಬುಕ್ ಹೌಸ್, ಮೈಸೂರು, ೨೦೦೯(ಹನ್ನೊಂದನೆಯ ಮುದ್ರಣ)
೨೮. ರೇಖ ಎಂ.ಪಿ., ಆಧುನಿಕ ಕೊಡವ ಸಾಹಿತ್ಯ, ಸಿಂಚು ಮಲ್ಟಿಗ್ರಾಫ್, ಮೈಸೂರು, ೨೦೧೦
೨೯. ರೇವತಿ ಪೂವಯ್ಯ ಮುಲ್ಲೇಂಗಡ ಕೊಡವ ಜನಪದ ನೃತ್ಯಗಳು ಒಂದು ಅಧ್ಯಯನ, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ, ೨೦೧೪
೩೦. ಲೋಕೇಶ್ ಕೆ.ಎಂ., (ಅನು. ಮತ್ತು ಸಂ.) ಕೊಡಗು ಪ್ರಾಂತ್ಯದಲ್ಲಿ ಕಂಡು ಬರುವ ಜಾತಿಗಳು ಮತ್ತು ಬುಡಗಟ್ಟು ಜನಾಂಗಗಳ ವೃತ್ತಾಂತ ಸಂಹಿತೆ, ಕೊಡವ ಸಾಂಸ್ಕೃತಿಕ ಅಧ್ಯಯನ ಪೀಠ, ಮಂಗಳೂರು ವಿಶ್ವ ವಿದ್ಯಾನಿಲಯ, ಮಂಗಳ ಗಂಗೋತ್ರಿ, ೨೦೧೧
೩೧. ವಿಜಯ್ ಪೂಣಚ್ಚ ತಂಬಂಡ, ಆಧುನಿಕ ಕೊಡಗು, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೨೦೦೦
೩೨. ವಿಜಯ್ ಪೂಣಚ್ಚ ತಂಬಂಡ, ಪಳಮೆ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೨೦೦೪
೩೩. ವಿಜಯ್ ಪೂಣಚ್ಚ ತಂಬಂಡ(ಸಂ), ಇ ಮಾರ್ಸ್‌ಡೆನ್, ಕೊಡಗು ವಿವರಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫
೩೪. ಶಂಕರನಾರಾಯಣ ತೀ. ನಂ.(ಸಂ) ಕರ್ನಾಟಕ ಜನಪದ ಕಾವ್ಯಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮
೩೫. ಸೂರ್ಯನಾಥ ಯು. ಕಾಮತ್(ಮು. ಸಂ.), ಭಾರತದ ಗೆಜೆಟಿಯರ್ ಕರ್ನಾಟಕ ರಾಜ್ಯ, ಕೊಡಗು ಜಿಲ್ಲೆ, ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು, ೧೯೯೨
೩೬. ಹಂಪ. ನಾಗರಾಜಯ್ಯ, ದ್ರಾವಿಡ ಭಾಷಾವಿಜ್ಞಾನ, ಡಿ. ವಿ. ಕೆ. ಮೂರ್ತಿ, ೨೦೦೮(ಆರನೆಯ ಮುದ್ರಣ)
೩೭. ಹರೀಶ್ ಪಿ. ಎನ್., ಎರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೧
೩೮. ಹೆಬ್ಬಾಲೆ ಕೆ. ನಾಗೇಶ್, ಕಾವೇರಿ ಜಾನಪದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫
೩೯. ಹೆಬ್ಬಾಲೆ ಕೆ. ನಾಗೇಶ್, ಮುಕ್ತ ಸಂಸ್ಕೃತಿ ಮತ್ತು ಹಂಪಿ ಪರಿಸರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨

**ನಿಘಂಟುಗಳು ಮತ್ತು ವಿಶ್ವಕೋಶಗಳು**

೧. ಕನ್ನಡ ಇಂಗ್ಲಿಷ್ ಡಿಕ್ಷನರಿ, ರೆವ. ಎಫ್.ಕಿಟ್ಟೆಲ್, ಬಿ. ಜಿ. ಇ. ಎಂ. ಏಸಿಯನ್ ಎಜುಕೇಷನಲ್ ಸರ್ವಿಸಸ್, ನವ ದೆಹಲಿ, ೨೦೧೨(೧೮ನೇ ಎ. ಇ. ಎಸ್. ಮರು ಮುದ್ರಣ)

೨. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧(ಏಳನೆಯ ಮುದ್ರಣ)

೩. ಸುಭಾಷ್ ಕನ್ನಡ- ಕನ್ನಡ- ಇಂಗ್ಲಿಷ್ ನಿಘಂಟು,(ಸಂ) ಎಲ್. ಎಸ್. ಶೇಷಗಿರಿರಾವ್, ಸುಭಾಷ್ ಸ್ಟೋರ್ಸ್, ಬೆಂಗಳೂರು, ೨೦೦೮

೪. ಕೊಡವ ಕನ್ನಡ ನಿಘಂಟು, ಐ. ಮಾ. ಮುತ್ತಣ್ಣ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೮೩

೫. ಕನ್ನಡ ವಿಶ್ವಕೋಶ, ಸಂ. ೭, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪

೬. ಕನ್ನಡ ವಿಷಯ ವಿಶ್ವಕೋಶ, ಜಾನಪದ, (ಪ್ರ. ಸಂ.) ಅರವಿಂದ ಮಾಲಗತ್ತಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೬

**ನಿಯತಕಾಲಿಕೆಗಳು ಮತ್ತು ಪತ್ರಿಕೆಗಳು**

೧. ಸುವರ್ಣ ಜಾನಪದ, ಸಂಪುಟ-೨, ಡಾ. ಎಚ್. ಜೆ. ಲಕ್ಕಪ್ಪಗೌಡ(ಪ್ರ. ಸಂ.), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮

೨. ಜಾನಪದ ಕರ್ನಾಟಕ, ಸ. ಚಿ. ರಮೇಶ್(ಸಂ), ಸಂಪುಟ ೩, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೩. ಜಾನಪದ ಕರ್ನಾಟಕ, ಹೆಬ್ಬಾಲೆ ಕೆ. ನಾಗೇಶ್(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೪. ಸುವರ್ಣ ಕರ್ನಾಟಕ ದರ್ಶನ(೫೦ ಸಂವತ್ಸರಗಳು), ಅನಂತರಾಮು ರಾವ್ ಕೆ.(ಪ್ರ. ಸಂ.), ವಿದ್ಯಾ ಪಬ್ಲಿಷಿಂಗ್ ಹೌಸ್, ಮಂಗಳೂರು, ೨೦೦೬

**ಆಂಗ್ಲಭಾಷಾ ಕೃತಿಗಳು**

1. Appaiah P. S., A History of Kodagu, Bangalore, 2012
2. Balakrishnan R.,Phonology of Kodagu with vocabulary, Annamalai University, 1976

3. Burgess J.E.S (E) INDIAN ANTIQUARY, Volume 2, February 1873
4. Edger Thurston & Rangachari K., CASTES AND TRIBES OF SOUTHERN INDIA, volume 6, Government Press, Madras, 1909
5. Ganapathi B. D., Kodavas, Madikeri, 1967
6. Krishna Iyer L. A., COORG TRIBES AND CASTES, L.K.B. Patnam, Residency Road, Thyead, Trivandrum, 1948
7. Moegling H., Coorg Memoirs : An Account of Coorg, and of The Coorg Mission, Bangalore, 1855
8. Muthanna I. M., A Tiny Model State of South India, Tiny Spot, Pollibetta, 1953
9. Richter G., GAZETTEER OF COORG, low price publication, Delhi, 1870
10. Richter G., MANUAL OF COORG, Delhi, 1970
11. Rice Lewis , MYSORE AND COORG, Mysore government press, Bangalore, 1878
12. Srinivas M. N., Religion & Society Among The Coorgs of South India, 1979
13. Sri Sathyan B.N., MYSORE STATE GAZETTEER, COORG DISTRICT, Bangalore, 1965

**website Reference :**

1. https://en.m.wikipedia.org.

## ವಕ್ತೃ ವಿವರ

| ಕ್ರ ಸಂ | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧ | ಬಾಚರಣಿಯಂಡ. ಪಿ. ಅಪ್ಪಣ್ಣ | ೭೮ | ಬರಹಗಾರರು | ಕುಶಾಲನಗರ |
| ೨ | ಮುಲ್ಲೇಂಗಡ ಶಂಕರಿ ಪೊನ್ನಪ್ಪ | ೭೪ | ಸಂಪಾದಕರು | ರುದ್ರುಗುಪ್ಪೆ |
| ೩ | ಪರದಂಡ ಜಿ ಚಂಗಪ್ಪ, ವಯಸ್ಸು | ೧೦೦ | ಬರಹಗಾರರು | ವಿರಾಜಪೇಟೆ |
| ೪ | ಪಣಿಕಡ ಎ. ಚಂಗಪ್ಪ, ವಯಸ್ಸು | ೫೬ | ತೆರೆ ಕಟ್ಟುವುದು | ಕುಟ್ಟಂದಿ |
| ೫ | ಸಾಬು ಮಂದಪ್ಪ | ೫೮ | ತೆರೆ ಕಟ್ಟುವುದು | ಕೈಕಾಡ್ |
| ೬ | ಅನು ಮಂದಪ್ಪ | ೪೦ | ತೆರೆ ಕಟ್ಟುವುದು | ಕೈಕಾಡ್ |
| ೭ | ಬಿ. ಕೆ. ಚಂಗಪ್ಪ | ೫೫ | ತೆರೆಕಟ್ಟುವುದು | ಕೆದಮುಳ್ಳೂರು |
| ೮ | ಮಲೆಯರ ಮಾದಯ್ಯ | ೭೩ | ತೆರೆಕಟ್ಟುವುದು | ಮೂರ್ನಾಡು |
| ೯ | ಮುಲ್ಲೇಂಗಡ ಬೇಬಿ ಚೋಂದಮ್ಮ | ೭೫ | ನಿ.ಶಿಕ್ಷಕಿ | ೨ನೇ ರುದ್ರುಗುಪ್ಪೆ |
| ೧೦ | ಬೀಕಚಂಡ ಎಂ. ಬಿದ್ದಪ್ಪ | ೭೦ | ತೆರೆ ಕಟ್ಟುವುದು | ಕೆದಮುಳ್ಳೂರು |
| ೧೧ | ಮಲಿಯರ ಚಂದ್ರ | ೬೮ | ತೆರೆ ಕಟ್ಟುವುದು | ವಿರಾಜಪೇಟೆ |
| ೧೨ | ಅಮ್ಮಣಿಚಂಡ ರಾಜ ನಂಜಪ್ಪ | ೫೯ | ವ್ಯವಸಾಯ | ಕದನೂರು |
| ೧೩ | ಅಮ್ಮಣಿಚಂಡ ಪ್ರವೀಣ್ ಚಂಗಪ್ಪ | ೪೪ | ಉಪನ್ಯಾಸಕರು | ವಿರಾಜಪೇಟೆ |
| ೧೪ | ಬೀಕಚಂಡ ಎಂ. ಸನ್ನಿ | ೫೯ | ತೆರೆ ಕಟ್ಟುವುದು | ಕೆದಮುಳ್ಳೂರು |
| ೧೫ | ಚಮ್ಮಟ್ಟಿರ ಪ್ರವೀಣ್ ಉತ್ತಪ್ಪ | ೪೦ | ಸಂಪಾದಕ | ಹಳ್ಳಿಗಟ್ಟು |
| ೧೬ | ಮಿನ್ನಂಡ ಲಾಲಾ ತಿಮ್ಮಯ್ಯ | ೫೦ | ಶಿಕ್ಷಕರು | ಗಾಳಿಬೀಡು |
| ೧೭ | ಮಲೆಯರ ಕಿಟ್ಟಪ್ಪ | ೭೫ | ತೆರೆ ಕಟ್ಟುವುದು | ಗಾಂಧಿನಗರ |
| ೧೮ | ಬಿ. ಅಜಿತ್ ಉತ್ತಪ್ಪ | ೨೫ | ಚಾಲಕ | ಕೆದಮುಳ್ಳೂರು |
| ೧೯ | ಪಣಿಕಡ ಸಿ. ಕಿಷನ್ | ೩೩ | ತೆರೆಕಟ್ಟುವುದು | ಕುಟ್ಟಂದಿ |
| ೨೦ | ಮಲೆಯಡ ಧರಣೇಶ್ | ೫೦ | ತೆರೆಕಟ್ಟುವುದು | ಬಿಳಿಗೇರಿ |
| ೨೧ | ಚೆಪ್ಪುಡಿರ ಪೊನ್ನಪ್ಪ | ೮೦ | ವ್ಯವಸಾಯ | ಕಿರುಗೂರು |
| ೨೨ | ಪಣಿಕಡ ಯು. ಬೋಪಣ್ಣ | ೨೯ | ತೆರೆಕಟ್ಟುವುದು | ಕುಟ್ಟಂದಿ |
| ೨೩ | ಮಾಳೇಟಿರ ಮಣಿ ಮಾಚಯ್ಯ | ೭೭ | ಕೃಷಿ | ಕೆದಮುಳ್ಳೂರು |
| ೨೪ | ಅಮ್ಮಣಿಚಂಡ ಚೇತನ್ ಚಿಣ್ಣಪ್ಪ | ೩೧ | ಉಪನ್ಯಾಸಕ | ಕೆ. ಬೋಯಿಕೇರಿ |
| ೨೫ | ಕಂಬೇಯಂಡ ಅಪ್ಪಣ್ಣ | ೭೦ | ಕೃಷಿ | ಕಕ್ಕಬ್ಬೆ |
| ೨೬ | ದೇವಮಕ್ಕಡ ಗಿಣಿ | ೬೫ | ತೆರೆಕಟ್ಟುವುದು | ಕುಂದ ಈಚೂರು |
| ೨೭ | ದೇವಮಕ್ಕಡ ಸುರೇಶ | ೫೩ | ತೆರೆಕಟ್ಟುವುದು | ಅಮ್ಮತ್ತಿ |
| ೨೮ | ಪ್ರೊ. ಇಟ್ಟೀರ ಕೆ. ಬಿದ್ದಪ್ಪ | ೭೫ | ಬರಹಗಾರರು | ಗೋಣಿಕೊಪ್ಪ |
| ೨೯ | ಮಲೆಯಂಡ ತೇಜಸ್ | ೨೩ | ತೆರೆಕಟ್ಟುವುದು | ಬಿಳಿಗೇರಿ |

| | | | | |
|---|---|---|---|---|
| ೩೦ | ವಿಜಿತ್ | ೨೫ | ತೆರೆಕಟ್ಟುವುದು | ಬಿಳಿಗೇರಿ |
| ೩೧ | ಚೆಟ್ಟಂಗಡ ರವಿ ಸುಬ್ಬಯ್ಯ | ೪೬ | ಪತ್ರಕರ್ತ | ವೆಸ್ಟ್ ನೆಮ್ಮಾಲೆ |
| ೩೨ | ಮಲ್ಲೇಂಗಡ ಕೀರ್ತಿ | ೪೬ | ಕೃಷಿ | ಪೊಕಳ |
| ೩೩ | ಚೆಕ್ಕೇರ ರಾಜಪ್ಪ ಸುಬ್ಬಯ್ಯ | ೫೯ | ಕೃಷಿ | ಬೀರುಗ |
| ೩೪ | ಅಮ್ಮಾಟಂಡ ವೀಣ | ೪೦ | ಗೃಹಿಣಿ | ವಿರಾಜಪೇಟೆ |
| ೩೫ | ತೇಲಪಂಡ ಕವನ್ ಕಾರ್ಯಪ್ಪ | ೪೬ | ಪತ್ರಕರ್ತ | ಸೋಮವಾರಪೇಟೆ |
| ೩೬ | ಅಣ್ಣೀರ ಹರೀಶ್ ಮಾದಪ್ಪ | ೪೪ | ಪತ್ರಕರ್ತ | ಬಿರುನಾಣಿ |
| ೩೭ | ಮಥೋಷ್ ಪೂವಯ್ಯ | ೪೩ | ಸಂಪಾದಕರು | 2ನೇ ರುದ್ರುಗುಪ್ಪೆ |
| ೩೮ | ಚೇನಂಡ ಸುರೇಶ್ ನಾಣಯ್ಯ | ೬೦ | ಕೃಷಿ | ಕೋಕೇರಿ |
| ೩೯ | ಚೇನಂಡ ಜಪ್ಪು ದೇವಯ್ಯ | ೬೫ | ಕೃಷಿ | ಕೋಕೇರಿ |
| ೪೦ | ನಾಗೇಶ್ ಕಾಲೂರು | ೭೦ | ಬರಹಗಾರರು | ಕಾಲೂರು |
| ೪೧ | ಅಲ್ಲಾರಂಡ ವಿಠಲ್ ನಂಜಪ್ಪ | ೫೦ | ಬರಹಗಾರರು | ಮಡಿಕೇರಿ |
| ೪೨ | ಚೆಪ್ಪುಡಿರ ಮುದ್ದಪ್ಪ | ೭೫ | ಕೃಷಿ | ನಾಲ್ಕೇರಿ |
| ೪೩ | ಚೆಪ್ಪುಡಿರ ನಳಿನಿ ಮುದ್ದಪ್ಪ | ೬೫ | ಗೃಹಿಣಿ | ನಾಲ್ಕೇರಿ |
| ೪೪ | ಕೊಂಡಿರ ಎಸ್. ಸುಬ್ಬಕ್ಕಿ | ೭೫ | ಗೃಹಿಣಿ | ಬೇತು |
| ೪೫ | ಪಳೆಯಂಡ ಪಾರ್ಥ ಚಿಣ್ಣಪ್ಪ | ೪೮ | ಪತ್ರಕರ್ತ | ಬೇತ್ರಿ |
| ೪೬ | ಐತಿಚಂಡ ರಮೇಶ್ | ೪೮ | ಪತ್ರಕರ್ತ | ಕರಡ |
| ೪೭ | ಟಿ. ಪಿ. ರಮೇಶ್ | ೬೯ | ಸಂಪಾದಕರು | ಮಡಿಕೇರಿ |
| ೪೮ | ಬೀಕಚಂಡ ಗಣಪತಿ | ೬೨ | ತೆರೆಕಟ್ಟುವುದು | ಕೆದಮುಳ್ಳೂರು |
| ೪೯ | ಪ್ರಸಾದ್ ಎಂ. ಕೆ. | ೩೦ | ತೆರೆಕಟ್ಟುವುದು | ವಿರಾಜಪೇಟೆ |
| ೫೦ | ರಾಜೇಶ್ ಎಂ. ಕೆ. | ೩೩ | ತೆರೆಕಟ್ಟುವುದು | ವಿರಾಜಪೇಟೆ |

## ಸಾಂಸ್ಕೃತಿಕ ಪದಕೋಶ

| | | |
|---|---|---|
| ಅಂಜಿಗೇರಿನಾಡು | : | ಕೊಡವ ಸಾಂಪ್ರದಾಯಿಕ ನಾಡುಗಳಲ್ಲಿ ಒಂದು. |
| ಅಗ್ಗಿಬಾಯಿ ಚಾವುಂಡಿ | : | ಅಗ್ನಿ ಬಾಯಿ ಚಾವುಂಡಿ. ಚೌಂಡಿ ದೈವಕ್ಕಿರುವ ಮತ್ತೊಂದು ಹೆಸರು. |
| ಅಜ್ಜಪ್ಪ | : | ತೆರೆಕಟ್ಟಿ ಆರಾಧಿಸಲ್ಪಡುವ ಕೊಡವ ಜನಪದವೀರ. ಈತನ ಮೂಲ ಹೆಸರು ಕಲ್ಯಾಟಂಡ ಪೊನ್ನಪ್ಪ. |
| ಅಡಕ್ | : | ತೆರೆಕಾರನು ವೇಷ ಧರಿಸುವಾಗ ಸೊಂಟಕ್ಕೆ ಧರಿಸುವ ಕನ್ನಿಬಳೆಯೆಂಬ ಮರದ ಚಕ್ರವನ್ನು ಮುಚ್ಚಲು ಬಳಸುವ ಕಲಾತ್ಮಕ ಹಲಗೆ. |
| ಅಣಿಯಾರ | : | ತೆರೆಕಾರನು ಸಿದ್ಧಗೊಳ್ಳಲು ನಿರ್ಮಿಸಿರುವ ತಾತ್ಕಾಲಿಕ ಕೋಣೆ. |
| ಅಯ್ಯಪ್ಪ | : | ಕೊಡಗಿನ ಕೇರಿಗಳಲ್ಲಿ ನೆಲೆಸಿರುವ ದೈವ. |
| ಅರಮನೆ ಪಾಲೆ | : | ಕೊಡಗಿನಲ್ಲಿ ನೆಲೆಸಿರುವ ತುಳುಮೂಲದ ಸಮುದಾಯ. ಇವರು ಕೊಡಗಿನ ಕೆಲವು ಗ್ರಾಮಗಳಲ್ಲಿ ಕೋಲಗಳನ್ನು ಕಟ್ಟುತ್ತಾರೆ. |
| ಅರಿಂದಿರಿ | : | ಬಾಳೆ ಎಲೆಯಲ್ಲಿ ಅಕ್ಕಿ ಅದರ ಮೇಲೆ ತೆಂಗಿನಕಾಯಿ ಇರಿಸಿ ಅದರ ತುದಿ ಭಾಗದಲ್ಲಿ ಎಣ್ಣೆಗೆ ಅದ್ದಿದ ಬತ್ತಿಯನ್ನು ಉರಿಸುವುದು. |
| ಈಡ್ | : | ಪುತ್ತರಿ ಹಬ್ಬಕ್ಕೆ ಮುಂಚಿತವಾಗಿ ಊರಿನವರು ದೇವಸ್ಥಾನ ಅಥವಾ ಮಂದ್‌ನಲ್ಲಿ ಸೇರಿ ನಡೆಸುವ ಜನಪದ ನೃತ್ಯಗಳ ಪೂರ್ವ ತಯ್ಯಾರಿ. |
| ಉಮ್ಮತ್ತಾಟ್ | : | ಕೊಡವ ಮಹಿಳೆಯರು ನರ್ತಿಸುವ ಏಕೈಕ ಜನಪದ ನೃತ್ಯ. |
| ಉರ್‌ಟಿಕೊಟ್ಟ್ ಆಟ್ | : | ಕೊಡಗಿನ ಕುಡಿಯ ಸಮುದಾಯದ ಮಹಿಳೆಯರ ಜನಪದ ನೃತ್ಯ. |

ಊರ್‌ತಕ್ಕ : ಊರಿನ ಮುಖ್ಯಸ್ಥ.

ಊರ್ ಮಂದ್ : ಊರಿನ ನ್ಯಾಯ ಪಂಚಾಯಿತಿ ಸಭೆಗಳು, ಜನಪದ ನೃತ್ಯಗಳ ಅಭ್ಯಾಸ ಮತ್ತು ಪ್ರದರ್ಶನ ನಡೆಯುವ ಪಾರಂಪರಿಕ ಮೈದಾನ.

ಊರ್‌ಬೋಟೆ : ಊರು ಬೇಟೆ.

ಎದ್‌ರ್ : ತೆರೆಕಾರರು ಬಾಯಿಗೆ ಕಟ್ಟಿಕೊಳುವ ಕಂಚಿನ ಕೋರೆ.

ಎತ್ತ್ ಪೋರ್ : ಎತ್ತಿನ ಹೇರು.

ಐನ್‌ಮನೆ : ಕೊಡವರ ಪಾರಂಪರಿಕ ಮೂಲಮನೆ.

ಐಮರ : ಐನ್‌ಮನೆಯ ಪಡಸಾಲೆಯಲ್ಲಿ ಕುಳಿತುಕೊಳ್ಳಲು ಇರುವ ಮರದ ಹಲಗೆ.

ಒಯ್ಯಪಾಟ್ : ನಾಟಿ ನೆಡುವಾಗ ಹಾಡುವ ಜನಪದ ಗೀತೆ.

ಒಕ್ಕ : ನೇರ ಸಂತತಿಯುಳ್ಳ ಕೊಡವ ಅವಿಭಕ್ತ ಕುಟುಂಬ.

ಒಡಿಕತ್ತಿ : ಅಂಗೈ ಅಗಲದ ಅಲಗು ಹಾಗೂ ಬಲವಾದ ಹಿಡಿಕೆಯ ದೊಡ್ಡ ಕತ್ತಿ. ಕೊಡವ ವಿವಾಹದ 'ಬಾಳೆ ಬೇಂಗುವ' ವಿಧಿಯಲ್ಲಿ ಈ ಕತ್ತಿಯನ್ನು ಬಳಸಿ ನೆಲೆದ ಮೇಲೆ ಸಾಲಾಗಿ ನಿಲ್ಲಿಸಿರುವ ಬಾಳೆಯ ಕಾಂಡಗಳನ್ನು ಕತ್ತರಿಸಲಾಗುತ್ತದೆ. ಇದನ್ನು 'ಬಾಳೆ ಬಿರ್‌ದ್' ಎಂದೂ ಕರೆಯುತ್ತಾರೆ.

ಒಡೆ : ತೆರೆಕಾರನು ಎದೆಯ ಭಾಗಕ್ಕೆ ಧರಿಸುವ ಸ್ಥಂಭಾಕೃತಿಯ ತೊಡುಗೆ. ಇದನ್ನು ಎಳೆಯ ತೆಂಗಿನಗರಿಗಳಿಂದ ನಿರ್ಮಿಸಲಾಗುತ್ತದೆ.

ಓಣಿ : ಐನ್‌ಮನೆಯ ಮುಂಭಾಗದ ಕಿರುಹಾದಿ.

ಓಲಿ : ತೆರೆಕಾರನು ಸೊಂಟಕ್ಕೆ ಕಟ್ಟಿಕೊಳ್ಳುವ ತೆಂಗಿನ ಎಳೆಯ ಗರಿಗಳ ವೃತ್ತಾಕಾರದ ತೊಡುಗೆ.

| | | |
|---|---|---|
| ಕಡಂಗ್ | : | ಕೊಡಗಿನ ಪಾರಂಪರಿಕ ಆಡಳಿತಾತ್ಮಕ ವಿಭಾಗಗಳನ್ನು ಬೇರ್ಪಡಿಸುವ ಕಂದಕಗಳು. |
| ಕಡತಲೆ | : | ತೆರೆ ದೈವಗಳು ಹಾಗೂ ತಿರುವಳಕಾರರು ಕೈಯಲ್ಲಿ ಹಿಡಿದುಕೊಳ್ಳುವ ವಿಶೇಷ ಕತ್ತಿ. ಇದನ್ನು ಕಡ್ತಲೆ ಎಂದೂ ಕರೆಯುತ್ತಾರೆ. |
| ಕಡಿಯ ಕಳ | : | ಬಲಿ ನೀಡುವ ಸ್ಥಳ. |
| ಕಣಿ ಪೂಜುವೊ | : | ಕಾವೇರಿ ತೀರ್ಥೋದ್ಭವದ ಮರುದಿನ ತೆಂಗಿನಕಾಯಿ ಅಥವಾ ಸೌತೆಕಾಯಿಗೆ ಕೆಂಪು ವಸ್ತ್ರವನ್ನು ಸುತ್ತಿ ಕಾವೇರಿಯ ಪ್ರತಿರೂಪವೆಂದು ಮಾಡುವ ಪೂಜೆ. |
| ಕಣಿಯ | : | ಕೊಡಗಿನ ಸಾಂಪ್ರದಾಯಿಕ ಜ್ಯೋತಿಷಿ. ಇಂದಿಗೂ ಕೊಡಗಿನಲ್ಲಿ ಪುತ್ತರಿ ಹಬ್ಬದ ದಿನವನ್ನು ನಿಗದಿಪಡಿಸುವವರು ಕಣಿಯರು. |
| ಕನ್ನಿ ಬಳೆ | : | ತೆರೆಕಾರನು ವೇಷವನ್ನು ಧರಿಸುವ ಮುನ್ನ ಸೊಂಟಕ್ಕೆ ಕಟ್ಟಿಕೊಳ್ಳುವ ಮರದ ಚಕ್ರ. |
| ಕಮ್ಮರಾಟಪ್ಪ | : | ಕೊಡಗಿನ ಕಮ್ಮರಟ್ ಮಲೆಯಲ್ಲಿ ನೆಲೆಸಿರುವ ದೇವರು. |
| ಕಯತ್‌ಕೆಟ್ಟ್ | : | ತೆರೆಕಾರನು ಕುತ್ತಿಗೆಗೆ ಧರಿಸುವ ಮರದ ಪದಕ. |
| ಕರಾಳಾ ಚಾವುಂಡಿ | : | ಚೌಂಡಿ ದೈವಕ್ಕಿರುವ ಬೇರೆ ಬೇರೆ ಹೆಸರುಗಳಲ್ಲಿ ಒಂದು. |
| ಕರಿ ಚಾವುಂಡಿ | : | ಚೌಂಡಿ ದೈವದ ಮತ್ತೊಂದು ಹೆಸರು. ಕೊಡಗಿನ ಕೆಲವು ಗ್ರಾಮಗಳಲ್ಲಿ ಆರಾಧಿಸಲಾಗುತ್ತದೆ. |
| ಕಾರಣ | : | ಕೊಡವ ಒಕ್ಕದ ಮೂಲ ಪುರುಷ. |
| ಕಾರಣಚಿ | : | ಕೊಡವ ಒಕ್ಕದ ಮೂಲ ಸ್ತ್ರೀ. |
| ಕುರ್ದಿನೀರು | : | ಸುಣ್ಣ ಮತ್ತು ಅರಿಸಿನ ಮಿಶ್ರಿತ ನೀರು. |
| ಕುಡಿಯರು | : | ಕೊಡಗಿನ ಮಲೆಗಳಲ್ಲಿ ನೆಲೆಸಿರುವ ಸಮುದಾಯ. |
| ಕೇರಿ | : | ಊರಿಗಿಂತ ಚಿಕ್ಕದಾದ ಸಾಮಾಜಿಕ ಘಟಕ. |
| ಕೈನಗರ | : | ತೆರೆಕಾರನು ಮಣಿಕಟ್ಟಿಗೆ ಕಟ್ಟುವ ತೆಂಗಿನ ಎಳೆಯ ಗರಿಗಳಿಂದ ನಿರ್ಮಿಸಲಾದ ಅಲಂಕಾರಿಕ ಸಾಧನ. |
| ಕೈಮಡ | : | ಒಕ್ಕದ ಮೂಲ ಪುರುಷನ ಗುಡಿ. |

| | | |
|---|---|---|
| ಕೈತಲೆಯಾಟ್ | : | ಭಗವತಿ ಮತ್ತು ಭದ್ರಕಾಳಿ ದೈವಗಳ ಆರಾಧನೆಯ ಅಂಗವಾಗಿ ದೇವಸ್ಥಾನಗಳಲ್ಲಿ ನಡೆಯುವ ಜನಪದ ನೃತ್ಯ. |
| ಕೊಂಬಾಟ್ | : | ಭಗವತಿಯ ವಾರ್ಷಿಕ ಆರಾಧನೆಯ ಸಂದರ್ಭದಲ್ಲಿ ಮರ ಅಥವಾ ಜಿಂಕೆಯ ಕೊಂಬನ್ನು ಹಿಡಿದು ನರ್ತಿಸುವ ನೃತ್ಯ. |
| ಕೊಂಬು | : | ಕೊಡಗಿನ ಪಾರಂಪರಿಕ ಆಡಳಿತಾತ್ಮಕ ವಿಭಾಗ. ಕಂಚಿನ ಕೊಂಬನ್ನು ಊದಿದಾಗ ಅದರ ಧ್ವನಿ ಕೇಳುವ ವ್ಯಾಪ್ತಿಗೆ ಒಂದು ಕೊಂಬು ಎಂದರ್ಥ. |
| ಕೊಡಿಯಾಟ್ | : | ಭದ್ರಕಾಳಿ ದೇವಿಯ ವಾರ್ಷಿಕ ಉತ್ಸವದ ಸಂದರ್ಭದಲ್ಲಿ ನಡೆಯುವ ಜನಪದ ನೃತ್ಯ. |
| ಕೊರವುಕಾರ | : | ಒಕ್ಕದ ಹಿರಿಯ ವ್ಯಕ್ತಿ. |
| ಕೊರವುಕಾರ್ತಿ | : | ಒಕ್ಕದ ಹಿರಿಯ ಸ್ತ್ರೀ. |
| ಕೋತಿರಿ | : | ಎಣ್ಣೆಗೆ ಅದ್ದಿದ ಬಟ್ಟೆಯನ್ನು ಚಿಕ್ಕ ಕೋಲಿಗೆ ಸುತ್ತಿ ತಯಾರಿಸಿದ ಬತ್ತಿ ಸೊಡರು. |
| ಕೋಲ್ಂಗ್ಯೆರ್ | : | ಕನ್ನಿಬಳೆಯನ್ನು ಕಟ್ಟಲು ತೆರೆಕಾರರು ಬಳಸುವ ಕೋಲು ಮತ್ತು ಹಗ್ಗ. |
| ಚಂದ್ರಕಲೆ | : | ತೆರೆಕಾರನು ನೆತ್ತಿಗೆ ಧರಿಸುವ ಆಭರಣ. |
| ಚಲ್ಂಬು | : | ಕಾಲಿಗೆ ಕಟ್ಟಿಕೊಳ್ಳುವ ದೊಡ್ಡದಾದ ಗೆಜ್ಜೆಯಂತೆ ಶಬ್ಧ ಮಾಡುವ ಕಂಚಿನ ಸಾಧನ. |
| ಚಾವು ಪಾಟ್ | : | ಮರಣ ಸಂದರ್ಭದಲ್ಲಿ ಕೊಡವರು ಹಾಡುವ ಜನಪದ ಗೀತೆ. |
| ಚೂಡಗ | : | ತೆರೆಕಾರನು ಮುಂಗೈಗೆ ಧರಿಸುವ ಕಂಚಿನ ಕಡಗ. |
| ಚೆನ್ನೆರ್ಲ್ | : | ಕಿವಿಗೆ ಧರಿಸುವ ಆಭರಣ. ಚೆನ್ನಿಮಲರ್ ಎಂದೂ ಕರೆಯುತ್ತಾರೆ. |
| ಚೆರು ಬೊಳಂಬ | : | ತೆರೆಕಾರನು ಧರಿಸುವ ಲಂಗದಂತಹ ನೆರಿಗೆಯುಳ್ಳ ಕೆಂಪು ಬಣ್ಣದ ಉಡುಪು. |
| ಚೊಡಲ್ಚಿ | : | ಪ್ರಸವದ ಸಂದರ್ಭದಲ್ಲಿ ಮರಣ ಹೊಂದಿದ ಕುಟುಂಬದ ಮೂಲ ಮಹಿಳೆ. |
| ಚೊಳ್ಳೆ | : | ಹಲಸಿನ ಎಲೆಯ ಚಿಕ್ಕ ದೊನ್ನೆ. |
| ಚೋದಿಪಣ | : | ಸೋತು ಶರಣಾದವನು ಗೆದ್ದವನಿಗೆ ನೀಡುವ |

ಹಣ.

| | | |
|---|---|---|
| ಚೌರಿ | : | ಚೌಂಡಿ ತೆರೆಯು ಕೈಯಲ್ಲಿ ಹಿಡಿದುಕೊಳ್ಳುವ ಎಳೆಯ ತೆಂಗಿನ ಗರಿಗಳಿಂದ ನಿರ್ಮಿಸಿದ ಕುಚ್ಚು. |
| ಚೌರಿಯಾಟ್ | : | ದೇವರ ಉತ್ಸವದಲ್ಲಿ ಚಮರೀ ಮೃಗದ ಕೂದಲಿನ ಗುಚ್ಛವನ್ನು ಹಿಡಿದು ನರ್ತಿಸುವ ಜನಪದ ನೃತ್ಯ. |
| ತಂಡೆ ಬಳೆ | : | ತೋಳಿಗೆ ಧರಿಸುವ ಬಳೆ. |
| ತಟ್ಟ್‌ತಡೆ | : | ಬಲಿ ಅರ್ಪಿಸಲು ಬಾಳೆಯ ಕಂದಿನ ಪಟ್ಟೆಗಳಿಂದ ಸಿದ್ಧಗೊಳಿಸುವ ಆಕೃತಿ. |
| ತಪ್ಪಡಕ | : | ಗ್ರಾಮ ದೇವರ ವಾರ್ಷಿಕೋತ್ಸವ, ಹಬ್ಬ, ತೆರೆಕಟ್ಟುವ ಆಚರಣೆಯ ಸಂದರ್ಭದಲ್ಲಿ ಎಲ್ಲರೂ ಸೇರಿ ದೈವದ ಮುಂದೆ ಆಡುವ ಪ್ರಾರ್ಥನಾ ನುಡಿಗಳು. |
| ತಪ್ಪುಪಣ | : | ತಪ್ಪುಕಾಣಿಕೆ. |
| ತಲೆಪೂ | : | ತೆರೆಕಾರನು ತಲೆಗೆ ಕಟ್ಟಿಕೊಳ್ಳುವ ಹೂವಿನ ದಂಡೆ. |
| ತಿರುವಳ | : | ದೈವಾವೇಶ. |
| ತೀಕುಳಿಯ | : | ಅಗ್ನಿ ಕುಳಿಯ. |
| ತೂರೆ ಕೋಲ್ | : | ಬೆತ್ತದ ಕೋಲು. |
| ತೆರೆಮುಡಿ | : | ತೆರೆಕಾರನು ಬೆನ್ನಿಗೆ ಕಟ್ಟಿಕೊಳ್ಳುವ ವಿಸ್ತಾರವಾದ ಪ್ರಭಾವಳಿಯಂತಹ ರಚನೆ. ಬಟ್ಟೆ, ಲೋಹ, ಹಾಳೆ ಅಥವಾ ಲೋಹದ ಅಲಂಕಾರ ಸಾಮಗ್ರಿಗಳಿಂದ ಇದನ್ನು ನಿರ್ಮಿಸಲಾಗುತ್ತದೆ. |
| ತೆರೆಮುಡಿ ಕೇತುವೊ | : | ತೆರೆಮುಡಿ ಏರಿಸುವುದು. |
| ತೊತ್ತ್ | : | ನೆತ್ತಿಪಟ್ಟ್‌ನಲ್ಲಿರುವ ಹಾವಿನ ಹೆಡೆಯಾಕಾರದ ಆಕೃತಿಗಳು. |
| ದುಡಿ | : | ಸಾಂಪ್ರದಾಯಿಕ ಸಣ್ಣ ಡೋಲು. |
| ನರಿ ಮಂಗಲ | : | ಗ್ರಾಮಗಳಿಗೆ ಬಂದು ಉಪಟಳ ನೀಡುತ್ತಿದ್ದ ಹುಲಿಯನ್ನು ಕೊಂದ ವೀರನಿಗೆ ನೀಡುವ ಗೌರವ. |
| ನಾಡ್ | : | ಪ್ರಾಚೀನ ಆಡಳಿತಾತ್ಮಕ ಘಟಕ. |
| ನಾಲ್ಮೊಳಿ ತಕ್ಕ್ | : | ಪ್ರಾರ್ಥನಾ ನುಡಿ. |
| ನೆತ್ತಿ ಪಟ್ಟ್ | : | ತೆರೆಕಾರನು ಹಣೆಗೆ ಧರಿಸುವ ಆಭರಣ. ಇದನ್ನು ತಲಪಾಳಿ ಎಂದೂ ಕರೆಯುತ್ತಾರೆ. |

| | | |
|---|---|---|
| ನೆತ್ತಿ ಬೊಟ್ಟ್ | : | ತೆರೆಕಾರನು ಹಣೆಗೆ ಧರಿಸುವ ಆಭರಣ. |
| ನೆಲ್ಲಕ್ಕಿ ನಡುಬಾಡೆ | : | ಐನ್‌ಮನೆಯ ಮಧ್ಯಭಾಗದಲ್ಲಿ ದೀಪ ಹಚ್ಚುವ ಪವಿತ್ರ ಸ್ಥಳ. |
| ಪಟ್ಟ್‌ಂಬಾಡ | : | ತೆರೆಕಾರನು ಧರಿಸುವ ಕಾಲಿನ ಬಳೆ. ಇದನ್ನು ಪಟ್ಟಿಮಡ ಎಂದೂ ಹೇಳುತ್ತಾರೆ. |
| ಪರಿಯ | : | ಬೆತ್ತದಿಂದ ತಯಾರಿಸಿದ ಗುರಾಣಿ. |
| ಪರೆ | : | ಮೇದ ಸಮುದಾಯದವರು ಬಾರಿಸುವ ಒಂದು ವಿಧದ ಡೋಲು. |
| ಪರೆ ತಟ್ಟಿ | : | ಲೋಹದ ಗುರಾಣಿ. |
| ಪವ್ವೀಡ | : | ಕುತ್ತಿಗೆಗೆ ಧರಿಸುವ ಹಾರ. |
| ಪೀಲಿಯಾಟ್ | : | ನವಿಲುಗರಿಗಳನ್ನು ಹಿಡಿದು ನರ್ತಿಸುವ ದೇವರ ಸೇವಾನೃತ್ಯ. |
| ಪೂಕೊಟ್ಟಿ | : | ತೆರೆಕಾರನು ತಲೆಗೆ ಧರಿಸುವ ಮರದಿಂದ ತಯಾರಿಸಿದ ಕೀರೀಟದಂತಹ ಶಿರೋಭೂಷಣ. |
| ಪೊಯ್‌ಕಣ್ಣ್ | : | ತೆರೆಕಾರನು ಕಣ್ಣಿಗೆ ಕಟ್ಟುವ ಲೋಹದ ಕಣ್ಣು. |
| ಪೊರಂಬಡಿ | : | ಬಹಿಷ್ಕಾರ. |
| ಪೊಲ್‌ಚಿ ಪಾಟ್ | : | ತಿಥಿ ಕರ್ಮಾಂತರದ ಸಂದರ್ಭದಲ್ಲಿ ಹಾಡುವ ಹಾಡು. |
| ಪೊವ್ವದಿ | : | ಗ್ರಾಮ ದೇವತೆ ಭಗವತಿಯ ಮತ್ತೊಂದು ಹೆಸರು. |
| ಪೊಳೆವಾಡ್ | : | ದಂಡ. |
| ಬನಮಾಲೆ | : | ತೆರೆಕಾರನು ಧರಿಸುವ ಹಾರ. |
| ಬಾರಣೆ | : | ತೆರೆ ದೈವಗಳಿಗೆ ಅರ್ಪಿಸುವ ಆಹಾರ. |
| ಬಿರ್‌ದ್ | : | ಕಲಾತ್ಮಕ ಕೈಬಳೆ. |
| ಬೀರ | : | ಜನಪದ ವೀರ. ಇವನಿಗೆ ಕೊಡಿಬೀರ, ಕುಡಿಬೀರ, ಪಡೆಬೀರ ಎಂಬ ಹೆಸರುಗಳಿವೆ. |
| ಬೊತ್ತ್ | : | ಕಾವೇರಿ ಚಂಗ್ರಾಂದಿಯ ಪೂರ್ವದಿನದಂದು ಮನೆ, ಭೂಮಿ, ತೋಟಕ್ಕೆ ನೆಡುವ ನಿಶಾನೆ. |
| ಬೊಳಕಾಟ್ | : | ದೇವಸ್ಥಾನದಲ್ಲಿ ಬೆಳಕಿನ ಸುತ್ತ ಕುಣಿಯುವ ಜನಪದ ನೃತ್ಯ. |
| ಬೋಟೆ ಚಾವುಂಡಿ | : | ಬೇಟೆ ಚಾವುಂಡಿ. ಇದು ಚೌಂಡಿ ದೈವದ ಮತ್ತೊಂದು ಹೆಸರು. |

ಬೋಡ್‌ನಮ್ಮೆ : ಭದ್ರಕಾಳಿ, ಅಯ್ಯಪ್ಪ ಹಾಗೂ ಊರಿನ ದೈವಗಳ ಪ್ರೀತ್ಯರ್ಥವಾಗಿ ನಡೆಯುವ ವಿನೋದಾತ್ಮಕ ಹಬ್ಬ.

ಬೋಡ್ ಕಳಿ : ಬೋಡ್‌ಹಬ್ಬದಲ್ಲಿ ನಡೆಯುವ ವಿನೋದಾತ್ಮಕ ಕುಣಿತ.

ಬೈತೂರಪ್ಪ : ಕೊಡಗಿನವರು ಆರಾಧಿಸುವ ದೈವ. ಕೇರಳದ ವಯತ್ತೂರಿನಲ್ಲಿರುವ ಈ ದೇವಾಲಯದ ತಕ್ಕ ಮುಖ್ಯಸ್ಥರಾಗಿ ಪುಗ್ಗೇರ ಒಕ್ಕದವರು ಕಾರ್ಯ ನಿರ್ವಹಿಸುತ್ತಾರೆ. ವಾರ್ಷಿಕವಾಗಿ ಇಲ್ಲಿ ನಡೆಯುವ ಉತ್ಸವದಲ್ಲಿ ತಿರುವಳಕಾರರು ಭಾಗವಹಿಸಿ ಆಶೀರ್ವಾದ ಪಡೆದುಕೊಂಡು ಬರುತ್ತಾರೆ.

ಮಡಿಯೋಳ : ಮಡಿವಾಳ.

ಮಣಿಕೇರ್ : ಹಗ್ಗದಿಂದ ಪೋಣಸಿದ ಗೆಜ್ಜೆ. ಇದನ್ನು ತೆರೆಕಾರನು ಮಂಡಿಯ ಕೆಳಭಾಗಕ್ಕೆ ಕಟ್ಟಿಕೊಳ್ಳುತ್ತಾನೆ.

ಮನೆಪೆದ : ಮನೆತನದ ಹೆಸರು.

ಮರನಾಡ ಬಲಿ : ಮನೆ ಅಥವಾ ಸ್ಥಳದ ಮೇಲಿರುವ ಶಾಪಗಳ ವಿಮೋಚನೆಗೆ ಪಣಿಕರು ನಡೆಸುವ ಅಸಾಧಾರಣ ಆಹುತಿ.

ಮಾದೇವ : ಕೊಡಗಿನ ನಾಡುಗಳನ್ನು ಕಾಪಾಡುವ ದೇವರು.

ಮೀದಿ : ನೈವೇದ್ಯ.

ಮುನ್ನಾಕ್ : ಚೆರು ಬೊಳಂಬದ ಮಧ್ಯಭಾಗದಲ್ಲಿ ಇಳಿ ಬಿಡುವ ವಸ್ತ್ರ.

ಮೇಲೇರಿ : ಕೆಂಡಸೇವೆ.

ಮೊಗ : ದೈವಗಳ ಮುಖವಾಡ. ಇದನ್ನು ಲೋಹ ಹಾಗೂ ಹಾಳೆಗಳಿಂದ ತಯಾರಿಸಲಾಗುತ್ತದೆ.

ಮೊಲೆ ಮಾರ್ : ತೆರೆಕಾರನ್ನು ಧರಿಸುವ ಲೋಹದ ಮೊಲೆಕಟ್ಟು.

ವಾಲೆ ಕಾದ್ : ಕಿವಿಯ ಅಂಚಿಗೆ ಧರಿಸುವ ಆಭರಣ.

ಯೆಯ್ಯಾರ : ಎದೆಗೆ ಧರಿಸುವ ಹಾರ

## ತೆರೆ ಹಾಡು

### ಪೊನ್ಯ ಭಗವತಿ ತೆರೆಯ ಹಾಡು

ಪೊಲಿ ಪೊಲಿಗಾ ದೈವೋಮೆ
ಪೊಲಿಗಾ ದೈವೋ ಮೆ
ವಾಳ್ಗಂ ಪೊಲಿಗಾ ದೈವೋಮೆ
ಪೊಲಿಗಾ ದೈವೋ ಮೆ
ಪೊಲಿ ಪೊಲಿಗಾ ದೈವೋಮೆ
ಪೊನ್ಯತಮ್ಮೆಕೋ
ಪೊಲಿ ಪೊಲಿಗಾ ದೈವೋಮೇ
ಕಳತಮ್ಮೆಕೋ
ವಾಳ್ಗಂ ಪೊಲಿಗಾ ದೈವೋಮೆ
ತುಪ್ಪನಾಣಮ್ಮೆಕೋ
ಪೊಲಿ ಪೊಲಿಗಾ ದೈವೋಮೆ
ಕುಟ್ಟತಮ್ಮೆಕೋ
ವಾಳ್ಗಂ ಪೊಲಿಗಾ ದೈವೋಮೆ
ಬಡಕತಮ್ಮೆಕೋ
ಪೊಲಿ ಪೊಲಿಗಾ ದೈವೋಮೆ
ಕೇಕ್‌ತಮ್ಮೆಕೋ
ವಾಳ್ಗಂ ಪೊಲಿಗಾ ದೈವೋಮೆ
ಪೊಲಿಗಾ ದೈವೋಮೆ
ಕೊಟಿಂಬೆಚ್ಚ ತಟ್ಟತಡೆಯೂ
ಪಾರ್ವದಿ ನಿಮಕೋ
ಬಳ್ಳಿ ಬೆಚ್ಚ ಬಳ್ಳಿಂ ಬಾಳು
ಪಾರ್ವದಿ ನಿಮಕೊ
ಚಾರಿಂ ಬೆಚ್ಚ ತಿರುವಾಯುಧ
ಪಾರ್ವದಿ ನಿಮಕೋ
ವಡ್‌ಚಿ ಬೆಚ್ಚ ವಳ್ಳತೇಂಜ
ಪಾರ್ವದಿ ನಿಮಕೋ
ತಯ್‌ಚಿ ಬೆಚ್ಚ ಚಾಂದ್ ಚಂದನ
ಪಾರ್ವದಿ ನಿಮಕೋ
ಕತ್ತಿಂಬೆಚ್ಚ ನಂದರಕಡ್ಡಿ

ಪಾರ್ವದಿ ನಿಮಕೋ
ಕತ್ತಿಂಬೆಚ್ಚ ನಂದಾದೀಪ
ಪಾರ್ವದಿ ನಿಮಕೋ
ಚಾರಿಂ ಬೆಚ್ಚ ತೆರೆಮುಡಿಯೋ
ಪಾರ್ವದಿ ನಿಮಕೋ
ಪೊಲಿ ಪೊಲಿಗಾ ದೈವೋಮೆ
ಪೊಲಿಗಾ ದೈವೋ ಮೆ

**ಹಾಡಿದವರು :**
ಪಣಿಕಡ ಯು ಬೋಪಣ್ಣ
ವಯಸ್ಸು ೨೯
ಕುಟ್ಟಂದಿ ಗ್ರಾಮ ಮತ್ತು ಅಂಚೆ
ವಿರಾಜಪೇಟೆ-೫೭೧೨೧೮

**ಕದನೂರು ಗ್ರಾಮದೇವರ ಉತ್ಸವಕ್ಕೆ ಕಟ್ಟು ಹಾಕುವುದು**

ಸದ್ದ್ ಸದ್ದೋ ಸದ್ದ್ ಸದ್ದೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಕದನೂರ್ ೬೩ ಒಕ್ಕ ನೆರವೇಡಿ ಉಂಡೋ
ಕಾಳಮನು ಕಾಣತನು ಉಂಡೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಣ್ಣಿರಕನು ಪೊಯ್ಯಟಿಯು ಉಂಡೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಇಲ್ಲ್‌ಂಜಿ ತೊಟ್ಟಕೊ ಚಪ್ಪೆಯಾರ್ ಒಕ್ಕಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಚೇಪೆ ಕಡುವೋಳೋ
ಚೇಪೆ ತೋಡೋಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಮೂಲೆ ಕಡುವೋಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಪಾಲತ್ ಕಂಡಿಯೋಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಕುದುರೆ ಕಡ್ಪ ಕಡುವಳೋ

ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಮಲಿಯ ಕುಳಿಪ ಕುಂಡೋಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಈಚಿವಾಡ್ ಕಡುವಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಇಡ್‌ಪೆ ಮೂಲೆಯೋಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಮಾಣಿಯಂಡ ಮೂಲೆಯೋಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಕಾಕೇಮಂಡೆ ತೋಡೋಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಬಲ್ಯ ಕಾಕೆ ಮಂಡೆಯಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಕೊಟ್ಟಬಾಣೆ ತೋಡೋಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಅಲ್ಲಿಂಜ ತೊಟ್ಟಕೋ ಕೋಣಿಯಪ್ಪ ಬಾಣೆ ಒಕ್ಕಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ದಂಡಾಂದಿರಿಯೇ ಚಪ್ಪೆಯಾರ್ ಒಕ್ಕಳೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಈ ಕೆಟ್ಟ್‌ಕಳತ್‌ಲೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಶತ್ರುಗುಪ್ಪೆ ನಿಪ್ಪತೇಕಿ ನಡುಕಂಡೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಕಾಳೆಯು ನರಿಯು ಒಂದಾಯಿ ನಲಿಯೊಂಡೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಕೀರಿಯು ಪಾಂಬು ಒಂದಾಯಿ ನಲಿಯೊಂಡೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಈ ಕೆಟ್ಟ್‌ಕಳತ್‌ಲೋ ಕರಿಕೆಮುರಿಕೆ ಕೆಜ್ಜತೇಂಗಿ ಬಲಚ
ತಪ್ಪುಕು ಮೂಂದ್ ಪಣೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಒರ್ ತಕ್ಕ ಪೊಳ್‌ಚಕೋ ಪನ್ನೆರಂಡ್‌ಬಟ್ಟಿ ಅಕ್ಕಿ

ಪನ್ನೆರಂಡ್ ಅಚ್ಚಿ ಪೊನ್ನೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಒರ್ ಒಕ್ಕ ಪೊಳ್‌ಚತೇಂಗಿ ಆರ್ ಬಟ್ಟಿ ಅಕ್ಕಿ
ಆರ್ ಅಚ್ಚಿ ಪೊನ್ನೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಒರ್ ಆಳ್ ಪೊಳ್‌ಚತೇಂಗಿ ಮೂಂದ್ ಬಟ್ಟಿ ಅಕ್ಕಿ
ಮೂಂದ್ ಅಚ್ಚಿ ಪೊನ್ನೋ
ಅಯ್ಯಪ್ಪಂಡ ಪೊವ್ವದೀರ ಕೆಟ್ಟಡಕೋ
ಒಕ್ಕಳಣ್ಣ ಬಳ್ಳ ಅಕ್ಕಿ ಬಳಕ್ ತೆಂಗೆ ಬರತ ಪೋಚೇಂಗಿ
ಬಲಚ ತಪ್ಪುಕ್ ಮೂಂದ್ ಪಣೋ
ಒಕ್ಕಳಣ್ಣ ತೋಕ್ ಬರತ ಪೋಚೇಂಗಿ
ಬಲಚ ತಪ್ಪುಕ್ ಮೂಂದ್ ಪಣೋ
ಒಕ್ಕಳಣ್ಣ ಎತ್ತ್ ಪೋರಾಟ ಬರತ ಪೋಚೇಂಗಿ
ಬಲಚ ತಪ್ಪುಕ್ ಮೂಂದ್ ಪಣೋ
ಒಕ್ಕಳಣ್ಣ ತೆಂಗೆ ಕುಡಿಕೆ ಬರತ ಪೋಚೇಂಗಿ
ಬಲಚ ತಪ್ಪುಕ್ ಮೂಂದ್ ಪಣೋ
ಸಾಕ್ಷಿ ಬೆಚ್ಚೋ ಮುಕ್ಕಾಟಿ.
ವಕ್ತೃ:
ಅಮ್ಮಣಿಚಂಡ ರಾಜ ನಂಜಪ್ಪ
ಕೆ. ಬೋಯಿಕೇರಿ
ವಿರಾಜಪೇಟೆ.


KODAGU
District Map
N
Hassan
Dakshina Kannada
Kodlipet
Sanivarsante
Sheti
Hassan
Heggademane
Badabanagalla
Surlabi
Abborkatte
Peraje
Sirakai
Jambur
Payaswani
Galibidu
Kushalnagar
Chethugai
MADIKERI
Mysore
www.mapsofindia.com
Talekaveri
Hakattur
Perur
Siddapura
Parane
Pollibetta
Yevakapadi
Virarajendrapet
Mayamodi
KERALA
Lakshmantirtha
Kuttandi
Harihara
Kantur
Teralu
Kutta
LEGEND
State Boundary
District Boundary
Major Road
District Headquarter
Major Town
Other Town
River
Map not to Scale
Copyright © 2007 Compare Infobase Limited

